ತೇ ಅಬ್ರೂತಾಂ ದ್ಯಾವಾಪೃಥಿವೀ ಮಾ ಪ್ರ ಹಾರಾವಯೋ
ರ್ವೈ ಶ್ರಿತ ಇತಿ ತೇ ಅಬ್ರೂತಾಂ ವರಂ ವೃಣಾವಹೈ ನಕ್ಷತ್ರ
ವಿಹಿತಾಽಹಮಸಾನೀತ್ಯಸಾವಬ್ರವೀ ಚ್ಚಿತ್ರವಿಹಿತಾಽಹಮಿತೀಯಂ

---

ತೇ ಇತಿ । ಅಬ್ರೂತಾಮ್ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಮಾ । ಪ್ರೇತಿ ।
ಹಾಃ । ಆವಯೋಃ । ವೈ । ಶ್ರಿತಃ । ಇತಿ । ತೇ ಇತಿ । ಅಬ್ರೂತಾಮ್ । ವರಮ್ ।
ವೃಣಾವಹೈ । ನಕ್ಷತ್ರವಿಹಿತೇತಿ ನಕ್ಷತ್ರ-ವಿಹಿತಾ । ಅಹಮ್ । ಅಸಾನಿ । ಇತಿ । ಅಸೌ ।
ಅಬ್ರವೀತ್ । ಚಿತ್ರವಿಹಿತೇತಿ ಚಿತ್ರ-ವಿಹಿತಾ । ಅಹಮ್ । ಇತಿ । ಇಯಮ್ ।

---

| | |
|---|---|
| ತೇ ದ್ಯಾವಾಪೃಥಿವೀ | [ಆಗ] ಆ ದ್ಯಾವಾಪೃಥಿವಿಗಳು [ಇಂದ್ರನಿಗೆ] |
| ಮಾ ಪ್ರಹಾಃ ಆವಯೋಃ ವೈ ಶ್ರಿತಃ ಇತಿ ಅಬ್ರೂತಾಮ್ | 'ನೀನು ವೃತ್ರನನ್ನು ಹೊಡೆಯಬೇಡ. ಆ ವೃತ್ರನು ನಮ್ಮಲ್ಲಿಯೇ ಸೇರಿಕೊಂಡು ಇರುತ್ತಾನೆ' ಎಂದವು. |
| ತೇ ಅಬ್ರೂತಾಮ್ ವರಮ್ ವೃಣಾವಹೈ | [ಇಂದ್ರನು ಒಪ್ಪದಿರುವಾಗ] ದ್ಯಾವಾಪೃಥಿವಿಗಳು ನಾವು ವರವನ್ನು ಕೇಳುವೆವು [ಅದನ್ನು ಕೊಡು. ಅನಂತರ ವೃತ್ರನನ್ನು ಸಂಹರಿಸ ಬಹುದು]ಎಂದವು. |
| ಅಹಮ್ ನಕ್ಷತ್ರವಿಹಿತಾ ಅಸಾನಿ ಇತಿ ಅಸೌ ಅಬ್ರವೀತ್ | 'ನಾನು ನಕ್ಷತ್ರಾದಿಗಳಿಂದ ಅಲಂಕೃತಳಾಗಿ ರಬೇಕು' ಎಂದು ದ್ಯುಲೋಕವು ಕೇಳಿತು. |
| ಚಿತ್ರವಿಹಿತಾ ಅಹಮ್ ಅಸಾನಿ ಇತಿ ಇಯಮ್ ಅಬ್ರವೀತ್ | ನಾನು ಮನುಷ್ಯ-ಪಶು-ಪಕ್ಷಿ-ಪರ್ವತ-ನದೀ-ಸಮುದ್ರಾದಿ ಚಿತ್ರವಿಚಿತ್ರ ವಸ್ತುಗಳಿಂದ ಅಲಂಕೃತಳಾಗಿರಬೇಕೆಂದು ಭೂಮಿಯು ಕೇಳಿ ಕೊಂಡಿತು. |

ತಸ್ಮಾನ್ನಕ್ಷತ್ರವಿಹಿತಾಽಸೌ ಚಿತ್ರವಿಹಿತೇಯಂ ಯ ಏವಂ ದ್ಯಾವಾ

ಪೃಥಿವ್ಯೋ [..ಪೃಥಿವ್ಯೋಃ(ಳ)] ರ್ವರಂ ವೇದೈನಂ ವರೋ ಗಚ್ಛತಿ

ಸ ಆಭ್ಯಾಮೇವ ಪ್ರಸೂತ ಇಂದ್ರೋ ವೃತ್ರಮಹನ್ತೇ

---

ತಸ್ಮಾತ್ । ನಕ್ಷತ್ರವಿಹಿತೇತಿ ನಕ್ಷತ್ರ–ವಿಹಿತಾ । ಅಸೌ । ಚಿತ್ರವಿಹಿತೇತಿ ಚಿತ್ರ–

ವಿಹಿತಾ। ಇಯಮ್ । ಯಃ । ಏವಮ್ । ದ್ಯಾವಾಪೃಥಿವ್ಯೋರಿತಿ ದ್ಯಾವಾ–ಪೃಥಿವ್ಯೋಃ।

[೫]। ವರಮ್ । ವೇದ । ಏತಿ । ಏನಮ್ । ವರಃ । ಗಚ್ಛತಿ । ಸಃ । ಆಭ್ಯಾಮ್ ।

ಏವ । ಪ್ರಸೂತ ಇತಿ ಪ್ರ–ಸೂತಃ । ಇಂದ್ರಃ । ವೃತ್ರಮ್ । ಅಹನ್ನ್ । ತೇ ।

---

| | |
|---|---|
| ತಸ್ಮಾತ್ ಅಸೌ ನಕ್ಷತ್ರವಿಹಿತಾ | ಇಂದ್ರನ ವರಪ್ರದಾನದಿಂದ ದ್ಯುಲೋಕವು ನಕ್ಷತ್ರಪೂರ್ಣವಾಗಿದೆ. |
| ಇಯಮ್ ಚಿತ್ರವಿಹಿತಾ | ಈ ಭೂಮಿಯು ಚಿತ್ರವಿಚಿತ್ರ ವಸ್ತುಗಳಿಂದ ಪೂರ್ಣವಾಗಿದೆ. |
| ಏವಮ್ ದ್ಯಾವಾಪೃಥಿವ್ಯೋಃ ವರಮ್ ಯಃ ವೇದ | ಈ ರೀತಿಯಾಗಿ ದ್ಯಾವಾಪೃಥಿವಿಗಳಿಗೆ ಇಂದ್ರನು ವರವನ್ನಿತ್ತ ವಿಚಾರವನ್ನು ಯಾವನು ತಿಳಿದಿರುವನೋ |
| ವರಃ ಏನಮ್ ಆ ಗಚ್ಛತಿ | ಅವನನ್ನು ಈ ವರವು ಹೊಂದುತ್ತದೆ. |
| ಸಃ ಇಂದ್ರಃ ಆಭ್ಯಾಮ್ ಪ್ರಸೂತಃ ಏವ ವೃತ್ರಮ್ ಅಹನ್ನ್ | ಆ ಇಂದ್ರನು ಹೀಗೆ ದ್ಯಾವಾಪೃಥಿವಿಗಳಿಂದ ಅನುಜ್ಞೆಯನ್ನು ಪಡೆದು ವೃತ್ರನನ್ನು ಕೊಂದನು. |

---

ದ್ಯಾವಾಪೃಥಿವಿಗಳಿಗೆ ವರವನ್ನಿತ್ತು ಇಂದ್ರನು ವೃತ್ರನನ್ನು ಕೊಂದನು ಈ ವರದ ವಿಚಾರ ವನ್ನು ತಿಳಿದವನಿಗೆ ಇಷ್ಟಾರ್ಥಲಾಭವಿದೆಯೆಂಬುದಾಗಿ ವರಜ್ಞಾನದ ಪ್ರಶಂಸೆಯು ಇಲ್ಲಿದೆ.

ದೇವಾ ವೃತ್ರಗ್ಂ ಹತ್ವಾಽಗ್ನೀಷೋಮಾವಬ್ರುವನ್, ಹವ್ಯಂ ನೋ ವಹತಮಿತಿ ತಾವಬ್ರೂತಾಮಪತೇಜಸೌ ವೈ ತ್ಯೌ ವೃತ್ರೇ ವೈ ತ್ಯಯೋಸ್ತೇಜ ಇತಿ

---

ದೇವಾಃ । ವೃತ್ರಮ್ । ಹತ್ವಾ । ಅಗ್ನೀಷೋಮಾವಿತ್ಯಗ್ನೀ-ಸೋಮೌ । ಅಬ್ರುವನ್ । ಹವ್ಯಮ್ । ನಃ । ವಹತಮ್ । ಇತಿ । ತೌ । ಅಬ್ರೂತಾಮ್ । ಅಪತೇಜಸಾವಿತ್ಯಪ-ತೇಜಸೌ । ವೈ । ತ್ಯೌ । ವೃತ್ರೇ । ವೈ । ತ್ಯಯೋಃ । ತೇಜಃ । ಇತಿ ।

---

**ಪಯೋಘೃತಗಳ ಪ್ರಶಂಸೆ–ಗೋವಿನ ವರದಾನದ ಪ್ರಸಂಗ**

| | |
|---|---|
| ತೇ ದೇವಾಃ ವೃತ್ರಮ್ ಹತ್ವಾ ಅಗ್ನೀಷೋಮೌ | ಹೀಗೆ ಆ ದೇವತೆಗಳು ಇಂದ್ರನ ಮೂಲಕವಾಗಿ ವೃತ್ರನನ್ನು ಕೊಲ್ಲಿಸಿ ಅಗ್ನೀಷೋಮ ದೇವತೆಗಳನ್ನು ಕುರಿತು |
| ನಃ ಹವ್ಯಮ್ ವಹತಮ್ ಇತಿ ಅಬ್ರುವನ್ | 'ನಮಗೆ ಹವ್ಯಗಳನ್ನು ತಂದು ಕೊಡುವ ಕೆಲಸ ಮಾಡಿರಿ' ಎಂದು ಹೇಳಿದರು. |
| ತೌ ತ್ಯೌ ಅಪತೇಜಸೌ ವೈ | ಆ ಅಗ್ನೀಷೋಮರು [ವೃತ್ರನು ಬಾಯಿಯಲ್ಲಿ ಬಹುಕಾಲ ಇದ್ದ] ನಾವು ತೇಜೋಹೀನರಾಗಿರುವೆವು. |
| ತ್ಯಯೋಃ ತೇಜಃ ವೃತ್ರೇ ವೈ ಇತಿ ಅಬ್ರೂತಾಮ್ | ಅಂತಹ ನಮ್ಮ ತೇಜಸ್ಸು ವೃತ್ರನಲ್ಲಿಯೇ ಸೇರಿಹೋಗಿದೆ' ಎಂದು ಹೇಳಿದರು. |

---

ಇಲ್ಲಿರುವ ವೃತ್ರವಧೆಯ ಕಥೆಗೂ ತ್ರಿಧಾತುಯಾಗದಲ್ಲಿನ ವೃತ್ರವಧೆಯ ಕಥೆಗೂ ಭೇದವಿದೆ. ಕಲ್ಪಭೇದದಿಂದ ವ್ಯವಸ್ಥೆ ಎಂಬುದು ಸಮಾಧಾನ.

ತೇಽಬ್ರುವನ್ಕ ಇದಮಚ್ಛೈತೀತಿ ಗೌರಿತ್ಯಬ್ರುವನ್ಗೌರ್ವಾವ ಸರ್ವಸ್ಯ ಮಿತ್ರಮಿತಿ ಸಾಽಬ್ರವೀ[ಸಾಽಬ್ರವೀತ್(೫)]ದ್ವರಂ ವೃಣೈ

---

ತೇ । ಅಬ್ರುವನ್ನ್ । ಕಃ । ಇದಮ್ । ಅಚ್ಛ । ಏತಿ । ಇತಿ । ಗೌಃ । ಇತಿ । ಅಬ್ರುವನ್ನ್ । ಗೌಃ । ವಾವ । ಸರ್ವಸ್ಯ । ಮಿತ್ರಮ್ । ಇತಿ । ಸಾ । ಅಬ್ರವೀತ್ । [೫] । ವರಮ್ । ವೃಣೈ ।

---

| | |
|---|---|
| ತೇ ಕಃ ಇದಮ್ ಅಚ್ಛ ಏತಿ ಇತಿ ಅಬ್ರುವನ್ನ್ | ಆ ದೇವತೆಗಳು ಆ ತೇಜಸ್ಸನ್ನು ಯಾವನು ತರಲು ಸಮರ್ಥನಾಗುತ್ತಾನೆ? ಎಂದು ಹೇಳುತ್ತಾ ವಿಚಾರ ಮಾಡಿದರು. |
| ಗೌಃ ಇತಿ | [ವಿಚಾರ ಮಾಡುವಾಗ ಕೆಲವರು] ಗೋವೇ ಈ ತೇಜಸ್ಸನ್ನು ತರಬಲ್ಲುದು. |
| ಗೌಃ ವಾವ ಸರ್ವಸ್ಯ ಮಿತ್ರಮ್ ಇತಿ ಅಬ್ರುವನ್ | ಗೋವೇ ಎಲ್ಲರಿಗೂ/ಎಲ್ಲಕ್ಕೂ ಮಿತ್ರವಾಗಿದೆಯಷ್ಟೆ ಎಂದರು. |
| ಸಾ ವರಮ್ ವೃಣೈ | ಆ ಗೋವು 'ನಾನು ವರವನ್ನು ಕೇಳುವೆನು. |

---

ಇಂದ್ರನಿಂದ ವೃತ್ರನು ಹತನಾದ ಮೇಲೆ ಹವಿಸ್ಸನ್ನು ತರಲು ದೇವತೆಗಳು ಅಗ್ನೀಷೋಮರನ್ನು ಕೇಳಿದರು. ತೇಜೋಹೀನರಾದ ಅವರು ಆಗದೆಂದಾಗ ವೃತ್ರನಲ್ಲಿರುವ ತೇಜಸ್ಸನ್ನು ಗೋವು–ವರವನ್ನು ನೀಡುವುದಾದರೆ ತಾನು ವೃತ್ರನ ಶರೀರದಲ್ಲಿರುವ ಅಗ್ನೀಷೋಮರ ತೇಜಸ್ಸನ್ನು ತಂದುಕೊಡುವೆನೆಂದು ಹೇಳಿ ವರವನ್ನು ಪಡೆದು–ತಂದಿತ್ತಿತು.

ಹಾಲು ಮತ್ತು ತುಪ್ಪಗಳು ಗವ್ಯಗಳಾಗಿದ್ದು ಮಹತ್ತ್ವವಾದವುಗಳೆನಿಸಿ ಯಾಗದ ಹವಿಸ್ಸುಗಳಾಗಿವೆ. ಈ ಅಗ್ನೀಷೋಮರ ತೇಜಸ್ಸಿನ ಜ್ಞಾನವು ಪ್ರಶಸ್ತವಾದುದಾಗಿದೆ.

ಮಯ್ಯೇವ ಸತೋಭಯೇನ ಭುನಜಾಥ್ವಾ ಇತಿ ತದ್ಗೌರಾ ಹರತ್ತಸ್ಮಾದ್ಗವಿ ಸತೋಭಯೇನ ಭುಂಜತ ಏತದ್ವಾ ಅಗ್ನೇ ಸ್ತೇಜೋ ಯದ್ಘೃತಮೇತಥ್ಸೋಮಸ್ಯ ಯತ್ಪಯೋ

---

ಮಯಿ । ಏವ । ಸತಾ । ಉಭಯೇನ । ಭುನಜಾಥ್ವೈ । ಇತಿ । ತತ್ । ಗೌಃ । ಏತಿ। ಅಹರತ್ । ತಸ್ಮಾತ್ । ಗವಿ । ಸತಾ । ಉಭಯೇನ । ಭುಂಜತೇ । ಏತತ್ । ವೈ। ಅಗ್ನೇಃ । ತೇಜಃ । ಯತ್ । ಘೃತಮ್ । ಏತತ್ । ಸೋಮಸ್ಯ । ಯತ್ । ಪಯಃ।

---

| | |
|---|---|
| ಮಯಿ ಏವ ಸತಾ ಉಭಯೇನ ಭುನಜಾಥ್ವೈ ಇತಿ ಅಬ್ರವೀತ್ | ನನ್ನಲ್ಲಿಯೇ ಇರುವ ತುಪ್ಪ ಮತ್ತು ಹಾಲು ಈ ಎರಡರಿಂದ ನೀವು ಭೋಜನ ಮಾಡಿರಿ' ಎಂದಿತು. |
| ಗೌಃ ತತ್ ಆಹರತ್ | ಆ ವೃತ್ರನಲ್ಲಿದ್ದ ತೇಜಸ್ಸನ್ನು ಗೋವು ತಂದು ಕೊಟ್ಟಿತು. |
| ತಸ್ಮಾತ್ ಗವಿ ಸತಾ ಉಭಯೇನ ಭುಂಜತೇ | ಆದುದರಿಂದ ಹಸುವಿನಲ್ಲಿರುವ ತುಪ್ಪ ಮತ್ತು ಹಾಲು ಈ ಎರಡರಿಂದ ದೇವತೆಗಳು ಭೋಜನ ಮಾಡುತ್ತಾರೆ. |
| ಯತ್ ಘೃತಮ್ ಏತತ್ ಅಗ್ನೇಃ ತೇಜಃ ವೈ | ತುಪ್ಪವೆಂಬುದು ಯಾವುದುಂಟೋ ಅದು ಅಗ್ನಿಯ ತೇಜಸ್ಸಷ್ಟೆ. |
| ಯತ್ ಪಯಃ ಏತತ್ ಸೋಮಸ್ಯ ತೇಜಃ ವೈ | ಹಾಲೆಂಬುದು ಯಾವುದುಂಟೋ ಅದು ಸೋಮನ ತೇಜಸ್ಸಾಗಿದೆಯಷ್ಟೆ. |

ಯ ಏವಮಗ್ನೀಷೋಮಯೋಸ್ತೇಜೋ ವೇದ ತೇಜಸ್ವ್ಯೇವ ಭವತಿ ಬ್ರಹ್ಮವಾದಿನೋ ವದಂತಿ ಕಿಂದೇವತ್ಯಂ ಪೌರ್ಣಮಾಸಮಿತಿ ಪ್ರಾಜಾಪತ್ಯಮಿತಿ ಬ್ರೂಯಾ

ಯಃ । ಏವಮ್ । ಅಗ್ನೀಷೋಮಯೋರಿತ್ಯಗ್ನೀ-ಸೋಮಯೋಃ । ತೇಜಃ । ವೇದ । ತೇಜಸ್ವೀ । ಏವ । ಭವತಿ । ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ । ಕಿಂದೇವತ್ಯಮಿತಿ ಕಿಂ-ದೇವತ್ಯಮ್ । ಪೌರ್ಣಮಾಸಮಿತಿ ಪೌರ್ಣ-ಮಾಸಮ್ ಇತಿ । ಪ್ರಾಜಾಪತ್ಯಮಿತಿ ಪ್ರಾಜಾ-ಪತ್ಯಮ್ । ಇತಿ । ಬ್ರೂಯಾತ್ ।

| | |
|---|---|
| ಯಃ ಏವಮ್ ಅಗ್ನೀಷೋಮಯೋಃ ತೇಜಃ ವೇದ ತೇಜಸ್ವೀ ಏವ ಭವತಿ | ಯಾವನು ಹೀಗಿರುವ ಅಗ್ನೀಷೋಮರ ತೇಜಸ್ಸನ್ನು ತಿಳಿದಿರುತ್ತಾನೆಯೋ ಅವನು ತೇಜಸ್ವಿಯೇ ಆಗುತ್ತಾನೆ. |

**ಪೌರ್ಣಮಾಸಯಾಗದ ದೇವತಾವಿಚಾರ**

| | |
|---|---|
| ಬ್ರಹ್ಮವಾದಿನಃ ಪೌರ್ಣಮಾಸಮ್ ಕಿಂದೇವತ್ಯಮ್ ಇತಿ ವದಂತಿ | ಬ್ರಹ್ಮವಾದಿಗಳಾದ ಮುನಿಗಳು ಪೌರ್ಣಮಾಸವು ಯಾವ ದೇವತಾಸಂಬಂಧಿಯಾದುದೆಂದು ಕೇಳುತ್ತಾರೆ. |
| ಪ್ರಾಜಾಪತ್ಯಮ್ ಇತಿ ಬ್ರೂಯಾತ್ | ಪ್ರಜಾಪತಿಸಂಬಂಧಿಯೆಂದು ಹೇಳಬೇಕು. |

ಪೌರ್ಣಮಾಸಯಾಗಕ್ಕೆ ದೇವತೆ ಯಾಗುವುದೆಂದು ಬ್ರಹ್ಮವಾದಿಗಳಾದ ಮುನಿಗಳು ವಿಚಾರ ಮಾಡುತ್ತಾರೆ.**'ಪ್ರಜಾಪತಿರ್ಯಜ್ಞಾನಸೃಜತ'** ಎಂದು ಆರಂಭಿಸಿ **'ಪೌರ್ಣಮಾಸೀಂ ಚೋಕ್ಥ್ಯಂ ಚ' [ತೈ.ಸಂ.1.6.9]** ಎಂಬಲ್ಲಿ ಪ್ರಜಾಪತಿಯು ಪೂರ್ಣಮಾಸಯಾಗವನ್ನು ಸೃಷ್ಟಿ ಮಾಡಿದನು ಎಂದು ಹೇಳಿರುವುದರಿಂದ ಈ ಯಾಗವು ಪ್ರಜಾಪತಿಸಂಬಂಧಿಯಾಗಿದೆ.

ತ್ತೇನೇಂದ್ರಂ ಜ್ಯೇಷ್ಠಂ ಪುತ್ರಂ ನಿರವಾಸಾಯಯದಿತಿ ತಸ್ಮಾ

ಜ್ಜ್ಯೇಷ್ಠಂ ಪುತ್ರಂ ಧನೇನ ನಿರವಸಾಯಯಂತಿ॥೧೫-2॥

**[ಅಸ್ಯ ಮಾ ವೇದಾ ದ್ಯಾವಾಪೃಥಿವ್ಯೋರಬ್ರವೀದಿತಿ ತಸ್ಮಾಚ್ಚತ್ವಾರಿ ಚ ॥]**

---

ತೇನ । ಇಂದ್ರಮ್ । ಜ್ಯೇಷ್ಠಮ್ । ಪುತ್ರಮ್ । ನಿರವಾಸಾಯಯದಿತಿ ನಿಃ-ಅವಾಸಾಯಯತ್ । ಇತಿ । ತಸ್ಮಾತ್ । ಜ್ಯೇಷ್ಠಮ್ । ಪುತ್ರಮ್ । ಧನೇನ । ನಿರವಸಾಯಯಂತೀತಿ ನಿಃ-ಅವಸಾಯಯಂತಿ ॥೧೪॥

---

| | |
|---|---|
| ತೇನ ಜ್ಯೇಷ್ಠಮ್ ಪುತ್ರಮ್ ಇಂದ್ರಮ್ ನಿರವಾಸಾಯಯತ್ ಇತಿ | ಈ ಯಾಗದಿಂದ ಪ್ರಜಾಪತಿದೇವನು ಜ್ಯೇಷ್ಠಪುತ್ರನಾದ ಇಂದ್ರನಿಗೆ ಧನವನ್ನು ಕೊಟ್ಟು ಸಂತುಷ್ಟನನ್ನಾಗಿ ಮಾಡಿದನೆಂದು ಹೇಳುತ್ತಾರೆ. |
| ತಸ್ಮಾತ್ ಜ್ಯೇಷ್ಠಮ್ ಪುತ್ರಮ್ ಧನೇನ ನಿರವಸಾಯಯಂತಿ | ಆದುದರಿಂದ ಜ್ಯೇಷ್ಠಪುತ್ರನನ್ನು ಹಣದಿಂದ ಸಂತೋಷಪಡಿಸುತ್ತಾರೆ. |

---

ಈ ಯಾಗದಿಂದ ಪ್ರಜಾಪತಿಯು ಜ್ಯೇಷ್ಠಪುತ್ರನಾದ ಇಂದ್ರನಿಗೆ ಧನವನ್ನಿತ್ತು ಸಂತುಷ್ಟಪಡಿಸಿದನು ಎಂದು ಹೇಳುತ್ತಾರೆ. ಜ್ಯೇಷ್ಠಪುತ್ರನಿಗೆ ಇರುವ ಆಸ್ತಿಯ ಹಕ್ಕಿನ ವಿಷಯದಲ್ಲಿ ಧರ್ಮಶಾಸ್ತ್ರದಲ್ಲಿ ಹೀಗೆ ಪ್ರಸಂಗವು ಬಂದಿದೆ.

ಆಪಸ್ತಂಬಧರ್ಮಸೂತ್ರದಲ್ಲಿ **'ಜ್ಯೇಷ್ಠೋ ದಾಯಾದ ಇತ್ಯೇಕೇ' [ಆಪ.ಧ.ಸೂ.2.14.6.]** ಎಂಬುದಾಗಿ ಆಸ್ತಿಗೆ ಜ್ಯೇಷ್ಠಪುತ್ರನೇ ಹಕ್ಕುದಾರ ಎಂಬ ಪೂರ್ವಪಕ್ಷವನ್ನು ತಿಳಿಸಿ, ಬಳಿಕ **'ಮನುಃ ಪುತ್ರೇಭ್ಯೋ ದಾಯಂ ವ್ಯಭಜದಿತ್ಯ ವಿಶೇಷೇಣ ಶ್ರೂಯತೇ'[ಆಪ.ಧ.ಸೂ.2.14.11.]** ಎಂಬಲ್ಲಿ **'ಮನುಃ ಪುತ್ರೇಭ್ಯಃ'** ಎಂದು ಬಹುವಚನವಿರುವುದರಿಂದ ಎಲ್ಲರಿಗೂ ಆಸ್ತಿಯಲ್ಲಿ ಹಕ್ಕು ಇದೆ ಎಂದು

ತಿಳಿಸಿ ಬಳಿಕ **'ಅಥಾಪಿ ತಸ್ಮಾಜ್ಜ್ಯೇಷ್ಠಂ ಪುತ್ರಂ ಧನೇನ ನಿರವಸಾಯಯಂತೀ ತ್ಯೇಕವಚ್ಛ್ರೂಯತೇ' [ಆಪ.ಧ.ಸೂ .2.14.12.]** ತಸ್ಮಾತ್...ನಿರವಸಾಯಯಂತಿ ಎಂಬ ಶ್ರುತಿವಚನದಂತೆ ಜ್ಯೇಷ್ಠನೇ ದಾಯಾದನೆಂದು ಪುನಃ ಆಕ್ಷೇಪಿಸಿ, **'ಸರ್ವೇ ಹಿ ಧರ್ಮಯುಕ್ತಾ ಭಾಗಿನಃ' [ಆಪ.ಧ.ಸೂ.2.14.14.]** ಎಂಬುದಾಗಿ ಹೇಳಿ ಹಿಂದಿನ ಶ್ರುತಿವಾಕ್ಯಗಳು ಅನುವಾದಕಗಳೇ ಹೊರತು ವಿಧಿವಾಕ್ಯಗಳಲ್ಲವಾದುದರಿಂದ ಧರ್ಮದಿಂದ ನಡೆಯುವ ಪುತ್ರರೆಲ್ಲರೂ ದಾಯಾದರೇ ಎಂದು ಸಿದ್ಧಾಂತ ಮಾಡಿದ್ದಾರೆ. ಹಿರಿಯ ಮಗನಿಗೆ ಕುಲಾಚಾರರಕ್ಷಣೆಗಾಗಿ ಜ್ಯೇಷ್ಠಾಂಶವನ್ನು ಕೊಡುವ ಪದ್ಧತಿಯು ಬಳಕೆಯಲ್ಲಿದೆ.

* * *

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

### ೧) ಆಗ್ನೇಯ–ಅಗ್ನೀಷೋಮೀಯಗಳಲ್ಲಿ ಯಾವುದಕ್ಕೆ ಪ್ರಾಥಮ್ಯ?

ಈ ತೈತ್ತಿರೀಯಶಾಖೆಯಲ್ಲಿ ಅಗ್ನೀಷೋಮೀಯಯಾಗವು ಬ್ರಾಹ್ಮಣಕ್ರಮದಲ್ಲಿ ಮೊದಲು ಪಠಿತವಾಗಿದೆ. **'ತಾಭ್ಯಾಮೇತಮಗ್ನೀಷೋಮೀಯಮೇಕಾದಶಕಪಾಲಂ ಪೂರ್ಣಮಾಸೇ ಪ್ರಾಯಚ್ಛತ್' [ತೈ.ಸಂ.2.5.2.]** ಆಗ್ನೇಯಯಾಗವು **['ಯದಾಗ್ನೇಯೋಽಷ್ಟಾಕಪಾಲೋಽಮಾವಾಸ್ಯಾಯಾಂ ಚ ಪೌರ್ಣಮಾಸ್ಯಾಂ ಚಾಚ್ಯುತೋ ಭವತಿ'(ತೈ.ಸಂ.2.6.3.)]** ಬಳಿಕ ಪಠಿತವಾಗಿದೆ. ಹೀಗಾಗಿ ವಿಧಾಯಕವಾಕ್ಯಗಳಾದುದರಿಂದ ಬ್ರಾಹ್ಮಣದಲ್ಲಿರುವ ಪಾಠಕ್ರಮಕ್ಕೇ ಪ್ರಾಶಸ್ತ್ಯವಿರುವುದರಿಂದ ಮೊದಲು ಅಗ್ನೀಷೋಮೀಯಯಾಗವನ್ನು ಅನುಷ್ಠಿಸಬೇಕೆಂದು ಇಲ್ಲಿನ **ಪೂರ್ವಪಕ್ಷ.**

**ಮಂತ್ರಾಂತ್ಯೈಃ ಕರ್ಮಾದಿಃ ಸಂನಿಪಾತ್ಯಃ [ಆಪ.ಪರಿ.ಸೂ...]** ಎಂಬ ಸೂತ್ರದಂತೆ ಮಂತ್ರಾರ್ಥಸ್ಮರಣಪೂರ್ವಕವಾಗಿ ಅನುಷ್ಠಾನವನ್ನು ಮಾಡಬೇಕೆಂದಿರುವುದರಿಂದಲೂ, ಪುರೋಽನುವಾಕ್ಯಾದಿ... ವಾರ್ಪಾದಿಮಂತ್ರಗಳಲ್ಲಿಯೂ, ಯಾಜ್ಯಾಮಂತ್ರಗಳಲ್ಲಿಯೂ ಆಗ್ನೇಯಯಾಗದ ಮಂತ್ರವೇ ಮೊದಲು ಪಠಿತವಾಗಿರುವುದರಿಂದಲೂ, ಮಂತ್ರಕ್ರಮಕ್ಕೇ ಪ್ರಾಶಸ್ತ್ಯವನ್ನು ನೀಡಿ ಆಗ್ನೇಯಯಾಗವನ್ನೇ ಮೊದಲು ಅನುಷ್ಠಿಸಬೇಕೆಂಬುದು ಇಲ್ಲಿನ **ಸಿದ್ಧಾಂತ.**

**೨) ಆಕಳಿಸಿದಾಗ ಮಾಡಬೇಕಾದ ಮಂತ್ರಜಪವು ಯಾರ ಧರ್ಮ?**

**[ಜೈ.ಸೂ,3.4.17.]**

ದರ್ಶಪೂರ್ಣಮಾಸಪ್ರಕರಣದಲ್ಲಿ **'ತಸ್ಮಾಜ್ಜಂಜಭ್ಯಮಾನೋ ಬ್ರೂಯಾನ್ಮಯಿ ದಕ್ಷಕ್ರತೂ ಇತಿ'** **[ತೈ.ಸಂ.2.5.2]**. ಎಂಬುದಾಗಿ ಆಕಳಿಸುವವನಿಗೆ ಮಂತ್ರಜಪವು ವಿಹಿತವಾಗಿದೆ. ಈ ವಿಧಿಯು ಆಕಳಿಸುವವರೆಲ್ಲರಿಗೂ ವಿಹಿತವಾದ ಪುರುಷಧರ್ಮವೇ? ಅಥವಾ ಪ್ರಕರಣದಲ್ಲಿ ವಿಹಿತವಾದ ಕಾರಣ ಯಾಗದಲ್ಲಿ ತೊಡಗಿರುವ ಪುರುಷನಿಗೆ ವಿಹಿತವಾದ ಕ್ರತುಯುಕ್ತಪುರುಷಧರ್ಮವೇ? ಇದು ಇಲ್ಲಿನ **ಸಂಶಯ.**

ವಾಕ್ಯಕ್ಕಿಂತಲೂ ಪ್ರಕರಣವು ದುರ್ಬಲವಾದುದರಿಂದ ಇದು ಎಲ್ಲರಿಗೂ ವಿಹಿತವಾದ ಪುರುಷಧರ್ಮವೆಂಬುದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿ ವಾಕ್ಯ-ಪ್ರಕರಣಗಳಿಗೆ ವಿರೋಧವಿಲ್ಲ. ಯಾಗದಲ್ಲಿ ತೊಡಗಿರುವ ಪುರುಷನೂ ಆಕಳಿಸುವ ಸಂಭವವಿದೆ. ವಾಕ್ಯಪ್ರಕರಣಗಳ ಪ್ರಾಬಲ್ಯ-ದೌರ್ಬಲ್ಯಗಳು ವಿರೋಧವಿದ್ದೆಡೆಯಲ್ಲಿ ಮಾತ್ರ. ಹೀಗಾಗಿ ಈ ಮಂತ್ರಜಪವು ಕ್ರತುಯುಕ್ತಪುರುಷ ಧರ್ಮವಾಗುತ್ತದೆ. ಇದು ಇಲ್ಲಿನ **ಸಿದ್ಧಾಂತ.**

**೩) ವಾರ್ತ್ರಘ್ನೀ-ವೃಧನ್ವತೀ ಮಂತ್ರಯುಗ್ಮಗಳು ಯಾವುದರ ಅಂಗಗಳು?** **[ಜೈ.ಸೂ.3.1.29]**

ದರ್ಶಪೂರ್ಣಮಾಸಪ್ರಕರಣದಲ್ಲಿ **'ತಸ್ಮಾದ್ವಾರ್ತ್ರಘ್ನೀ ಪೂರ್ಣಮಾಸೇಽನೂಚ್ಯೇತೇ ವೃಧನ್ವತೀ ಅಮಾವಾಸ್ಯಾಯಾಮ್'** **[ತೈ.ಸಂ.2.5.6]**ಎಂಬ ವಾಕ್ಯವಿದೆ. ಇವು ಪ್ರಧಾನವಾದ ಆಗ್ನೇಯಾದಿಯಾಗಗಳಿಗೇ ಸಂಬಂಧಿಸುತ್ತವೆಯೆಂಬುದು ಇಲ್ಲಿನ **ಪೂರ್ವಪಕ್ಷ.**

ಪ್ರಧಾನಗಳಲ್ಲಿ ಸೋಮದೇವತೆಯು ಇಲ್ಲದುದರಿಂದಲೂ ಈ ಮಂತ್ರಗಳು ಆಜ್ಯಭಾಗಮಂತ್ರಕ್ರಮದಲ್ಲಿಯೇ ಬರುವುದರಿಂದಲೂ ಇವು ಆಜ್ಯಭಾಗಹೋಮಗಳಿಗೇ ವ್ಯವಸ್ಥಿತವಾಗಿ ಸಂಬಂಧಿಸುತ್ತವೆ. ಇದು ಇಲ್ಲಿನ **ಸಿದ್ಧಾಂತ.**

## ॥ ತೃತೀಯೋಽನುವಾಕಃ ॥

ಇಂದ್ರಂ ವೃತ್ರಂ ಜಘ್ನಿವಾಗ್ಂಸಂ ಮೃಧೋಽಭಿ

ಪ್ರಾವೇಪಂತ

---

ಇಂದ್ರಮ್ । ವೃತ್ರಮ್ । ಜಘ್ನಿವಾಗ್ಂಸಮ್ । ಮೃಧಃ । ಅಭಿ । ಪ್ರೇತಿ ।

ಅವೇಪಂತ ।

---

ಎರಡನೆಯ ಅನುವಾಕದಲ್ಲಿ ಅಗ್ನೀಷೋಮೀಯವಿಧಾನವನ್ನು ಹೇಳಿ ಮೂರನೆಯ ಅನುವಾಕದಲ್ಲಿ ಅಮಾವಾಸ್ಯೆಯಲ್ಲಿ ಅನುಷ್ಠಿಸಬೇಕಾದ ಪಯೋಯಾಗಗಳನ್ನು ಹೇಳಲಾಗಿದೆ. ಅದಕ್ಕೂ ಮೊದಲು ಪೂರ್ಣಮಾಸಯಾಗದಲ್ಲಿ ಪ್ರಧಾನಯಾಗದ ನಂತರ ಮಾಡಬೇಕಾದ ವೈಮೃಧಯಾಗವನ್ನು ಹೇಳಲಾಗಿದೆ.

---

### ವೈಮೃಧಯಾಗವಿಧಾನದ ಉಪಾಖ್ಯಾನ

| | |
|---|---|
| ವೃತ್ರಮ್ ಜಘ್ನಿವಾಗ್ಂಸಮ್ ಇಂದ್ರಮ್ | ವೃತ್ರನನ್ನು ಕೊಂದ ನಂತರ ಇಂದ್ರನನ್ನು |
| ಮೃಧಃ ಅಭಿ ಪ್ರಾವೇಪಂತ | ವೃತ್ರಪಕ್ಷೀಯರಾದ ಶತ್ರುಗಳು ಮುತ್ತಿಕೊಂಡು ಭಯದಿಂದ ನಡುಗಿಸಿದರು. |

ಸ ಏತಂ ವೈಮೃಧಂ ಪೂರ್ಣಮಾಸೇಽನುನಿರ್ವಾಪ್ಯಮಪ-

ಶ್ಯತ್ತಂ ನಿರವಪತ್ತೇನ ವೈ ಸ ಮೃಧೋಽಪಾಹತ

---

ಸಃ । ಏತಮ್ । ವೈಮೃಧಮ್ । ಪೂರ್ಣಮಾಸ ಇತಿ ಪೂರ್ಣ-ಮಾಸೇ।

ಅನುನಿರ್ವಾಪ್ಯಮಿತ್ಯನು-ನಿರ್ವಾಪ್ಯಮ್ । ಅಪಶ್ಯತ್ । ತಮ್ । ನಿರಿತಿ । ಅವಪತ್।

ತೇನ । ವೈ । ಸಃ । ಮೃಧಃ । ಅಪೇತಿ । ಅಹತ ।

---

| | |
|---|---|
| ಸಃ ಪೂರ್ಣಮಾಸೇ ಏತಮ್ ವೈಮೃಧಮ್ ಅನುನಿರ್ವಾಪ್ಯಮ್ ಅಪಶ್ಯತ್ | ಆ ಇಂದ್ರನು ಪೂರ್ಣಮಾಸಯಾಗದಲ್ಲಿ ಪ್ರಧಾನಯಾಗದ ನಂತರ ನಿರ್ವಾಪ ಮಾಡಿ ಅನುಷ್ಠಿಸಬೇಕಾದ ವೈಮೃಧಯಾಗವನ್ನು* [ಶತ್ರು ನಾಶಕದೇವತಾಕ] ಕಂಡನು. |
| ತಮ್ ನಿರವಪತ್ | *ನಿರ್ವಾಪ ಮಾಡಿ ಆ ಯಾಗವನ್ನು ಅನುಷ್ಠಿಸಿದನು. |
| ತೇನ ವೈ ಸಃ ಮೃಧಃ ಅಪಾಹತ | ಆ ಯಾಗದ ಪ್ರಭಾವದಿಂದ ಆ ಇಂದ್ರನು ಶತ್ರುಗಳನ್ನು ನಾಶಪಡಿಸಿದನು. |

---

***ವಿನಾಶಿತಾಃ ಮೃಧಃ=ಶತ್ರವಃ ಯೇನ ದೇವೇನ ಅಸೌ ವಿಮೃತ್** । ಯಾವ ದೇವನಿಂದ ಶತ್ರುಗಳು ನಾಶಗೊಳಿಸಲ್ಪಟ್ಟರೋ ಅವನು **ವಿಮೃತ್. ವಿಮೃತ್ ದೇವಃ ಯಸ್ಯ ಏಕಾದಶಕಪಾಲ ಪುರೋಡಾಶಸ್ಯ ಸಃ ವೈಮೃಧಃ** ॥ ಯಾವ ಏಕಾದಶಕಪಾಲ ಪುರೋಡಾಶಕ್ಕೆ ಆ ವಿಮೃತ್ ದೇವನೋ ಆ ಯಾಗವು **'ವೈಮೃಧಃ.'**॥

*ನಿರ್ವಾಪವೆಂದರೆ ಯಾಗದ್ರವ್ಯವನ್ನು ಬೇರ್ಪಡಿಸುವಿಕೆ. ಈ ಶಬ್ದವನ್ನು ಯಾಗಮಾಡಿದ ನೆಂಬ ಅರ್ಥದಲ್ಲಿಯೂ ಉಪಯೋಗಿಸುತ್ತಾರೆ.

ಯದ್ವೈಮೃಧಃ ಪೂರ್ಣಮಾಸೇಽನುನಿರ್ವಾಪ್ಯೋ ಭವತಿ ಮೃಧ ಏವ ತೇನ ಯಜಮಾನೋಽಪಹತ ಇಂದ್ರೋ ವೃತ್ರಗ್ಂ ಹತ್ವಾ

---

ಯತ್ । ವೈಮೃಧಃ । ಪೂರ್ಣಮಾಸ ಇತಿ ಪೂರ್ಣ–ಮಾಸೇ । ಅನುನಿರ್ವಾಪ್ಯ ಇತ್ಯನು–ನಿರ್ವಾಪ್ಯಃ । ಭವತಿ। ಮೃಧಃ । ಏವ । ತೇನ । ಯಜಮಾನಃ । ಅಪೇತಿ। ಹತೇ । ಇಂದ್ರಃ । ವೃತ್ರಮ್। ಹತ್ವಾ ।

---

**ವೈಮೃಧಯಾಗದ ವಿಧಿ; ಆದರ ಫಲದ ಪ್ರಶಂಸೆ**

| | |
|---|---|
| ಪೂರ್ಣಮಾಸೇ ವೈಮೃಧಃ ಅನು ನಿರ್ವಾಪ್ಯಃ ಭವತಿ [ಇತಿ] ಯತ್ | ಪೂರ್ಣಮಾಸಯಾಗದಲ್ಲಿ ಆಗ್ನೇಯಯಾಗದನಂತರ ವೈಮೃಧಯಾಗಾನುಷ್ಠಾನ ಮಾಡುವುದೆಂಬುದು ಯಾವುದುಂಟೋ |
| ತೇನ ಯಜಮಾನಃ ಮೃಧಃ ಏವ ಅಪಹತೇ | ಆದರಿಂದ ಯಜಮಾನನು ಶತ್ರುಗಳನ್ನೇ ನಾಶಪಡಿಸುತ್ತಾನೆ. |

**ಐಂದ್ರಾಗ್ನವಿಧಿ; ದಧಿವಿಧಿ:ಪ್ರಶಂಸೆ**

| | |
|---|---|
| ಇಂದ್ರಮ್ ವೃತ್ರಮ್ ಹತ್ವಾ | ಇಂದ್ರನು ವೃತ್ರನನ್ನು ಸಂಹಾರ ಮಾಡಿ |

---

ಪೂರ್ಣಮಾಸದಲ್ಲಿ ಈ ವೈಮೃಧಯಾಗಾನುಷ್ಠಾನದಿಂದ ಯಜಮಾನನು ಶತ್ರುಗಳನ್ನು ನಾಶಪಡಿಸುತ್ತಾನೆ.

ಈ ಬ್ರಾಹ್ಮಣವಾಕ್ಯದಲ್ಲಿ **'ಯತ್'** ಶಬ್ದದ ಪ್ರಯೋಗವಿದೆ. **'ಯತ್'** ಶಬ್ದವು ವಿಧಿ ಶಕ್ತಿಗೆ ಪ್ರತಿಬಂಧಕವೆನಿಸುತ್ತದೆ. ಹೀಗಾಗಿ ಇದು ವೈಮೃಧಯಾಗದ ವಿಧಿವಾಕ್ಯ ಹೇಗೆ?

ದೇವತಾಭಿಶ್ಚೇಂದ್ರಿಯೇಣ ಚ ವ್ಯಾರ್ಧ್ಯತ ಸ ಏತಮಾಗ್ನೇಯ

ಮಷ್ಟಾಕಪಾಲಮಮಾವಾಸ್ಯಾಯಾಮಪಶ್ಯದೈಂದ್ರಂ ದಧಿ

[ದಧಿ(೧)] ತಂ ನಿರವಪ–

---

ದೇವತಾಭಿಃ । ಚ । ಇಂದ್ರಿಯೇಣ । ಚ । ವೀತಿ । ಆರ್ಧ್ಯತ । ಸಃ । ಏತಮ್ । ಆಗ್ನೇಯಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ । ಅಮಾವಾಸ್ಯಾಯಾಮಿತ್ಯಮಾ–ವಾಸ್ಯಾಯಾಮ್ । ಅಪಶ್ಯತ್ । ಐಂದ್ರಮ್ । ದಧಿ । [೧] । ತಮ್ । ನಿರಿತಿ । ಅವಪತ್।

---

| | |
|---|---|
| ದೇವತಾಭಿಃ ಇಂದ್ರಿಯೇಣ ಚ ವ್ಯಾರ್ಧ್ಯತ | [ಪಲಾಯನ ಮಾಡುತ್ತಾ] ತನ್ನ ಅನುಯಾಯಿಗಳಾದ ದೇವತೆಗಳಿಂದಲೂ ತನ್ನ ಸಾಮರ್ಥ್ಯದಿಂದಲೂ ಬಿಡಲ್ಪಟ್ಟನು. |
| ಸಃ ಅಮಾವಾಸ್ಯಾಯಾಮ್ ಏತಮ್ ಆಗ್ನೇಯಮ್ ಅಷ್ಟಾಕಪಾಲಮ್ ಐಂದ್ರಮ್ ದಧಿ ಅಪಶ್ಯತ್ | ಆ ಇಂದ್ರನು ಅಮಾವಾಸ್ಯೆಯಲ್ಲಿ ಅನುಷ್ಠಿಸಬೇಕಾದ ಅಗ್ನಿದೇವತಾಕವಾದ ಅಷ್ಟಾಕಪಾಲಯಾಗವನ್ನೂ ಇಂದ್ರದೇವತಾಕವಾದ ದಧಿಯಾಗವನ್ನೂ ತಿಳಿದು ಕೊಂಡನು. |
| ತಮ್ ನಿರವಪತ್ | ಬಳಿಕ ಹವಿರ್ನಿರ್ವಾಪವನ್ನು ಮಾಡಿ ಆ ಯಾಗಗಳನ್ನು ಅನುಷ್ಠಿಸಿದನು. |

---

ವೈಮೃಧಯಾಗಕ್ಕೆ ಬೇರೆಡೆ ವಿಧಿವಾಕ್ಯವು ಇಲ್ಲವಾದುದರಿಂದ **'ಯತ್ ವೈಮೃಧಃ'** ಎಂಬ ವಾಕ್ಯವನ್ನು ಈ ರೀತಿ ಮಾಡಿಕೊಳ್ಳಬೇಕು. **'ಪೂರ್ಣಮಾಸೇ ಅನುನಿರ್ವಾಪ್ಯೇನ ವೈಮೃಧೇನ ಏಕಾದಶಕಪಾಲೇನ ಯಜೇತ'** ಹೀಗೆ ಅದು ವಿಧಿವಾಕ್ಯವೆನಿಸುತ್ತದೆ.

ತ್ತೇನ ವೈ ಸ ದೇವತಾಶ್ಚೇಂದ್ರಿಯಂ ಚಾವಾರುಂಧ ಯದಾಗ್ನೇ

ಯೋಽಷ್ಟಾಕಪಾಲೋಮಾವಾಸ್ಯಾಯಾಂ ಭವತ್ಯೈಂದ್ರಂ ದಧಿ

ದೇವತಾಶ್ಚೈವ ತೇನೇಂದ್ರಿಯಂ ಚ ಯಜಮಾನೋಽವರುಂಧ

---

ತೇನ । ವೈ । ಸಃ । ದೇವತಾಃ । ಚ । ಇಂದ್ರಿಯಮ್ । ಚ । ಅವೇತಿ । ಅರುಂಧ।

ಯತ್ । ಆಗ್ನೇಯಃ । ಅಷ್ಟಾಕಪಾಲ ಇತ್ಯಷ್ಟಾ-ಕಪಾಲಃ । ಅಮಾವಾಸ್ಯಾಯಾಮಿತ್ಯಮಾ-

ವಾಸ್ಯಾಯಾಮ್ । ಭವತಿ । ಐಂದ್ರಮ್ । ದಧಿ । ದೇವತಾಃ । ಚ । ಏವ । ತೇನ।

ಇಂದ್ರಿಯಮ್ । ಚ । ಯಜಮಾನಃ । ಅವೇತಿ । ರುಂಧೇ ।

---

| | |
|---|---|
| ತೇನ ವೈ ಸಃ ದೇವತಾಃ ಇಂದ್ರಿಯಮ್ ಚ ಅವಾರುಂಧ | ಆ ಯಾಗದ ಪ್ರಭಾವದಿಂದ ಆ ಇಂದ್ರನು ದೇವತೆಗಳ ಬೆಂಬಲವನ್ನೂ ಸ್ವಸಾಮರ್ಥ್ಯವನ್ನೂ ಮತ್ತೆ ಹೊಂದಿದನು. |
| ಅಮಾವಾಸ್ಯಾಯಾಮ್ ಯತ್ ಆಗ್ನೇಯಃ ಅಷ್ಟಾಕಪಾಲಃ ಐಂದ್ರಮ್ ದಧಿ | ಅಮಾವಾಸ್ಯೆಯಲ್ಲಿ ಆಗ್ನೇಯವಾದ ಅಷ್ಟಾಕಪಾಲಯಾಗವೂ ಇಂದ್ರದೇವತಾ ಕವಾದ ದಧಿಯಾಗವೂ ನಡೆಯುತ್ತದೆ ಎಂಬುದು ಯಾವುದುಂಟೋ |
| ತೇನ ಯಜಮಾನಃ ದೇವತಾಃ ಚ ಇಂದ್ರಿಯಮ್ ಚ ಏವ ಅವರುಂಧೇ | ಅದರಿಂದ ಯಜಮಾನನು ದೇವತೆಗಳ ಅನುಗ್ರಹವನ್ನೂ ವಿಶೇಷಸಾಮರ್ಥ್ಯವನ್ನೂ ಪಡೆದುಕೊಳ್ಳುವನು. |

---

**'ಯದಾಗ್ನೇಯೋಽಷ್ಟಾಕಪಾಲಃ'** ಎಂಬಲ್ಲಿ ಆಗ್ನೇಯವಿಧಿಯು ಇರುವಂತೆ ತೋರುತ್ತದೆ. ಆದರೆ ಆರನೆಯ ಪ್ರಪಾಠಕದಲ್ಲಿ **'ಯದಾಗ್ನೇಯೋಽಷ್ಟಾಕ ಪಾಲೋಽಮಾವಾಸ್ಯಾಯಾಂ ಪೌರ್ಣಮಾಸ್ಯಾಂ ಚಾಚ್ಯುತೋ ಭವತಿ'** [ತೈ.ಸಂ.೨.೬.೩]

ಇಂದ್ರಸ್ಯ ವೃತ್ರಂ ಜಘ್ನುಷ ಇಂದ್ರಿಯಂ ವೀರ್ಯಂ ಪೃಥಿವೀ
ಮನುವ್ಯಾರ್ಛತ್ತದೋಷಧಯೋ ವೀರುಧೋಽಭವನ್ತ್ಸ

---

ಇಂದ್ರಸ್ಯ । ವೃತ್ರಮ್ । ಜಘ್ನುಷಃ । ಇಂದ್ರಿಯಮ್ । ವೀರ್ಯಮ್ । ಪೃಥಿವೀಮ್।
ಅನು । ವೀತಿ । ಆರ್ಛತ್ । ತತ್ । ಓಷಧಯಃ । ವೀರುಧಃ । ಅಭವನ್ । ಸಃ।

---

## ಸಾನ್ನಾಯ್ಯ-ಪ್ರತಿಧುಗಾದಿನಾಮನಿರ್ವಚನ

| | |
|---|---|
| ವೃತ್ರಮ್ ಜಘ್ನುಷಃ ಇಂದ್ರಸ್ಯ ಇಂದ್ರಿಯಮ್ ವೀರ್ಯಮ್ ಪೃಥಿವೀಮ್ ಅನುವ್ಯಾರ್ಛತ್ | ವೃತ್ರನನ್ನು ಸಂಹರಿಸಿದ ಇಂದ್ರನ ಇಂದ್ರಿಯ ಸಾಮರ್ಥ್ಯವೂ, ಬಲವೂ ನಾನಾ ಪ್ರಕಾರ ವಾಗಿ ಭೂಮಿಯನ್ನು ಸೇರಿ ಹೋದವು. |
| ತತ್ ಓಷಧಯಃ* ವೀರುಧಃ* ಅಭವನ್ | ಆ ಇಂದ್ರಿಯಸಾಮರ್ಥ್ಯ,ಬಲಗಳು ಸಸ್ಯ ಗಳೂ,ಬಳ್ಳಿಗಳೂ ಆದವು. |

---

ಎಂಬ ವಿಧಿವಾಕ್ಯದಲ್ಲಿ ಅಮಾವಾಸ್ಯೆ-ಪೌರ್ಣಮಾಸೀಗಳೆರಡರಲ್ಲಿಯೂ ಆಗ್ನೇಯ ವಿಧಿಯು ಸ್ಪಷ್ಟವಾಗಿದೆ. ಇಲ್ಲಿಯ ವಾಕ್ಯವು ಶಾಖಾಂತರಾನುಸಾರವಾಗಿ ಐಂದ್ರಾಗ್ನವಾದ ಏಕಾದಶಕಪಾಲವಿಧಿ. ಈ ವಾಕ್ಯವು-ಅಗ್ನಿಯ ಅನುಗ್ರಹದಿಂದಲೇ ಸಾಮರ್ಥ್ಯವು ಪ್ರಾಪ್ತವಾಗುತ್ತದೆಯೆನ್ನುವಾಗ ಇಂದ್ರನ ಅನುಗ್ರಹವೂ ದೊರೆತರೆ ಹೇಳಬೇಕಾದುದೇನು?, ಎಂಬ ಸ್ತುತಿರೂಪವಾದ ಅರ್ಥವನ್ನು-ಹೇಳುತ್ತದೆ. **'ಐಂದ್ರೇಣ ದಧ್ನಾ ಯಜೇತ'** ಎಂಬುದಾಗಿ ದಧಿಯಾಗವಿಧಿಯು ಸ್ಪಷ್ಟವಾಗಿದೆ.

---

***ಓಷಧ್ಯಃ ಫಲಪಾಕಾಂತಾಃ [ಲತಾಗುಲ್ಮಾಶ್ಚ ವೀರುಧಃ] ಲತಾ ಪ್ರತಾನಿನೀ ವೀರುತ್**
**-ಅಮರಕೋಶ .೨.೪.೬-೯**

ಪ್ರಜಾಪತಿಮುಪಾಧಾವದ್ವೃತ್ರಂ ಮೇ ಜಘ್ನುಷ ಇಂದ್ರಿಯಂ ವೀರ್ಯಂ [ವೀರ್ಯಮ್(೨)] ಪೃಥಿವೀಮನು ವ್ಯಾರತ್ತದೋಷಧಯೋ ವೀರುಧೋಽಭೂವನ್ನಿತಿ ಸ ಪ್ರಜಾಪತಿಃ ಪಶೂನ-

---

ಪ್ರಜಾಪತಿಮಿತಿ ಪ್ರಜಾ-ಪತಿಮ್ । ಉಪೇತಿ । ಅಧಾವತ್ । ವೃತ್ರಮ್ । ಮೇ । ಜಘ್ನುಷಃ । ಇಂದ್ರಿಯಮ್ । ವೀರ್ಯಮ್ । (೨) । ಪೃಥಿವೀಮ್ । ಅನು । ವೀತಿ। ಆರತ್ । ತತ್ । ಓಷಧಯಃ । ವೀರುಧಃ । ಅಭೂವನ್ನ್ । ಇತಿ । ಸಃ । ಪ್ರಜಾಪತಿರಿತಿ ಪ್ರಜಾ-ಪತಿಃ । ಪಶೂನ್ ।

---

ಸಃ ಪ್ರಜಾಪತಿಮ್ ವೃತ್ರಮ್ ಜಘ್ನುಷಃ ಮೇ ಇಂದ್ರಿಯಮ್ ವೀರ್ಯಮ್ ಪೃಥಿವೀಮ್ ಅನು ವ್ಯಾರತ್

ಆ ಇಂದ್ರನು ಪ್ರಜಾಪತಿಯನ್ನು 'ವೃತ್ರನನ್ನು ಸಂಹರಿಸಿದ ನನ್ನ ಇಂದ್ರಿಯ-ವೀರ್ಯಗಳು ನಾನಾರೂಪಗಳಲ್ಲಿ ಭೂಮಿಯಲ್ಲಿ ಸೇರಿ ಹೋದವು.

ತತ್ ಓಷಧಯಃ ವೀರುಧಃ ಅಭೂವನ್ನ್ ಇತಿ ಉಪಾಧಾವತ್

ಆ ವೀರ್ಯವೂ,ಇಂದ್ರಿಯಸಾಮರ್ಥ್ಯವೂ ಓಷಧಿಗಳೂ,ಬಳ್ಳಿಗಳೂ ಆಗಿವೆ' ಎಂದು ಹೇಳಿ ಪರಿಹಾರಕ್ಕಾಗಿ ಅವನನ್ನು ಆಶ್ರಯಿಸಿದನು.

ಸಃ ಪ್ರಜಾಪತಿಃ ಪಶೂನ್

ಆ ಪ್ರಜಾಪತಿಯು ಪಶುಗಳನ್ನು ಕುರಿತು

ಬ್ರವೀದೇತದಸ್ಮೈ ಸಂ ನಯತೇತಿ ತತ್ಪಶವ ಓಷಧೀ

ಭ್ಯೋಽಧ್ಯಾತ್ಮನ್ತ್ಸಮನಯನ್ತತ್ಪ್ರತ್ಯದುಹನ್ ಯತ್ಸಮನಯ

ನ್ತತ್ಸಾನ್ನಾಯಸ್ಯ ಸಾಂನಾಯ್ಯತ್ವಂ

---

ಅಬ್ರವೀತ್ । ಏತತ್ । ಅಸ್ಮೈ । ಸಮಿತಿ । ನಯತ । ಇತಿ । ತತ್ । ಪಶವಃ ।

ಓಷಧೀಭ್ಯ ಇತ್ಯೋಷಧಿ-ಭ್ಯಃ । ಅಧೀತಿ । ಆತ್ಮನ್ನ್ । ಸಮಿತಿ । ಅನಯನ್ನ್ । ತತ್ ।

ಪ್ರತೀತಿ । ಅದುಹನ್ನ್ । ಯತ್ । ಸಮನಯನ್ನಿತಿ ಸಂ-ಅನಯನ್ನ್ । ತತ್ ।

ಸಾನ್ನಾಯ್ಯಸ್ಯೇತಿ ಸಾಂ-ನಾಯ್ಯಸ್ಯ । ಸಾನ್ನಾಯ್ಯತ್ವಮಿತಿ ಸಾನ್ನಾಯ್ಯ-ತ್ವಮ್ ।

---

| | |
|---|---|
| ಅಸ್ಮೈ ಏತತ್ ಸಂನಯತ ಇತಿ ಅಬ್ರವೀತ್ | 'ಇಂದ್ರನಿಗಾಗಿ ಇಂದ್ರನ ಇಂದ್ರಿಯ ಸಾಮರ್ಥ್ಯವನ್ನು ಸಂಪೂರ್ಣವಾಗಿ ತೆಗೆದು ಕೊಂಡು ಬನ್ನಿರಿ' ಎಂದು ಹೇಳಿದನು. |
| ತತ್ ಪಶವಃ ಓಷಧೀಭ್ಯಃ ಅಧಿ ಆತ್ಮನ್ನ್ ಸಮನಯನ್ | ಆ ಪಶುಗಳು ಓಷಧ್ಯಾದಿಗಳಿಂದ [ಇಂದ್ರನ ಶಕ್ತಿಯನ್ನು ತೃಣಭಕ್ಷಣದಿಂದ] ತಮ್ಮಲ್ಲಿ ತುಂಬಿಕೊಂಡವು |
| ತತ್ ಪ್ರತ್ಯದುಹನ್ | [ಕ್ಷೀರರೂಪವಾಗಿ ಪರಿಣಮಿಸಿದ] ಆ ಶಕ್ತಿಯನ್ನು ಇಂದ್ರನಿಗಾಗಿ ಕರೆದವು. |
| ಯತ್ ಸಮನಯನ್ ತತ್ ಸಾನ್ನಾಯ್ಯಸ್ಯ ಸಾನ್ನಾಯ್ಯತ್ವಮ್ | ಯಾವ ಕಾರಣದಿಂದ [ಓಷಧ್ಯಾದಿಗಳಿಂದ ಇಂದ್ರನ ಶಕ್ತಿಯನ್ನು ಸಂಗ್ರಹಿಸಿದವೋ, ಅದೇ [ಗೋಕ್ಷೀರದ] ಸಾನ್ನಾಯ್ಯದ ಸಾನ್ನಾಯ್ಯತ್ವವೆನಿಸಿದೆ. |

---

ಹಸುಗಳು ಭಕ್ಷಿಸಿದ ಸಸ್ಯಾದಿಗಳು ಕ್ಷೀರವಾಗಿ ಪರಿಣಮಿಸುತ್ತದೆ. ಇಂದ್ರನು ಪ್ರಜಾಪತಿಗೆ ಆ ಸಾಮರ್ಥ್ಯವು ತನ್ನಲ್ಲಿ ಉಳಿಯುವಂತೆ ಮಾಡಬೇಕೆಂದು ಹೇಳಿದಾಗ

ಯತ್ಪ್ರತ್ಯದುಹನ್ತತ್ಪ್ರತಿಧುಷಃ ಪ್ರತಿಧುಕ್ತ್ವಗ್ಂ ಸಮನ್ಯೈಷುಃ ಪ್ರತ್ಯಧುಕ್ಷನ್ನ ತು ಮಯಿ ಶ್ರಯತ ಇತ್ಯಬ್ರವೀದೇತದಸ್ಮೈ [(೩)] ಶೃತಂ ಕುರುತೇತ್ಯಬ್ರವೀತ್ತ–

---

ಯತ್ । ಪ್ರತ್ಯದುಹನ್ನಿತಿ ಪ್ರತಿ–ಅದುಹನ್ನ್ । ತತ್ । ಪ್ರತಿಧುಷ ಇತಿ ಪ್ರತಿ–ಧುಷಃ। ಪ್ರತಿಧುಕ್ತ್ವಮಿತಿ ಪ್ರತಿಧುಕ್–ತ್ವಮ್ । ಸಮಿತಿ । ಅನ್ಯೈಷುಃ । ಪ್ರತೀತಿ । ಅಧುಕ್ಷನ್ನ್। ನ । ತು । ಮಯಿ । ಶ್ರಯತೇ । ಇತಿ । ಅಬ್ರವೀತ್ । ಏತತ್ । ಅಸ್ಮೈ । [೩]। ಶೃತಮ್ । ಕುರುತ । ಇತಿ । ಅಬ್ರವೀತ್ ।

---

| | |
|---|---|
| ಯತ್ ಪ್ರತ್ಯದುಹನ್ ತತ್ ಪ್ರತಿಧುಷಃ ಪ್ರತಿಧುಕ್ತ್ವಮ್ | ಯಾವ ಕಾರಣದಿಂದ [ಇಂದ್ರನಿಗಾಗಿ ಹಾಲನ್ನು] ಕರೆದುಕೊಟ್ಟವೋ ಅದರಿಂದಲೇ ಈ ಕರೆದ ಹಾಲಿನ [ಪ್ರತಿಧುಕ್ ಎಂಬುದರ] ಪ್ರತಿಧುಕ್ತ್ವವೆನಿಸಿದೆ. |

**ಶೃತವೆಂಬ ಪದದ ನಿರ್ವಚನ; ಪಯೋಯಾಗವಿಧಿ**

| | |
|---|---|
| ಸಮನ್ಯೈಷುಃ ಪ್ರತ್ಯಧುಕ್ಷನ್ | [ಇಂದ್ರನು ಪ್ರಜಾಪತಿಗೆ] [ಪಶುಗಳು] ಭೂಮಿಯಲ್ಲಿ ಹರಡಿದ್ದ ಸಾಮರ್ಥ್ಯವನ್ನು ಸಂಗ್ರಹಿಸಿದವು.ನನಗಾಗಿ ಪ್ರತಿನಿತ್ಯವೂ ಹಾಲನ್ನು ಕರೆದವು. |
| ನ ತು ಮಯಿ ಶ್ರಯತೇ ಇತಿ ಅಬ್ರವೀತ್ | ಆದರೆ ತನ್ನಲ್ಲಿ ಇರುವಂತೆ/ಜೀರ್ಣವಾಗುವಂತೆ ಮಾಡಲಿಲ್ಲ ಎಂದು ಹೇಳಿದನು. |
| ಅಸ್ಮೈ ಏತತ್ ಶೃತಮ್ ಕುರುತ ಇತಿ ಅಬ್ರವೀತ್ | [ಆಗ ಪ್ರಜಾಪತಿಯು ಪಾಕಕರ್ತೃಗಳಿಗೆ/ಯಾಗಕರ್ತೃಗಳಿಗೆ] ಇಂದ್ರನಿಗಾಗಿ ಇದನ್ನು ಕಾಯಿಸಿಕೊಡಿರಿ/ಇಂದ್ರಿಯಾದಿಗಳು ಸ್ಥಿರವಾಗಿರುವಂತೆ ಮಾಡಿರಿ ಎಂದನು. |

ದಸ್ಮೈ ಶೃತಮಕುರ್ವನ್ನಿಂದ್ರಿಯಂ ವಾವಾಸ್ಮಿನ್ವೀರ್ಯಂ

ತದಶ್ರಯನ್ತಚ್ಛೃತಸ್ಯ ಶೃತತ್ವಗ್‌ಂ

---

ತತ್ । ಅಸ್ಮೈ । ಶೃತಮ್ । ಅಕುರ್ವನ್ನ್ । ಇಂದ್ರಿಯಮ್ । ವಾವ । ಅಸ್ಮಿನ್ನ್ ।

ವೀರ್ಯಮ್ । ತತ್ । ಅಶ್ರಯನ್ನ್ । ತತ್ । ಶೃತಸ್ಯ । ಶೃತತ್ವಮಿತಿ ಶೃತ-ತ್ವಮ್।

---

| | |
|---|---|
| ತತ್ ಅಸ್ಮೈ ಶೃತಮ್ ಅಕುರ್ವನ್ | ಅದನ್ನು ಅವರು ಕಾಯಿಸಿಕೊಟ್ಟು ಇಂದ್ರಿಯಾದಿಗಳು ಇಂದ್ರನಲ್ಲಿ ಸ್ಥಿರವಾಗಿರುವಂತೆ ಮಾಡಿದರು. |
| ತತ್ ಇಂದ್ರಿಯಮ್ ವೀರ್ಯಮ್ ವಾವ ಅಸ್ಮಿನ್ನ್ ಅಶ್ರಯನ್ನ್ | [ಯಾವ ಕಾರಣದಿಂದ]ಈ ಇಂದ್ರನಲ್ಲಿ ಇಂದ್ರಿಯ-ವೀರ್ಯಗಳು ನೆಲಸುವಂತೆ ಮಾಡಿದರು. [ಮಾಡಿದರೋ] |
| ತತ್ ಶೃತಸ್ಯ ಶೃತತ್ವಮ್ | ಅ ಕಾರಣದಿಂದ ಗೋಕ್ಷಿರದ [ಶೃತದ] ಶೃತತ್ವವಿದೆ. [ಗೋಕ್ಷೀರಕ್ಕೆ ಶೃತವೆಂದು ಹೆಸರಾಯಿತು.] |

---

ಪ್ರಜಾಪತಿಯು ಯಾಗಕರ್ತೃಗಳಿಗೆ ಹಾಲನ್ನು ಕಾಯಿಸಲು ಹೇಳಿದನು.

ಇಲ್ಲಿ ಶೃತಮ್ ಎಂಬ ಶಬ್ದವನ್ನು ಶ್ರಾ=ಪಾಕೇ;ಶ್ರಿಞ್= ಸೇವಾಯಾಮ್ ಎಂಬ ಧಾತುಗಳಿಂದ ನಿಷ್ಪನ್ನಗೊಳಿಸಲಾಗಿದೆ. ಎರಡು ಧಾತುಗಳ ಅರ್ಥವನ್ನೂ ಉಪಯೋಗಿಸಿಕೊಳ್ಳಲಾಗಿದೆ.

ಇಲ್ಲಿ **'ಐಂದ್ರೇಣ ಪಯಸಾ ಯಜೇತ'** ಎಂಬ ವಿಧಿವಾಕ್ಯವನ್ನು ಅರ್ಥವಾದದ ಬಲದಿಂದ ಕಲ್ಪಿಸಿಕೊಳ್ಳಬೇಕು. ಇಲ್ಲವಾದರೆ ಶ್ರುತಿಯಲ್ಲಿಯೇ ಮುಂದೆ ದಧಿ-ಪಯಸ್ಸು ಈ ಎರಡರಲ್ಲಿ ಯಾವುದರ ಅವದಾನವನ್ನು ಮೊದಲು ಮಾಡಬೇಕೆಂಬ ವಿಚಾರ ಮಾಡಿರುವುದು ಅಸಂಗತವಾಗುತ್ತದೆ.ಮುಂದೆ ಪಯಸ್ಸಿನ ಅವದಾನವನ್ನೇ ಮೊದಲು ಮಾಡಬೇಕೆಂಬುದಾಗಿ ಶ್ರುತ್ಯರ್ಥವಿದೆ.

ಸಮನ್ನೈಷುಃ ಪ್ರತ್ಯಧುಕ್ಷಞ್ಛೃತಮಕ್ರನ್ನ ತು ಮಾ ಧಿನೋತೀತ್ಯ
ಬ್ರವೀದೇತದಸ್ಮೈ ದಧಿ ಕುರುತೇತ್ಯಬ್ರವೀತ್ತದಸ್ಮೈ ದಧ್ಯಕುರ್ವ-

---

ಸಮಿತಿ । ಅನ್ವೈಷುಃ । ಪ್ರತೀತಿ । ಅಧುಕ್ಷನ್ನ್ । ಶೃತಮ್ । ಅಕ್ರನ್ನ್ । ನ । ತು। ಮಾ।
ಧಿನೋತಿ । ಇತಿ । ಅಬ್ರವೀತ್ । ಏತತ್ । ಅಸ್ಮೈ । ದಧಿ । ಕುರುತ । ಇತಿ।
ಅಬ್ರವೀತ್ । ತತ್ । ಅಸ್ಮೈ । ದಧಿ । ಅಕುರ್ವನ್ನ್ ।

---

## ದಧಿ ಶಬ್ದದ ನಿರ್ವಚನ

| | |
|---|---|
| ಸಮನ್ವೈಷುಃ ಪ್ರತ್ಯಧುಕ್ಷನ್ ಶೃತಮ್ ಅಕ್ರನ್ನ್ | [ಇಂದ್ರನು ಪ್ರಜಾಪತಿಗೆ]'ಗೋವುಗಳು ನನ್ನ ವೀರ್ಯಶಕ್ತಿಯನ್ನು ಸಂಗ್ರಹಿಸಿದವು.ಹಾಲಿನ ಮೂಲಕ ಕರೆದುಕೊಟ್ಟವು.ಹಾಲನ್ನು ಕಾಯಿಸಿ,ಇಂದ್ರಿಯಾದಿಗಳನ್ನು ನನ್ನಲ್ಲಿ ಇರುವಂತೆ ಮಾಡಿದ್ದೂ ಆಯಿತು. |
| ನ ತು ಮಾ ಧಿನೋತಿ ಇತಿ ಅಬ್ರವೀತ್ | [ಆದರೆ ಅದು]ನನ್ನನ್ನು ತೃಪ್ತಿಪಡಿಸಲಿಲ್ಲ' ಎಂದನು. |
| ಅಸ್ಮೈ ಏತತ್ ದಧಿ ಕುರುತ ಇತಿ ಅಬ್ರವೀತ್ | [ಪ್ರಜಾಪತಿಯು ಹೆಪ್ಪು ಹಾಕುವವರಿಗೆ] 'ಈ ಕ್ಷೀರವನ್ನು ಇಂದ್ರನಿಗಾಗಿ **'ದಧಿ'** ಯನ್ನಾಗಿ ಮಾಡಿರಿ' ಎಂದನು. |
| ಅಸ್ಮೈ ತತ್ ದಧಿ ಅಕುರ್ವನ್ನ್ | [ಪ್ರಜಾಪತಿಯ ಮಾತಿನಂತೆ ಋತ್ವಿಜರು] ಹಾಲನ್ನು ಮೊಸರನ್ನಾಗಿ ಮಾಡಿದರು. |

ನ್ತದೇನಮಧಿನೋತ್ತದ್ದಧ್ನೋ ದಧಿತ್ವಂ ಬ್ರಹ್ಮವಾದಿನೋ ವದಂತಿ ದಧ್ನಃ ಪೂರ್ವಸ್ಯಾವದೇಯಂ [..ದೇಯಮ್(೪)ದಧಿ ಹಿ..] ದಧಿ ಹಿ ಪೂರ್ವಂ ಕ್ರಿಯತ

---

ತತ್ । ಏನಮ್ । ಅಧಿನೋತ್ । ತತ್ । ದಧ್ನಃ । ದಧಿತ್ವಮಿತಿ ದಧಿ-ತ್ವಮ್ । ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ । ದಧ್ನಃ । ಪೂರ್ವಸ್ಯ । ಅವದೇಯಮಿತ್ಯವ-ದೇಯಮ್ । [೪] । ದಧಿ । ಹಿ । ಪೂರ್ವಮ್ । ಕ್ರಿಯತೇ ।

---

| | |
|---|---|
| ತತ್ ಏನಮ್ ಅಧಿನೋತ್ | ಆ ಮೊಸರು ಈ ಇಂದ್ರನನ್ನು ತೃಪ್ತಿ ಪಡಿಸಿತು. |
| ತತ್ ದಧ್ನಃ ದಧಿತ್ವಮ್ | ಹೀಗೆ [ತೃಪ್ತಿಪಡಿಸುವ ಗುಣದಿಂದ ಮೊಸರಿಗೆ ದಧಿ ಎಂಬ ಹೆಸರಾಯಿತು] ಅದೇ ದಧಿಯ ದಧಿತ್ವ. |

**ಪಯಸ್ಸು-ದಧಿ ಇವುಗಳ ಅವದಾನಕ್ರಮದ ವಿಚಾರ**

| | |
|---|---|
| ಬ್ರಹ್ಮವಾದಿನಃ ವದಂತಿ | ವೇದಜ್ಞರು ವಿಚಾರವನ್ನು ಮಾಡಿ ಈ ರೀತಿ ಹೇಳುತ್ತಾರೆ. |
| ದಧಿ ಹಿ ಪೂರ್ವಮ್ ಕ್ರಿಯತೇ | ಮೊದಲನೆಯ ದಿನವೇ ಹಾಲನ್ನು ಹೆಪ್ಪು ಹಾಕಿ ಮೊಸರನ್ನು ಮಾಡುವುದಷ್ಟೆ. |

---

ಇಂದ್ರನಿಂದ ಕೇಳಲ್ಪಟ್ಟ ಪ್ರಜಾಪತಿಯು 'ಇಂದ್ರನಿಗಾಗಿ ಹಾಲನ್ನು ಕಾಯಿಸಿರಿ, ಹೆಪ್ಪು ಹಾಕಿರಿ' ಎಂದು ಹೇಳಿದನು ಎಂಬ ಶ್ರುತ್ಯರ್ಥವಿದೆ. ಶ್ರುತಿವಾಕ್ಯಗಳಲ್ಲಿ ಈ ವಾಕ್ಯಗಳನ್ನು

ಇತ್ಯನಾದೃತ್ಯ ತಚ್ಛೃತಸ್ಯೈವ ಪೂರ್ವಸ್ಯಾವದ್ಯೇದಿಂದ್ರಿಯ
ಮೇವಾಸ್ಮಿನ್ವೀರ್ಯಗ್ಂ ಶ್ರಿತ್ವಾ

---

ಇತಿ । ಅನಾದೃತ್ಯೇತ್ಯನಾ-ದೃತ್ಯ । ತತ್ । ಶೃತಸ್ಯ । ಏವ । ಪೂರ್ವಸ್ಯ । ಅವೇತಿ।
ದ್ಯೇತ್ । ಇಂದ್ರಿಯಮ್ । ಏವ । ಅಸ್ಮಿನ್ । ವೀರ್ಯಮ್ । ಶ್ರಿತ್ವಾ ।

---

| | |
|---|---|
| ಇತಿ ಪೂರ್ವಸ್ಯ ದಧ್ನಃ ಅವದೇಯಮ್ | ಅದುದರಿಂದ ಮೊದಲು ಜುಹೂವಿನಲ್ಲಿ ಮೊಸರಿನ ಅವದಾನವನ್ನು ಮಾಡಬೇಕು. [ಹೀಗಾಗಿ ಮೊಸರಿನ ಅವದಾನ ಮೊದಲು ಎಂಬುದು ಒಂದು ಪಕ್ಷ.] |
| ತತ್ ಅನಾದೃತ್ಯ | ಆ ಪಕ್ಷವನ್ನು ಆದರಿಸದೆ |
| ಪೂರ್ವಸ್ಯ ಶೃತಸ್ಯ ಏವ ಅವದ್ಯೇತ್ | ಮೊದಲು ಹಾಲಿನ ಅವದಾನವನ್ನೇ ಮಾಡಬೇಕು. |
| ಅಸ್ಮಿನ್ ಇಂದ್ರಿಯಮ್ ವೀರ್ಯಮ್ ಏವ ಶ್ರಿತ್ವಾ | [ಅಧ್ವರ್ಯುವು] ಈ ಯಜಮಾನನಲ್ಲಿ [ಹಾಲಿನ ಅವದಾನದಿಂದ] ಇಂದ್ರಿಯವನ್ನೂ, ವೀರ್ಯವನ್ನೂ ನೆಲೆಸುವಂತೆ ಮಾಡಿ |

---

ಯಾರಿಗೆ ಹೇಳಿದನು? ಎಂಬುದು ಸ್ಪಷ್ಟವಾಗಿಲ್ಲ. ಇಂದ್ರನ ವೀರ್ಯ-ಶಕ್ತಿಗಳನ್ನು ಸಂಗ್ರಹಿಸಬೇಕೆಂಬ ಪ್ರಥಮದಲ್ಲಿ **'ಪಶೂನ್ ಅಬ್ರುವೀತ್'** ಎಂದು ಇದೆ. ಆದರೂ ಕಾಯಿಸುವವರು,ಹೆಪ್ಪುಹಾಕುವವರು ಮಾನವರೇ ಆದುದರಿಂದ ಹಾಲನ್ನು ಕಾಯಿಸುವವರಿಗೂ,ಹೆಪ್ಪುಹಾಕುವವರಿಗೂ ಹೇಳಿದನು ಎಂದು ಅರ್ಥವನ್ನು ತಿಳಿಸಲಾಗಿದೆ. ಸಾಯಣಭಾಷ್ಯದಲ್ಲಿಯೂ ಹೀಗೆಯೇ ಇದೆ.

ದಧ್ನೋಪರಿಷ್ಟಾದ್ಧಿನೋತಿ ಯಥಾಪೂರ್ವಮುಪೈತಿ ಯತ್ಪೂ

ತೀಕೈರ್ವಾ ಪರ್ಣವಲ್ಕೈರ್ವಾಽಽತಂಚ್ಯಾ-

---

ದಧ್ನಾ । ಉಪರಿಷ್ಟಾತ್ । ಧಿನೋತಿ । ಯಥಾಪೂರ್ವಮಿತಿ ಯಥಾ-ಪೂರ್ವಮ್ । ಉಪೇತಿ । ಏತಿ । ಯತ್ । ಪೂತೀಕೈಃ । ವಾ । ಪರ್ಣವಲ್ಕೈರಿತಿ ಪರ್ಣ-ವಲ್ಕೈಃ । ವಾ । ಆತಂಚ್ಯಾದಿತ್ಯಾ-ತಂಚ್ಯಾತ್ ।

---

| | |
|---|---|
| ಉಪರಿಷ್ಟಾತ್ ದಧ್ನಾ ಧಿನೋತಿ | ಅನಂತರ ಮಾಡುವ ದಧಿಯ ಅವದಾನ ದಿಂದ [ಇಂದ್ರನನ್ನು] ಸಂತೋಷಪಡಿಸು ತ್ತಾನೆ. |
| ಯಥಾಪೂರ್ವಮ್ ಉಪೈತಿ | ಮೊದಲು ಹಾಲನ್ನು ಕರೆಯುವುದು ಬಳಿಕ ಹೆಪ್ಪುಹಾಕಿ ಮೊಸರನ್ನು ಮಾಡುವುದೆಂಬ ಉತ್ಪತ್ತಿಕ್ರಮವನ್ನೇ ಅನುಸರಿಸಿ ಅವದಾನ ಮಾಡಿದಂತಾಗುತ್ತದೆ. |

**ಆತಂಚನ [ಹೆಪ್ಪುಹಾಕುವಿಕೆ]ದ ವಿಧಿ**

| | |
|---|---|
| ಯತ್ ಪೂತೀಕೈಃ ವಾ ಪರ್ಣವಲ್ಕೈಃ ವಾ ಆತಂಚ್ಯಾತ್ | ಸೋಮಲತೆಗೆ ಸದೃಶವಾದ ಬಳ್ಳಿಗಳಿಂದಾ ಗಲೀ, ಮುತ್ತುಗದ ಚೂರುಗಳಿಂದಾಗಲೀ ಹೆಪ್ಪುಹಾಕುವುದೆಂದರೆ |

---

ದಧಿ-ಪಯಸ್ಸುಗಳ ಅವದಾನಕ್ರಮದಲ್ಲಿ ಪಯಸ್ಸೇ ಮೊದಲನೆಯದಾಗಿರಬೇಕು. ಇದರಿಂದ ಉತ್ಪತ್ತಿಕ್ರಮವನ್ನು ಅನುಸರಿಸಿದಂತಾಗುತ್ತದೆ.

ಹೀಗೆಯೇ ವೇದದಲ್ಲಿ ಬ್ರಹ್ಮವಾದಿಗಳ ವಿಚಾರವು ಹಲವು ಕಡೆಗಳಲ್ಲಿ ಬರುತ್ತದೆ.

ಧ್ಸೌಮ್ಯಂ ತದ್ಯತ್ಕ್ವಲೈ ರಾಕ್ಷಸಂ ತದ್ಯತ್ತಂಡುಲೈರ್ವೈಶ್ವದೇವಂ

ತದ್ಯದಾತಂಚನೇನ ಮಾನುಷಂ ತದ್ಯದ್ಧಧ್ನಾ

---

ಸೌಮ್ಯಮ್ । ತತ್ । ಯತ್ । ಕ್ವಲೈಃ । ರಾಕ್ಷಸಮ್ । ತತ್ । ಯತ್ । ತಂಡುಲೈಃ।

ವೈಶ್ವದೇವಮಿತಿ ವೈಶ್ವ-ದೇವಮ್ । ತತ್ । ಯತ್ । ಆತಂಚನೇನೇತ್ಯಾ-ತಂಚನೇನ।

ಮಾನುಷಮ್ । ತತ್ । ಯತ್ । ದಧ್ನಾ ।

---

| | |
|---|---|
| ತತ್ ಸೌಮ್ಯಮ್ | ಅದು ಸೋಮದೇವತಾಕವಾಗುತ್ತದೆ. |
| ಯತ್ ಕ್ವಲೈಃ ಆತಂಚ್ಯಾತ್ | ಯಾವುದು ಪ್ರೌಢ ಬದರೀಫಲಗಳಿಂದ ಹೆಪ್ಪು ಹಾಕುವುದುಂಟೋ |
| ತತ್ ರಾಕ್ಷಸಮ್ | ಅದು ರಾಕ್ಷಸರಿಗೆ ಪ್ರಿಯವಾಗುತ್ತದೆ. |
| ಯತ್ ತಂಡುಲೈಃ ಆತಂಚ್ಯಾತ್ | ಅಕ್ಕಿಯಿಂದ ಮಾಡುವ ಯಾವ ಆತಂಚನವಿದೆಯೋ |
| ತತ್ ವೈಶ್ವದೇವಮ್ | ಅದು ವಿಶ್ವದೇವಪ್ರೀತಿಕರವಾಗಿದೆ. |
| ಯತ್ ಆತಂಚನೇನ ಆತಂಚ್ಯಾತ್ | ಹುಳಿ ಮಜ್ಜಿಗೆಯಿಂದ ಹೆಪ್ಪು ಹಾಕುವುದೆಂಬುದು ಯಾವುದುಂಟೋ |
| ತತ್ ಮಾನುಷಮ್ | ಅದು ಮನುಷ್ಯಪ್ರೀತಿಕರವಾಗುತ್ತದೆ. |
| ಯತ್ ದಧ್ನಾ ಆತಂಚ್ಯಾತ್ | ಮೊಸರಿನಿಂದ ಹೆಪ್ಪುಹಾಕುವುದು |

---

ಹೆಪ್ಪು ಹಾಕುವ ಸಾಧನಗಳು ಅನೇಕವಿದ್ದರೂ ಅವುಗಳಿಂದ ಹಾಕಿದರೆ ಆದರ ಫಲಗಳನ್ನು ವರ್ಣಿಸಿ **'ದಧ್ನಾ ಆತನಕ್ತಿ'** ಎಂಬ ವಿಧಿಯನ್ನು ಹೇಳಲಾಗಿದೆ. ಮೊಸರಿನಿಂದ ಹೆಪ್ಪನ್ನು ಹಾಕಬೇಕೆಂಬ ವಿಧಿಯು ಇದಾಗಿದೆ.

ತಥ್ಸೇಂದ್ರಂ ದಧ್ನಾಽಽತನಕ್ತಿ [..(೫)ಸೇಂದ್ರತ್ವಾಯ] ಸೇಂದ್ರ-

ತ್ವಾಯಾಗ್ನಿಹೋತ್ರೋಚ್ಛೇಷಣಮಭ್ಯಾತನಕ್ತಿ ಯಜ್ಞಸ್ಯ

ಸಂತತ್ಯಾ ಇಂದ್ರೋ ವೃತ್ರಗ್ಂ ಹತ್ವಾ

---

ತತ್ । ಸೇಂದ್ರಮಿತಿ ಸ-ಇಂದ್ರಮ್ । ದಧ್ನಾ । ಏತಿ । ತನಕ್ತಿ । [೫] । ಸೇಂದ್ರತ್ವಾಯೇತಿ ಸೇಂದ್ರ-ತ್ವಾಯ । ಅಗ್ನಿಹೋತ್ರೋಚ್ಛೇಷಣಮಿತ್ಯಗ್ನಿಹೋತ್ರ-ಉಚ್ಛೇಷಣಮ್ । ಅಭ್ಯಾತನಕ್ತೀತ್ಯಭಿ-ಆತನಕ್ತಿ । ಯಜ್ಞಸ್ಯ । ಸಂತತ್ಯಾ ಇತಿ ಸಂ-ತತ್ಯೈ । ಇಂದ್ರಃ । ವೃತ್ರಮ್ । ಹತ್ವಾ ।

---

| | |
|---|---|
| ತತ್ ಸೇಂದ್ರಮ್ ಸೇಂದ್ರತ್ವಾಯ ದಧ್ನಾ ಆತನಕ್ತಿ | ಅದು ಇಂದ್ರದೇವತಾಕವಾಗುತ್ತದೆ. [ಇಂದ್ರ ದೇವತೆಗೆ ಈ ಹವಿಸ್ಸು ಸಂಬಂಧಿಸಿರುವುದ ರಿಂದ] ಯಾಗವು ಇಂದ್ರಸಹಿತವಾಗುವುದ ಕ್ಕಾಗಿ ಮೊಸರಿನಿಂದ ಹೆಪ್ಪನ್ನು ಹಾಕಬೇಕು. **[ವಿಧಿ]** |

### ಅಗ್ನಿಹೋತ್ರಹೋಮಶೇಷದಿಂದ ಹೆಪ್ಪುಹಾಕುವ ವಿಧಿ-ಪ್ರಶಂಸೆ

| | |
|---|---|
| ಅಗ್ನಿಹೋತ್ರೋಚ್ಛೇಷಣಮ್ ಅಭಿ ಆತನಕ್ತಿ | ಅಗ್ನಿಹೋತ್ರಹೋಮದ್ರವ್ಯವಾದ ಯವಾಗು [ಗಂಜಿ]ವಿನ ಶೇಷವನ್ನು ಹೆಪ್ಪು ಹಾಕುವ ಮೊಸರಿನ ಜೊತೆಗೆ ಹಾಕಬೇಕು. |
| ಯಜ್ಞಸ್ಯ ಸಂತತ್ಯೈ | ಇದರಿಂದ ಯಜ್ಞಗಳ ವಿಚ್ಛಿತ್ತಿಯಾಗದೆ ಹೊಂದಾಣಿಕೆಯು ಉಂಟಾಗುತ್ತದೆ. |

### ಪಿಂಡಪಿತೃಯಜ್ಞವಿಧಿ;ಅದರ ಉಪಾಖ್ಯಾನ

| | |
|---|---|
| ಇಂದ್ರಃ ವೃತ್ರಮ್ ಹತ್ವಾ | ಇಂದ್ರನು ವೃತ್ರನನ್ನು ಸಂಹರಿಸಿದ ನಂತರ |

ಪರಾಂ ಪರಾವತಮಗಚ್ಛದಪಾರಾಧಮಿತಿ ಮನ್ಯಮಾನಸ್ತಂ

ದೇವತಾಃ ಪ್ರೈಷಮೈಚ್ಛನ್ಥ್ಸೋಽಬ್ರವೀತ್ಪ್ರಜಾಪತಿರ್ಯಃ

ಪ್ರಥಮೋಽನುವಿಂದತಿ ತಸ್ಯ ಪ್ರಥಮಂ ಭಾಗಧೇಯಮಿತಿ

---

ಪರಾಮ್ । ಪರಾವತಮಿತಿ ಪರಾ-ವತಮ್ । ಅಗಚ್ಛತ್ । ಅಪೇತಿ । ಆರಾಧಮ್। ಇತಿ । ಮನ್ಯಮಾನಃ । ತಮ್ । ದೇವತಾಃ । ಪ್ರೈಷಮಿತಿ ಪ್ರ-ಏಷಮ್ । ಐಚ್ಛನ್ನ್। ಸಃ । ಅಬ್ರವೀತ್ । ಪ್ರಜಾಪತಿರಿತಿ ಪ್ರಜಾ-ಪತಿಃ । ಯಃ । ಪ್ರಥಮಃ । ಅನುವಿಂದತೀತ್ಯನು-ವಿಂದತಿ । ತಸ್ಯ । ಪ್ರಥಮಮ್ । ಭಾಗಧೇಯಮಿತಿ ಭಾಗ-ಧೇಯಮ್ । ಇತಿ ।

---

| | |
|---|---|
| ಆಪಾರಾಧಮ್ ಇತಿ ಮನ್ಯಮಾನಃ ಪರಾಮ್ ಪರಾವತಮ್ ಅಗಚ್ಛತ್ | ನಾನು ಅಸುರರಿಗೆ ಅಪರಾಧವನ್ನು ಮಾಡಿದೆನು ಎಂದು ಭಾವಿಸಿ ಬಹಳ ದೂರಕ್ಕೆ ಹೊರಟುಹೋದನು. |
| ತಮ್ ದೇವತಾಃ ಪ್ರೈಷಮ್ ಐಚ್ಛನ್ನ್ | ಆಗ ದೇವತೆಗಳು ತಮ್ಮ ನಾಯಕನಾದ ಇಂದ್ರನನ್ನು ಕರೆಯಲು ಬಯಸಿದರು. |
| ಸಃ ಪ್ರಜಾಪತಿಃ | [ಆಗ ದೇವತೆಗಳಿಂದ ಪ್ರಾರ್ಥಿತನಾದ] ಆ ಪ್ರಜಾಪತಿಯು |
| ಯಃ ಪ್ರಥಮಃ ಅನುವಿಂದತಿ ತಸ್ಯ ಪ್ರಥಮಮ್ ಭಾಗಧೇಯಮ್ ಇತಿ ಅಬ್ರವೀತ್ | 'ಯಾರು ಮೊದಲು ಇಂದ್ರನನ್ನು ಹೊಂದುತ್ತಾರೆಯೋ ಅವನಿಗೇ ಮೊದಲನೆಯ ಭಾಗವು ಸಲ್ಲುತ್ತದೆ' ಎಂದನು. |

---

ಅಗ್ನಿಹೋತ್ರಹೋಮಕ್ಕೂ, ದರ್ಶಯಾಗಕ್ಕೂ ವಿಚ್ಛೇದವು ಉಂಟಾಗದಿರುವುದಕ್ಕಾಗಿ ಅಗ್ನಿಹೋತ್ರಹೋಮದ ಶೇಷದ್ರವ್ಯವನ್ನು ಮೊಸರಿನೊಡನೆ ಸೇರಿಸಿ ಹೆಪ್ಪನ್ನು ಹಾಕಬೇಕು.

ಇದು ಅಗ್ನಿಹೋತ್ರಹೋಮದ್ರವ್ಯದ ಪ್ರತಿಪತ್ತಿಯೂ ಆಗುತ್ತದೆ.

ತಂ ಪಿತರೋಽನ್ವವಿಂದನ್ತಸ್ಮಾತ್ಪಿತೃಭ್ಯಃ ಪೂರ್ವೇದ್ಯುಃ ಕ್ರಿಯತೇ

ಸೋಽಮಾವಾಸ್ಯಾಂ ಪ್ರತ್ಯಾಗಚ್ಛತ್ತಂ ದೇವಾ ಅಭಿ ಸಮಗಚ್ಛಂತಾ-

---

ತಮ್ । ಪಿತರಃ । ಅನ್ವಿತಿ । ಅವಿಂದನ್ನ್ । ತಸ್ಮಾತ್ । ಪಿತೃಭ್ಯ ಇತಿ ಪಿತೃ-ಭ್ಯಃ। ಪೂರ್ವೇದ್ಯುಃ । ಕ್ರಿಯತೇ । ಸಃ । ಅಮಾವಾಸ್ಯಾಮಿತ್ಯಮಾ-ವಾಸ್ಯಾಮ್ । ಪ್ರತಿ । ಏತಿ । ಅಗಚ್ಛತ್ । ತಮ್ । ದೇವಾಃ । ಅಭಿ । ಸಮಿತಿ । ಅಗಚ್ಛಂತ ।

---

| | |
|---|---|
| ತಮ್ ಪಿತರಃ ಅನ್ವವಿಂದನ್ | ಆ ಇಂದ್ರನನ್ನು ಪಿತೃದೇವತೆಗಳು ಮೊದಲು ಹೊಂದಿದರು. |
| ತಸ್ಮಾತ್ ಪಿತೃಭ್ಯಃ ಪೂರ್ವೇದ್ಯುಃ ಕ್ರಿಯತೇ | ಅದುದರಿಂದ ದರ್ಶಯಾಗಕ್ಕಿಂತ ಮೊದಲು ಪಿತೃಗಳಿಗಾಗಿ ಪಿಂಡಪಿತೃ ಯಜ್ಞವು ಅನುಷ್ಠಿಸಲ್ಪಡುತ್ತದೆ. **[ಪಿಂಡ ಪಿತೃ ಯಜ್ಞವಿಧಿ]** |
| ಸಃ ಅಮಾವಾಸ್ಯಾಮ್ ಪ್ರತಿ ಆಗಚ್ಛತ್ | ಪಿತೃಗಳು ಹುಡುಕಿ ತಂದ ಆ ಇಂದ್ರನು ಅಮಾವಾಸ್ಯೆಯ ದಿನದಂದು ಹಿಂದಿರುಗಿ ಬಂದನು. |
| ತಮ್ ದೇವಾಃ ಅಭಿ ಸಮಗಚ್ಛಂತ | ಆ ಇಂದ್ರನನ್ನು ದೇವತೆಗಳು ಎದುರುಗೊಂಡರು. |

---

ವೃತ್ರನನ್ನು ಸಂಹರಿಸಿದ ಬಳಿಕ ದೂರ ಹೋಗಿದ್ದ ಇಂದ್ರನು ಹಿಂದಿರುಗಿ ಬಂದ ದಿನವು ಅಮಾವಾಸ್ಯೆ.

ತೈತ್ತಿರೀಯಬ್ರಾಹ್ಮಣದ ಪ್ರಥಮಾಷ್ಟಕದ ಮೂರನೆಯ ಪ್ರಪಾಠಕದ ಕಡೆಯ ಅನುವಾಕದಲ್ಲಿ ಈ ಪಿಂಡಪಿತೃಯಜ್ಞದ ವಿಧಿಯು ವಿಸ್ತರವಾಗಿ ಹೇಳಲ್ಪಟ್ಟಿದ್ದರೂ ಪುನಃ ಅದರ ವಿಧಿಯು ಸಾನ್ನಾಯ್ಯಯಾಗದ ಪ್ರಶಂಸೆಗಾಗಿ ಹೇಳಿರುವ ಅನುವಾದರೂಪವಾದುದು.

ಮಾ ವೈ ನೋಽದ್ಯ [..ನಃ(೬)ಅದ್ಯ] ವಸು ವಸತೀತೀಂದ್ರೋ ಹಿ ದೇವಾನಾಂ ವಸು ತದಮಾವಾಸ್ಯಾಯಾ ಅಮಾವಾಸ್ಯತ್ವಂ ಬ್ರಹ್ಮವಾದಿನೋ ವದಂತಿ ಕಿಂದೇವತ್ಯಗ್ಂ ಸಾನ್ನಾಯ್ಯಮಿತಿ

---

ಅಮಾ । ವೈ । ನಃ । [೬] । ಅದ್ಯ । ವಸು । ವಸತಿ । ಇತಿ । ಇಂದ್ರಃ । ಹಿ । ದೇವಾನಾಮ್ । ವಸು । ತತ್ । ಅಮಾವಾಸ್ಯಾಯಾ ಇತ್ಯಮಾ-ವಾಸ್ಯಾಯಾಃ । ಅಮಾವಾಸ್ಯತ್ವಮಿತ್ಯಮಾವಾಸ್ಯ-ತ್ವಮ್ । ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ। ಕಿಂದೇವತ್ಯಮಿತಿ ಕಿಂ-ದೇವತ್ಯಮ್ । ಸಾನ್ನಾಯ್ಯಮಿತಿ ಸಾಂ-ನಾಯ್ಯಮ್ । ಇತಿ ।

---

| | |
|---|---|
| ಅದ್ಯ ವಸು ನಃ ಅಮಾ ವೈ ವಸತಿ ಇತಿ | 'ನಮ್ಮೆಲ್ಲರಿಗೂ ಧನರೂಪನಾದ ಇಂದ್ರನು ಈ ದಿನ ನಮ್ಮೊಡನೆಯೇ ಇದ್ದಾನೆ' ಎಂದು [ದೇವತೆಗಳು ಮಾತನಾಡಿಕೊಂಡರು] |
| ದೇವಾನಾಮ್ ಇಂದ್ರಃ ವಸು ಹಿ | ಸ್ವಾಮಿಯಾದ ಇಂದ್ರನು ದೇವತೆಗಳಿಗೆ ಉತ್ಕೃಷ್ಟವಾದ ಧನರೂಪನಷ್ಟೆ. |
| ತತ್ ಅಮಾವಾಸ್ಯಾಯಾಃ ಅಮಾವಾಸ್ಯತ್ವಮ್ | ಅದೇ ಅಮಾವಾಸ್ಯೆಯ ಅಮಾವಾಸ್ಯತ್ವ. [ಅಮಾ=ಸಹ; ವಸತಿ= ವರ್ತತೇ ಅದ್ಯ ಇತಿ ಅಮಾವಾಸ್ಯಾ- ಎಂಬ ವ್ಯುತ್ಪತ್ತಿಯಿಂದ ಅಮಾವಾಸ್ಯಾ ಶಬ್ದವು ಅನ್ವರ್ಥವಾಗಿದೆ.] |

## ಸಾನ್ನಾಯ್ಯಯಾಗದ ದೇವತಾವಿಚಾರ

| | |
|---|---|
| ಸಾನ್ನಾಯ್ಯಮ್ ಕಿಂದೇವತ್ಯಮ್ ಇತಿ ಬ್ರಹ್ಮವಾದಿನಃ ವದಂತಿ | ಸಾನ್ನಾಯ್ಯಯಾಗವು [ಪಯೋದಧಿಯಾಗವು] ಯಾವ ದೇವತೆಯುಳ್ಳದ್ದು? ಎಂದು ಬ್ರಹ್ಮಜ್ಞರು ವಿಚಾರ ಮಾಡುತ್ತಾರೆ. |

ವೈಶ್ವದೇವಮಿತಿ ಬ್ರೂಯಾದ್ವಿಶ್ವೇ ಹಿ ತದ್ದೇವಾ

ಭಾಗಧೇಯಮಭಿ ಸಮಗಚ್ಛಂತೇತ್ಯಥೋ

ಖಲ್ವೈಂದ್ರಮಿತ್ಯೇವ

---

ವೈಶ್ವದೇವಮಿತಿ ವೈಶ್ವ-ದೇವಮ್ । ಇತಿ । ಬ್ರೂಯಾತ್ । ವಿಶ್ವೇ । ಹಿ । ತತ್ । ದೇವಾಃ । ಭಾಗಧೇಯಮಿತಿ ಭಾಗ-ಧೇಯಮ್ । ಅಭೀತಿ । ಸಮಗಚ್ಛಂತೇತಿ ಸಂ-ಅಗಚ್ಛಂತ । ಇತಿ । ಅಥೋ ಇತಿ । ಖಲು । ಐಂದ್ರಮ್ । ಇತಿ । ಏವ ।

---

| | |
|---|---|
| ವೈಶ್ವದೇವಮ್ ಇತಿ ಬ್ರೂಯಾತ್ | ವಿಶ್ವೇದೇವರೇ ಸಾನ್ನಾಯ್ಯದೇವತೆಗಳು ಎಂದು ಹೇಳಬೇಕು. |
| ವಿಶ್ವೇ ದೇವಾಃ ತತ್ ಭಾಗಧೇಯಮ್ ಅಭಿ ಸಮಗಚ್ಛಂತ ಹಿ ಇತಿ | [ಪಿತೃದೇವತೆಗಳು ಹುಡುಕಿ ತಂದ ಇಂದ್ರನನ್ನು] ಎದುರುಗೊಂಡ ದೇವತೆಗಳು ಸಾನ್ನಾಯ್ಯರೂಪವಾದ ಭಾಗವನ್ನು ಪಡೆಯುವುದಕ್ಕಾಗಿಯೇ ಬಂದರು. [ಆದುದರಿಂದ ಸಾನ್ನಾಯ್ಯವು ವೈಶ್ವದೇವವೇ ಸರಿ] **[ಪೂರ್ವಪಕ್ಷ]** |
| ಅಥೋ ಖಲು ಐಂದ್ರಮ್ ಇತಿ ಏವ ಬ್ರೂಯಾತ್ | ಅದು ಸರಿಯಲ್ಲ. ಅದನ್ನು ಇಂದ್ರದೇವತಾಕವಾದುದೆಂದೇ ಹೇಳಬೇಕು. [ಏಕೆಂದರೆ] |

ಬ್ರೂಯಾದಿಂದ್ರಂ ವಾವ ತೇ ತದ್ಭಿಷಜ್ಯಂತೋಽಭಿ

ಸಮಗಚ್ಛಂತೇತಿ ॥೨೧-3॥

**[ದಧಿ ಮೇ ಜಘ್ನುಷ ಇಂದ್ರಿಯಂ ವೀರ್ಯಮಿತ್ಯಬ್ರವೀದೇತದಸ್ಮಾ ಆವದೇಯಂ ತನಕ್ತಿ ನೋ ದ್ವಿಚತ್ವಾರಿಗ್‌ಂಶಚ್ಚ ॥]**

---

ಬ್ರೂಯಾತ್ । ಇಂದ್ರಮ್ । ವಾವ । ತೇ । ತತ್ । ಭಿಷಜ್ಯಂತಃ । ಅಭಿ । ಸಮಿತಿ । ಅಗಚ್ಛಂತ। ಇತಿ ॥ 21 ॥

---

| | |
|---|---|
| ತೇ ಇಂದ್ರಮ್ ವಾವ ಭಿಷಜ್ಯಂತಃ ತತ್ ಅಭಿ ಸಮಗಚ್ಛಂತ ಇತಿ | [ಇಂದ್ರನು ಹಿಂದಿರುಗುವಾಗ] ದೇವತೆಗಳೆಲ್ಲರೂ ಇಂದ್ರನನ್ನು ಸಮಾಧಾನ ಪಡಿಸಲೆಂದು ಬಂದಿದ್ದರಾದುದರಿಂದ ಅದು ಐಂದ್ರವೇ ಸರಿ. **[ಸಿದ್ಧಾಂತ]** [ಅವರು ಸಾನ್ನಾಯ್ಯ ರೂಪ ಭಾಗವನ್ನು ಪಡೆಯಲು ಬಂದಿರಲಿಲ್ಲ.] |

---

ಸಾನ್ನಾಯ್ಯಯಾಗಕ್ಕೆ ದೇವತೆ ಯಾರೆಂಬುದನ್ನು ವಿಚಾರ ಮಾಡಿ ಇಂದ್ರನೇ ಆ ಯಾಗಕ್ಕೆ ದೇವತೆ ಎಂದು ನಿಷ್ಕರ್ಷ ಮಾಡಲಾಗಿದೆ.ಶ್ರುತಿಯಲ್ಲಿಯೇ **'ಐಂದ್ರಂ ದಧಿ'** ಎಂದು ಹೇಳಿರುವ ಕಾರಣ ಸಂಶಯಕ್ಕೇ ಕಾರಣವಿಲ್ಲ. ಪಯೋಯಾಗವೂ ಇಲ್ಲಿ ಇರುವುದರಿಂದ ಈ ಯಾಗಕ್ಕೆ ದೇವತೆಯು ಯಾರು ಎಂಬ ವಿಚಾರವು ಸಫಲವೆನಿಸುತ್ತದೆ.

ಇಂದ್ರನೇ ತಮ್ಮ ವಸುವಾಗಿದ್ದಾನೆ ಎಂಬ ದೇವತೆಗಳ ಮಾತು ಇಂದ್ರನ ಪ್ರಾಶಸ್ತ್ಯವನ್ನೇ ಹೇಳುತ್ತದೆ.

* * *

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

**೧) ವೈಮೃಧೇಷ್ಟಿಯು ಯಾವುದರ ಅಂಗ? [ಜೈ,ಸೂ.4.3.20]**

ದರ್ಶ–ಪೂರ್ಣಮಾಸಪ್ರಕರಣದಲ್ಲಿ **'ಸಂಸ್ಥಾಪ್ಯ ಪೌರ್ಣಮಾಸೀಂ ವೈಮೃಧಮನು ನಿರ್ವಪತಿ' [ಆಪ.ಶ್ರೌ.ಸೂ.3.15.1]**ಎಂದು ವಿಹಿತವಾಗಿರುವ ವೈಮೃಧ ಯಾಗವು ಪ್ರಕರಣದಲ್ಲಿ ಪಠಿತವಾಗಿರುವುದರಿಂದ ದರ್ಶ–ಪೂರ್ಣಮಾಸ ಈ ಎರಡು ಯಾಗಗಳಿಗೂ ಅಂಗವೇ? ಎಂಬುದು ಇಲ್ಲಿನ **ಸಂಶಯ.**

ದರ್ಶ–ಪೂರ್ಣಮಾಸಪ್ರಕರಣದಲ್ಲಿ ವಿಹಿತವಾಗಿರುವ ಕಾರಣ ಅದು ಪ್ರಯಾಜಾದಿಗಳಂತೆ ಎರಡು ಯಾಗಗಳಿಗೂ ಅಂಗವೇ ಆಗಿದೆ ಎಂಬುದು ಇಲ್ಲಿನ **ಪೂರ್ವಪಕ್ಷ.**

**'ಸಂಸ್ಥಾಪ್ಯ'** ಎಂಬಲ್ಲಿ ಕ್ತ್ವಾಪ್ರತ್ಯಯವಿದ್ದು, ಅದಕ್ಕೆ ಲ್ಯಪ್ ಆದೇಶವು ಬಂದಿದೆ. ಕ್ತ್ವಾ ಪ್ರತ್ಯಯವು **'ಸಮಾನಕರ್ತೃಕಯೋಃ ಪೂರ್ವಕಾಲೇ'[ಪಾ.ಸೂ.3.4]**ಎಂಬ ಸೂತ್ರದಂತೆ ಒಬ್ಬನೇ ಕರ್ತೃವು ಎರಡು ಕ್ರಿಯೆಗಳನ್ನು ಮಾಡಿದಾಗ ಮೊದಲ ಕ್ರಿಯೆಯನ್ನು ಮುಗಿಸಿದ ನಂತರ ಎಂಬ ಅರ್ಥವನ್ನು ಕೊಡುವುದರಿಂದಲೂ ವೈಮೃಧಯಾಗವು ಪೂರ್ಣಮಾಸಯಾಗಕ್ಕೇ ಅಂಗವಾಗುತ್ತದೆ.ಇದು ಇಲ್ಲಿನ **ಸಿದ್ಧಾಂತ.**

**೨) ಅಮಾವಾಸ್ಯಾಯಾಗದಲ್ಲಿ ಆಗ್ನೇಯಯಾಗದ ಆವೃತ್ತಿ ಇದೆಯೇ?**

**[ಜೈ.ಸೂ.2.3.33-34]**

ದರ್ಶಪೂರ್ಣಮಾಸಪ್ರಕರಣದಲ್ಲಿ **'ಯದಾಗ್ನೇಯೋಽಷ್ಟಾಕಲೋಽಮಾವಾಸ್ಯಾಯಾಂ ಚ ಪೌರ್ಣಮಾಸ್ಯಾಂ ಚಾಚ್ಯುತೋ ಭವತಿ' [ತೈ. ಸಂ.2.6.3]** ಎಂಬ ವಾಕ್ಯವೂ **'ಯದಾಗ್ನೇಯೋಽಷ್ಟಾಕಪಾಲೋಽಮಾವಾಸ್ಯಾಯಾಂ ಭವತಿ'** ಎಂಬ ವಾಕ್ಯವೂ ಇದೆ.**[ತೈ.ಸಂ.2.5.3]**

ಈ ರೀತಿ ಎರಡು ವಾಕ್ಯಗಳು ಇರುವುದರಿಂದ ಅಮಾವಾಸ್ಯೆಯಲ್ಲಿ ಎಷ್ಟು ಬಾರಿ ಆಗ್ನೇಯಯಾಗವನ್ನು ಅನುಷ್ಠಿಸಬೇಕು? ಇದು ಇಲ್ಲಿನ **ಸಂಶಯ.**

ಪ್ರಯಾಜಗಳಂತೆಯೇ ಅಭ್ಯಾಸ ಮಾಡಿರುವುದರಿಂದ ಎರಡು ಬಾರಿ ಅನುಷ್ಠಿಸಬೇಕೆಂದು ಇಲ್ಲಿನ **ಪೂರ್ವಪಕ್ಷ.**

**'ಸೋಽಯಮ್'** ಎಂಬ ಪ್ರತ್ಯಭಿಜ್ಞಾನವಿರುವುದರಿಂದ ಅಚ್ಯುತವಾಕ್ಯವು ವಿಧಾಯಕವಾಗಿದೆ. ಯದಾಗ್ನೇಯವಾಕ್ಯವು ಐಂದ್ರಾಗ್ನಯಾಗದ ಸ್ತುತ್ಯರ್ಥವಾಗಿ ಇದ್ದು ಅನುವಾದಕವಾಗಿದೆ. ಹೀಗಾಗಿ ಅಮಾವಾಸ್ಯಾಯಾಗದಲ್ಲಿ/ದರ್ಶಯಾಗದಲ್ಲಿ ಆಗ್ನೇಯಯಾಗದ ಆವೃತ್ತಿಯು ಇರುವುದಿಲ್ಲ ಇದು ಇಲ್ಲಿನ **ಸಿದ್ಧಾಂತ.**

## ॥ ಚತುರ್ಥೋಽನುವಾಕಃ ॥

ಬ್ರಹ್ಮವಾದಿನೋ ವದಂತಿ ಸ ತ್ವೈ ದರ್ಶಪೂರ್ಣಮಾಸೌ

ಯಜೇತ ಯ ಏನೌ ಸೇಂದ್ರೌ ಯಜೇತೇತಿ

---

ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ । ಸಃ । ತು । ವೈ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಯಜೇತ । ಯಃ । ಏನೌ । ಸೇಂದ್ರಾವಿತಿ ಸ-ಇಂದ್ರೌ । ಯಜೇತ । ಇತಿ ।

---

ಎರಡು ಹಾಗು ಮೂರನೆಯ ಅನುವಾಕಗಳಲ್ಲಿ ವೈಮೃಧ-ಸಾನ್ನಾಯ್ಯಗಳು ಹೇಳಲ್ಪಟ್ಟವು. ಈ ನಾಲ್ಕನೆಯ ಅನುವಾಕದಲ್ಲಿ ಆಗ್ನಾವೈಷ್ಣವಾದಿಗಳು ಹೇಳಲ್ಪಡುತ್ತವೆ. ಮೊದಲು ದರ್ಶ-ಪೂರ್ಣಮಾಸಗಳ ಪ್ರಶಂಸೆಯು ಇದೆ.

### ದರ್ಶ-ಪೂರ್ಣಮಾಸಗಳು ಇಂದ್ರದೇವತಾಸಹಿತವಾಗಿರುವುದರ ಪ್ರಶಂಸೆ

| | |
|---|---|
| ಬ್ರಹ್ಮವಾದಿನಃ ಯಃ ಏನೌ ಸೇಂದ್ರೌ ಯಜೇತ | ವೇದಜ್ಞರು ಯಾವ ಯಜಮಾನನು ಇಂದ್ರದೇವತಾಸಹಿತವಾಗಿ ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸುವನೋ |
| ಸಃ ತು ವೈ ದರ್ಶಪೂರ್ಣಮಾಸೌ ಯಜೇತ ಇತಿ ವದಂತಿ | ಅವನೇ ದರ್ಶಪೂರ್ಣಮಾಸಗಳನ್ನು ಸರಿಯಾಗಿ ಅನುಷ್ಠಿಸಿದವನೆಂದು ಹೇಳುತ್ತಾರೆ. |

ವೈಮೃಧಃ ಪೂರ್ಣಮಾಸೇಽನುನಿರ್ವಾಪ್ಯೋ ಭವತಿ ತೇನ

ಪೂರ್ಣಮಾಸಸ್ಸೇಂದ್ರ ಐಂದ್ರಂ ದಧ್ಯಮಾವಾಸ್ಯಾಯಾಂ

ತೇನಾಮಾವಾಸ್ಯಾ ಸೇಂದ್ರಾ

---

ವೈಮೃಧಃ । ಪೂರ್ಣಮಾಸ ಇತಿ ಪೂರ್ಣ-ಮಾಸೇ । ಅನುನಿರ್ವಾಪ್ಯ ಇತ್ಯನು-ನಿರ್ವಾಪ್ಯಃ । ಭವತಿ । ತೇನ । ಪೂರ್ಣಮಾಸ ಇತಿ ಪೂರ್ಣ-ಮಾಸಃ । ಸೇಂದ್ರ ಇತಿ ಸ-ಇಂದ್ರಃ । ಐಂದ್ರಮ್ । ದಧಿ । ಅಮಾವಾಸ್ಯಾಯಾಮಿತ್ಯಮಾ-ವಾಸ್ಯಾಯಾಮ್। ತೇನ । ಅಮಾವಾಸ್ಯೇತ್ಯಮಾ-ವಾಸ್ಯಾ । ಸೇಂದ್ರೇತಿ ಸ-ಇಂದ್ರಾ ।

---

| | |
|---|---|
| ವೈಮೃಧಃ ಪೂರ್ಣಮಾಸೇ ಅನು ನಿರ್ವಾಪ್ಯಃ ಭವತಿ | ಪೂರ್ಣಮಾಸೇಷ್ಟಿಯಲ್ಲಿ ಯಾಗದ ನಂತರ ವೈಮೃಧೇಂದ್ರ ದೇವತಾಕವಾದ ಯಾಗವು ಅನುಷ್ಠಿಸಲ್ಪಡುತ್ತದೆ. |
| ತೇನ ಪೂರ್ಣಮಾಸಃ ಸೇಂದ್ರಃ | ಆದರಿಂದ ಪೂರ್ಣಮಾಸಯಾಗವು ಇಂದ್ರಸಹಿತವಾಯಿತು. |
| ಅಮಾವಾಸ್ಯಾಯಾಮ್ ಐಂದ್ರಮ್ ದಧಿ | ಇಂದ್ರ ದೇವತಾಕವಾದ ದಧಿಯಾಗವು ಅಮಾವಾಸ್ಯೆಯಲ್ಲಿ ಅನುಷ್ಠಿಸಲ್ಪಡುತ್ತದೆ. |
| ತೇನ ಅಮಾವಾಸ್ಯಾ ಸೇಂದ್ರಾ | ಆದರಿಂದ ಅಮಾವಾಸ್ಯಾಯಾಗವು ಇಂದ್ರ ಸಹಿತವಾಗುತ್ತದೆ. |

ಯ ಏವಂ ವಿದ್ವಾನ್ದರ್ಶಪೂರ್ಣಮಾಸೌ ಯಜತೇ

ಸೇಂದ್ರಾವೇವೈನೌ ಯಜತೇ ಶ್ವಃಶ್ವೋಽಸ್ಮಾ ಈಜಾನಾಯ

ವಸೀಯೋ ಭವತಿ

---

ಯಃ । ಏವಮ್ । ವಿದ್ವಾನ್ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ। ಯಜತೇ । ಸೇಂದ್ರಾವಿತಿ ಸ-ಇಂದ್ರೌ । ಏವ । ಏನೌ । ಯಜತೇ । ಶ್ವಃಶ್ವ ಇತಿ ಶ್ವಃ-ಶ್ವಃ । ಅಸ್ಮೈ । ಈಜಾನಾಯ । ವಸೀಯಃ । ಭವತಿ ।

---

| | |
|---|---|
| ಯಃ ಏವಮ್ ವಿದ್ವಾನ್ ದರ್ಶ ಪೂರ್ಣಮಾಸೌ ಯಜತೇ | ಹೀಗೆ ತಿಳಿದ ಯಾವ ಯಜಮಾನನು ಈ ರೀತಿ ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸುವನೋ |
| ಏನೌ ಸೇಂದ್ರೌ ಏವ ಯಜತೇ | ಇಂದ್ರಸಹಿತವಾಗಿಯೇ ಈ ಯಾಗಗಳನ್ನು ಅನುಷ್ಠಿಸಿದವನಾಗುತ್ತಾನೆ. |
| ಈಜಾನಾಯ ಅಸ್ಮೈ ಶ್ವಃಶ್ವಃ ವಸೀಯಃ ಭವತಿ | ಈ ರೀತಿ ಯಾಗ ಮಾಡುವ ಯಜಮಾನನಿಗೆ ದಿನದಿನಕ್ಕೂ ಧನಾಧಿಕ್ಯವುಂಟಾಗುತ್ತದೆ. |

---

ಇಂದ್ರದೇವತಾಸಹಿತವಾದ ದರ್ಶ-ಪೂರ್ಣಮಾಸಯಾಗವನ್ನು ತಿಳಿದು ಅನುಷ್ಠಿಸುವ ಯಜಮಾನನಿಗೆ ದಿನದಿನವೂ ಅಭಿವೃದ್ಧಿಯಾಗುವುದು. ಇದು ಇಂದ್ರಸಾಹಿತ್ಯದ ಪ್ರಶಂಸೆ ಹಾಗೂ ಜ್ಞಾನದ ಪ್ರಶಂಸೆ.

ದೇವಾ ವೈ ಯದ್ಯಜ್ಞೇಽಕುರ್ವತ ತದಸುರಾ ಅಕುರ್ವತ ತೇ

ದೇವಾ ಏತಾ[ಏತಾಮ್(೧)ಇಷ್ಟಿ..] ಮಿಷ್ಟಿಮಪಶ್ಯನ್ನಾಗ್ನಾ

ವೈಷ್ಣವಮೇಕಾದಶಕಪಾಲಗ್ಂ ಸರಸ್ವತ್ಯೈ ಚರುಗ್ಂ

---

ದೇವಾಃ । ವೈ । ಯತ್ । ಯಜ್ಞೇ । ಅಕುರ್ವತ । ತತ್ । ಅಸುರಾಃ । ಅಕುರ್ವತ ।

ತೇ । ದೇವಾಃ । ಏತಾಮ್ । [೧] । ಇಷ್ಟಿಮ್ । ಅಪಶ್ಯನ್ನ್ । ಅಗ್ನಾವೈಷ್ಣವಮಿತ್ಯಾಗ್ನಾ-

ವೈಷ್ಣವಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ಸರಸ್ವತ್ಯೈ । ಚರುಮ್ ।

---

**ಆಗ್ನಾವೈಷ್ಣವ ಮುಂತಾದ ಇಷ್ಟಿಯ ವಿಧಾನಕ್ಕಾಗಿ ಉಪಾಖ್ಯಾನ**

| | |
|---|---|
| ದೇವಾಃ ವೈ ಯಜ್ಞೇ ಯತ್ ಅಕುರ್ವತ | ದೇವತೆಗಳು ಯಜ್ಞದಲ್ಲಿ ಏನೇನನ್ನು ಮಾಡಿದರೋ |
| ತತ್ ಅಸುರಾಃ ಅಕುರ್ವತ | ಅದೆಲ್ಲವನ್ನೂ ಅಸುರರೂ ಮಾಡಿದರು. |
| ತೇ ದೇವಾಃ ಏತಾಮ್ ಇಷ್ಟಿಮ್ ಅಪಶ್ಯನ್ | ಆ ದೇವತೆಗಳು ಈ ತ್ರಿಹವಿಷ್ಕವಾದ ಇಷ್ಟಿಯನ್ನು ತಿಳಿದುಕೊಂಡರು. |
| ಏಕಾದಶಕಪಾಲಮ್ ಅಗ್ನಾವೈಷ್ಣವಮ್ | ಅಗ್ನಾವಿಷ್ಣುದೇವತಾಕವಾದ ಏಕಾದಶ ಕಪಾಲ ಹವಿಷ್ಕವಾದ ಯಾಗವನ್ನೂ |
| ಸರಸ್ವತ್ಯೈ ಚರುಮ್ | ಸರಸ್ವತೀದೇವತಾಕವಾದ ಚರುಯಾಗವನ್ನೂ |

ಸರಸ್ವತೇ ಚರುಂ ತಾಂ ಪೌರ್ಣಮಾಸಗ್ಂ ಸಗ್ಂಸ್ಥಾಪ್ಯಾನು
ನಿರವಪನ್ತತೋ ದೇವಾ ಅಭವನ್ಪರಾಸುರಾ ಯೋ
ಭ್ರಾತೃವ್ಯವಾನ್ಥ್ಸ್ಯಾತ್ಸ

---

ಸರಸ್ವತೇ । ಚರುಮ್ । ತಾಮ್ । ಪೌರ್ಣಮಾಸಮಿತಿ ಪೌರ್ಣ-ಮಾಸಮ್ । ಸಗ್ಂಸ್ಥಾಪ್ಯೇತಿ ಸಮ್-ಸ್ಥಾಪ್ಯ । ಅನು । ನಿರಿತಿ । ಅವಪನ್ನ್ । ತತಃ । ದೇವಾಃ । ಅಭವನ್। ಪರೇತಿ। ಅಸುರಾಃ । ಯಃ । ಭ್ರಾತೃವ್ಯವಾನಿತಿ ಭ್ರಾತೃವ್ಯ-ವಾನ್ । ಸ್ಯಾತ್ । ಸಃ।

---

| | |
|---|---|
| ಸರಸ್ವತೇ ಚರುಮ್ | ಸರಸ್ವದ್ದೇವತಾಕವಾದ ಚರುಯಾಗವನ್ನೂ ಕಂಡುಕೊಂಡರು. |
| ಪೌರ್ಣಮಾಸಮ್ ಸಗ್ಂಸ್ಥಾಪ್ಯ ತಾಮ್ ಅನು ನಿರವಪನ್ | ಪೌರ್ಣಮಾಸಯಾಗವನ್ನು ಮುಗಿಸಿದ ಬಳಿಕ ಆ ಇಷ್ಟಿಯನ್ನು ಅನುಷ್ಠಿಸಿದರು. |
| ತತಃ ದೇವಾಃ ಅಭವನ್ | ಅನಂತರ ದೇವತೆಗಳು ಜಯಶೀಲರಾದರು. |
| ಅಸುರಾಃ ಪರಾ [ಅಭವನ್] | ಅಸುರರು ಸೋತುಹೋದರು. |

**ಈ ಕಾಮ್ಯಯಾಗದ ವಿಧಿ; ಅದರ ಫಲದ ಪ್ರಶಂಸೆ**

| | |
|---|---|
| ಯಃ ಭ್ರಾತೃವ್ಯವಾನ್ ಸ್ಯಾತ್ | ಯಾವ ಯಜಮಾನನು ಶತ್ರುಗಳನ್ನು ಹೊಂದಿರುವನೋ |
| ಸಃ | ಅವನು |

---

ಇದೊಂದು ಕಾಮ್ಯೇಷ್ಟಿಯಾಗಿದೆ. ಇದರಿಂದ ದೇವತೆಗಳು ಜಯಶೀಲರಾದರೆಂದು ಫಲವಿದೆ.

ಪೌರ್ಣಮಾಸಗ್ಂ ಸಗ್ಂಸ್ಥಾಪ್ಯೈತಾಮಿಷ್ಟಿಮನು ನಿರ್ವಪೇ
ತ್ಪೌರ್ಣಮಾಸೇನೈವ ವಜ್ರಂ ಭ್ರಾತೃವ್ಯಾಯ ಪ್ರಹೃತ್ಯಾಽಽಗ್ನಾ
ವೈಷ್ಣವೇನ ದೇವತಾಶ್ಚ ಯಜ್ಞಂ ಚ ಭ್ರಾತೃವ್ಯಸ್ಯ ವೃಂಕ್ತೇ

---

ಪೌರ್ಣಮಾಸಮಿತಿ ಪೌರ್ಣ-ಮಾಸಮ್ । ಸಗ್ಂಸ್ಥಾಪ್ಯೇತಿ ಸಮ್-ಸ್ಥಾಪ್ಯ । ಏತಾಮ್।
ಇಷ್ಟಿಮ್ । ಅನು । ನಿರಿತಿ । ವಪೇತ್ । ಪೌರ್ಣಮಾಸೇನೇತಿ ಪೌರ್ಣ-ಮಾಸೇನ ।
ಏವ । ವಜ್ರಮ್ । ಭ್ರಾತೃವ್ಯಾಯ । ಪ್ರಹೃತ್ಯೇತಿ ಪ್ರ-ಹೃತ್ಯ ।
ಅಗ್ನಾವೈಷ್ಣವೇನೇತ್ಯಾಗ್ನಾ-ವೈಷ್ಣವೇನ । ದೇವತಾಃ । ಚ । ಯಜ್ಞಮ್ । ಚ ।
ಭ್ರಾತೃವ್ಯಸ್ಯ । ವೃಂಕ್ತೇ ।

---

| | |
|---|---|
| ಪೌರ್ಣಮಾಸಮ್ ಸಗ್ಂಸ್ಥಾಪ್ಯ | ಪೌರ್ಣಮಾಸಯಾಗವನ್ನು ಮುಗಿಸಿದ ಬಳಿಕ |
| ಏತಾಮ್ ಇಷ್ಟಿಮ್ ಅನು ನಿರ್ವಪೇತ್ | ಈ ಇಷ್ಟಿಯ ಅನುಷ್ಠಾನವನ್ನು ಮಾಡಬೇಕು.[ವಿಧಿ] |
| ಪೌರ್ಣಮಾಸೇನ ಏವ ವಜ್ರಮ್ ಭ್ರಾತೃವ್ಯಾಯ ಪ್ರಹೃತ್ಯ | [ಆ ಯಜಮಾನನು] ಪೌರ್ಣಮಾಸಯಾಗದಿಂದ ವಜ್ರಾಯುಧವನ್ನು ಶತ್ರುವಿನ ಮೇಲೆ ಪ್ರಯೋಗಿಸಿ, |
| ಅಗ್ನಾವೈಷ್ಣವೇನ ಭ್ರಾತೃವ್ಯಸ್ಯ ದೇವತಾಃ ಯಜ್ಞಮ್ ಚ ವೃಂಕ್ತೇ | [ಸರ್ವದೇವತಾಕವಾದ ಮತ್ತು ಯಜ್ಞರೂಪ ವಿಷ್ಣುದೇವತಾಕವಾದ] ಆಗ್ನಾವೈಷ್ಣವಯಾಗದಿಂದ ಶತ್ರುವಿನ ದೇವತೆಗಳನ್ನೂ, ಯಜ್ಞವನ್ನೂ ನಾಶಪಡಿಸುತ್ತಾನೆ/ ಫಲಿಸದಂತೆ ಮಾಡುತ್ತಾನೆ. |

ಮಿಥುನಾನ್ಪಶೂನ್ತ್ಸಾರಸ್ವತಾಭ್ಯಾಂ ಯಾವದೇವಾಸ್ಯಾಸ್ತಿ

[ತತ್(೨)ಸರ್ವಂ]ತಥ್ಸರ್ವಂ ವೃಂಕ್ತೇ ಪೌರ್ಣಮಾಸೀಮೇವ

ಯಜೇತ ಭ್ರಾತೃವ್ಯವಾನ್ನಾಮಾವಾಸ್ಯಾಗ್ಂ

---

ಮಿಥುನಾನ್ । ಪಶೂನ್ । ಸಾರಸ್ವತಾಭ್ಯಾಮ್ । ಯಾವತ್ । ಏವ । ಅಸ್ಯ । ಅಸ್ತಿ।

ತತ್ । [೨] । ಸರ್ವಮ್ । ವೃಂಕ್ತೇ । ಪೌರ್ಣಮಾಸೀಮಿತಿ ಪೌರ್ಣ-ಮಾಸೀಮ್ ।

ಏವ । ಯಜೇತ । ಭ್ರಾತೃವ್ಯವಾನಿತಿ ಭ್ರಾತೃವ್ಯ-ವಾನ್ । ನ । ಅಮಾವಾಸ್ಯಾಮಿತ್ಯಮಾ-

ವಾಸ್ಯಾಮ್ ।

---

| | |
|---|---|
| ಸಾರಸ್ವತಾಭ್ಯಾಮ್ ಮಿಥುನಾನ್ ಪಶೂನ್ [ವೃಂಕ್ತೇ] | ಸಾರಸ್ವತಯಾಗಗಳಿಂದ ಹೆಣ್ಣುಗಂಡುಗಳಾದ ಪಶುಗಳೆಲ್ಲವನ್ನೂ ನಾಶಪಡಿಸುತ್ತಾನೆ. |
| ಅಸ್ಯ ಯಾವತ್ ಏವ ಅಸ್ತಿ ತತ್ ಸರ್ವಮ್ ವೃಂಕ್ತೇ | ಯಾವ ಯಾವ ವಸ್ತುವು ಶತ್ರುವಿನದಾಗಿದೆಯೋ ಅದೆಲ್ಲವನ್ನೂ ನಾಶಪಡಿಸುತ್ತಾನೆ/ ತನ್ನದನ್ನಾಗಿ ಮಾಡಿಕೊಳ್ಳುತ್ತಾನೆ. |

### ಶತ್ರುನಾಶವನ್ನು ಬಯಸುವವನಿಗೆ ವಿಹಿತವಾಗಿರುವ ಮತ್ತೊಂದು ಪ್ರಯೋಗವಿಶೇಷ

| | |
|---|---|
| ಭ್ರಾತೃವ್ಯವಾನ್ ಪೌರ್ಣಮಾಸೀಮ್ ಏವ ಯಜೇತ | ಹಗೆಗಳನ್ನು ಹೊಂದಿರುವವನು ಪೌರ್ಣಮಾಸೀಯಾಗವನ್ನೇ ಮಾಡಬೇಕು. |
| ಅಮಾವಾಸ್ಯಾಮ್ ನ [ಯಜೇತ] | ಅಮಾವಾಸ್ಯಾಯಾಗವನ್ನು ಅನುಷ್ಠಿಸಬಾರದು. |

---

ಈ ಹಿಂದಿನ ಪ್ರಪಾಠಕಗಳಲ್ಲಿ ಸ್ವತಂತ್ರವಾಗಿ ಅನುಷ್ಠಿಸಬಹುದಾಗಿರುವ ಕಾಮ್ಯೇಷ್ಟಿಗಳು ಹೇಳಲ್ಪಟ್ಟಿವೆ.

ಹತ್ವಾ ಭ್ರಾತೃವ್ಯಂ ನಾಪ್ಯಾಯಯತಿ

ಸಾಕಂಪ್ರಸ್ಥಾಯೀಯೇನ ಯಜೇತ ಪಶುಕಾಮೋ ಯಸ್ಮೈ ವಾ

ಅಲ್ಪೇನಾಹರಂತಿ

---

ಹತ್ವಾ । ಭ್ರಾತೃವ್ಯಮ್ । ನ । ಏತಿ। ಪ್ಯಾಯಯತಿ । ಸಾಕಂಪ್ರಸ್ಥಾಯೀಯೇನೇತಿ ಸಾಕಮ್-ಪ್ರಸ್ಥಾಯೀಯೇನ । ಯಜೇತ। ಪಶುಕಾಮ ಇತಿ ಪಶು-ಕಾಮಃ । ಯಸ್ಮೈ । ವೈ । ಅಲ್ಪೇನ । ಆಹರಂತೀತ್ಯಾ-ಹರಂತಿ ।

---

ಭ್ರಾತೃವ್ಯಮ್ ಹತ್ವಾ ನ ಆಪ್ಯಾಯಯತಿ — [ಇದರಿಂದ] [ಪೂರ್ಣಮಾಸರೂಪ ವಜ್ರಾಯುಧದಿಂದ] ಶತ್ರುವನ್ನು ಸಂಹರಿಸಿ, [ಅಮಾವಾಸ್ಯೆಯನ್ನು ಮಾಡದಿರುವುದರಿಂದ] ಶತ್ರುವಿನ ವೃದ್ಧಿಯಾಗದಂತೆ ಮಾಡುತ್ತಾನೆ.

## ಪಶುಕಾಮನಿಗೆ ಸಾಕಂಪ್ರಸ್ಥಾಯೀಯಯಾಗದ ವಿಧಿ; ಅದರ ಪ್ರಶಂಸೆ

ಪಶುಕಾಮಃ ಸಾಕಂಪ್ರಸ್ಥಾಯೀಯೇನ ಯಜೇತ — ಪಶುಕಾಮನಾದ ಯಜಮಾನನು *ಸಾಕಂಪ್ರಸ್ಥಾಯೀಯಯಾಗವನ್ನು ಅನುಷ್ಠಿಸಬೇಕು.

ಯಸ್ಮೈ ವೈ ಅಲ್ಪೇನ ಆಹರಂತಿ — ಯಾವ ರಾಜನಿಗೆ ಪ್ರಜೆಗಳು ಅಲ್ಪಪ್ರಮಾಣದಿಂದ ತೆರಿಗೆ ಮೊದಲಾದ ವುಗಳನ್ನು ಕೊಡುತ್ತಾರೆಯೋ

---

ಇಲ್ಲಿ ದರ್ಶಪೂರ್ಣಮಾಸಗಳಿಗೆ ಹೊಂದಿಕೊಂಡಿರುವಂತಹ ಕಾಮ್ಯೇಷ್ಟಿಗಳು ಹೇಳಲ್ಪಟ್ಟಿವೆ.

---

* ಹೋಮವನ್ನು ಮಾಡುವುದಕ್ಕಾಗಿ ಅಧ್ವರ್ಯುವಿನೊಡನೆ ನಾಲ್ವರು ಬ್ರಾಹ್ಮಣರು ಹೋಗುವುದರಿಂದ ಈ ಯಾಗಕ್ಕೆ **'ಸಾಕಂಪ್ರಸ್ಥಾಯೀಯ'** ಎನ್ನುತ್ತಾರೆ.

ನಾತ್ಮನಾ ತೃಪ್ಯತಿ ನಾನ್ಯಸ್ಮೈ ದದಾತಿ ಯಸ್ಮೈ ಮಹತಾ

ತೃಪ್ಯತ್ಯಾತ್ಮನಾ ದದಾತ್ಯನ್ಯಸ್ಮೈ

---

ನ । ಆತ್ಮನಾ । ತೃಪ್ಯತಿ । ನ । ಅನ್ಯಸ್ಮೈ । ದದಾತಿ । ಯಸ್ಮೈ । ಮಹತಾ । ತೃಪ್ಯತಿ। ಆತ್ಮನಾ । ದದಾತಿ । ಅನ್ಯಸ್ಮೈ ।

---

| | |
|---|---|
| [ಸಃ] ಆತ್ಮನಾ ನ ತೃಪ್ಯತಿ | ಅವನು[ಆ ರಾಜನು] ತನ್ನಿಂದ ತಾನೂ ಸಂತೋಷಪಟ್ಟುಕೊಳ್ಳುವುದಿಲ್ಲ |
| ಅನ್ಯಸ್ಮೈ ನ ದದಾತಿ | ಬೇರೆಯವರಿಗೆ ಕೊಡಲು ಸಮರ್ಥನೂ ಅಗುವುದಿಲ್ಲ. |
| ಯಸ್ಮೈ ಮಹತಾ [ಆಹರಂತಿ] [ಸಃ] | ಯಾವ ರಾಜನಿಗೆ ಪ್ರಜೆಗಳು ದೊಡ್ಡ ಪ್ರಮಾಣದಿಂದ ಕಪ್ಪ–ಕಾಣಿಕೆಗಳನ್ನು ಕೊಡುತ್ತಾರೆಯೋ |
| ಆತ್ಮನಾ ತೃಪ್ಯತಿ | ಆ ರಾಜನು ತಾನೂ ತೃಪ್ತಿ ಹೊಂದುತ್ತಾನೆ. |
| ಅನ್ಯಸ್ಮೈ ದದಾತಿ | ಬೇರೆಯವರಿಗೂ ಕೊಡುತ್ತಾನೆ. |

---

ಅಮಾವಾಸ್ಯಾಯಾಗವು ವೃತ್ರನನ್ನು ವೃದ್ಧಿಗೊಳಿಸುತ್ತದೆ ಎಂದು ಹಿಂದೆ ಹೇಳಿದೆ. ಅದರಂತೆಯೇ ಶತ್ರುವಿನ ವೃದ್ಧಿಯಾದೀತು. ಅಮಾವಾಸ್ಯಾಯಾಗವನ್ನು ಅನುಷ್ಠಿಸದೇ ಇರುವುದರಿಂದ ಶತ್ರುವು ತಾನಾಗಿಯೇ ನಶಿಸಿ ಹೋಗುತ್ತಾನೆ. ಈ ಯಜಮಾನನು ಅಮಾವಾಸ್ಯೆಯಲ್ಲಿ ಪಿಂಡಪಿತೃಯಜ್ಞವನ್ನು ಮಾತ್ರ ಅನುಷ್ಠಿಸಬೇಕು.

ಸಾಕಂಪ್ರಸ್ಥಾಯೀಯಾಗದಲ್ಲಿ ನಾಲ್ವರು ಬ್ರಾಹ್ಮಣರೊಡನೆ ಅಧ್ವರ್ಯುವು ದೊಡ್ಡ ಪ್ರಮಾಣದ ಹವಿಸ್ಸಿನಿಂದ ಹೋಮ ಮಾಡುತ್ತಾನೆ. ಇದರಿಂದ ಫಲವಿಶೇಷವನ್ನು ಹೇಳಲಾಗಿದೆ.

ಮಹತಾ ಪೂರ್ಣಗ್ಂ ಹೋತವ್ಯಂ ತೃಪ್ತ ಏವೈನಮಿಂದ್ರಃ ಪ್ರಜಯಾ ಪಶುಭಿಸ್ತರ್ಪಯತಿ ದಾರುಪಾತ್ರೇಣ ಜುಹೋತಿ ನ ಹಿ ಮೃನ್ಮಯಮಾಹುತಿಮಾನಶ

---

ಮಹತಾ । ಪೂರ್ಣಮ್ । ಹೋತವ್ಯಮ್ । ತೃಪ್ತಃ । ಏವ । ಏನಮ್ । ಇಂದ್ರಃ। ಪ್ರಜಯೇತಿ ಪ್ರ-ಜಯಾ । ಪಶುಭಿರಿತಿ ಪಶು-ಭಿಃ । ತರ್ಪಯತಿ । ದಾರುಪಾತ್ರೇಣೇತಿ ದಾರು-ಪಾತ್ರೇಣ । ಜುಹೋತಿ । ನ । ಹಿ । ಮೃನ್ಮಯಮಿತಿಮೃತ್-ಮಯಮ್ । ಆಹುತಿಮಿತ್ಯಾ-ಹುತಿಮ್ । ಆನಶೇ ।

---

| | |
|---|---|
| ಮಹತಾ ಪೂರ್ಣಮ್ ಹೋತವ್ಯಮ್ | [ನಾಲ್ವರು ಬ್ರಾಹ್ಮಣರು ಅಧ್ವರ್ಯುವಿನೊಡನೆ] ದೊಡ್ಡಪ್ರಮಾಣದಿಂದ ತುಂಬಿರುವ ಪಾತ್ರೆಗಳಿಂದ ಹೋಮವನ್ನು ಅನುಷ್ಠಿಸಬೇಕು. |
| ತೃಪ್ತಃ ಇಂದ್ರಃ ಏವ ಏನಮ್ ಪ್ರಜಯಾ ಪಶುಭಿಃ ತರ್ಪಯತಿ | ಈ ಪೂರ್ಣಹೋಮದಿಂದ ತೃಪ್ತನಾದ ಇಂದ್ರನೇ ಈ ಯಜಮಾನನನ್ನು ಪ್ರಜೆಗಳಿಂದಲೂ, ಪಶುಗಳಿಂದಲೂ ಪೂರ್ಣಗೊಳಿಸಿ ತೃಪ್ತಿಪಡಿಸುತ್ತಾನೆ. |

### ದಾರುಪಾತ್ರವಿಧಿ-ಅದರ ಪ್ರಶಂಸೆ

| | |
|---|---|
| ದಾರುಪಾತ್ರೇಣ ಜುಹೋತಿ | ಈ ಸಾಕಂಪ್ರಸ್ಥಾಯೀಯಯಾಗದಲ್ಲಿ ಮರದಿಂದ ಮಾಡಿದ ಪಾತ್ರೆಗಳಿಂದ ಹೋಮವನ್ನು ಅನುಷ್ಠಿಸಬೇಕು. |
| ಮೃನ್ಮಯಮ್[ಪಾತ್ರಮ್] | ಮಣ್ಣಿನಿಂದ ಮಾಡಿರುವ ಪಾತ್ರೆಯು |
| ಆಹುತಿಮ್ ನ ಆನಶೇ | ಆಹುತಿಯನ್ನು ಹೊಂದಲು/ಆಹುತಿಯನ್ನು ಸಮರ್ಪಿಸಲು ಅರ್ಹವಲ್ಲ. |

ಔದುಂಬರಂ[(ಇ)ಭವತ್ಯೂ..]ಭವತ್ಯೂರ್ಗ್ವಾ ಉದುಂಬರ

ಊರ್ಕ್ಪಶವ ಊರ್ಜೈವಾಸ್ಮಾ ಊರ್ಜಂ ಪಶೂನವರುಂಧೇ

---

ಔದುಂಬರಮ್ ।[ಇ]। ಭವತಿ । ಊರ್ಕ್ । ವೈ । ಉದುಂಬರಃ । ಊರ್ಕ್ । ಪಶವಃ।

ಊರ್ಜಾ । ಏವ । ಅಸ್ಮೈ । ಊರ್ಜಮ್ । ಪಶೂನ್ । ಅವೇತಿ । ರುಂಧೇ।

---

**ದಾರುಪಾತ್ರಕ್ಕೆ ಪ್ರಕೃತಿವೃಕ್ಷವಿಧಿ; ಪ್ರಶಂಸೆ**

| | |
|---|---|
| ಔದುಂಬರಮ್ ಭವತಿ | ದಾರುಪಾತ್ರವು ಅತ್ತಿಯ ಮರದಿಂದ ನಿರ್ಮಿತವಾಗಿರಬೇಕು. |
| ಊರ್ಕ್ ವೈ ಉದುಂಬರಃ | ಉದುಂಬರವೃಕ್ಷವು ಬಲಸ್ವರೂಪವೇ ಆಗಿದೆ. |
| ಪಶವಃ ಊರ್ಕ್ | ಹಾಲು ಇತ್ಯಾದಿಗಳಿಂದ ಬಲವನ್ನು ನೀಡುವ ಪಶುಗಳೂ ಬಲಸ್ವರೂಪವೇ ಆಗಿವೆ. |
| ಊರ್ಜಾ ಏವ ಊರ್ಜಮ್ ಪಶೂನ್ ಅಸ್ಮೈ ಅವರುಂಧೇ | [ಹೀಗಾಗಿ] ಬಲರೂಪವಾದ ಔದುಂಬರ ಪಾತ್ರೆಗಳಿಂದ ಬಲರೂಪವಾದ ಪಶುಗಳನ್ನು ಯಜಮಾನನು ಹೊಂದುವಂತೆ ಮಾಡುತ್ತಾರೆ. |

---

ಇಲ್ಲಿ ರಾಜ-ಪ್ರಜೆಗಳ ದೃಷ್ಟಾಂತದಿಂದ ಪೂರ್ಣಹೋಮವನ್ನು ಸಮರ್ಥಿಸಲಾಗಿದೆ.

ಈ ಯಾಗದಲ್ಲಿ ಮಣ್ಣಿನ ಪಾತ್ರೆಯಿಂದ ಪೂರ್ಣಹೋಮವನ್ನು ಅನುಷ್ಠಿಸಬಾರದು. ಮಣ್ಣಿನ ಪಾತ್ರೆಯು ಯೋಗ್ಯವಾದುದಲ್ಲ. ಮರದ ಪಾತ್ರೆಯಿಂದಲೇ ಹವನವನ್ನು ಮಾಡಬೇಕು. ಹಾಲನ್ನು ಕಾಯಿಸಲು ಮಣ್ಣಿನ ಪಾತ್ರೆಯೇ ಇರುವುದಾದರೂ ಹೋಮಕ್ಕೆ ದಾರುಪಾತ್ರೆಯು ಇರಬೇಕೆಂಬ ವಿಧಿ ಇದು.

ಅಧ್ವರ್ಯುವೇ ಮೊದಲಾದವರು ಉದುಂಬರಪಾತ್ರೆಗಳಿಂದ ಹೋಮವನ್ನು ಮಾಡುವುದರಿಂದ ಯಜಮಾನನಿಗೆ ಬಲರೂಪವಾದ ಪಶುಗಳು ಸೇರುವಂತೆ ಮಾಡುತ್ತಾರೆ.

ನಾಽಽಗತಶ್ರೀರ್ಮಹೇಂದ್ರಂ ಯಜೇತ ತ್ರಯೋ ವೈ ಗತಶ್ರಿಯ
ಶ್ಶುಶ್ರುವಾನ್ಗ್ರಾಮಣೀ ರಾಜನ್ಯಸ್ತೇಷಾಂ ಮಹೇಂದ್ರೋ
ದೇವತಾ

---

ನ । ಅಗತಶ್ರೀರಿತ್ಯಗತ-ಶ್ರೀಃ । ಮಹೇಂದ್ರಮಿತಿ ಮಹಾ-ಇಂದ್ರಮ್ । ಯಜೇತ । ತ್ರಯಃ । ವೈ । ಗತಶ್ರಿಯ ಇತಿ ಗತಃ-ಶ್ರಿಯಃ । ಶುಶ್ರುವಾನ್ । ಗ್ರಾಮಣೀರಿತಿ ಗ್ರಾಮ-ನೀಃ । ರಾಜನ್ಯಃ । ತೇಷಾಮ್ । ಮಹೇಂದ್ರಃಇತಿ ಮಹಾ-ಇಂದ್ರಃ । ದೇವತಾ।

---

## ದೇವತಾವಿಶೇಷವಿಧಿ; ಅರ್ಥವಾದ

| | |
|---|---|
| ಅಗತಶ್ರೀಃ ಮಹೇಂದ್ರಮ್ ನ ಯಜೇತ | *ಶ್ರೀಯನ್ನು ಹೊಂದದವನು ಮಹೇಂದ್ರ ದೇವತೆಗಾಗಿ ಸಾನ್ನಾಯ್ಯಯಾಗವನ್ನು ಮಾಡಬಾರದು. |
| ತ್ರಯಃ ಗತಶ್ರೀಯಃ ವೈ ಶುಶ್ರುವಾನ್, ಗ್ರಾಮಣೀಃ, ರಾಜನ್ಯಃ | ಸಾಂಗವಾಗಿ ವೇದತ್ರಯವನ್ನು ಬಲ್ಲವನು, ಗ್ರಾಮಾಧಿಪತಿ,ಹಾಗೂ ರಾಜಪುತ್ರ/ಕ್ಷತ್ರಿಯ ಈ ಮೂವರು ಶ್ರೀ ಸಂಪನ್ನರು. |
| ತೇಷಾಮ್ ಮಹೇಂದ್ರಃ ದೇವತಾ | ಈ ಮೂವರಿಗೆ ಸಾನ್ನಾಯ್ಯಯಾಗಕ್ಕೆ ಮಹೇಂದ್ರನು ದೇವತೆಯಾಗಿರುತ್ತಾನೆ. |

---

ಎಲ್ಲವನ್ನೂ[ಪೂರ್ಣ] ಹೋಮಮಾಡುವುದರಿಂದ ಸ್ವಿಷ್ಟಕೃತ್-ಭಕ್ಷಣಾದಿಗಳು ಇರುವುದಿಲ್ಲ.

---

*ವೇದರೂಪಶ್ರೀ, ಅಧಿಕಾರಶ್ರೀ ಜಾತಶ್ರೀ ಇವು ಶ್ರೀಗಳು.

ಯೋ ವೈ ಸ್ವಾಂ ದೇವತಾಮತಿಯಜತೇ ಪ್ರ ಸ್ವಾಯ್ಯೆ ದೇವ ತಾಯ್ಯೆ ಚ್ಯವತೇ ನ ಪರಾಂ ಪ್ರಾಪ್ನೋತಿ ಪಾಪೀಯಾನ್ಭವತಿ ಸಂವಥ್ಸರಮಿಂದ್ರಂ ಯಜೇತ ಸಂವಥ್ಸರಗ್ಂ ಹಿ ವ್ರತಂ ನಾತಿ

---

ಯಃ । ವೈ । ಸ್ವಾಮ್ । ದೇವತಾಮ್ । ಅತಿಯಜತ ಇತ್ಯತಿ-ಯಜತೇ । ಪ್ರೇತಿ । ಸ್ವಾಯ್ಯೆ । ದೇವತಾಯ್ಯೆ । ಚ್ಯವತೇ । ನ । ಪರಾಮ್ । ಪ್ರೇತಿ । ಆಪ್ನೋತಿ । ಪಾಪೀಯಾನ್ । ಭವತಿ । ಸಂವಥ್ಸರಮಿತಿ ಸಂ-ವಥ್ಸರಮ್ । ಇಂದ್ರಮ್ । ಯಜೇತ। ಸಂವಥ್ಸರಮಿತಿ ಸಂ-ವಥ್ಸರಮ್ । ಹಿ । ವ್ರತಮ್ । ನ । ಅತೀತಿ ।

---

| | |
|---|---|
| ಯಃ ಸ್ವಾಮ್ ದೇವತಾಮ್ ಅತಿ ಯಜತೇ ವೈ | ಯಾವನು[ತನಗೆ ವಿಹಿತವಾದ] ದೇವತೆಯನ್ನು ಮೀರಿ ಯಾಗಮಾಡುತ್ತಾನೆಯೋ |
| ಸ್ವಾಯ್ಯೆ ದೇವತಾಯ್ಯೆ ಪ್ರ ಚ್ಯವತೇ | ತನ್ನ ದೇವತೆಯಿಂದ ತಪ್ಪಿ ಹೋಗುತ್ತಾನೆ. |
| ಪರಾಮ್ ನ ಪ್ರಾಪ್ನೋತಿ | ಬೇರೆಯ ದೇವತೆಯನ್ನೂ ಹೊಂದುವುದಿಲ್ಲ. |
| ಪಾಪೀಯಾನ್ ಭವತಿ | [ಹೀಗೆ ದೇವತಾನುಗ್ರಹವನ್ನು ಪಡೆಯಲಾಗದೆ] ದರಿದ್ರನಾಗುತ್ತಾನೆ. |
| ಸಂವತ್ಸರಮ್ ಅತಿ ನ ವ್ರತಮ್ ಹಿ | ಸಂವಥ್ಸರವನ್ನೂ ಮೀರಿ ವ್ರತ [ಅನುಷ್ಠಾನ]ವನ್ನು ಮಾಡಬೇಕಾಗಿಲ್ಲವಾದುದರಿಂದ |
| ಸಂವಥ್ಸರಮ್ ಇಂದ್ರಮ್ ಯಜೇತ | [ಅಗತಶ್ರೀಯಾದವನು] ಇಂದ್ರನೇ ದೇವತೆಯಾಗಿ ಉಳ್ಳವನು ಒಂದು ಸಂವಥ್ಸರ ಇಂದ್ರನಿಗಾಗಿ ಸಾನ್ನಾಯ್ಯಯಾಗವನ್ನು ಮಾಡಬೇಕು. |

ಸ್ವೈಲ[ಸ್ವಾ(ಳ)ಏವೈನಂ..] ವೈನಂ ದೇವತೇಜ್ಯಮಾನಾ ಭೂತ್ಯಾ ಇಂಧೇ ವಸೀಯಾನ್ಭವತಿ ಸಂವಥ್ಸರಸ್ಯ ಪರಸ್ತಾದಗ್ನಯೇ ವ್ರತಪತಯೇ ಪುರೋಡಾಶಮಷ್ಟಾಕಪಾಲಂ

---

ಸ್ವಾ । [ಳ] । ಏವ । ಏನಮ್ । ದೇವತಾ । ಇಜ್ಯಮಾನಾ । ಭೂತ್ಯೈಲ । ಇಂಧೇ । ವಸೀಯಾನ್ । ಭವತಿ । ಸಂವಥ್ಸರಸ್ಯೇತಿ ಸಮ್-ವಥ್ಸರಸ್ಯ । ಪರಸ್ತಾತ್ । ಅಗ್ನಯೇ। ವ್ರತಪತಯ ಇತಿ ವ್ರತ-ಪತಯೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ ।

---

| | |
|---|---|
| ಸ್ವಾ ದೇವತಾ ಇಜ್ಯಮಾನಾ ಏವ ಏನಮ್ ಭೂತ್ಯೈಲ ಇಂಧೇ | ಹೀಗೆ ಸಂವಥ್ಸರಕಾಲ ಯಾಗದಿಂದ ಆರಾಧಿಸಲ್ಪಡುವ ತನ್ನ ದೇವತೆಯಾದ ಇಂದ್ರನೇ ಈ ಯಜಮಾನನನ್ನು ಐಶ್ವರ್ಯದಿಂದ ಪ್ರಕಾಶಿಸುವಂತೆ ಮಾಡುತ್ತಾನೆ. |
| ವಸೀಯಾನ್ ಭವತಿ | ಹೆಚ್ಚು ಧನವನ್ನು ಹೊಂದಿದವನಾಗಿ/ಗತಶ್ರೀಕನಾಗಿ ಮಹೇಂದ್ರಯಾಗಾರ್ಹನೇ ಆಗುತ್ತಾನೆ. |

## ವ್ರಾತಪತ್ಯಯಾಗದ ವಿಧಿ-ಅರ್ಥವಾದ

| | |
|---|---|
| ಸಂವಥ್ಸರಸ್ಯ ಪರಸ್ತಾತ್ | ಒಂದು ವರ್ಷವು ಕಳೆದ ನಂತರ |
| ಅಗ್ನಯೇ ವ್ರತಪತಯೇ ಅಷ್ಟಾಕಪಲಮ್ ಪುರೋಡಾಶಮ್ | ವ್ರತಪತಿಯಾದ ಅಗ್ನಿದೇವನಿಗಾಗಿ ಅಷ್ಟಾಕಪಾಲ ಪುರೋಡಾಶ ಹವಿಸ್ಸುಳ್ಳ ಯಾಗವನ್ನು |

---

ಸಾನ್ನಾಯ್ಯ ಯಾಗಕ್ಕೆ ವಿಕಲ್ಪವಾಗಿ ಇಂದ್ರನನ್ನೂ, ಮಹೇಂದ್ರನನ್ನೂ ಹೇಳಲಾಗಿದೆ. ಆ ಯಜಮಾನರಿಗೆ ಒಂದು ವ್ಯವಸ್ಥೆಯನ್ನೂ ಶ್ರುತಿಯು ತಿಳಿಸುತ್ತಿದೆ.

ನಿರ್ವಪೇಥ್ಸಂವಥ್ಸರಮೇವೈನಂ ವೃತ್ರಂ ಜಘ್ನಿವಾಗ್‌ಂ

ಸಮಗ್ನಿರ್ವ್ರತಪತಿರ್ವ್ರತಮಾಲಂಭಯತಿ ತತೋಽಧಿ ಕಾಮಂ

ಯಜೇತ॥೨೬–4॥

[ಏತಾಂ ತದೌದುಂಬರಗ್ಗ್ ಸ್ವಾ ತ್ರಿಗ್‌ಂಶ ಚ್ಚ ॥]

---

ನಿರಿತಿ । ವಪೇತ್ । ಸಂವಥ್ಸರಮಿತಿ ಸಂ–ವಥ್ಸರಮ್ । ಏವ । ಏನಮ್ । ವೃತ್ರಮ್। ಜಘ್ನಿವಾಗ್‌ಂಸಮ್। ಅಗ್ನಿಃ । ವ್ರತಪತಿರಿತಿ ವ್ರತ–ಪತಿಃ । ವ್ರತಮ್ । ಏತಿ । ಲಂಭಯತಿ । ತತಃ । ಅಧೀತಿ। ಕಾಮಮ್ । ಯಜೇತ ॥೨೬॥

---

ನಿರ್ವಪೇತ್ — ಅನುಷ್ಠಿಸಬೇಕು.

ಸಂವಥ್ಸರಮ್ ಏವ ಏನಮ್ ವೃತ್ರಮ್ ಜಘ್ನಿವಾಗ್‌ಂಸಮ್ — ಒಂದು ಸಂವತ್ಸರ ಕಾಲ[ವ್ರತವನ್ನು ಆಚರಿಸಿ] [ಮಹೇಂದ್ರಯಾಗಾನುಷ್ಠಾನಕ್ಕೆ ಪ್ರತಿಬಂಧಕವಾದ] ಪಾಪರೂಪವೃತ್ರನನ್ನು ಹೋಗಲಾಡಿಸಿಕೊಂಡಿರುವ ಈ ಯಜಮಾನನನ್ನು

ವ್ರತಪತಿಃ ಅಗ್ನಿಃ ವ್ರತಮ್ ಆಲಂಭಯತಿ — [ಮಾಹೇಂದ್ರಯಾಗಾನುಷ್ಠಾನರೂಪವಾದ] ವ್ರತವನ್ನು ವ್ರತಗಳ ಪಾಲಕನಾದ ಅಗ್ನಿದೇವನು ಹೊಂದಿಸುತ್ತಾನೆ.

ತತಃ ಅಧಿ ಕಾಮಮ್ ಯಜೇತ — ಬಳಿಕ ಯಜಮಾನನು ತನ್ನ ಇಚ್ಛಾನುಸಾರವಾಗಿ ಇಂದ್ರನನ್ನಾಗಲೀ, ಮಹೇಂದ್ರನನ್ನಾಗಲೀ ಉದ್ದೇಶಿಸಿ ಯಾಗವನ್ನು ಅನುಷ್ಠಿಸಬಹುದು.

---

ಇಂದ್ರನೇ ದೇವತೆಯಾಗಿರುವವನು ಮಹೇಂದ್ರದೇವತಾಯಾಗಾರ್ಹನಾಗುವುದಕ್ಕಾಗಿ ಒಂದು ಸಂವತ್ಸರ ಕಾಲ ಇಂದ್ರದೇವತೆಗಾಗಿ ಯಾಗವನ್ನು ಅನುಷ್ಠಿಸಿ,ವ್ರತಪತಿಯಾಗವನ್ನು ಮಾಡಿದರೆ ಆತನು ಯಥೇಚ್ಛವಾಗಿ ಯಾಗವನ್ನು ಮಾಡಲು ಅರ್ಹನಾಗುತ್ತಾನೆ.

ಯಜಮಾನನು ಒಂದು ವರ್ಷ ಇಂದ್ರನನ್ನು ಉದ್ದೇಶಿಸಿ ಯಾಗವನ್ನು ಮಾಡಿ ಬಳಿಕ ವ್ರಾತಪತೀಷ್ಟಿಯನ್ನು ಅನುಷ್ಠಿಸಬೇಕು.

ಇಂದ್ರನು*ವೃತ್ರನನ್ನು ಸಂಹರಿಸಿ ಮಹೇಂದ್ರನಾದಂತೆ ಅಗ್ನಿ ವ್ರತಪತೀಷ್ಟಿಯಿಂದ ಯಜಮಾನನು ಪಾಪವೆಂಬ ವೃತ್ರನನ್ನು ಹೋಗಲಾಡಿಸಿಕೊಂಡು ಮಾಹೇಂದ್ರಯಾಗಕ್ಕೆ ಅರ್ಹನಾಗುತ್ತಾನೆ.

* * *

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

### ೧) ಕುಂಭೀಹೋಮವನ್ನು ಯಾವುದರಿಂದ ಮಾಡಬೇಕು?

**[ಜೈ.ಸೂ.3.5.3-4]**

ಸಾಕಂಪ್ರಸ್ಥಾಯೀಯಯಾಗದಲ್ಲಿ **'ಸಹ ಕುಂಭೀಭಿರಭಿಕ್ರಾಮೇತ್' [ಆಪ.ಶ್ರೌ.ಸೂ. 3.16.17]** ಎಂಬ ವಾಕ್ಯವು ಇದೆ. ಇದರಿಂದ ಅಧ್ವರ್ಯುವು ಉಳಿದವರೊಡನೆ ಕುಂಭಿಗಳ ಸಹಿತವಾಗಿ ಆಹವನೀಯಾಗ್ನಿಯ ಬಳಿ ಹೋಗಬೇಕು ಎಂದು ತಿಳಿಯುತ್ತದೆ. ಕುಂಭಿಗಳಿಂದಲೇ ಹವನವನ್ನು ಮಾಡಬೇಕು ಎಂದು ಹೇಳಿಲ್ಲ. ಹೀಗಾಗಿ ಈ ಹೋಮವನ್ನು ಕುಂಭಿಗಳಿಂದಲೇ ಅನುಷ್ಠಿಸಬೇಕೆ? ಅಥವಾ ಜುಹುವಿನಿಂದಲೇ ಸಾನ್ನಾಯ್ಯದಂತೆ ಅನುಷ್ಠಿಸಬೇಕೆ? ಎಂಬುದು **ಸಂಶಯ.**

ಈ ಪ್ರಕರಣದಲ್ಲಿ **'ಕುಂಭೀಭಿರಭಿಕ್ರಾಮೇತ್'** ಎಂಬ ವಾಕ್ಯವಿದೆ. ಕುಂಭಿಗಳಿಂದ ಹೋಮವನ್ನು ಮಾಡಬೇಕು ಎಂದು ಹೇಳಿಲ್ಲ. ಈ ಯಾಗವು ಸಾನ್ನಾಯ್ಯವಿಕೃತಿಯಾಗವಾದ ಕಾರಣ ಕುಂಭಿಗಳಿಂದ ಜುಹುವಿನಲ್ಲಿ ಅವದಾನವನ್ನು ಮಾಡಿ ಹೋಮವನ್ನು ಮಾಡಬೇಕು ಶೇಷದಿಂದ ಸ್ವಿಷ್ಟಕೃದಾದಿಕಾರ್ಯವನ್ನು ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

---

* ಮಹಾನ್ ವಾ ಅಯಮಭೂದ್ಯೋ ವೃತ್ರಮವಧೀದಿತಿ ತನ್ಮಹೇಂದ್ರಸ್ಯ ಮಹೇಂದ್ರತ್ವಮ್[ತೈ.ಸಂ.೬.೫.೫]

ಈ ಸಾಕಂಪ್ರಸ್ಥಾಯೀಪ್ರಕರಣದಲ್ಲಿ **'ಅಗ್ನೀಧೇ ಸ್ರುಚೌ ಪ್ರದಾಯ ಸಹ ಕುಂಭೀಭಿರಭಿಕ್ರಾಮನ್'** **[ಆಪ.ಶ್ರೌ.ಸೂ.3.16.17]**ಎಂದು ಹೇಳಿದೆ. ಜುಹೂ ಮತ್ತು ಉಪಭೃತ್ತುಗಳನ್ನು ಕೊಟ್ಟು ಕುಂಭಿಗಳೊಡನೆ ಮಾಡುವ ಅಭಿಕ್ರಮಣವು ಹೋಮಾರ್ಥವಾದುದು .ಹೀಗಾಗಿ ಕುಂಭಿಗಳಿಂದಲೇ ಸಂಪೂರ್ಣಹೋಮವನ್ನು ಅನುಷ್ಠಿಸಬೇಕು.ಹೋಮದ ನಂತರ ಕುಂಭೀಪಾತ್ರೆಗಳು ಮಾತ್ರ ಉಳಿಯುವುದರಿಂದ ಹವಿಸ್ಸಿನ ಶೇಷವು ಉಳಿಯದಿರುವುದರಿಂದ ಪ್ರತಿಪ್ರತ್ಯರ್ಥವಾದ ಸ್ವಿಷ್ಟಕೃತ್ತೂ, ಭಕ್ಷಣಾದಿಗಳೂ ಇರುವುದಿಲ್ಲ ಪ್ರಸಕ್ತಿಯಿಲ್ಲವಾದ ಕಾರಣ ಅನುಷ್ಠಾನವಿರುವುದಿಲ್ಲ.ಹೀಗಾಗಿ ಕುಂಭೀಹೋಮ ವನ್ನು ಕುಂಭಿಗಳಿಂದಲೇ ಅನುಷ್ಠಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

## ॥ ಪಂಚಮೋಽನುವಾಕಃ ॥

ನಾಸೋಮಯಾಜೀ ಸಂ ನಯೇದನಾಗತಂ ವಾ ಏತಸ್ಯ
ಪಯೋ ಯೋಽಸೋಮಯಾಜೀ

---

ನ । ಅಸೋಮಯಾಜೀತ್ಯಸೋಮ-ಯಾಜೀ । ಸಮಿತಿ । ನಯೇತ್ । ಅನಾಗತಮಿತ್ಯನಾ-ಗತಮ್ । ವೈ । ಏತಸ್ಯ । ಪಯಃ । ಯಃ । ಅಸೋಮಯಾಜೀತ್ಯಸೋಮ-ಯಾಜೀ।

---

ನಾಲ್ಕನೆಯ ಅನುವಾಕದಲ್ಲಿ ಪುರುಷಭೇದದಿಂದ ಸಾನ್ನಾಯಯಾಗದಲ್ಲಿ ದೇವತಾಭೇದವೂ, ದರ್ಶ-ಪೂರ್ಣಮಾಸಗಳಿಗೆ ಸಂಬಂಧಿಸಿದ ಇತರ ವಿಷಯಗಳೂ ಹೇಳಲ್ಪಟ್ಟವು.

ಈ ಐದನೆಯ ಅನುವಾಕದಲ್ಲಿ ಅಭ್ಯುದಯೇಷ್ಟ್ಯಾದಿಗಳು ಹೇಳಲ್ಪಡುತ್ತವೆ. ಪ್ರಾರಂಭದಲ್ಲಿ ಸೋಮಯಾಜಿಯಲ್ಲದವನು ಸಾನ್ನಾಯ್ಯಯಾಗಕ್ಕೆ ಅರ್ಹನಾಗುವುದಿಲ್ಲವೆಂದು ಹೇಳಲ್ಪಡುತ್ತದೆ.

**ಸೋಮಯಾಜಿಯೇ ಸಾನ್ನಾಯ್ಯಯಾಗದ ಅಧಿಕಾರಿಯೆಂಬ ವಿಚಾರ; ಅದರ ಅರ್ಥವಾದ**

| | |
|---|---|
| ಅಸೋಮಯಾಜೀ ನ ಸಂನಯೇತ್ | ಸೋಮಯಾಗವನ್ನು ಅನುಷ್ಠಿಸದಿರುವವನು ಸಾನ್ನಾಯ್ಯಯಾಗವನ್ನು ಅನುಷ್ಠಿಸಬಾರದು. |
| ಯಃ ಅಸೋಮಯಾಜೀ | ಯಾವನು ಸೋಮಯಾಗವನ್ನು ಅನುಷ್ಠಿಸಿಲ್ಲವೋ |
| ಏತಸ್ಯ ಪಯಃ ಅನಾಗತಮ್ ವೈ | [ಓಷಧೀರಸರೂಪವಾದ ಸೋಮವು ಅವನಿಗೆ ಪ್ರಾಪ್ತವಾಗದಿರುವುದರಿಂದ ಸಸ್ಯರಸಜನ್ಯವಾದ] ಪಯಸ್ಸೂ ಅವನಿಗೆ ಪ್ರಾಪ್ತವಾಗುವುದಿಲ್ಲವಷ್ಟೆ. |

ಯದಸೋಮಯಾಜೀ ಸಂನಯೇತ್ಪರಿಮೋಷ ಏವ

ಸೋಽನೃತಂ ಕರೋತ್ಯಥೋ ಪರೈವ ಸಿಚ್ಯತೇ ಸೋಮ

ಯಾಜ್ಯೇವ ಸಂ ನಯೇತ್ಪಯೋ ವೈ ಸೋಮಃ

---

ಯತ್ । ಅಸೋಮಯಾಜೀತ್ಯಸೋಮ-ಯಾಜೀ । ಸನ್ನಯೇದಿತಿ ಸಮ್-ನಯೇತ್। ಪರಿಮೋಷ ಇತಿ ಪರಿ-ಮೋಷಃ । ಏವ । ಸಃ । ಅನೃತಮ್ । ಕರೋತಿ । ಅಥೋ ಇತಿ । ಪರೇತಿ । ಏವ । ಸಿಚ್ಯತೇ । ಸೋಮಯಾಜೀತಿ ಸೋಮ-ಯಾಜೀ । ಏವ । ಸಮಿತಿ । ನಯೇತ್ । ಪಯಃ । ವೈ । ಸೋಮಃ ।

---

| | |
|---|---|
| ಅಸೋಮಯಾಜೀ ಸಂನಯೇತ್(ಇತಿ) ಯತ್ | ಸೋಮಯಾಜಿಯಲ್ಲದವನು ಸಾನ್ನಾಯ್ಯ ಯಾಗವನ್ನು ಮಾಡುತ್ತಾನೆಂಬುದು ಯಾವುದುಂಟೋ |
| ಸಃ ಪರಿಮೋಷಃ ಏವ | ಅದು ಕಳ್ಳತನವೇ ಆಗುತ್ತದೆ/ಅವನು ಕಳ್ಳನೇ ಆಗುತ್ತಾನೆ. |
| ಅನೃತಮ್ ಕರೋತಿ | ಅವನು ಅನ್ಯಾಯ್ಯವಾದುದನ್ನು ಮಾಡಿದವನಾಗುತ್ತಾನೆ. |
| ಅಥೋ ಪರಾ ಸಿಚ್ಯತೇ ಏವ | ಮತ್ತು ಅವನು ಮಾಡಿದ ಯಾಗವು ವ್ಯರ್ಥವೇ ಆಗುತ್ತದೆ. |
| ಸೋಮಯಾಜೀ ಏವ ಸಂನಯೇತ್ | [ಹೀಗಾಗಿ] ಸೋಮಯಾಜಿಯಾದವನೇ ಸಾನ್ನಾಯ್ಯಯಾಗವನ್ನು ಮಾಡಬೇಕು. |
| ಸೋಮಃ ಪಯಃ ವೈ | ಓಷಧಿರಸಾತ್ಮಕವಾದ ಸೋಮವೂ ಪಯಸ್ಸಾಗಿದೆ. |

ಪಯಸ್ಸಾಂನಾಯ್ಯಂ ಪಯಸ್ಯೈವ ಪಯ ಆತ್ಮನ್ಧತ್ತೇ ವಿ ವಾ ಏತಂ ಪ್ರಜಯಾ ಪಶುಭಿರರ್ಧಯತಿ ವರ್ಧಯತ್ಯಸ್ಯ ಭ್ರಾತೃವ್ಯಂ ಯಸ್ಯ ಹವಿರ್ನಿರುಪ್ತಂ ಪುರಸ್ತಾಚ್ಚಂದ್ರಮಾ[ಚಂದ್ರಮಾಃ (೧)]ಅಭ್ಯುದೇತಿ

ಪಯಃ । ಸಾನ್ನಾಯ್ಯಮಿತಿ ಸಾಂ-ನಾಯ್ಯಮ್ । ಪಯಸಾ । ಏವ । ಪಯಃ । ಆತ್ಮನ್ನ್ ಸ್। ಧತ್ತೇ । ವೀತಿ । ವೈ । ಏತಮ್ । ಪ್ರಜಯೇತಿ ಪ್ರ-ಜಯಾ । ಪಶುಭಿರಿತಿ ಪಶು-ಭಿಃ। ಅರ್ಧಯತಿ । ವರ್ಧಯತಿ । ಅಸ್ಯ । ಭ್ರಾತೃವ್ಯಮ್ । ಯಸ್ಯ । ಹವಿಃ। ನಿರುಪ್ತಮಿತಿ ನಿಃ-ಉಪ್ತಮ್ । ಪುರಸ್ತಾತ್ । ಚಂದ್ರಮಾಃ । [೧] । ಅಭೀತಿ । ಉದೇತೀತ್ಯುತ್-ಏತಿ ।

| | |
|---|---|
| ಸಾನ್ನಾಯ್ಯಮ್ ಪಯಃ | ಸಾನ್ನಾಯ್ಯವೂ ಪಯೋ (ಕ್ಷೀರ) ರೂಪವಾಗಿದೆ. |
| ಪಯಸಾ ಏವ ಪಯಃ ಆತ್ಮನ್ ಧತ್ತೇ | [ಹೀಗಾಗಿ][ಸೋಮಯಾಗವನ್ನು ಮಾಡಿದವನು ಸಾನ್ನಾಯ್ಯಯಾಗವನ್ನು ಮಾಡುವುದರಿಂದ] ಪಯೋರೂಪವಾದ ಸೋಮದಿಂದ ಪಯೋ ರೂಪವಾದ ಸಾನ್ನಾಯ್ಯವನ್ನು ಹೊಂದುತ್ತಾನೆ. |

**ಅಭ್ಯುದಯೇಷ್ಟಿವಿಧಿ; ಅರ್ಥವಾದ**

| | |
|---|---|
| ಯಸ್ಯ ನಿರುಪ್ತಮ್ ಹವಿಃ ಪುರಸ್ತಾತ್ ಚಂದ್ರಮಾಃ ಅಭ್ಯುದೇತಿ | [ಚತುರ್ದಶಿಯಂದೇ ಅಮಾವಾಸ್ಯೆಯೆಂಬ ಭ್ರಾಂತಿಯಿಂದ ಶಾಖಾಂತರಾನುಸಾರವಾಗಿ ಹವಿರ್ನಿರ್ವಾಪವನ್ನುಮಾಡಿದ]ಯಾವ ಯಜಮಾನನ ಹವಿಸ್ಸನ್ನು ಅಭಿಲಕ್ಷಿಸಿ ಪೂರ್ವ ದಿಕ್ಕಿನಲ್ಲಿ ಚಂದ್ರನು ಉದಯಿಸುತ್ತಾನೆಯೋ |
| ಏತಮ್ ಪ್ರಜಯಾ ಪಶುಭಿಃ ವಿ ಅರ್ಧಯತಿ ವೈ [ವ್ಯರ್ಧಯತಿ] | ಈ ಯಜಮಾನನನ್ನು ಆ ಚಂದ್ರನು ಪ್ರಜೆಗಳಿಂದಲೂ,ಪಶುಗಳಿಂದಲೂ ಹೀನನನ್ನಾಗಿ ಮಾಡುತ್ತಾನೆ. |
| ಅಸ್ಯ ಭ್ರಾತೃವ್ಯಮ್ ವರ್ಧಯತಿ | ಈ ಯಜಮಾನನ ಹಗೆಯು ವೃದ್ಧಿಹೊಂದುವಂತೆ ಮಾಡುತ್ತಾನೆ. |

ತ್ರೇಧಾ ತಂಡುಲಾನ್, ವಿಭಜೇದ್ಯೇ ಮಧ್ಯಮಾಸ್ಸ್ಯುಸ್ತಾನಗ್ನಯೇ

ದಾತ್ರೇ ಪುರೋಡಾಶಮಷ್ಟಾಕಪಾಲಂ ಕುರ್ಯಾದ್ಯೇ ಸ್ಥವಿಷ್ಠಾ

---

ತ್ರೇಧಾ । ತಂಡುಲಾನ್ । ವೀತಿ । ಭಜೇತ್ । ಯೇ । ಮಧ್ಯಮಾಃ । ಸ್ಯುಃ । ತಾನ್।

ಅಗ್ನಯೇ । ದಾತ್ರೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ ।

ಕುರ್ಯಾತ್ । ಯೇ । ಸ್ಥವಿಷ್ಠಾಃ ।

---

| | |
|---|---|
| ತ್ರೇಧಾ ತಂಡುಲಾನ್ ವಿಭಜೇತ್ | [ಆಗ ಯಜಮಾನನು] ಯಾಗಾರ್ಥವಾದ ತಂಡುಲ(ಅಕ್ಕಿ)ಗಳನ್ನು ಮೂರು ಭಾಗಗಳಾಗಿ ವಿಭಜಿಸಬೇಕು. |
| ಯೇ ಮಧ್ಯಮಾಃ ಸ್ಯುಃ | ಆ ತಂಡುಲರಾಶಿಯಿಂದ ದಾತೃವಾದ ಅಗ್ನಿದೇವನಿಗಾಗಿ ಅಷ್ಟಾಕಪಾಲಪುರೋಡಾಶವನ್ನು ಮಾಡಬೇಕು. |
| ತಾನ್ ಅಗ್ನಯೇ ದಾತ್ರೇ ಅಷ್ಟಾಕಪಾಲಮ್ ಪುರೋಡಾಶಮ್ ಕುರ್ಯಾತ್ | ಆ ಮೂರು ರಾಶಿಗಳಲ್ಲಿ ಯಾವ ರಾಶಿಯು [ಪ್ರಮಾಣದಲ್ಲಿ] ಮಧ್ಯಮವಾಗಿದೆಯೋ |
| ಯೇ ಸ್ಥವಿಷ್ಠಾಃ | ಯಾವುದು ತಂಡುಲರಾಶಿಯಲ್ಲಿ ದೊಡ್ಡದಾಗಿದೆಯೋ |

---

ಸೋಮಯಾಗವನ್ನು ಮಾಡಬೇಕೆಂದಾಗ ಅದಕ್ಕೆ ಪೂರ್ವದಲ್ಲಿ ಅಗ್ನ್ಯಾಧಾನದ ಕಾಲವೂ ವಿಹಿತವಾಗಿದೆ. ಹಾಗೆಯೇ ಅಗ್ನ್ಯಾಧಾನವನ್ನು ಮಾಡಿ ದರ್ಶ-ಪೂರ್ಣಮಾಸಗಳನ್ನು ಮಾಡಿಕೊಂಡಿರುತ್ತಾ ಸಾಧ್ಯವಾದಾಗ ಸೋಮಯಾಗವನ್ನು ಅನುಷ್ಠಿಸುವುದೂ ಇದೆ. ಸೋಮಯಾಗವನ್ನು ಅನುಷ್ಠಿಸುವವರೆಗೂ ಅಮಾವಾಸ್ಯೆಯಲ್ಲಿ ದರ್ಶಯಾಗದಲ್ಲಿ ದಧಿ ಪಯೋಯಾಗರೂಪವಾದ ಸಾನ್ನಾಯ್ಯಯಾಗವನ್ನು ಮಾಡಬಾರದು.ಎಂದು ಇಲ್ಲಿ ಹೇಳಿದೆ.

ಸ್ತಾನಿಂದ್ರಾಯ ಪ್ರದಾತ್ರೇ ದಧಗ್ಂಶ್ಚರುಂ ಯೇಽಣಿಷ್ಠಾ

ಸ್ತಾನ್, ವಿಷ್ಣವೇ ಶಿಪಿವಿಷ್ಟಾಯ ಶೃತೇ ಚರುಮಗ್ನಿರೇವಾಸ್ಮೈ

ಪ್ರಜಾಂ ಪ್ರಜನಯತಿ

---

ತಾನ್ । ಇಂದ್ರಾಯ । ಪ್ರದಾತ್ರ ಇತಿ ಪ್ರ-ದಾತ್ರೇ । ದಧನ್ನ್ । ಚರುಮ್ । ಯೇ। ಅಣಿಷ್ಠಾಃ । ತಾನ್ । ವಿಷ್ಣವೇ । ಶಿಪಿವಿಷ್ಟಾಯೇತಿ ಶಿಪಿ-ವಿಷ್ಟಾಯ । ಶೃತೇ ।ಚರುಮ್। ಅಗ್ನಿಃ । ಏವ । ಅಸ್ಮೈ । ಪ್ರಜಾಮಿತಿ ಪ್ರ-ಜಾಮ್ । ಪ್ರಜನಯತೀತಿ ಪ್ರ-ಜ ಯತಿ।

---

| | |
|---|---|
| ತಾನ್ ಪ್ರದಾತ್ರೇ ಇಂದ್ರಾಯ ದಧನ್ ಚರುಮ್ [ಕುರ್ಯಾತ್] | ಆ ರಾಶಿಯಿಂದ ಪ್ರದಾತೃವಾದ ಇಂದ್ರ ದೇವನಿಗೆ ಮೊಸರಿನಲ್ಲಿ ಚರುವನ್ನು ಮಾಡಬೇಕು. |
| ಯೇ ಅಣಿಷ್ಠಾಃ | ಯಾವ ತಂಡುಲರಾಶಿಯು ಚಿಕ್ಕದಾಗಿದೆಯೋ |
| ತಾನ್ ಶಿಪಿವಿಷ್ಟಾಯ ವಿಷ್ಣವೇ ಶೃತೇ ಚರುಮ್[ಕುರ್ಯಾತ್] | ಆ ತಂಡುಲರಾಶಿಯಿಂದ ಶಿಪಿವಿಷ್ಟನಾದ/ ತೇಜೋರಾಶಿಯಾದ ವಿಷ್ಣುವಿಗಾಗಿ ಕಾಯಿಸಿದ ಹಾಲಿನಲ್ಲಿ ಚರುವನ್ನು ಮಾಡಬೇಕು. |

## ಅಭ್ಯುದಿತೇಷ್ಟಿಯ ಅರ್ಥವಾದ

| | |
|---|---|
| ಅಗ್ನಿಃ ಏವ ಅಸ್ಮೈ ಪ್ರಜಾಮ್ ಪ್ರಜನಯತಿ | ಅಗ್ನಿದೇವನೇ ಈ ಯಜಮಾನನಿಗೆ ಪ್ರಜೆಯು ಹುಟ್ಟುವಂತೆ ಮಾಡುತ್ತಾನೆ. |

---

**'ಸಾ ದೃಷ್ಟೇಂದುಃ ಸಿನೀವಾಲೀ ಸಾ ನಷ್ಟೇಂದುಕಲಾ ಕುಹೂಃ'** ಎಂಬ ಕೋಶವಚನ ದಂತೆ ಚಂದ್ರನ ದರ್ಶನವಾಗುವ ಅಮಾವಾಸ್ಯೆಗೆ ಸಿನೀವಾಲಿಯೆಂದೂ ಚಂದ್ರದರ್ಶನವಿಲ್ಲದ ಅಮಾವಾಸ್ಯೆಗೆ **'ಕುಹೂ'**ಎಂದೂ ಹೆಸರು. ಘಳಿಗೆಗಳ ವ್ಯತ್ಯಾಸ ದಿಂದ ಹೀಗಾಗುತ್ತದೆ. ಯಜಮಾನನು ಚತುರ್ದಶಿಯ ದಿನವೇ ಭ್ರಾಂತಿಯಿಂದ ಸಾಯಂದೋಹವನ್ನು ಮಾಡಿ ನಿರ್ವಾಪಾದಿಗಳನ್ನು ಮಾಡಿರಬಹುದು.

ವೃದ್ಧಾಮಿಂದ್ರಃ ಪ್ರಯಚ್ಛತಿ ಯಜ್ಞೋ ವೈ ವಿಷ್ಣುಃ ಪಶವಶ್ಶಿಪಿ ರ್ಯಜ್ಞ ಏವ ಪಶುಷು ಪ್ರತಿತಿಷ್ಠತಿ ನ ದ್ವೇ[(೨)ಯಜೇತ]ಯಜೇತ

---

ವೃದ್ಧಾಮ್ । ಇಂದ್ರಃ । ಪ್ರೇತಿ । ಯಚ್ಛತಿ । ಯಜ್ಞಃ । ವೈ ।ವಿಷ್ಣುಃ । ಪಶವಃ । ಶಿಪಿಃ। ಯಜ್ಞೇ । ಏವ । ಪಶುಷು । ಪ್ರತೀತಿ । ತಿಷ್ಠತಿ । ನ । ದ್ವೇ ಇತಿ । [೨] । ಯಜೇತ।

---

| | |
|---|---|
| ಇಂದ್ರಃ ವೃದ್ಧಾಮ್ ಪ್ರಯಚ್ಛತಿ | ಇಂದ್ರದೇವನು ಪ್ರಜೆಯು ವೃದ್ಧಿ ಹೊಂದುವಂತೆ ಮಾಡುತ್ತಾನೆ. |
| ಪಶವಃ ಶಿಪಿಃ | ವಿಷ್ಣುವು ಯಜ್ಞಸ್ವರೂಪನಷ್ಟೆ. |
| ಯಜ್ಞೇ ಏವ ಪಶುಷು ಪ್ರತಿತಿಷ್ಠತಿ | ಪಶುಗಳು ಶಿಪಿಶಬ್ದವಾಚ್ಯವಾಗಿವೆ. |
| ವಿಷ್ಣುಃ ಯಜ್ಞಃ ವೈ | ಶಿಪಿವಿಷ್ಟನಾದ ವಿಷ್ಣುವಿನ ಅನುಗ್ರಹ ದಿಂದ ಯಜಮಾನನು ಯಜ್ಞದಲ್ಲಿಯೂ ಪಶುಗಳಲ್ಲಿಯೂ ಪ್ರತಿಷ್ಠಿತನಾಗುತ್ತಾನೆ. |

**ಸುಮನೋನಾಮಕೇಷ್ಟಿಯಲ್ಲಿ ದ್ವಿರಾವೃತ್ತಿ ವಿಷಯದಲ್ಲಿನ ಪೂರ್ವಪಕ್ಷ/ಅರ್ಥವಾದ**

| | |
|---|---|
| ನ ದ್ವೇ ಯಜೇತ | ಎರಡು ಪೌರ್ಣಮಾಸೀಯಾಗಗಳನ್ನೂ ಎರಡು ಅಮಾವಾಸ್ಯಾಯಾಗಗಳನ್ನೂ ಮಾಡಬಾರದು.[ಏಕೆಂದರೆ] |

---

ಆಗ ಚಂದ್ರೋದಯವಾದರೆ ಈ ಅಭ್ಯುದಿತೇಷ್ಟಿಯನ್ನು ಅನುಷ್ಠಿಸಬೇಕು. ಇದರಿಂದ ಈ ಯಜಮಾನನಿಗೆ ಪ್ರಜಾಪಶುಹಾನಿಯೂ,ಶತ್ರುವೃದ್ಧಿಯೂ ಆಗುವುದಿಲ್ಲ. ಚಂದ್ರೋದಯ ನಿಮಿತ್ತವಾಗಿ ಈ ಇಷ್ಟಿಯನ್ನು ಹೇಳಿರುವುದರಿಂದ ಈ ಇಷ್ಟಿಗೆ **'ಅಭ್ಯುದಿತೇಷ್ಟಿ'** ಎಂದು ಹೇಳುತ್ತಾರೆ.

**'ದ್ವೇ ಪೌರ್ಣಮಾಸ್ಯೌ ದ್ವೇ ಅಮಾವಾಸ್ಯೇ ಯಜೇತ ಯಃ ಕಾಮಯೇತ ಋಧ್ನುಯಾಮ್' ಇತಿ[ಆಪ.ಶ್ರೌ.ಸೂ.3.14.14]** ಋದ್ಧಿ ಎಂದರೆ 'ಸರ್ವತೋ ಮುಖವಾದ ಸಮೃದ್ಧಿಯನ್ನು ಹೊಂದುವೆನು' ಎಂದು ಬಯಸುವವನು ಎರಡು ಪೌರ್ಣ ಮಾಸೀ ಯಾಗಗಳನ್ನೂ, ಎರಡು ಅಮಾವಾಸ್ಯಾಯಾಗಗಳನ್ನೂ ಅನುಷ್ಠಿಸಬೇಕು

ಯತ್ಪೂರ್ವಯಾ ಸಂಪ್ರತಿ ಯಜೇತೋತ್ತರಯಾ ಛಂಬಟ್ಕು

ರ್ಯಾದ್ಯದುತ್ತರಯಾ ಸಂಪ್ರತಿ ಯಜೇತ ಪೂರ್ವಯಾ

ಛಂಬಟ್ಕುರ್ಯಾನ್ನೇಷ್ಟಿರ್ಭವತಿ ನ ಯಜ್ಞ

---

ಯತ್ । ಪೂರ್ವಯಾ । ಸಂಪ್ರತೀತಿ ಸಂ–ಪ್ರತಿ । ಯಜೇತ । ಉತ್ತರಯೇತ್ಯುತ್–ತರಯಾ । ಛಂಬಟ್ । ಕುರ್ಯಾತ್ । ಯತ್ । ಉತ್ತರಯೇತ್ಯುತ್–ತರಯಾ । ಸಂಪ್ರತೀತಿ ಸಂ–ಪ್ರತಿ । ಯಜೇತ । ಪೂರ್ವಯಾ । ಛಂಬಟ್ । ಕುರ್ಯಾತ್ । ನ । ಇಷ್ಟಿಃ । ಭವತಿ । ನ । ಯಜ್ಞಃ ।

---

| | |
|---|---|
| ಯತ್ ಪೂರ್ವಯಾ ಸಂಪ್ರತಿ ಯಜೇತ | ಮೊದಲನೆಯ ಇಷ್ಟಿಪ್ರಯೋಗವನ್ನು ಚೆನ್ನಾಗಿ ಮಾಡಿದರೆ |
| ಉತ್ತರಯಾ ಛಂಬಟ್ ಕುರ್ಯಾತ್ | ಎರಡನೆಯ ಪ್ರಯೋಗವು ವ್ಯರ್ಥವಾಗುತ್ತದೆ. |
| ಯತ್ ಉತ್ತರಯಾ ಸಂಪ್ರತಿ ಯಜೇತ | ದ್ವಿತೀಯಪ್ರಯೋಗವನ್ನು ಚೆನ್ನಾಗಿ ಅನುಷ್ಠಿಸಿದರೆ |
| ಪೂರ್ವಯಾ ಛಂಬಟ್ ಕುರ್ಯಾತ್ | ಮೊದಲನೆಯ ಪ್ರಯೋಗವು ವ್ಯರ್ಥವಾಗುತ್ತದೆ. |
| ನ ಇಷ್ಟಿಃ ಭವತಿ ನ ಯಜ್ಞಃ [ಭವತಿ] | ಈ ಯಾಗವು ಇಷ್ಟಿಯೂ ಆಗುವುದಿಲ್ಲ. [ಪ್ರಾತಃ ಸವನಾದಿಗಳು ಇಲ್ಲದಿರುವುದರಿಂದ] ಅಗ್ನಿಷ್ಟೋಮಾದಿ ಸೋಮಯಾಗವೂ ಆಗುವುದಿಲ್ಲ. |

---

ಎಂದು ಸುಮನೋನಾಮಕೇಷ್ಟಿಯು ವಿಹಿತವಾಗಿದೆ. ಈ ಇಷ್ಟಿಗೆ ಸಂಬಂಧಿಸಿದಂತೆ ಪೂರ್ವಪಕ್ಷವು ಹೀಗಿದೆ; ಈ ಅಭ್ಯುದಯೇಷ್ಟಿಯನ್ನು ಅನುಷ್ಠಿಸುವುದರಿಂದ ಯಜಮಾನನು ಪ್ರಜಾಪಶು ಸಮೃದ್ಧಿಯನ್ನು ಹೊಂದುತ್ತಾನೆ.ಅವನ ಶತ್ರುವು ವೃದ್ಧಿಯನ್ನು ಹೊಂದುವುದಿಲ್ಲ.

ಸ್ತದನುಹ್ರೀತಮುಖ್ಯಪಗಲ್ಭೋ ಜಾಯತ ಏಕಾಮೇವ ಯಜೇತ ಪ್ರಗಲ್ಭೋಽಸ್ಯ ಜಾಯತೇಽನಾದೃತ್ಯ ತದ್ದ್ವೇ ಏವ ಯಜೇತ

---

ತತ್ । ಅನ್ವಿತಿ । ಹ್ರೀತಮುಖೀತಿ ಹ್ರೀತ-ಮುಖೀ । ಅಪಗಲ್ಭ ಇತ್ಯಪ-ಗಲ್ಭಃ । ಜಾಯತೇ । ಏಕಾಮ್ । ಏವ । ಯಜೇತ । ಪ್ರಗಲ್ಭ ಇತಿ ಪ್ರ-ಗಲ್ಭಃ । ಅಸ್ಯ । ಜಾಯತೇ । ಅನಾದೃತ್ಯೇತ್ಯನಾ-ದೃತ್ಯ । ತತ್ । ದ್ವೇ ಇತಿ । ಏವ । ಯಜೇತ ।

---

| | |
|---|---|
| ತತ್ ಅನುಹ್ರೀತಮುಖೀ ಅಪಗಲ್ಭಃ ಜಾಯತೇ | ಬಳಿಕ ಯಜಮಾನನು ಸಭೆಯಲ್ಲಿ ಮಾತನಾಡಲು ನಾಚುವ ಮುಖವುಳ್ಳವನೂ, ಧೈರ್ಯವಿಲ್ಲದವನೂ ಆಗುತ್ತಾನೆ. |
| ಏಕಾಮ್ ಏವ ಯಜೇತ | ಒಂದೊಂದೇ ಪ್ರಯೋಗವನ್ನು ಮಾಡಬೇಕು. |
| ಅಸ್ಯ ಪ್ರಗಲ್ಭಃ ಜಾಯತೇ | ಈ ಯಜಮಾನನ ಪುತ್ರನೂ ಸಭೆಯಲ್ಲಿ ಧೈರ್ಯದಿಂದ ಮಾತನಾಡಬಲ್ಲವನಾಗುತ್ತಾನೆ. ಯಜಮಾನನ ಬಗ್ಗೆ ಹೇಳುವುದೇನಿದೆ? [ಪೂರ್ವಪಕ್ಷ] |

### ಸುಮನೋಯಾಗದಲ್ಲಿ ಎರಡೆರಡು ಪ್ರಯೋಗಗಳ ಸಮರ್ಥನೆ

| | |
|---|---|
| ತತ್ ಅನಾದೃತ್ಯ ದ್ವೇ ಏವ ಯಜೇತ | ಈ ಪೂರ್ವಪಕ್ಷವನ್ನು ಆದರಿಸದೆ ಎರಡೆರಡು ಪ್ರಯೋಗಗಳನ್ನು ಅನುಷ್ಠಿಸಬೇಕು. |

---

ಎರಡು ಪೌರ್ಣಮಾಸಿಗಳನ್ನೂ,ಎರಡು ಅಮಾವಾಸ್ಯೆಗಳನ್ನೂ ಮಾಡಬಾರದು ಎಂಬುದು ಪೂರ್ವಪಕ್ಷ.ಅವರ ಅಭಿಪ್ರಾಯದಂತೆ ಮೊದಲನೆಯ ಪ್ರಯೋಗವು ಸರಿಯಾದ ಕಾಲದಲ್ಲಿ ನಡೆದರೆ ಎರಡನೆಯ ಪ್ರಯೋಗವು ಕಾಲಮೀರಿ ನಡೆಯುವುದರಿಂದ ವ್ಯರ್ಥವಾಗುತ್ತದೆ.

ಯಜ್ಞಮುಖಮೇವ ಪೂರ್ವಯಾऽऽಲಭತೇ ಯಜತ ಉತ್ತರಯಾ

ದೇವತಾ ಏವ ಪೂರ್ವಯಾऽವರುಂಧ ಇಂದ್ರಿಯಮುತ್ತರಯಾ

---

ಯಜ್ಞಮುಖಮಿತಿಯಜ್ಞ-ಮುಖಮ್ । ಏವ । ಪೂರ್ವಯಾ । ಆಲಭತ ಇತ್ಯಾ-ಲಭತೇ । ಯಜತೇ । ಉತ್ತರಯೇತ್ಯುತ್-ತರಯಾ । ದೇವತಾಃ । ಏವ । ಪೂರ್ವಯಾ। ಅವರುಂಧ ಇತ್ಯವ-ರುಂಧೇ । ಇಂದ್ರಿಯಮ್ । ಉತ್ತರಯೇತ್ಯುತ್-ತರಯಾ ।

---

| | |
|---|---|
| ಪೂರ್ವಯಾ ಯಜ್ಞಮುಖಮ್ ಏವ ಆಲಭತೇ | ಮೊದಲನೆಯ ಪ್ರಯೋಗದಿಂದ ಯಜ್ಞದ ಆರಂಭವನ್ನು ಸರಿಯಾಗಿ ಮಾಡಿದಂತಾಗುತ್ತದೆ. |
| ಉತ್ತರಯಾ ಯಜತೇ | ಎರಡನೆಯ ಪ್ರಯೋಗದಿಂದ ದೇವತೆಗಳನ್ನು ಆರಾಧಿಸಿದಂತೆ ಆಗುತ್ತದೆ. |
| ಪೂರ್ವಯಾ ದೇವತಾಃ ಏವ ಅವರುಂಧೇ | ಮೊದಲನೆಯ ಪ್ರಯೋಗದಿಂದ ದೇವತೆಗಳನ್ನು ಹೊಂದಿದಂತಾಗುತ್ತದೆ. |
| ಉತ್ತರಯಾ ಇಂದ್ರಿಯಮ್ [ಏವ ಅವರುಂಧೇ] | ಎರಡನೆಯ ಪ್ರಯೋಗದಿಂದ ಯಜಮಾನನು ಇಂದ್ರಿಯಶಕ್ತಿಯನ್ನು ಹೊಂದುತ್ತಾನೆ. |

---

ಎರಡನೆಯ ಪ್ರಯೋಗವು ಸರಿಯಾದ ಕಾಲದಲ್ಲಿ ನಡೆದರೆ ಮೊದಲನೆಯ ಪ್ರಯೋಗವು ತಕ್ಕ ಕಾಲದಲ್ಲಿ ನಡೆಯದೆ ವ್ಯರ್ಥವಾಗುತ್ತದೆ. ಆದುದರಿಂದ ಯಜಮಾನನು ಇದನ್ನು ಸಮರ್ಥಿಸಿಕೊಳ್ಳಲಾರದೇ ನಾಚಿ ತಲೆ ತಗ್ಗಿಸಬೇಕಾಗುತ್ತದೆ. ಆದುದರಿಂದ ಒಂದೊಂದೇ ಪ್ರಯೋಗವನ್ನು ಅನುಷ್ಠಿಸಿದರೆ ಯಜಮಾನನ ಮಗನೂ ಸಭೆಯಲ್ಲಿ ತಲೆಯೆತ್ತಿ ನಿಲ್ಲುವಂತಾಗುತ್ತದೆ. ಹೀಗಿರುವಾಗ ಯಜಮಾನನು ಸಭೆಯಲ್ಲಿ ಧೈರ್ಯದಿಂದಿರುತ್ತಾನೆಂದು ಹೇಳಬೇಕಾದುದೇ ಇಲ್ಲ. ಇದು ಪೂರ್ವಪಕ್ಷ.

ದೇವಲೋಕಮೇವ[(೩)]ಪೂರ್ವಯಾಽಭಿಜಯತಿ ಮನುಷ್ಯ ಲೋಕಮುತ್ತರಯಾ ಭೂಯಸೋ ಯಜ್ಞಕ್ರತೂನುಪೈತ್ಯೇಷಾ ವೈ ಸುಮನಾ ನಾಮೇಷ್ಟಿ

---

ದೇವಲೋಕಮಿತಿ ದೇವ-ಲೋಕಮ್ । ಏವ । [೪] । ಪೂರ್ವಯಾ । ಅಭಿಜಯತೀತ್ಯಭಿ-ಜಯತಿ । ಮನುಷ್ಯಲೋಕಮಿತಿ ಮನುಷ್ಯ-ಲೋಕಮ್ । ಉತ್ತರಯೇತ್ಯುತ್-ತರಯಾ। ಭೂಯಸಃ । ಯಜ್ಞಕ್ರತೂನಿತಿ ಯಜ್ಞ-ಕ್ರತೂನ್ । ಉಪೇತಿ । ಏತಿ । ಏಷಾ । ವೈ। ಸುಮನಾ ಇತಿ ಸು-ಮನಾಃ । ನಾಮ । ಇಷ್ಟಿಃ ।

---

| | |
|---|---|
| ಪೂರ್ವಯಾ ದೇವಲೋಕಮ್ ಏವ ಅಭಿಜಯತಿ | ಪೂರ್ವಪ್ರಯೋಗದಿಂದ ಯಜಮಾನನು ದೇವಲೋಕವನ್ನು ಜಯಿಸಿದವನಾಗುತ್ತಾನೆ. |
| ಉತ್ತರಯಾ ಮನುಷ್ಯಲೋಕಮ್ [ಏವ ಅಭಿಜಯತಿ] | ದ್ವಿತೀಯಪ್ರಯೋಗದಿಂದ ಮನುಷ್ಯ ಲೋಕವನ್ನು ಜಯಿಸಿದವನಾಗುತ್ತಾನೆ. |
| ಭೂಯಸಃ ಯಜ್ಞಕ್ರತೂನ್ ಉಪೈತಿ | [ದರ್ಶ-ಪೂರ್ಣಮಾಸಗಳ ಆವೃತ್ತಿಯಿಂದ] ಏಕಾಹ, ಅಹೀನ, ಸತ್ರಾದಿ ಯಾಗಗಳನ್ನು ಹೊಂದಿದವನಾಗುತ್ತಾನೆ. |
| ಏಷಾ ವೈ ಸುಮನಾಃ ನಾಮ ಇಷ್ಟಿಃ | ಈ ಇಷ್ಟಿಯು **'ಸುಮನಾಃ'** ಎಂಬ ಹೆಸರಿನ ಇಷ್ಟಿಯಾಗಿದೆ. |

---

ಈ ಪೂರ್ವಪಕ್ಷವನ್ನು ಆದರಿಸದೇ ಎರಡೆರಡು ಪ್ರಯೋಗಗಳನ್ನು ಅನುಷ್ಠಿಸಬೇಕು. ಅವುಗಳಲ್ಲಿ ಪ್ರಥಮಪ್ರಯೋಗದಿಂದ ಯಜ್ಞೋಪಕ್ರಮಪ್ರಾಪ್ತಿ,ದೇವತಾನುಗ್ರಹಪ್ರಾಪ್ತಿ, ದೇವಲೋಕಪ್ರಾಪ್ತಿ ಎಂಬ ಮೂರು ಫಲಗಳು ಯಜಮಾನನಿಗೆ ಲಭಿಸುತ್ತವೆ.

ಯಮದ್ಯೇಜಾನಂ ಪಶ್ಚಾಚ್ಚಂದ್ರಮಾ ಅಭ್ಯುದೇತ್ಯಸ್ಮಿನ್ನೇ

ವಾಸ್ಮೈ ಲೋಕೇಽರ್ಧುಕಂ ಭವತಿ ದಾಕ್ಷಾಯಣಯಜ್ಞೇನ

ಸುವರ್ಗಕಾಮೋ ಯಜೇತ

---

ಯಮ್ । ಅದ್ಯ । ಈಜಾನಮ್ । ಪಶ್ಚಾತ್ । ಚಂದ್ರಮಾಃ । ಅಭೀತಿ । ಉದೇತೀತ್ಯುತ್-ಏತಿ । ಅಸ್ಮಿನ್ನ್ । ಏವ । ಅಸ್ಮೈ । ಲೋಕೇ । ಅರ್ಧುಕಮ್ । ಭವತಿ । ದಾಕ್ಷಾಯಣಯಜ್ಞೇನೇತಿ ದಾಕ್ಷಾಯಣ-ಯಜ್ಞೇನ । ಸುವರ್ಗಕಾಮ ಇತಿ ಸುವರ್ಗ-ಕಾಮಃ । ಯಜೇತ ।

---

| | |
|---|---|
| ಯಮ್ ಅದ್ಯ ಈಜಾನಮ್ ಚಂದ್ರಮಾಃ ಪಶ್ಚಾತ್ ಅಭ್ಯುದೇತಿ | ಈ ಯಾಗವನ್ನು ಅನುಷ್ಠಿಸುವ ಯಾವ ಯಜಮಾನನಿಗೆ ಶುಕ್ಲಪಕ್ಷದಲ್ಲಿ ವೃದ್ಧಿ ಹೊಂದುವ ಚಂದ್ರನು ಪಶ್ಚಿಮ ದಿಕ್ಕಿನಲ್ಲಿ ಕಾಣುವನೋಅವನಿಗೆ ಒಳ್ಳೆಯ ಮನಸ್ಸು ಉಂಟಾಗು ತ್ತದೆ. |
| ಅಸ್ಮೈ ಅಸ್ಮಿನ್ನ್ ಏವ ಲೋಕೇ ಅರ್ಧುಕಮ್ ಭವತಿ | ಅವನಿಗೆ ಈ ಲೋಕದಲ್ಲಿಯೇ ಧನಾದಿ ಸಮೃದ್ಧಿಯು ಉಂಟಾಗುತ್ತದೆ. |
| ಸುವರ್ಗಕಾಮಃ ದಾಕ್ಷಾಯಣ ಯಜ್ಞೇನ ಯಜೇತ | ಸುವರ್ಗಲೋಕಕಾಮನಾದವನು ದಾಕ್ಷಾಯಣಯಜ್ಞವನ್ನು ಅನುಷ್ಠಿಸಬೇಕು. [ವಿಧಿ] |

---

ದ್ವಿತೀಯಪ್ರಯೋಗದಿಂದ ಇಂದ್ರಿಯಪ್ರಾಪ್ತಿ, ಯಜ್ಞಸಂಪೂರ್ತಿ,ಮನುಷ್ಯಲೋಕ ಜಯವೂ ಉಂಟಾಗುತ್ತದೆ. ಹಲವು ವಿಧವಾದ ಸೋಮಯಾಗಗಳನ್ನು ಮಾಡಿದಂತೆಯೂ ಆಗುತ್ತದೆ. ಧನಾದಿಸಮೃದ್ಧಿಯೂ,ಸೌಮನಸ್ಯಪ್ರಾಪ್ತಿಯೂ ಉಂಟಾಗುತ್ತದೆ. ಇದೇ **'ಸುಮನಾಃ'** ಎಂಬ ಹೆಸರಿನ ಇಷ್ಟಿ.

ಪೂರ್ಣಮಾಸೇಸಂ ನಯೇನ್ಮೈತ್ರಾವರುಣ್ಯಾಮಿಕ್ಷಯಾಽಮಾ

ವಾಸ್ಯಾಯಾಂ ಯಜೇತ ಪೂರ್ಣಮಾಸೇ ವೈ ದೇವಾನಾಗ್ಂ ಸುತ

---

ಪೂರ್ಣಮಾಸ ಇತಿ ಪೂರ್ಣ–ಮಾಸೇ । ಸಮಿತಿ । ನಯೇತ್ । ಮೈತ್ರಾವರುಣ್ಯೇತಿ

ಮೈತ್ರಾ–ವರುಣ್ಯಾ । ಅಮಿಕ್ಷಯಾ । ಅಮಾವಾಸ್ಯಾಯಾಮಿತ್ಯಮಾ–ವಾಸ್ಯಾಯಾಮ್।

ಯಜೇತ । ಪೂರ್ಣಮಾಸ ಇತಿ ಪೂರ್ಣ–ಮಾಸೇ । ವೈ । ದೇವಾನಾಮ್ । ಸುತಃ।

---

## ಈ ಯಾಗದ ಪ್ರಯೋಗವಿಶೇಷವಿಧಿ

| | |
|---|---|
| ಪೂರ್ಣಮಾಸೇ ಸಂನಯೇತ್ | ಪೂರ್ಣಮಾಸಯಾಗದಲ್ಲಿ ಸಾನ್ನಾಯ್ಯ ಯಾಗ[ದಧಿಪಯೋಯಾಗ]ವನ್ನು ಅನುಷ್ಠಿಸಬೇಕು. |
| ಅಮಾವಾಸ್ಯಾಯಾಮ್ ಮೈತ್ರಾವರುಣ್ಯಾ ಆಮಿಕ್ಷಯಾ ಯಜೇತ | ಅಮಾವಾಸ್ಯಾಯಾಗದಲ್ಲಿ ಮಿತ್ರಾವರುಣ ದೇವತಾಕವಾದ ಆಮಿಕ್ಷಾದ್ರವ್ಯಕವಾದ ಯಾಗವನ್ನು ಅನುಷ್ಠಿಸಬೇಕು [ವಿಶೇಷ ವಿಧಿ] |

## ಪ್ರಯೋಗ ವಿಶೇಷ ವಿಧಿ;ಅದರ ಅರ್ಥವಾದ

| | |
|---|---|
| ಪೂರ್ಣಮಾಸೇ ವೈ ದೇವಾನಾಮ್ ಸುತಃ | ಪೂರ್ಣಮಾಸಯಾಗದಲ್ಲಿಯೇ ದೇವತೆಗಳಿಗೆ ಇಷ್ಟನಾದ ಸೋಮನು ಅಭಿಷವ ಮಾಡಲ್ಪಡುತ್ತಾನೆ. |

---

ಈ ದಾಕ್ಷಾಯಣಯಜ್ಞವನ್ನು ಸ್ವರ್ಗಲೋಕವನ್ನು ಬಯಸುವವನು ಅನುಷ್ಠಿಸಬೇಕು. ಈ ಯಾಗದಲ್ಲಿಯೂ ಎರಡೆರಡು ಪ್ರಯೋಗಗಳಿವೆ. ಮೊದಲನೆಯ ಪೌರ್ಣಮಾಸಿಯಲ್ಲಿ ಆಗ್ನೇಯ ಅಷ್ಟಾಕಪಾಲ,ಅಗ್ನೀಷೋಮೀಯ ಏಕಾದಶಕಪಾಲ ಇರಬೇಕು.

ಎರಡನೆಯ ಪೌರ್ಣಮಾಸಿಯಲ್ಲಿ ಆಗ್ನೇಯ ಅಷ್ಟಾಕಪಾಲ, ಇಂದ್ರದೇವತಾಕವಾದ ದಧಿಯಾಗವನ್ನು ಅನುಷ್ಠಿಸಬೇಕು.

ಸ್ತೇಷಾಮೇತಮರ್ಧಮಾಸಂ ಪ್ರಸುತಸ್ತೇಷಾಂ ಮೈತ್ರಾವರುಣೀ

ವಶಾಽಮಾವಾಸ್ಯಾಯಾಮನೂಬಂಧ್ಯಾ ಯ [ಯತ್(೪)

ಪೂರ್ವೇದ್ಯು..] ತ್ಪೂರ್ವೇದ್ಯುರ್ಯಜತೇ

---

ತೇಷಾಮ್ । ಏತಮ್ । ಅರ್ಧಮಾಸಮಿತ್ಯರ್ಧ–ಮಾಸಮ್ । ಪ್ರಸುತ ಇತಿ ಪ್ರ–ಸುತಃ । ತೇಷಾಮ್ । ಮೈತ್ರಾವರುಣೀತಿ ಮೈತ್ರಾ–ವರುಣೀ । ವಶಾ । ಅಮಾವಾಸ್ಯಾಯಾಮಿತ್ಯಮಾ–ವಾಸ್ಯಾಯಾಮ್ । ಅನೂಬಂಧ್ಯೇತ್ಯನು–ಬಂಧ್ಯಾ। ಯತ್ ।[೫]। ಪೂರ್ವೇದ್ಯುಃ। ಯಜತೇ ।

---

| | |
|---|---|
| ತೇಷಾಮ್ ಏತಮ್ ಅರ್ಧ ಮಾಸಮ್ ಪ್ರಸುತಃ | ಆ ದೇವತೆಗಳಿಗೋಸ್ಕರ [ಐಂದ್ರದಧಿ ಯಾಗವನ್ನು ಮಾಡುವುದರಿಂದ **'ಪಯೋ ವೈ ಸೋಮಃ' 'ಪಯಸ್ಸಾನ್ನಾಯ್ಯಮ್'** ಎಂದು ಹೇಳಿರುವುದರಿಂದ] ಅರ್ಧಮಾಸ ಕಾಲವೂ ಸೋಮಾಭಿಷವವಾದಂತಾಗುತ್ತದೆ. |
| ತೇಷಾಮ್ ಮೈತ್ರಾವರುಣೀ ವಶಾ ಅನೂಬಂಧ್ಯಾ | ಆ ದೇವತೆಗಳಿಗೆ ಅಮಾವಾಸ್ಯೆಯಲ್ಲಿ ಮಾಡುವ ಮಿತ್ರಾವರುಣದೇವತಾಕವಾದ ಆಮಿಕ್ಷಾ ಯಾಗವು ಸೋಮಯಾಗದ ಕೊನೆಯಲ್ಲಿ ಅನುಷ್ಠಿಸುವ ವಶಾಪಶುದ್ರವ್ಯವುಳ್ಳ ಅನೂಬಂಧ್ಯಾ ಯಾಗವಾಗುತ್ತದೆ. |
| ಯತ್ ಪೂರ್ವೇದ್ಯುಃ ಯಜತೇ | ಶುಕ್ಲಪ್ರತಿಪತ್ತಿನಲ್ಲಿ ಯಾಗವನ್ನು ಅನುಷ್ಠಿಸುವುದರಿಂದ |

---

ಮೊದಲನೆಯ ಅಮಾವಾಸ್ಯೆಯಲ್ಲಿ ಆಗ್ನೇಯವಾದ ಅಷ್ಟಾಕಪಾಲ, ಐಂದ್ರಾಗ್ನವಾದ ಏಕದಶಕಪಾಲಯಾಗವನ್ನು ಮಾಡಬೇಕು.

ವೇದಿಮೇವ ತತ್ಕರೋತಿ ಯದ್ವತ್ಸಾನಪಾಕರೋತಿ ಸದೋಹ

ವಿರ್ಧಾನೇ ಏವ ಸಂ ಮಿನೋತಿ ಯದ್ಯಜತೇ

---

ವೇದಿಮ್ । ಏವ । ತತ್ । ಕರೋತಿ । ಯತ್ । ವತ್ಸಾನ್ । ಅಪಾಕರೋತೀತ್ಯಪ-

ಆಕರೋತಿ । ಸದೋಹವಿರ್ಧಾನೇ ಇತಿ ಸದಃ-ಹವಿರ್ಧಾನೇ । ಏವ । ಸಮಿತಿ ।

ಮಿನೋತಿ । ಯತ್ । ಯಜತೇ ।

---

| | |
|---|---|
| ವೇದಿಮ್ ಏವ ತತ್ ಕರೋತಿ | ಸೋಮಯಾಗದ ವೇದಿಯನ್ನು ಮಾಡಿದಂತಾಗುತ್ತದೆ. |
| ಯತ್ ವತ್ಸಾನ್ ಅಪಾಕರೋತಿ | ಸಾಯಂಕಾಲ ಹಾಲನ್ನು ಕರೆಯುವುದಕ್ಕಾಗಿ ಕರುಗಳನ್ನು ಹಸುಗಳಿಂದ ದೂರಮಾಡುವುದರಿಂದ |
| ಸದೋಹವಿರ್ಧಾನೇ ಏವ ಸಂಮಿನೋತಿ | ಸದೋಮಂಟಪವನ್ನೂ, ಹವಿರ್ಧಾನ ಮಂಟಪವನ್ನೂ ನಿರ್ಮಿಸಿದಂತೆ ಆಗುತ್ತದೆ. |
| ಯತ್ ಯಜತೇ | [ದ್ವಿತೀಯಪ್ರಯೋಗದಲ್ಲಿ ಬಿದಿಗೆಯಂದು] ಆಗ್ನೇಯವಾದ ಅಷ್ಟಾಕಪಾಲ ಯಾಗವನ್ನು ಮಾಡುವುದರಿಂದ |

---

ಎರಡನೆಯ ಅಮಾವಾಸ್ಯೆಯಲ್ಲಿ ಆಗ್ನೇಯವಾದ ಅಷ್ಟಾಕಪಾಲಯಾಗ, ಮಿತ್ರಾವರುಣದೇವತಾಕವಾದ ಆಮಿಕ್ಷಾಯಾಗವನ್ನು ಮಾಡಬೇಕು.

ಎರಡನೆಯ ಪೌರ್ಣಮಾಸೀಷ್ಟಿಯಲ್ಲಿ ಹಿಂದಿನ ಯಾಗದೊಡನೆ ಸಾನ್ನಾಯ್ಯ ಯಾಗವನ್ನೂ, ಎರಡನೆಯ ಅಮಾವಾಸ್ಯೇಷ್ಟಿಯಲ್ಲಿ ಹಿಂದಿನ ಯಾಗದ ಜೊತೆಗೆ ಆಮಿಕ್ಷಾಯಾಗವನ್ನು ಅನುಷ್ಠಿಸಬೇಕು.

ದೇವೈರೇವ ಸುತ್ಯಾಗ್ಂ ಸಂ ಪಾದಯತಿ ಸ ಏತಮರ್ಧ
ಮಾಸಗ್ಂ ಸಧಮಾದಂ ದೇವೈಸ್ಸೋಮಂ ಪಿಬತಿ ಯನ್ಮೈ
ತ್ರಾವರುಣ್ಯಾಽಮಿಕ್ಷಯಾಽಮಾವಾಸ್ಯಾಯಾಂ ಯಜತೇ

---

ದೇವೈಃ । ಏವ । ಸುತ್ಯಾಮ್ । ಸಮಿತಿ । ಪಾದಯತಿ । ಸಃ । ಏತಮ್ ।
ಅರ್ಧಮಾಸಮಿತ್ಯರ್ಧ–ಮಾಸಮ್ । ಸಧಮಾದಮಿತಿ ಸಧ–ಮಾದಮ್ । ದೇವೈಃ ।
ಸೋಮಮ್ । ಪಿಬತಿ । ಯತ್ । ಮೈತ್ರಾವರುಣ್ಯೇತಿ ಮೈತ್ರಾ–ವರುಣ್ಯಾ । ಅಮಿಕ್ಷಯಾ।
ಅಮಾವಾಸ್ಯಾಯಾಮಿತ್ಯಮಾ–ವಾಸ್ಯಾಯಾಮ್ । ಯಜತೇ ।

---

| | |
|---|---|
| ದೇವೈಃ ಏವ ಸುತ್ಯಾಮ್ ಸಂಪಾದಯತಿ | ದೇವತೆಗಳಿಂದ ಇಚ್ಛಿಸಲ್ಪಡುವ ಸೋಮ ಯಾಗಸುತ್ಯೆಗಳನ್ನು ಸಂಪಾದಿಸಿದವನಾಗುತ್ತಾನೆ. |
| ಸಃ ಏತಮ್ ಅರ್ಧಮಾಸಮ್ | ಆ ಯಜಮಾನನು ಈ ಅರ್ಧಮಾಸ ಕಾಲವೂ |
| ಸಧಮಾದಮ್ ದೇವೈಃ ಸೋಮಮ್ ಪಿಬತಿ | ದೇವತಗಳೊಡನೆ ಸಂತೋಷಯುಕ್ತನಾಗಿ ಸೋಮವನ್ನು ಕುಡಿದವನಾಗುತ್ತಾನೆ. |
| ಯತ್ ಮೈತ್ರಾವರುಣ್ಯಾ ಆಮಿಕ್ಷಯಾ ಅಮಾವಾಸ್ಯಾಯಾಂ ಯಜತೇ | ಅಮಾವಾಸ್ಯಾಪ್ರಯೋಗದಲ್ಲಿ ಮಿತ್ರಾವರುಣದೇವತಾಕವಾದ ಆಮಿಕ್ಷಾಯಾಗವನ್ನು ಅನುಷ್ಠಿಸುತ್ತಾನೆಂಬುದು ಏನಿದೆಯೋ[ಅದು] |

---

ಈ ದಾಕ್ಷಾಯಣಯಜ್ಞವು ಸೋಮಯಾಗದಂತೆ ದೇವತೆಗಳಿಗೆ ಪ್ರಿಯವಾದುದು ಎಂದು ಹೊಗಳಲು ಈ ಯಾಗದ ಭಾಗಗಳಾದ ವೇದಿಕರಣವೇ ಮೊದಲಾದವುಗಳು ಸೋಮಯಾಗದ ಭಾಗಗಳೇ ಆಗಿವೆ.ಆದುದರಿಂದ ಈ ಯಾಗವು ಯಜಮಾನನಿಗೆ ಸ್ವರ್ಗಫಲವನ್ನು ನೀಡುತ್ತದೆ ಎಂದು ಪ್ರಶಂಸಿಸುವ ಅರ್ಥವಾದವು ಇದು.

ಯೈವಾಸೌ ದೇವಾನಾಂ ವಶಾನೂಬಂಧ್ಯಾ ಸೋ ಏವೈಷೈ

ತಸ್ಯ ಸಾಕ್ಷಾದ್ವಾ ಏಷ ದೇವಾನಭ್ಯಾರೋಹತಿ ಯ ಏಷಾಂ

ಯಜ್ಞ[ಯಜ್ಞಮ್(೬)ಅಭ್ಯಾರೋ..]ಮಭ್ಯಾರೋಹತಿ

---

ಯಾ । ಏವ । ಅಸೌ । ದೇವಾನಾಮ್ । ವಶಾ । ಅನೂಬಂಧ್ಯೇತ್ಯನು–ಬಂಧ್ಯಾ । ಸೋ

ಇತಿ । ಏವ । ಏಷಾ । ಏತಸ್ಯ । ಸಾಕ್ಷಾದಿತಿ ಸ–ಅಕ್ಷಾತ್ । ವೈ । ಏಷಃ । ದೇವಾನ್।

ಅಭ್ಯಾರೋಹತೀತ್ಯಭಿ–ಆರೋಹತಿ । ಯಃ । ಏಷಾಮ್ । ಯಜ್ಞಮ್ । [೬] ।

ಅಭ್ಯಾರೋಹತೀತ್ಯಭಿ–ಆರೋಹತಿ ।

---

| | |
|---|---|
| ಯಾ ಏವ ಅಸೌ ದೇವಾನಾಮ್ ವಶಾ ಅನೂಬಂಧ್ಯಾ | ದೇವತೆಗಳಿಗೆ ಪ್ರಿಯವಾದ ಸೋಮ ಯಾಗದ ಕೊನೆಯಲ್ಲಿ ಮಾಡುವ ವಶಾ ಪಶುಕವಾದ ಅನೂಬಂಧ್ಯಾಯಾಗವು ಯಾವುದೋ |
| ಸೋ ಏವ ಏಷಾ ಏತಸ್ಯ | ಅದೇ ಈ ಯಜಮಾನನಿಗೆ ಅನೂಬಂಧ್ಯಾ ಯಾಗವಾಗುತ್ತದೆ. |

## ದಾಕ್ಷಾಯಣಯಜ್ಞದ ಪ್ರಶಂಸೆ; ಫಲಾಂತರಕ್ಕಾಗಿ ವಿನಿಯೋಗ

| | |
|---|---|
| ಯಃ ಏಷಾಮ್ ಯಜ್ಞಮ್ ಅಭ್ಯಾರೋಹತಿ | ಯಾವ ಯಜಮಾನನು ದಾಕ್ಷಾಯಣ ಯಜ್ಞದಲ್ಲಿ ಅಗ್ನ್ಯಾದಿದೇವತೆಗಳ ಯಾಗ ವನ್ನು ಚೆನ್ನಾಗಿ ಅನುಷ್ಠಿಸುತ್ತಾನೆಯೋ |
| ಏಷಃ ಸಾಕ್ಷಾತ್ ದೇವಾನ್ ಅಭ್ಯಾರೋಹತಿ ವೈ | ಈ ಯಜಮಾನನು ವ್ಯವಧಾನವಿಲ್ಲದೆ ದೇವತೆಗಳ ಅನುಗ್ರಹದಿಂದ ಸ್ವರ್ಗಸುಖ ಸದೃಶವಾದ ಸುಖವನ್ನು ಅನುಭವಿಸು ತ್ತಾನೆ. |

ಯಥಾ ಖಲು ವೈ ಶ್ರೇಯಾನಭ್ಯಾರೂಢಃ ಕಾಮಯತೇ ತಥಾ ಕರೋತಿ ಯದ್ಯವವಿಧ್ಯತಿ ಪಾಪೀಯಾನ್ಭವತಿ ಯದಿ ನಾವವಿಧ್ಯತಿ ಸದೃಙ್ವ್ಯಾವೃತ್ಕಾಮ

---

ಯಥಾ । ಖಲು । ವೈ । ಶ್ರೇಯಾನ್ । ಅಭ್ಯಾರೂಢ ಇತ್ಯಭಿ-ಆರೂಢಃ । ಕಾಮಯತೇ। ತಥಾ । ಕರೋತಿ । ಯದಿ । ಅವವಿಧ್ಯತೀತ್ಯವ-ವಿಧ್ಯತಿ । ಪಾಪೀಯಾನ್ । ಭವತಿ। ಯದಿ । ನ । ಅವವಿಧ್ಯತೀತ್ಯವ-ವಿಧ್ಯತಿ । ಸದೃಙಿತಿ ಸ-ದೃಙ್ । ವ್ಯಾವೃತ್ಕಾಮ ಇತಿ ವ್ಯಾವೃತ್-ಕಾಮಃ ।

---

| | |
|---|---|
| ಯಥಾ ಖಲು ವೈ ಶ್ರೇಯಾನ್ ಅಭ್ಯಾರೂಢಃ ಕಾಮಯತೇ ತಥಾ ಕರೋತಿ | ರಾಜಾದಿಶ್ರೇಷ್ಠಪದವಿಯನ್ನು ಹೊಂದಿದದವನು ಹೇಗ ಭೃತ್ಯಾದಿಗಳಿಂದ ತನ್ನ ಕಾಮನೆಯನ್ನು ಪೂರೈಸಿಕೊಳ್ಳುತ್ತಾನೆಯೋ ಹಾಗೆಯೇ ಇವನೂ ತನ್ನ ಸೇವಕರಿಂದ ಬಯಸಿದುದನ್ನು ಪಡೆಯುವನು. [ಫಲಾಂತರಕ್ಕಾಗಿ ವಿನಿಯೋಗ] |
| ಯದಿ ಅವವಿಧ್ಯತಿ ಪಾಪೀಯಾನ್ ಭವತಿ | ಯಜಮಾನನು ಯಾಗದಲ್ಲಿ ವೈಕಲ್ಯವನ್ನುಂಟುಮಾಡಿದರೆ ಬೇರೆ ಯಜಮಾನನಿಗಿಂತ ಹೀನನಾಗುತ್ತಾನೆ. |
| ಯದಿ ನ ಅವವಿಧ್ಯತಿ ಸದೃಙ್ | ದೋಷವಿಲ್ಲದಂತೆ ಅನುಷ್ಠಾನ ಮಾಡಿದರೆ ಬೇರೆಯವರಿಗೆ ಸಮನಾಗುತ್ತಾನೆ. |
| ವ್ಯಾವೃತ್ಕಾಮಃ | ಬೇರೆಯವರಿಂದ ಭಿನ್ನತೆ [ಶ್ರೇಷ್ಠತೆ] ಯನ್ನು ಬಯಸುವವನು |

---

ಯಾವ ಯಜಮಾನನು ದಾಕ್ಷಾಯಣಯಜ್ಞವನ್ನು ಚೆನ್ನಾಗಿ ಅನುಷ್ಠಿಸುತ್ತಾನೆಯೋ, ಅವನಿಗೆ ಸ್ವರ್ಗಸುಖವು ದೊರೆಯುವುದಲ್ಲದೆ,ಬೇರೆಯವರಿಗಿಂತಲೂ ಶ್ರೇಷ್ಠನಾಗುತ್ತಾನೆ.

ಏತೇನ ಯಜ್ಞೇನ ಯಜೇತ ಕ್ಷುರಪವಿ ರ್ಹ್ಯೇಷ ಯಜ್ಞಸ್ತಾ

ಜಕ್ಪುಣ್ಯೋ ವಾ ಭವತಿ ಪ್ರ ವಾ ಮೀಯತೇತಸ್ಯೈ

ತದ್ವ್ರತಂನಾನೃತಂ ವದೇನ್ನ

---

ಏತೇನ । ಯಜ್ಞೇನ । ಯಜೇತ । ಕ್ಷುರಪವಿರಿತಿ ಕ್ಷುರ-ಪವಿಃ । ಹಿ । ಏಷಃ । ಯಜ್ಞಃ। ತಾಜಕ್ । ಪುಣ್ಯಃ । ವಾ । ಭವತಿ । ಪ್ರೇತಿ। ವಾ । ಮೀಯತೇ । ತಸ್ಯ । ಏತತ್ । ವ್ರತಮ್ । ನ । ಅನೃತಮ್ । ವದೇತ್ ।

---

ಏತೇನ ಯಜ್ಞೇನ ಯಜೇತ — ಈ ದಾಕ್ಷಾಯಣ ಯಜ್ಞವನ್ನು ಅನುಷ್ಠಿಸಬೇಕು.

ಏಷಃ ಯಜ್ಞಃ ಕ್ಷುರಪವಿಃ ಹಿ — ಈ ಯಜ್ಞವು ಕ್ಷುರದಂತೆಯೂ, ವಜ್ರಾಯುಧದಂತೆಯೂ ಅತಿ ತೀಕ್ಷ್ಣವಾದುದಷ್ಟೆ.

ತಾಜಕ್ ಪುಣ್ಯಃ ವಾ ಭವತಿ — [ಯಜಮಾನನು ಈ ಸರಿಯಾದ ಯಾಗಾನುಷ್ಠಾನದಿಂದ] ಒಡನೆಯೇ ಶ್ರೇಷ್ಠನಾಗುತ್ತಾನೆ.

ಪ್ರ ವಾ ಮೀಯತೇ — ಶತ್ರುವಾದವನು ಒಡನೆಯೇ ಸಾಯುತ್ತಾನೆ.

**ವೈಕಲ್ಯಪರಿಹಾರಕ್ಕಾಗಿ ಅನುಸರಿಸಬೇಕಾದ ವ್ರತಗಳ ವಿಧಿ**

ತಸ್ಯ ಏತತ್ ವ್ರತಮ್ — ಆ ಯಜಮಾನನು [ವೈಕಲ್ಯಪರಿಹಾರಕ್ಕಾಗಿ] ಮಾಡಬೇಕಾದ ವ್ರತಗಳು ಹೀಗಿವೆ.

ಅನೃತಮ್ ನ ವದೇತ್ — ಸುಳ್ಳನ್ನು ಹೇಳಬಾರದು.

ನ್ನಮಾಗ್ಂಸಮಶ್ನೀಯಾನ್ನ ಸ್ತ್ರಿಯಮುಪೇಯಾನ್ನಾಸ್ಯ ಪಲ್ಪೂಲನೇನ ವಾಸಃ ಪಲ್ಪೂಲಯೇಯು ರೇತದ್ಧಿ ದೇವಾಸ್ಸರ್ವಂ ನ ಕುರ್ವಂತಿ ||೩೨-5||

[ಚಂದ್ರಮಾ ದ್ವೇ ದೇವಲೋಕಮೇವ ಯದ್ಯಜ್ಞಂ ಪಲ್ಪೂಲಯೇಯುಷ್ಷಟ್ಚ ||]

---

ನ । ಮಾಗ್ಂಸಮ್। ಅಶ್ನೀಯಾತ್ । ನ । ಸ್ತ್ರಿಯಮ್ । ಉಪೇತಿ । ಇಯಾತ್ । ನ । ಅಸ್ಯ । ಪಲ್ಪೂಲನೇನ । ವಾಸಃ । ಪಲ್ಪೂಲಯೇಯುಃ । ಏತತ್ । ಹಿ । ದೇವಾಃ । ಸರ್ವಮ್ । ನ । ಕುರ್ವಂತಿ ||೩೨||

---

| | |
|---|---|
| ನ ಮಾಗ್ಂಸಮ್ ಅಶ್ನೀಯಾತ್ | ಮಾಂಸವನ್ನು ತಿನ್ನಬಾರದು. |
| ಸ್ತ್ರಿಯಮ್ ನ ಉಪೇಯಾತ್ | ಸ್ತ್ರೀಸಂಗವನ್ನು ಮಾಡಬಾರದು. |
| ಪಲ್ಪೂಲನೇನ ಅಸ್ಯ ವಾಸಃ ನ ಪಲ್ಪೂಲಯೇಯುಃ | ಚೌಳುಮಣ್ಣು ಮೊದಲಾದವುಗಳಿಂದ ಈತನ ಬಟ್ಟೆಯನ್ನು ಒಗೆಯಬಾರದು. |
| ಏತತ್ ಸರ್ವಮ್ ದೇವಾಃ ನ ಕುರ್ವಂತಿ ಹಿ | ಇದೆಲ್ಲವನ್ನು ದೇವತೆಗಳು ಮಾಡುವುದಿಲ್ಲವಷ್ಟೆ [ಆದುದರಿಂದ ಯಜಮಾನನು ಮಾಡಬಾರದು] |

---

ಈ ಯಜ್ಞವು ಕ್ಷುರದಂತೆ ವಜ್ರಾಯುಧದಂತೆ ತೀಕ್ಷ್ಣವಾದುದು. ಈ ಯಾಗವನ್ನು ಸರಿಯಾಗಿ ಅನುಷ್ಠಿಸಿದರೆ ಒಡನೆಯೇ ಶ್ರೇಷ್ಠನಾಗುತ್ತಾನೆ ಶತ್ರುವಾದವನು ಒಡನೆಯೇ ಸಾಯುತ್ತಾನೆ.

ಯಜಮಾನನಿಗೆ ವೈಕಲ್ಯಪರಿಹಾರಕ್ಕಾಗಿ ಈ ವಿಧಿಗಳು ಹೇಳಲ್ಪಟ್ಟಿವೆ. **'ನಾನೃತಂ ವದೇತ್'** ಎಂಬುದು ಸಾಮಾನ್ಯವಾಗಿಯೇ ಅನ್ವಯಿಸುವ ಪುರುಷಾರ್ಥ ಇಲ್ಲಿ ಅದು ಯಜ್ಞಾಂಗವಾಗಿ ಅನ್ವಿತವಾಗಿರುವ ಪುರುಷಾರ್ಥವಾಗಿದೆ ಎಂದು ತಿಳಿಯಬೇಕು.

ಆಗ್ನ್ಯಾಧಾನದ ಅನಂತರ ದರ್ಶ-ಪೂರ್ಣಮಾಸೇಷ್ಟಿಗಳನ್ನಾದರೂ ಅನುಷ್ಠಿಸಬಹುದು. ದಾಕ್ಷಾಯಣ ಯಜ್ಞವನ್ನಾದರೂ ಮಾಡಬಹುದು. ಪ್ರಾರಂಭದಲ್ಲಿ ಮಾಡಿದುದನ್ನೇ ಮುಂದೆ ಅನುಸರಿಸಬೇಕು.

* * *

# ಅನುವಾಕದ ವಿಶೇಷವಿಷಯಗಳು

## ಅ) ಮೀಮಾಂಸಾ

### ೧) ದರ್ಶದ ಭ್ರಾಂತಿಯಿಂದ ನಿರ್ವಾಪದ ಬಳಿಕ ಮಾಡುವ ಕರ್ಮ ಯಾವುದು? [ಜೈ.ಸೂ.6.5.1-2]

ದರ್ಶ-ಪೂರ್ಣಮಾಸಪ್ರಕರಣದಲ್ಲಿ **'ಯಸ್ಯ ಹವಿರ್ನಿರುಪ್ತಂ ಪುರಸ್ತಾಚ್ಚಂದ್ರಮಾ ಅಭ್ಯುದೇತಿ'** ಮೊದಲಾಗಿ ಅಮಾವಾಸ್ಯೆಯೆಂಬ ಭ್ರಾಂತಿಯಿಂದ ಚತುರ್ದಶಿಯಂದು ದರ್ಶೇಷ್ಟಿಗಾಗಿ ಹವಿರ್ನಿರ್ವಾಪವನ್ನು ಮಾಡಿ ಅವಘಾತವನ್ನು ಮಾಡಿದ ಮೇಲೆ ಚಂದ್ರೋದಯವಾದರೆ, ಚಂದ್ರೋದಯನಿಮಿತ್ತವಾಗಿ ಮತ್ತೊಂದು ಯಾಗವನ್ನು ವಿಧಾನ ಮಾಡಲಾಗಿದೆ. ಈ ಯಾಗವು ದರ್ಶೇಷ್ಟಿಗಿಂತಲೂ ಬೇರೆಯಾದುದೇ? ಅಥವಾ ದರ್ಶೇಷ್ಟಿಯೇ ಆಗುವುದರಿಂದ ಪುನಃ ದರ್ಶದ ಅನುಷ್ಠಾನವು ಬೇಡವೇ? ಇದು ಇಲ್ಲಿನ **ಸಂಶಯ.**

ಕಾಲಾಪರಾಧಪ್ರಾಯಶ್ಚಿತ್ತಕ್ಕಾಗಿ ಈ ಕರ್ಮವು ವಿಹಿತವಾಗಿದೆ. ಈ ಕರ್ಮದಲ್ಲಿ ದ್ರವ್ಯ-ದೇವತೆಗಳು ಹೇಳಲ್ಪಟ್ಟಿವೆ. ಅಕ್ಕಿಯ ಇಡಿಯಾದ ಕಾಳುಗಳನ್ನು ದಾತ್ರಗ್ನಿಗೂ,ಅರ್ಧ ಒಡೆದಿರುವ ಕಾಳುಗಳನ್ನು ಪ್ರದಾತ್ರಿಂದ್ರನಿಗೂ, ಚೂರಾದ ಅಕ್ಕಿಗಳನ್ನು ಶಿಪಿವಿಷ್ಟವಿಷ್ಣುವಿಗೂ ಸಂಕಲ್ಪಿಸಿ ಯಾಗವನ್ನು ಮಾಡಬೇಕು ಹೀಗೆ ಈ ಪ್ರಾಯಶ್ಚಿತ್ತವನ್ನು ಅನುಷ್ಠಿಸಿ, ಪುನಃ ದರ್ಶಯಾಗವನ್ನು ಅನುಷ್ಠಿಸಬೇಕಾಗಿಲ್ಲ.ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿನ **ಸಿದ್ಧಾಂತವು** ಹೀಗಿದೆ;

ಮೊದಲು ನಿರ್ವಾಪೋದ್ದೇಶ ಮಾಡಿರುವ ದೇವತೆಗಳನ್ನು ಬಿಟ್ಟು ಹೊಸ ದೇವತೆಗಳಿಗೆ ಸಂಬಂಧವನ್ನು ಕಲ್ಪಿಸುವ ಈ ಯಾಗವು ದರ್ಶಯಾಗಕ್ಕೇ ಸಂಬಂಧಿಸಿದ ನೈಮಿತ್ತಿಕವಾದ ಪ್ರಯೋಗಪ್ರಕಾರಭೇದವೇ ಸರಿ. ಇದು ದರ್ಶಲೋಪಪ್ರಾಯಶ್ಚಿತ್ತವಲ್ಲ.ಅಲ್ಲದೆ ಹವಿರ್ನಿರ್ವಾಪವನ್ನು ಪೂರ್ವದಿನ ರಾತ್ರಿಯಲ್ಲಿ ಮಾಡುವ ಪಕ್ಷವೂ ಇದೆ. ವತ್ಸಾಪಾಕರಣಗಳಂತೂ ಆಗಿಯೇ ಇರುತ್ತವೆ. ಆದುದರಿಂದ ಮಾರನೆಯ ದಿನ ಸ್ವಕಾಲದಲ್ಲಿ ದರ್ಶಯಾಗವನ್ನು ಅನುಷ್ಠಿಸಬೇಕು.

ಹೀಗಾಗಿ ಭ್ರಾಂತಿಯಿಂದ ನಿರ್ವಾಪವನ್ನು ಮಾಡಿದ ಬಳಿಕ ಅನುಷ್ಠಿಸುವ ವಿಹಿತಕರ್ಮವು ನೈಮಿತ್ತಿಕಕರ್ಮ.

**೨) ನಿರ್ವಾಪವನ್ನು ಮಾಡಿರದಿದ್ದರೆ ಈ ಇಷ್ಟಿಯನ್ನು ಅನುಷ್ಠಿಸಬೇಕೇ? [ಜೈ.ಸೂ.6.5.4]**

ಹಿಂದೆ ಹೇಳಿರುವ ಅಭ್ಯುದಯೇಷ್ಟಿಯನ್ನು ಹವಿರ್ನಿರ್ವಾಪವನ್ನು ಮಾಡಿರದಿದ್ದರೆ ಅನುಷ್ಠಿಸಬೇಕೇ?ಬೇಡವೇ? ಇದು ಇಲ್ಲಿನ **ಸಂಶಯ.**

**'ನಿರುಪ್ತಂ ಹವಿಃ'**ಎಂದು ಹೇಳಿರುವ ಕಾರಣ ನಿರ್ವಾಪದ ನಂತರ ಚಂದ್ರೋದಯವಾದರೆ ಮಾತ್ರ ಅನುಷ್ಠಿಸಬೇಕು. ನಿರ್ವಾಪವನ್ನು ಮಾಡಿರದಿದ್ದರೆ ಅನುಷ್ಠಿಸಬೇಕಾಗಿಲ್ಲ ಇದು **ಪೂರ್ವಪಕ್ಷ.**

ಅಗ್ನಿಪ್ರಣಯನ, ವತ್ಸಾಪಾಕರಣಗಳು ಮೊದಲನೆ ದಿನವೇ ನಡೆದಿರುವುದರಿಂದ, ನಿರ್ವಾಪಕ್ಕಿಂತಲೂ ಮೊದಲೇ ಚಂದ್ರೋದಯವಾದರೂ ಸಹ ವಿಹಿತವಲ್ಲದ ಕಾಲದಲ್ಲಿ ಕರ್ಮವನ್ನು ಪ್ರಾರಂಭಿಸಿದಂತೆ ಆದುದರಿಂದ ಈ ಅಭ್ಯುದಯೇಷ್ಟಿಯನ್ನು ಅನುಷ್ಠಿಸಬೇಕು.ಇದು ಇಲ್ಲಿನ **ಸಿದ್ಧಾಂತ.**

**೩) ಒಂದು ಮುಷ್ಟಿ ನಿರ್ವಾಪವಾದಾಗ ಚಂದ್ರೋದಯವಾದರೆ ಉಳಿದ ಮುಷ್ಟಿಗಳ ನಿರ್ವಾಪಕ್ಕೆ ಯಾವ ದೇವತೆ? [ಜೈ.ಸೂ.6.5.5]**

ಪ್ರಾಕೃತಯಾಗಕ್ಕೆ ವಿಹಿತವಾದ ದೇವತೆಗಳಿಗೆ ಒಂದು ಮುಷ್ಟಿಯ ನಿರ್ವಾಪವಾದ ಬಳಿಕ ಚಂದ್ರೋದಯವಾದರೆ ಉಳಿದ ಮುಷ್ಟಿಗಳ ನಿರ್ವಾಪದೇವತೆಗಳು ಯಾರು?ಇದು ಇಲ್ಲಿನ **ಸಂಶಯ.**

ನಿರ್ವಾಪವು ಪ್ರಾರಂಭವಾಗಿರುವುದರಿಂದ ಉಳಿದ ಮುಷ್ಟಿನಿರ್ವಾಪಗಳನ್ನೂ ಪಕೃತಿಯಾಗದ ದೇವತೆಗಳಿಗೇ ಮಾಡಬೇಕು. ಇದು ಒಂದು **ಪೂರ್ವಪಕ್ಷ.**

ಚಂದ್ರೋದಯವೆಂಬ ನಿಮಿತ್ತವಿರುವುದರಿಂದ ನೈಮಿತ್ತಿಕವಾದ ಪ್ರಕೃತಿದೇವತೆಯನ್ನು ಬಿಡಬೇಕಾಗುವು ದರಿಂದ ಉಳಿದ ಮುಷ್ಟಿಗಳ ನಿರ್ವಾಪವು ವೈಕೃತಯಾಗದ ದೇವತೆಗಳಿಗೇ ಮಾಡಬೇಕು.ಇದು ಇಲ್ಲಿನ ಎರಡನೆಯ **ಪೂರ್ವಪಕ್ಷ.**

ನೈಮಿತ್ತಿಕವಾಗಿ ಪ್ರಾಕೃತದೇವತಾತ್ಯಾಗವು ಇದ್ದರೂ, ನಿರ್ವಾಪ ಮಾಡಬೇಕಾಗಿರುವ ದ್ರವ್ಯದ ಒಂದು ಅಂಶಕ್ಕೆ ಪ್ರಾಕೃತದೇವತಾಸಂಯೋಗವಾಗಿದೆ.ಉಳಿದ ಅಂಶಗಳಿಗೆ ವೈಕೃತ ದೇವತಾಂಶದ ಸಂಬಂಧವಾಗಿಲ್ಲ. ಅಲ್ಲದೆ ದೇವತಾಸಂಬಂಧವು ಪದಾರ್ಥಕ್ಕೇ ವಿನಃ ಪದಾರ್ಥದ ಅಂಶಕ್ಕೆ ಅಲ್ಲ. ಹಿಗಾಗಿ ಉಳಿದ ಅಂಶಗಳನ್ನು ತೂಷ್ಣೀಂ (ಯಾವುದೇ ದೇವತೆಯನ್ನು ಹೇಳದೆಯೇ)ನಿರ್ವಾಪ ಮಾಡಬೇಕು ಎಂಬುದು ಇಲ್ಲಿನ **ಸಿದ್ಧಾಂತ**ವಾಗಿದೆ.

**೪) ಈ ಅಭ್ಯುದಯೇಷ್ಟಿಗೆ ಅಸಾನ್ನಾಯ್ಯಯಾಜಿಯು ಅಧಿಕಾರಿಯೇ?**
**[ಜೈ.ಸೂ.6.5.8]**

ಸೋಮಯಾಗವನ್ನು ಅನುಷ್ಠಿಸಿದವನು ಮಾತ್ರ ದರ್ಶೇಷ್ಟಿಯಲ್ಲಿ ಸಾನ್ನಾಯ್ಯಯಾಗವನ್ನು ಮಾಡುತ್ತಾನೆ. ಈ ಇಷ್ಟಿಯಲ್ಲಿ **'ದಧಗ್ಗ್ಂಶ್ಚರುಮ್''ಶೃತೇ ಚರುಮ್'** ಎಂದಿರುವುದರಿಂದ-ಸಾನ್ನಾಯ್ಯಯಾಜಿಗೆ ಮಾತ್ರ ದಧಿಯ ಪ್ರಸಕ್ತಿಯು ಇರುವುದರಿಂದ ಈ ಅಭ್ಯುದಯೇಷ್ಟಿಯನ್ನು ಸಾನ್ನಾಯ್ಯಯಾಗವನ್ನು ಅನುಷ್ಠಿಸುವವನು ಮಾತ್ರ ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿ ತಂಡುಲವನ್ನು ಪಾಕಮಾಡುವ ಬಗ್ಗೆ ಶೃತ-ದಧಿಗಳ ಅನುವಾದವಿದೆ. ವಿಧಿಯಲ್ಲ. ದಧಿ-ಶ್ರಪಣಗಳನ್ನೂ ವಿಧಾನ ಮಾಡಿದರೆ ವಾಕ್ಯಭೇದವು ಉಂಟಾಗಿ ದೋಷವಾಗುತ್ತದೆ. ಅಲ್ಲದೆ ಶ್ರಪಣವು ನೀರಿನಲ್ಲಿಯೇ ಆಗಬಹುದು ಹೀಗಾಗಿ ಈ ಅಭ್ಯುದಯೇಷ್ಟಿಯನ್ನು ಸಾನ್ನಾಯ್ಯಯಾಜಿಯಂತೆಯೇ ಅಸಾನ್ನಾಯ್ಯಯಾಜಿಯೂ ಅನುಷ್ಠಿಸಬಹುದು. ಇದು ಇಲ್ಲಿನ **ಸಿದ್ಧಾಂತ.**

**೫) ಈ ಇಷ್ಟಿಯು ಚರುಶ್ರಪಣಸಾಧನಗಳಿಗೆ ಪ್ರಣೀತಾ-ಪ್ರೋಕ್ಷಣಾದಿಗಳಿವೆಯೇ?**
**[ಜೈ.ಸೂ.9.2.22]**

ಈ ಅಭ್ಯುದಯೇಷ್ಟಿಯಲ್ಲಿ ದಧಿ-ಶೃತಗಳು ಶ್ರಪಣಸಾಧನಗಳಾಗಿವೆ.ಇವುಗಳಿಗೆ ಪ್ರಣೀತಾ-ಪ್ರೋಕ್ಷಣಾದಿಗಳು ಇವೆಯೇ? ಇದು ಇಲ್ಲಿನ **ಸಂಶಯ.**

ಈ ಯಾಗದಲ್ಲಿ ದಧಿ-ಶೃತಗಳು ಹವಿಸ್ಸಾಗಿವೆ. ಶ್ರಪಣಕ್ಕಾಗಿ ಅಲ್ಲ. ಯಾಗದಲ್ಲಿ ಉತ್ಪವನಾದಿಸಂಸ್ಕೃತವಾದ ಪ್ರಣೀತವು [ನೀರು] ಶ್ರಪಣಕ್ಕಾಗಿ ಇವೆ. ಹೀಗೆ ದಧಿ-ಶೃತಗಳಿಗೆ ಪ್ರಣೀತದೊಡನೆ ಸಾಮ್ಯವಿಲ್ಲದಿರುವುದರಿಂದ ದಧಿ-ಶೃತಗಳಿಗೆ ಪ್ರಣೀತಾಧರ್ಮವಿರುವುದಿಲ್ಲ.ಇದು ಇಲ್ಲಿನ **ಪೂರ್ವಪಕ್ಷ.**

ಈ ಯಾಗದಲ್ಲಿ ಹವಿಸ್ಸಾಗಿದ್ದರೂ ವಾಚನಿಕವಾಗಿ ಶ್ರಪಣಾರ್ಥವಾಗಿರುವುದರಿಂದ ಹವಿಃಶ್ರಪಣಸಾಮ್ಯವಿರುವುದರಿಂದ ಪ್ರಣೀತಾಪ್ರೋಕ್ಷಣಗಳು ಇವೆ.ಇದು ಇಲ್ಲಿನ **ಸಿದ್ಧಾಂತ.**

**೬)"ದಾಕ್ಷಯಣ...ಯಜೇತ' ಎಂಬ ಶ್ರುತಿವಾಕ್ಯದಲ್ಲಿ ವಿಧಿಯು ಯಾವುದು? [ಜೈ.ಸೂ.2.3.10-11]**

**'ದಾಕ್ಷಾಯಣ ಯಜ್ಞೇನ ಸುವರ್ಗಕಾಮೋ ಯಜೇತ'** ಎಂಬ ಶ್ರುತಿವಾಕ್ಯದಿಂದ ವಿಹಿತವಾದ ವಿಧಿಯು ಯಾವುದು?ಇದು ಕರ್ಮಾಂತರವಿಧಿಯೇ? ಅಥವಾ ಆವೃತ್ತಿರೂಪವಾದ ಗುಣವಿಧಿಯೇ? ಎಂಬುದು ಇಲ್ಲಿನ **ಸಂಶಯ.**

ಈ ವಿಷಯದಲ್ಲಿ **ಪೂರ್ವಪಕ್ಷವು** ಹೀಗಿದೆ; ದಾಕ್ಷಾಯಣ ಎಂಬ ಗುಣವು ಅಪ್ರಸಿದ್ಧವಾಗಿದೆ. **'ಉದ್ಭಿದಾ ಯಜೇತ'** ಎಂಬಲ್ಲಿ 'ಯಜ್' ಧಾತುವಿನೊಡನೆ ಸಾಮಾನಾಧಿಕರಣ್ಯಪ್ರಯೋಗವಿರುವುದರಿಂದ 'ಉದ್ಭಿತ್' ಎಂಬುದು ಕರ್ಮನಾಮ ಧೇಯವೆಂದು ನಿರ್ಣಯಿಸಿರುವಂತೆ ಇಲ್ಲಿಯೂ ದಾಕ್ಷಾಯಣವೆಂಬುದು ನಾಮಧೇಯವೆಂದು ಅಂಗೀಕರಿಸಿ,ನಾಮಧೇಯದಿಂದ ಕರ್ಮಭೇದವಾಗುವುದರಿಂದ ಇದೊಂದು ವಿಹಿತವಾದ ಬೇರೆಯ ಕರ್ಮ.ಇದು ಸ್ವರ್ಗರೂಪಫಲಕ್ಕಾಗಿ ವಿನಿಯುಕ್ತವಾಗಿದೆ.

ದಾಕ್ಷಾಯಣ ಎಂಬ ಶಬ್ದವು ಆವೃತ್ತಿ ಎಂಬ ಅರ್ಥವನ್ನು ಕೊಡುತ್ತದೆ.ಈ ಅರ್ಥವು ದಾಕ್ಷಾಯಣ ಶಬ್ದದ ನಿರ್ವಚನದಿಂದಲೂ,ವಾಕ್ಯಶೇಷದಿಂದಲೂ ತಿಳಿಯುತ್ತದೆ.

**ದಕ್ಷಸ್ಯ ಇಮೇ=ದಾಕ್ಷಾಃ=ಅಲಸರಲ್ಲದವರು**
**ತೇಷಾಮ್ ಅಯನಮ್=ಆವೃತ್ತಿಃ=ಪ್ರಯೋಗಾವೃತ್ತಿಃ ಇತಿ ದಾಕ್ಷಾಯಣಮ್ ದಾಕ್ಷಾಯಣಯುಕ್ತಃ=ಆವೃತ್ತ್ಯಾ ಯುಕ್ತಃ ಪ್ರಕೃತಃ ದರ್ಶಪೂರ್ಣಮಾಸಾ ತ್ಮಕೋ ಯಜ್ಞಃ=ದಾಕ್ಷಾಯಣಯಜ್ಞಃ**

ಆವೃತ್ತಿಯಿಂದ ಕೂಡಿರುವ ದರ್ಶಪೂರ್ಣಮಾಸವಿರುವುದರಿಂದ ದಾಕ್ಷಾಯಣ ಯಜ್ಞವೆನಿಸಿದೆ. ಈ ಪ್ರಯೋಗಾವೃತ್ತಿಯು **'ದ್ವೇ ಪೌರ್ಣಮಾಸ್ಯೌ ದ್ವೇ ಅಮಾವಾಸ್ಯೇ ಯಜೇತ'** ಇತ್ಯಾದಿ ವಾಕ್ಯಶೇಷದಿಂದ ತಿಳಿಸಲ್ಪಟ್ಟಿದೆ.

ಹೀಗಾಗಿ **'ದಧ್ನಾ ಜುಹೋತಿ'** ಎಂಬಲ್ಲಿಯಂತೆ ಈ ಶಬ್ದವೂ ಪ್ರಸಿದ್ಧವಾಗಿ ಇರುವುದರಿಂದ ಸ್ವರ್ಗವೆಂಬ ಫಲದ ಸಿದ್ಧಿಗಾಗಿ ಇದು ಪ್ರಯೋಗಾಂತರದ ವಿಧಿಯೇ ಹೊರತು ಕರ್ಮಾಂತರ ವಿಧಿಯಲ್ಲ. ಇದು ಇಲ್ಲಿನ **ಸಿದ್ಧಾಂತ.**

ಇದರಂತೆಯೇ **'ಸಾಕಂಪ್ರಸ್ಥಾಯೀಯೇನ ಯಜೇತ'** ಎಂಬಲ್ಲಿಯೂ **'ಸಾಕಂ ಪ್ರಸ್ಥಾನಮ್'ಯತ್ರ ಇತಿ ಸಾಕಂಪ್ರಸ್ಥಾಯೀಯಮ್** ಎಂಬ ನಿರ್ವಚನದಂತೆ

ಆ ಇಷ್ಟಿಯೂ ಕೂಡ ಪ್ರಯೋಗಾಂತರವಾದ ಗುಣವಿಧಿಯೇ ಆಗಿದೆ.

**೭) 'ನಾನೃತಂ ವದೇತ್' ಎಂಬ ನಿಷೇಧವು ಪುರುಷಧರ್ಮಕ್ಕೆ ಸೇರಿದು ದಾಗಿದೆಯೋ? [ಜೈ.ಸೂ.3.4.14-16]**

ದರ್ಶಪೂರ್ಣಮಾಸಪ್ರಕರಣದಲ್ಲಿ **'ನಾನೃತಂ ವದೇತ್'** ಎಂಬುದಾಗಿ ಅನೃತ ವನ್ನು ಹೇಳುವುದನ್ನು ನಿಷೇಧಿಸಲಾಗಿದೆ. ಈ ನಿಷೇಧವು ಯಾವ ರೀತಿಯದು? ಇದು ಇಲ್ಲಿನ **ಸಂಶಯ.**

ಈ ವಾಕ್ಯದಿಂದ ಸುಳ್ಳು ಹೇಳುವುದನ್ನು ನಿಷೇಧಿಸಲಾಗಿದೆ.ಅನೃತವನ್ನು ನುಡಿಯುವುದು ಪುರುಷಕರ್ತೃಕವಾದುದರಿಂದ ನಿಷೇಧವೂ ಸಹ ಪುರುಷಧರ್ಮವೇ.ಇದು ಮೊದಲನೆಯ **ಪೂರ್ವಪಕ್ಷ.**

ಸ್ಮೃತಿವಾಕ್ಯಗಳಿಂದಲೇ ಅನೃತವನ್ನು ನುಡಿಯಬಾರದು ಎಂದು ನಿಷೇಧವು ಇದೆ.ಅದು ಸರ್ವಕಾಲಕ್ಕೂ ಅನ್ವಯಿಸುತ್ತದೆ. ಆ ನಿಷೇಧವು ಯಜ್ಞಕಾಲಕ್ಕೂ ಅನ್ವಯಿಸುತ್ತದೆ.ಹೀಗಾಗಿ ಈ ನಿಷೇಧವು ಅನುವಾದಮಾತ್ರವಾಗಿದೆ.ಇದು ಇಲ್ಲಿನ ಎರಡನೆಯ **ಪೂರ್ವಪಕ್ಷ.**

ಈ ನಿಷೇಧವು ಪ್ರಯಾಜಾದಿಗಳಂತೆ ಕ್ರತುವಿನ ಅಂಗ.ಆದರೆ ವಿಧಿಯಲ್ಲ. ಸಾರ್ವತ್ರಿಕವಾದ ನಿಷೇಧದ ಅನುವಾದ ಇದು ಮೂರನೆಯ **ಪೂರ್ವಪಕ್ಷ.**

ಸಾರ್ವತ್ರಿಕವಾದ ನಿಷೇಧವು ಪುರುಷಾರ್ಥವಾಗಿದೆ. ಈ **'ನಾನೃತಂ ವದೇತ್'** ಎಂಬ ನಿಷೇಧವು ಕ್ರತ್ವರ್ಥವಾದ ನಿಷೇಧ. ಇದು ಪ್ರಾಪ್ತವಲ್ಲ.ಹೀಗಾಗಿ ಇದು ವಿಧಿ ಯಾಗಿದೆ. ಈ ವಿಧಿಯನ್ನು ಮೀರಿದರೆ ಕ್ರತುವು ವಿಗುಣವಾಗುತ್ತದೆ. ಶ್ರೌತಪ್ರಾಯಶ್ಚಿತ್ತವನ್ನು ಅನುಷ್ಠಿಸಬೇಕಾಗುತ್ತದೆ. ಪುರುಷಾರ್ಥನಿಷೇಧವಾಗಿದ್ದರೆ ಅದರ ಉಲ್ಲಂಘನೆಯು ಪುರುಷನಿಗೆ ಪ್ರತ್ಯವಾಯವನ್ನು ಉಂಟುಮಾಡುತ್ತದೆ.

ಹೀಗಾಗಿ ಈ ನಿಷೇಧವು ಕ್ರತ್ವರ್ಥವಾಗಿದೆ. ಇದು ಇಲ್ಲಿಯ **ಸಿದ್ಧಾಂತ.**

## ॥ ಷಷ್ಠೋಽನುವಾಕಃ ॥

ಏಷ ವೈ ದೇವರಥೋ ಯದ್ದರ್ಶಪೂರ್ಣಮಾಸೌ ಯೋ

ದರ್ಶಪೂರ್ಣಮಾಸಾವಿಷ್ಟ್ವಾ

---

ಏಷಃ । ವೈ । ದೇವರಥ ಇತಿ ದೇವ-ರಥಃ । ಯತ್ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಯಃ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ। ಇಷ್ಟ್ವಾ ।

---

ಐದನೆಯ ಅನುವಾಕದಲ್ಲಿ ಅಭ್ಯುದಯೇಷ್ಟಿ, ಸುಮನೋನಾಮಕವಾದ ಇಷ್ಟಿ, ದಾಕ್ಷಾಯಣಯಜ್ಞ ಈ ಮೂರು ಇಷ್ಟಿಗಳು ಹೇಳಲ್ಪಟ್ಟಿವೆ.

ಈ ಆರನೆಯ ಅನುವಾಕದಲ್ಲಿ ಸೋಮಯಾಗಕ್ಕೆ ಇಷ್ಟಿಪೂರ್ವಕಾಲವು ಹೇಳಲ್ಪಡುತ್ತದೆ.

---

### ಸೋಮಯಾಗಕ್ಕಿಂತ ಮೊದಲು ದರ್ಶ-ಪೂರ್ಣಮಾಸಯಾಗಗಳ ಕಾಲವಿಧಿ; ಆದರ ಅರ್ಥವಾದ

| | |
|---|---|
| ಯತ್ ದರ್ಶಪೂರ್ಣಮಾಸೌ | ದರ್ಶಪೂರ್ಣಮಾಸಗಳೆಂಬುದು ಯಾವುದುಂಟೋ |
| ಏಷಃ ವೈ ದೇವರಥಃ | ಇವು ದೇವತೆಗಳ ರಥದಂತಿದೆ. |
| ಯಃ ದರ್ಶಪೂರ್ಣಮಾಸೌ ಇಷ್ಟ್ವಾ | ಯಾವ ಯಜಮಾನನು ದರ್ಶ-ಪೂರ್ಣ ಮಾಸೇಷ್ಟಿಗಳನ್ನು ಅನುಷ್ಠಿಸಿದ ಬಳಿಕ |

ಸೋಮೇನ ಯಜತೇ ರಥಸ್ಪಷ್ಟ ಏವಾವಸಾನೇ ವರೇ

ದೇವಾನಾಮವಸ್ಯತ್ಯೇತಾನಿ ವಾ ಅಂಗಾಪರೂಗ್ಂಷಿ

ಸಂವಥ್ಸರಸ್ಯ ಯದ್ದರ್ಶಪೂರ್ಣಮಾಸೌ

---

ಸೋಮೇನ । ಯಜತೇ । ರಥಸ್ಪಷ್ಟ ಇತಿ ರಥ–ಸ್ಪಷ್ಟೇ । ಏವ । ಅವಸಾನ ಇತ್ಯವ–ಸಾನೇ । ವರೇ । ದೇವಾನಾಮ್ । ಅವೇತಿ । ಸ್ಯತಿ । ಏತಾನಿ । ವೈ । ಅಂಗಾಪರೂಗ್ಂಷೀತ್ಯಂಗಾ–ಪರೂಗ್ಂಷಿ । ಸಂವಥ್ಸರಸ್ಯೇತಿ ಸಂ–ವಥ್ಸರಸ್ಯ । ಯತ್। ದರ್ಶಪೂರ್ಣಮಾಸಾವಿತಿ ದರ್ಶ–ಪೂರ್ಣಮಾಸೌ ।

---

| | |
|---|---|
| ಸೋಮೇನ ಯಜತೇ | ಸೋಮಯಾಗವನ್ನು ಮಾಡುತ್ತಾನೆಯೋ [ಅವನು] |
| ದೇವಾನಾಮ್ ರಥಸ್ಪಷ್ಟೇ ವರೇ ಅವಸಾನೇ ಅವಸ್ಯತಿ | ದೇವತೆಗಳಿಗೆ ಸಂಬಂಧಿಸಿದ–ದರ್ಶ ಪೂರ್ಣ ಮಾಸರಥದಿಂದ ಸುಲಭವಾಗಿ ತಿಳಿಯುವಂತಿರುವ– ಶ್ರೇಷ್ಠವಾದ ಮಾರ್ಗದಲ್ಲಿ [ಸೋಮ ಯಾಗವನ್ನು] ಅನುಷ್ಠಿಸಲು ನಿಶ್ಚಯಿಸಿದವನಾಗುತ್ತಾನೆ. |

**ದರ್ಶ–ಪೂರ್ಣಮಾಸಗಳ ಪ್ರಶಂಸೆ**

| | |
|---|---|
| ಯತ್ ದರ್ಶಪೂರ್ಣಮಾಸೌ | ದರ್ಶ–ಪೂರ್ಣಮಾಸಗಳು ಯಾವುವುಂಟೋ |
| ಏತಾನಿ ಸಂವಥ್ಸರಸ್ಯ ಅಂಗಾಪರೂಂಷಿ ವೈ | ಇವು ಸಂವಥ್ಸರದ ಅವಯುವಗಳೂ ಮಣಿಕಟ್ಟು ಮುಂತಾದ ಸಂಧಿಗಳು ಇದ್ದಂತೆ. |

ಯ ಏವಂ ವಿದ್ವಾನ್ದರ್ಶಪೂರ್ಣಮಾಸೌ ಯಜತೇಽಂಗಾ

ಪರೂಗ್ಂಷ್ಯೇವ ಸಂವಥ್ಸರಸ್ಯ ಪ್ರತಿ ದಧಾತ್ಯೇತೇ ವೈ

ಸಂವಥ್ಸರಸ್ಯ ಚಕ್ಷುಷೀ ಯದ್ದರ್ಶಪೂರ್ಣಮಾಸೌ

---

ಯಃ । ಏವಮ್ । ವಿದ್ವಾನ್ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಯಜತೇ । ಅಂಗಾಪರೂಗ್ಂಷೀತ್ಯಂಗಾ-ಪರೂಗ್ಂಷಿ । ಏವ । ಸಂವಥ್ಸರಸ್ಯೇತಿ ಸಂ-ವಥ್ಸರಸ್ಯ । ಪ್ರತೀತಿ । ದಧಾತಿ । ಏತೇ ಇತಿ । ವೈ । ಸಂವಥ್ಸರಸ್ಯೇತಿ ಸಂ-ವಥ್ಸರಸ್ಯ। ಚಕ್ಷುಷೀ ಇತಿ । ಯತ್ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ ।

---

| | |
|---|---|
| ಯಃ ಏವಮ್ ವಿದ್ವಾನ್ ದರ್ಶ ಪೂರ್ಣಮಾಸೌ ಯಜತೇ | ಹೀಗೆ ತಿಳಿದು ಯಾವನು ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸುವನೋ [ಅವನು] |
| ಸಂವಥ್ಸರಸ್ಯ ಅಂಗಾಪರೂಂಷಿ ಏವ ಪ್ರತಿದಧಾತಿ | ಸಂವಥ್ಸರದ ಅವಯವಾದಿಗಳನ್ನು/ ಅವಯುವದಂತಿರುವವುಗಳನ್ನು ಸರಿ ಯಾಗಿ ಅನುಷ್ಠಿಸಿದವನಾಗುತ್ತಾನೆ/ಸರಿ ಯಾಗಿ ಸ್ಥಾಪಿಸಿದವನಾಗುತ್ತಾನೆ. |

**ದರ್ಶ-ಪೂರ್ಣಮಾಸಗಳ ಪ್ರಶಂಸೆ**

| | |
|---|---|
| ಯತ್ ದರ್ಶಪೂರ್ಣಮಾಸೌ ಏತೇ ಸಂವಥ್ಸರಸ್ಯ ಚಕ್ಷುಷೀ | ಯಾವುವು ದರ್ಶ-ಪೂರ್ಣಮಾಸ ಗಳಾಗಿವೆಯೋ ಅವು ಸಂವತ್ಸರದ ಕಣ್ಣುಗಳಾಗಿವೆಯಷ್ಟೆ. |

---

ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸಿದ ನಂತರ ಸೋಮಯಾಗವನ್ನು ಅನುಷ್ಠಿಸಬೇಕೆಂಬುದನ್ನು ಇಲ್ಲಿ ಸುಂದರವಾದ ಹೋಲಿಕೆಯಿಂದ ತಿಳಿಸಿರುತ್ತಾರೆ.ದರ್ಶ-ಪೂರ್ಣಮಾಸಗಳು ದೇವತೆಗಳ ರಥವಿದ್ದಂತೆ. ಈ ರಥಮಾರ್ಗದ ಗುರಿ ದೇವಲೋಕ.

ಯ ಏವಂ ವಿದ್ವಾನ್ದರ್ಶಪೂರ್ಣಮಾಸೌ ಯಜತೇ ತಾಭ್ಯಾ ಮೇವ ಸುವರ್ಗಂ ಲೋಕಮನುಪಶ್ಯ [ಪಶ್ಯತಿ(೧)ಏಷಾ]

---

ಯಃ । ಏವಮ್ । ವಿದ್ವಾನ್ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಯಜತೇ । ತಾಭ್ಯಾಮ್ । ಏವ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಅನ್ವಿತಿ। ಪಶ್ಯತಿ । (೧) ।

---

| | |
|---|---|
| ಯಃ ಏವಮ್ ವಿದ್ವಾನ್ ದರ್ಶ ಪೂರ್ಣಮಾಸೌ ಯಜತೇ | ಹೀಗೆ ತಿಳಿದು ಯಾವನು ದರ್ಶ-ಪೂರ್ಣ ಮಾಸಗಳನ್ನು ಅನುಷ್ಠಿಸುತ್ತಾನೆಯೋ |
| ತಾಭ್ಯಾಮ್ ಏವ ಸುವರ್ಗಮ್ ಲೋಕಮ್ ಅನುಪಶ್ಯತಿ | [ಅವನು] ಕಣ್ಣುಗಳಂತಿರುವ ದರ್ಶ-ಪೂರ್ಣ ಮಾಸಗಳಿಂದ ಸುವರ್ಗಲೋಕವನ್ನು ಚೆನ್ನಾಗಿ ನೋಡುತ್ತಾನೆ/ಸ್ವರ್ಗವನ್ನು ಹೊಂದುವನು. |

---

ಇದರ ಮುಖ್ಯಸಾಧನ ಸೋಮಯಾಗ. ರಥವು ಸಂಚರಿಸಿ ಸವೆದಿರುವ ಮಾರ್ಗದಲ್ಲಿ ಸಂಚಾರವು ಸುಲಭವಾಗಿರುವಂತೆ ಯಜಮಾನನು ಪ್ರಕೃತಿಯಾಗಗಳಾದ ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸಿ, ಪ್ರಾಯಣೀಯೇಷ್ಟಿ ಮುಂತಾದ ಅಂಗಗಳಿಂದ ಕೂಡಿದ ಸೋಮಯಾಗವನ್ನು ಸೌಕರ್ಯದಿಂದ ಅನುಷ್ಠಿಸಬಲ್ಲವನಾಗುತ್ತಾನೆ. ಹೀಗಾಗಿ ಇಷ್ಟಿಗಳನ್ನು ಅನುಷ್ಠಿಸಿದ ಬಳಿಕ ಸೋಮಯಾಗವನ್ನು ಅನುಷ್ಠಿಸಿದರೆ ಯಜಮಾನನು ಶ್ರಮವಿಲ್ಲದೆ ದೇವಲೋಕಕ್ಕೆ ಹೋಗಲು ಸಮರ್ಥನಾಗುವನು.

ದರ್ಶ-ಪೂರ್ಣಮಾಸಗಳು ಸಂವತ್ಸರದ ಅವಯವಗಳಿದ್ದಂತೆ. ಹನ್ನೆರಡು ಅಮಾವಾಸ್ಯೇಷ್ಟಿಗಳು ಅಂಗಗಳಂತೆ. ಹನ್ನೆರಡು ಪೂರ್ಣಮಾಸೇಷ್ಟಿಗಳು ಅವಯವ ಸಂಧಿಗಳಿದ್ದಂತೆ. ಹೀಗೆ ಅರಿತು ಮಾಡಿದ ಅನುಷ್ಠಾನ ಸರಿಯಾದ ಅನುಷ್ಠಾನ/ ಈ ಅನುಷ್ಠಾನದಿಂದ ಸಂವತ್ಸರದ ಅವಯವಗಳನ್ನು ಸರಿಯಾಗಿ ಸ್ಥಾಪಿಸಿದಂತಾಗುತ್ತದೆ.

ತ್ಯೇಷಾ ವೈ ದೇವಾನಾಂ ವಿಕ್ರಾಂತಿರ್ಯದ್ದರ್ಶಪೂರ್ಣ

ಮಾಸೌ ಯ ಏವಂ ವಿದ್ವಾನ್ದರ್ಶಪೂರ್ಣಮಾಸೌ ಯಜತೇ

ದೇವಾನಾಮೇವ ವಿಕ್ರಾಂತಿಮನು ವಿಕ್ರಮತ

---

ಏಷಾ । ವೈ । ದೇವಾನಾಮ್ । ವಿಕ್ರಾಂತಿರಿತಿ ವಿ-ಕ್ರಾಂತಿಃ । ಯತ್ । ದರ್ಶ

ಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಯಃ । ಏವಮ್ । ವಿದ್ವಾನ್ । ದರ್ಶ

ಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಯಜತೇ । ದೇವಾನಾಮ್ । ಏವ ।

ವಿಕ್ರಾಂತಿಮಿತಿ ವಿ-ಕ್ರಾಂತಿಮ್ । ಅನು । ವೀತಿ । ಕ್ರಮತೇ ।

---

## ಮುಂದುವರೆದ ಪ್ರಶಂಸೆ

| | |
|---|---|
| ಯತ್ ದರ್ಶಪೂರ್ಣಮಾಸೌ ಏಷಾ ದೇವಾನಾಮ್ ವಿಕ್ರಾಂತಿಃ ವೈ | ದರ್ಶ-ಪೂರ್ಣಮಾಸಗಳೆಂಬುವುವು ಯಾವುದುಂಟೋ ಇದು ದೇವತೆಗಳ ಪರಾಕ್ರಮ/ಸರ್ವತೋಮುಖವಾದ ಮುನ್ನಡೆ ಆಗಿದೆ. |
| ಯಃ ಏವಮ್ ವಿದ್ವಾನ್ ದರ್ಶ ಪೂರ್ಣಮಾಸೌ ಯಜತೇ | ಹೀಗೆ ತಿಳಿದು ಯಾವ ಯಜಮಾನನು ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸುವನೋ ಅವನು |
| ದೇವಾನಾಮ್ ವಿಕ್ರಾಂತಿಮ್ ಏವ ಅನು ವಿಕ್ರಮತೇ | ದೇವತೆಗಳ ಪರಾಕ್ರಮವನ್ನು/ಸರ್ವತೋಮುಖವಾದ ಆಕ್ರಮಣವನ್ನು ಅನುಸರಿಸಿ ತಾನೂ ವಿಜಯಿಯಾಗುವನು. |

---

ದರ್ಶ-ಪೂರ್ಣಮಾಸಗಳು ಸಂವತ್ಸರದ ಕಣ್ಣುಗಳಂತಿವೆ. ಈ ರೀತಿ ಅರಿತು ಯಾವ ಯಜಮಾನನು ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸುವನೋ ಅವನು ಈ ಇಷ್ಟಿರೂಪನೇತ್ರಗಳಿಂದ ಸ್ವರ್ಗಲೋಕವನ್ನು ಚೆನ್ನಾಗಿ ಕಾಣುವನು.

ಏಷ ವೈ ದೇವಯಾನಃ ಪಂಥಾ ಯದ್ದರ್ಶಪೂರ್ಣಮಾಽಸೌ

ಯ ಏವಂ ವಿದ್ವಾನ್ದರ್ಶಪೂರ್ಣಮಾಸೌ ಯಜತೇ ಯ ಏವ

ದೇವಯಾನಃ ಪಂಥಾಸ್ತಗ್ಂ ಸಮಾರೋಹತ್ಯೇ

---

ಏಷಃ । ವೈ । ದೇವಯಾನ ಇತಿ ದೇವ-ಯಾನಃ । ಪಂಥಾಃ । ಯತ್ । ದರ್ಶಪೂರ್ಣ ಮಾಸಾವಿತಿ ದರ್ಶ-ಪೂರ್ಣಮಾಸೌ । ಯಃ । ಏವಮ್ । ವಿದ್ವಾನ್ । ದರ್ಶಪೂರ್ಣ ಮಾಸಾವಿತಿ ದರ್ಶ-ಪೂರ್ಣಮಾಸೌ । ಯಜತೇ । ಯಃ । ಏವ । ದೇವಯಾನ ಇತಿ ದೇವ-ಯಾನಃ । ಪಂಥಾಃ । ತಮ್ । ಸಮಾರೋಹತೀತಿ ಸಂ-ಆರೋಹತಿ ।

---

## ಮುಂದುವರೆದ ಮತ್ತೊಂದು ಬಗೆಯ ಪ್ರಶಂಸೆ

| | |
|---|---|
| ಯತ್ ದರ್ಶಪೂರ್ಣಮಾಸೌ ಏಷಃ ದೇವಯಾನಃ ಪಂಥಾಃ ವೈ | ಯಾವ ದರ್ಶ-ಪೂರ್ಣಮಾಸಗಳುಂಟೋ ಇವುಗಳು ದೇವತೆಗಳು ಸಂಚರಿಸುವ ಮಾರ್ಗವಾಗಿವೆ. |
| ಯಃ ಏವಮ್ ವಿದ್ವಾನ್ ದರ್ಶ ಪೂರ್ಣಮಾಸೌ ಯಜತೇ | ಹೀಗೆ ತಿಳಿದು ಯಾವ ಯಜಮಾನನು ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸು ತ್ತಾನೆಯೋ[ಆ ಯಜಮಾನನು] |
| ಯಃ ದೇವಯಾನಃ ಪಂಥಾಃ ತಮ್ ಸಮಾರೋಹತಿ ಏವ | ಯಾವುದು ದೇವತೆಗಳ ಸಂಚಾರ ಮಾರ್ಗ /ಸ್ವರ್ಗಮಾರ್ಗವಾಗಿದೆಯೋ ಆ ಮಾರ್ಗ ದಲ್ಲಿ ಸ್ವರ್ಗಕ್ಕೆ ಏರುತ್ತಾನೆ. |

---

ಈ ಇಷ್ಟಿಗಳು ದೇವತೆಗಳ ಪರಾಕ್ರಮರೂಪವಾಗಿವೆ. ಮುನ್ನಡೆಯ ರೂಪಗಳಾಗಿವೆ. ಹೀಗಾಗಿ ಸರ್ವಕಾಮಾರ್ಥವಾಗಿ ಈ ದರ್ಶ-ಪೂರ್ಣಮಾಸಗಳು ವಿಹಿತವಾಗಿವೆ. ಈ ಯಾಗದಿಂದ ತೃಪ್ತರಾದ ದೇವತೆಗಳ ಅನುಗ್ರಹದಿಂದ ಯಜಮಾನನು ಆ ದೇವತೆ ಗಳಂತೆಯೇ ಸರ್ವತ್ರ ವಿಜಯಿಯಾಗುವನು.

ತೌ ವೈ ದೇವಾನಾಗ್ಂ ಹರೀ ಯದ್ದರ್ಶಪೂರ್ಣಮಾಸೌ ಯ ಏವಂ ವಿದ್ವಾನ್ದರ್ಶಪೂರ್ಣಮಾಸೌ ಯಜತೇ ಯಾವೇವ ದೇವಾನಾಗ್ಂ ಹರೀ ತಾಭ್ಯಾ[ತಾಭ್ಯಾಮ್(೨)ಏವ]ಮೇವೈಭ್ಯೋ ಹವ್ಯಂ ವಹತ್ಯೇ

---

ಏತೌ । ವೈ । ದೇವಾನಾಮ್ । ಹರೀ ಇತಿ । ಯತ್ । ದರ್ಶಪೂರ್ಣಮಾಸಾವಿತಿ ದರ್ಶ–ಪೂರ್ಣಮಾಸೌ । ಯಃ । ಏವಮ್ । ವಿದ್ವಾನ್ । ದರ್ಶಪೂರ್ಣಮಾಸಾವಿತಿ ದರ್ಶ–ಪೂರ್ಣಮಾಸೌ । ಯಜತೇ । ಯೌ । ಏವ । ದೇವಾನಾಮ್ । ಹರೀ ಇತಿ । ತಾಭ್ಯಾಮ್ । (೨) । ಏವ । ಏಭ್ಯಃ । ಹವ್ಯಮ್ । ವಹತಿ ।

---

### ಇನ್ನೊಂದು ರೀತಿಯ ಪ್ರಶಂಸೆ

| | |
|---|---|
| ಯತ್ ದರ್ಶಪೂರ್ಣಮಾಸೌ | ಯಾವ ದರ್ಶ–ಪೂರ್ಣಮಾಸಗಳುಂಟೋ |
| ದೇವಾನಾಮ್ ಏತೌ ಹರೀ ವೈ | ಇವುಗಳು ದೇವತೆಗಳ ಕುದುರೆಗಳಾಗಿವೆಯಷ್ಟೆ./ಹವ್ಯವನ್ನು ಒಯ್ಯುವ ಕುದುರೆಗಳಂತೆ ಇವೆಯಷ್ಟೆ. |
| ಯಃ ಏವಮ್ ವಿದ್ವಾನ್ ದರ್ಶ ಪೂರ್ಣಮಾಸೌ ಯಜತೇ | ಹೀಗೆ ತಿಳಿದವನಾಗಿ ಯಾವ ಯಜಮಾನನು ದರ್ಶ–ಪೂರ್ಣಮಾಸಯಾಗವನ್ನು ಅನುಷ್ಠಿಸುವನೋ |
| ದೇವಾನಾಮ್ ಯೌ ಏವ ಹರೀ ಏಭ್ಯಃ ತಾಭ್ಯಾಮ್ ಏವ ಹವ್ಯಮ್ ವಹತಿ | ದೇವತೆಗಳಿಗೆ ಹವ್ಯವನ್ನು ಒಯ್ಯುವ ಕುದುರೆಗಳುಂಟೋ ದೇವತೆಗಳಿಗೆ ಆ ದರ್ಶ ಪೂರ್ಣಮಾಸಯಾಗರೂಪವಾದ ಕುದುರೆಗಳಿಂದಲೇ ಹವ್ಯವನ್ನು ಒಯ್ಯುತ್ತಾನೆ. |

ತದ್ವೈ ದೇವಾನಾಮಾಸ್ಯಂ ಯದ್ದರ್ಶಪೂರ್ಣಮಾಸೌ ಯ

ಏವಂ ವಿದ್ವಾನ್ದರ್ಶಪೂರ್ಣಮಾಸೌ ಯಜತೇ ಸಾಕ್ಷಾದೇವ

ದೇವಾನಾಮಾಸ್ಯೇ ಜುಹೋ-

---

ಏತತ್ । ವೈ । ದೇವಾನಾಮ್ । ಆಸ್ಯಮ್ । ಯತ್ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಯಃ । ಏವಮ್ । ವಿದ್ವಾನ್ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಯಜತೇ । ಸಾಕ್ಷಾದಿತಿ ಸ-ಅಕ್ಷಾತ್ । ಏವ । ದೇವಾನಾಮ್। ಆಸ್ಯೇ । ಜುಹೋತಿ ।

---

**ದರ್ಶ-ಪೂರ್ಣಮಾಸಗಳನ್ನು ದೇವತೆಗಳ ಮುಖವೆಂದು ಸ್ತುತಿ**

| | |
|---|---|
| ಯತ್ ದರ್ಶಪೂರ್ಣಮಾಸೌ | ಯಾವ ದರ್ಶಪೂರ್ಣಮಾಸಗಳುಂಟೋ |
| ಏತತ್ ದೇವಾನಾಮ್ ಆಸ್ಯಮ್ ವೈ | ಇದು ದೇವತೆಗಳ ಮುಖವಷ್ಟೆ. |
| ಯಃ ಏವಮ್ ವಿದ್ವಾನ್ ದರ್ಶ ಪೂರ್ಣಮಾಸೌ ಯಜತೇ | ಹೀಗ ತಿಳಿದು ಯಾವ ಯಜಮಾನನು ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸುವನೋ |
| ದೇವಾನಾಮ್ ಆಸ್ಯೇ ಏವ ಸಾಕ್ಷಾತ್ ಜುಹೋತಿ | ನೇರವಾಗಿ ದೇವತೆಗಳ ಬಾಯಿಯಲ್ಲಿಯೇ ಹವಿಸ್ಸನ್ನು ಸಮರ್ಪಿಸಿದವನಾಗುತ್ತಾನೆ. |

---

**'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ'** ಎಂಬ ವಾಕ್ಯದಂತೆ ಇವುಗಳಿಗೆ ಸ್ವರ್ಗವು ಫಲವಾಗಿದೆ. ದರ್ಶ-ಪೂರ್ಣಮಾಸಗಳನ್ನು ದೇವತೆಗಳು ಸಂಚರಿಸುವ ಮಾರ್ಗವೆಂದು ತಿಳಿದು ಯಾವನು ಅನುಷ್ಠಿಸುತ್ತಾನೆಯೋ, ಅವನು ದೇವತೆಗಳ ಮಾರ್ಗದಲ್ಲಿಯೇ ಸ್ವರ್ಗವನ್ನು ಏರುವನು.

ತ್ರ್ಯೇಷ ವೈ ಹವಿರ್ಧಾನೀ ಯೋ ದರ್ಶಪೂರ್ಣಮಾಸಯಾಜೀ

ಸಾಯಂಪ್ರಾತರಗ್ನಿಹೋತ್ರಂ ಜುಹೋತಿ ಯಜತೇ

ದರ್ಶಪೂರ್ಣಮಾಸಾ-

---

ಏಷಃ । ವೈ । ಹವಿರ್ಧಾನೀತಿ ಹವಿಃ-ಧಾನೀ । ಯಃ । ದರ್ಶಪೂರ್ಣಮಾಸಯಾಜೀತಿ ದರ್ಶಪೂರ್ಣಮಾಸ-ಯಾಜೀ । ಸಾಯಂಪ್ರಾತರಿತಿ ಸಾಯಂ-ಪ್ರಾತಃ । ಅಗ್ನಿಹೋತ್ರಮಿತ್ಯಗ್ನಿ-ಹೋತ್ರಮ್ । ಜುಹೋತಿ । ಯಜತೇ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ ।

---

**ದರ್ಶ-ಪೂರ್ಣಮಾಸಗಳಿಗೆ ಸೋಮಯಾಗದ ಹೋಲಿಕೆ; ಪ್ರಶಂಸೆ.**

| | |
|---|---|
| ಯಃ ದರ್ಶಪೂರ್ಣಮಾಸಯಾಜೀ | ಯಾವನು ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸುವನೋ |
| ಏಷಃ ಹವಿರ್ಧಾನೀ ವೈ | ಈತನೇ ಸೋಮಯಾಗವನ್ನು ಮಾಡಿದವನಾಗುತ್ತಾನೆ.* |
| ಸಾಯಂಪ್ರಾತಃ ಅಗ್ನಿಹೋತ್ರಮ್ ಜುಹೋತಿ | [ಆಧಾನಾನಂತರ] ಸಾಯಂಕಾಲ-ಪ್ರಾತಃ ಕಾಲಗಳಲ್ಲಿ ಅಗ್ನಿಹೋತ್ರಹೋಮವನ್ನು ಮಾಡುತ್ತಾನೆ. |
| ದರ್ಶಪೂರ್ಣಮಾಸೌ ಯಜತೇ | ಹದಿನೈದು ದಿನಗಳಿಗೊಮ್ಮೆ ದರ್ಶ-ಪೂರ್ಣಮಾಸಯಾಗವನ್ನು ಅನುಷ್ಠಿಸುತ್ತಾನೆ. |

---

ದರ್ಶಪೂರ್ಣಮಾಸಗಳು ದೇವತೆಗಳಿಗೆ ಹವ್ಯವನ್ನು ಒಯ್ಯುವ ಕುದುರೆಗಳಂತಿವೆ.

---

* ಸೋಮಯಾಗದ ಹವಿಸ್ಸುಗಳನ್ನು ಇಡುವ ಮಂಟಪ **ಹವಿರ್ಧಾನಮಂಟಪ**. ಇದನ್ನು ಹೊಂದಿದವನು **ಹವಿರ್ಧಾನೀ** ಅಥವಾ **ಸೋಮಯಾಜಿ**.

ವಹರಹರ್ ಹವಿರ್ಧಾನಿನಾಗ್ಂ ಸುತೋ ಯ ಏವಂ

ವಿದ್ವಾನ್ದರ್ಶಪೂರ್ಣಮಾಸೌ ಯಜತೇ ಹವಿರ್ಧಾನ್ಯಸ್ಮೀತಿ

ಸರ್ವಮೇವಾಸ್ಯ ಬರ್ಹಿಷ್ಯಂ ದತ್ತಂ ಭವತಿ

---

ಅಹರಹರಿತ್ಯಹಃ-ಅಹಃ । ಹವಿರ್ಧಾನಿನಾಮಿತಿ ಹವಿಃ-ಧಾನಿನಾಮ್ । ಸುತಃ । ಯಃ। ಏವಮ್ । ವಿದ್ವಾನ್ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ। ಯಜತೇ। ಹವಿರ್ಧಾನೀತಿ ಹವಿಃ-ಧಾನೀ । ಅಸ್ಮಿ । ಇತಿ । ಸರ್ವಮ್ । ಏವ । ಅಸ್ಯ । ಬರ್ಹಿಷ್ಯಮ್ । ದತ್ತಮ್ । ಭವತಿ ।

---

| | |
|---|---|
| ಅಹರಹಃ ಹವಿರ್ಧಾನಿನಾಮ್ ಸುತಃ | [ಹೀಗೆ ಮಾಡುವುದರಿಂದ] ರಾತ್ರಿ ಹಗಲೂ ಸೋಮಯಾಜಿಗಳು ಮಾಡಬೇಕಾದ ಸೋಮಾಭಿಷವವು ನಡೆದಂತೆಯೇ ಆಗುತ್ತದೆ. |
| ಯಃ ಹವಿರ್ಧಾನೀ ಅಸ್ಮಿ ಇತಿ ಏವಮ್ ವಿದ್ವಾನ್ ದರ್ಶಪೂರ್ಣಮಾಸೌ ಯಜತೇ | ಹೀಗೆ ಯಾವ ಯಜಮಾನನು ತಾನು ಸೋಮಯಾಜಿಯಾಗುವೆನೆಂದು ಭಾವಿಸಿ ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸುವನೋ |
| ಅಸ್ಯ ದತ್ತಮ್ ಸರ್ವಮ್ ಏವ ಬರ್ಹಿಷ್ಯಮ್ ಭವತಿ | ಈ ಯಜಮಾನನಿಗೆ ಸೋಮಯಾಗದಲ್ಲಿ ಕೊಡಬೇಕಾದ ಸೋಮರೂಪವಾದ ಹವಿಸ್ಸೆಲ್ಲವೂ ಕೊಡಲ್ಪಟ್ಟಂತೆಯೇ ಆಗುತ್ತದೆ. |

---

ಈ ಇಷ್ಟಿಗಳು ಬೇಗಬೇಗನೆ ಅಂದರೆ ಅಲ್ಪಕಾಲಾವಧಿಯಲ್ಲಿಯೇ ಹವ್ಯವನ್ನು ಒದಗಿಸುವುದರಿಂದ ಕುದುರೆಗಳಂತೆ ಎಂದು ಸ್ತುತಿಸಲಾಗಿದೆ.

ದರ್ಶ-ಪೂರ್ಣಮಾಸಗಳು ದೇವತೆಗಳ ಮುಖವಿದ್ದಂತೆ.ಹೀಗಾಗಿ ನೇರವಾಗಿ ಮುಖದಲ್ಲಿಯೇ ಹವಿಸ್ಸನ್ನು ಸಮರ್ಪಿಸಿ, ತೃಪ್ತಿಯನ್ನು ಉಂಟುಮಾಡಿದಂತೆ ಆಗುತ್ತದೆಯೆಂದು ದರ್ಶ-ಪೂರ್ಣಮಾಸಗಳ ಪ್ರಶಂಸೆಯು ಇಲ್ಲಿದೆ.

ದೇವಾ ವಾ ಅಹ[ಅಹಃ(೩)ಯಜ್ಞಿಯಂ] ರ್ಯಜ್ಞಿಯಂ ನಾವಿಂ

ದನ್ತೇ ದರ್ಶಪೂರ್ಣಮಾಸಾವಪುನನ್ತೌ ವಾ ಏತೌ ಪೂತೌ

ಮೇಧ್ಯೌ ಯದ್ದರ್ಶಪೂರ್ಣಮಾಸೌ

---

ದೇವಾಃ । ವೈ । ಅಹಃ । (೩) । ಯಜ್ಞಿಯಮ್ । ನ । ಅವಿಂದನ್ನ್ । ತೇ । ದರ್ಶ

ಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಅಪುನನ್ನ್ । ತೌ । ವೈ । ಏತೌ।

ಪೂತೌ । ಮೇಧ್ಯೌ । ಯತ್ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ ।

---

### *ದರ್ಶ-ಪೂರ್ಣಮಾಸಗಳು ಯಾಗಾರ್ಹ;ಪವಿತ್ರ;ಪ್ರಶಂಸೆ

| | |
|---|---|
| ದೇವಾಃ ಯಜ್ಞಿಯಮ್ ಅಹಃ ನ ಅವಿಂದನ್ನ್ | ದೇವತೆಗಳು ಯಜ್ಞಕ್ಕೆ ಅರ್ಹವಾದ ದಿನವನ್ನು ಹೊಂದಲಿಲ್ಲ. |
| ತೇ ದರ್ಶಪೂರ್ಣಮಾಸೌ ಅಪುನನ್ನ್ | ಆ ದೇವತೆಗಳು ದರ್ಶ-ಪೂರ್ಣಮಾಸ ಗಳನ್ನು[ದಿನಗಳನ್ನು] ಶುದ್ಧಿಗೊಳಿಸಿದರು. [ಯಜ್ಞಾರ್ಹಗಳೆಂದು ನಿರ್ಣಯಿಸಿದರು] |
| ಯತ್ ದರ್ಶಪೂರ್ಣಮಾಸೌ ತೌ ಏತೌ ಪೂತೌ ವೈ ಮೇಧ್ಯೌ | ಯಾವ ದರ್ಶ-ಪೂರ್ಣಮಾಸಗಳುಂಟೋ ಅವುಗಳು ಪವಿತ್ರವೂ, ಯಜ್ಞಾರ್ಹವೂ ಆಗಿವೆ. |

---

ಆಧಾನದ ಅನಂತರ ಒಂದು ವರ್ಷ ಅಗ್ನಿಹೋತ್ರಹೋಮಗಳನ್ನು ಮಾಡಿ ಕೊಂಡಿರಬೇಕು. ಅನಂತರ ಒಂದು ವರ್ಷ ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸಬೇಕು. ಅನಂತರ ಪಶುಯಾಗವನ್ನಾಗಲೀ,ಸೋಮಯಾಗವನ್ನಾಗಲೀ ಮಾಡಬೇಕು.ಇದು ಒಂದು ಪಕ್ಷ.ಹೀಗೆ ಮಾಡುವ ಯಜಮಾನನು ತಾನು ಸೋಮಯಾಜಿಯಾಗುವೆನೆಂದು ಭಾವಿಸಿ, ಯಾಗವನ್ನು ಅನುಷ್ಠಿಸುವುದರಿಂದ ಸೋಮಯಾಗವನ್ನು ಮಾಡಿ ದೇವತೆಗಳನ್ನು ತೃಪ್ತಿಪಡಿಸಿ ದಂತೆಯೇ ಆಗುತ್ತದೆ. ಶ್ರುತಿಯಲ್ಲಿಯೇ ಇನ್ನೊಂದು ಕಡೆ **ಯ ಏವಂ ವಿದ್ವಾನಗ್ನಿಹೋತ್ರಂ**

---

*ಈ ಶಬ್ದಗಳು ಅಮಾವಾಸ್ಯೆ, ಪೂರ್ಣಿಮೆ ಈ ತಿಥಿಗಳನ್ನು ಹೇಳುತ್ತವೆ. ಇಷ್ಟಿಗಳನ್ನಲ್ಲ.

ಯ ಏವಂ ವಿದ್ವಾನ್ದರ್ಶಪೂರ್ಣಮಾಸೌ ಯಜತೇ ಪೂತಾವೇ

ವೈನೌ ಮೇಧ್ಯೌ ಯಜತೇ ನಾಮಾವಾಸ್ಯಾಯಾಂ ಚ

ಪೌರ್ಣಮಾಸ್ಯಾಂ ಚ ಸ್ತ್ರಿಯಮುಪೇಯಾ-

---

ಯಃ । ಏವಮ್ । ವಿದ್ವಾನ್ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಯಜತೇ । ಪೂತೌ । ಏವ । ಏನೌ । ಮೇಧ್ಯೌ । ಯಜತೇ । ನ । ಅಮಾವಾಸ್ಯಾಯಾಮಿತ್ಯಮಾ-ವಾಸ್ಯಾಯಾಮ್ । ಚ । ಪೌರ್ಣಮಾಸ್ಯಾಮಿತಿ ಪೌರ್ಣ-ಮಾಸ್ಯಾಮ್ । ಚ। ಸ್ತ್ರಿಯಮ್। ಉಪೇತಿ । ಇಯಾತ್ ।

---

| | |
|---|---|
| ಯಃ ಏವಮ್ ವಿದ್ವಾನ್ ದರ್ಶ ಪೂರ್ಣಮಾಸೌ ಯಜತೇ | ಯಾವ ಯಜಮಾನನು ಹೀಗೆ ತಿಳಿದು [ತಿಥಿಶುದ್ಧಿಯನ್ನರಿತು] ದರ್ಶ-ಪೂರ್ಣ ಮಾಸಗಳನ್ನು ಅನುಷ್ಠಿಸುವನೋ |
| ಪೂತೌ ಏವ ಏನೌ ಮೇಧ್ಯೌ ಯಜತೇ | ಪವಿತ್ರವೂ, ಯಜ್ಞಾರ್ಹವೂ ಆಗಿರುವ ಈ ದರ್ಶ-ಪೂರ್ಣಮಾಸತಿಥಿಗಳನ್ನು ಹೊಂದಿ ಯಾಗವನ್ನು ಮಾಡುತ್ತಾನೆ/ಹೊಂದಿ ಯಾಗ ವನ್ನು ಮಾಡಿದಂತಾಗುತ್ತದೆ. |

**ಪುರುಷಾರ್ಥವಾದ ಸ್ತ್ರೀಸಂಗನಿಷೇಧ;ಅನಿಷ್ಟ**

| | |
|---|---|
| ಅಮಾವಾಸ್ಯಾಯಾಮ್ ಚ ಪೌರ್ಣ ಮಾಸ್ಯಾಮ್ ಚ ಸ್ತ್ರಿಯಮ್ ನ ಉಪೇಯಾತ್ | ಅಮಾವಾಸ್ಯೆಯಲ್ಲಿಯಾಗಲೀ, ಹುಣ್ಣಿಮೆ ಯಲ್ಲಿಯಾಗಲೀ ಸ್ತ್ರೀಸಂಭೋಗವನ್ನು ಮಾಡಬಾರದು. |

---

ಜುಹೋತಿ ಯಾವದಗ್ನಿಷ್ಟೋಮೇನೋಪಾಪ್ನೋತಿ ತಾವದುಪಾಪ್ನೋತಿ' ಮೊದಲಾಗಿ ಹೇಳಲಾಗಿದೆ. ಆದರಂತೆಯೇ ಇಲ್ಲಿಯೂ ಪ್ರಶಂಸೆ ಇದೆ.

ದರ್ಶಪೂರ್ಣಮಾಸಯಾಗಗಳನ್ನು ಅನುಷ್ಠಿಸಲು ಅಮಾವಾಸ್ಯೆ-ಪೂರ್ಣಿಮೆಗಳು ಶ್ರೇಷ್ಠವೆಂದು ಈ ಉಪಾಖ್ಯಾನದಲ್ಲಿ ಹೇಳಿದೆ. ಬೇರೆ ಕಡೆಗಳಲ್ಲಿ ದರ್ಶ-ಪೂರ್ಣಮಾಸಪದಗಳು

ದ್ಯದುಪೇಯಾನ್ನಿರಿಂದ್ರಿಯಃ ಸ್ಯಾಥ್ಸೋಮಸ್ಯ ವೈ

ರಾಜ್ಞೋಽರ್ಧಮಾಸಸ್ಯ ರಾತ್ರಯಃ ಪತ್ನಯಃ ಆಸ-

---

ಯತ್ । ಉಪೇಯಾದಿತ್ಯುಪ-ಇಯಾತ್ । ಯತ್ । ನಿರಿಂದ್ರಿಯ ಇತಿ ನಿಃ-ಇಂದ್ರಿಯಃ। ಸ್ಯಾತ್ । ಸೋಮಸ್ಯ । ವೈ । ರಾಜ್ಞಃ । ಅರ್ಧಮಾಸಸ್ಯೇತ್ಯರ್ಧ-ಮಾಸಸ್ಯ । ರಾತ್ರಯಃ। ಪತ್ನಯಃ । ಆಸನ್ । 

---

| | |
|---|---|
| ಯತ್ ಉಪೇಯಾತ್ ನಿರಿಂದ್ರಿಯಃ ಸ್ಯಾತ್ | ಒಂದು ವೇಳೆ ಹಾಗೆ ಸಂಭೋಗ ಮಾಡಿದರೆ ನಿರ್ವೀರ್ಯನಾಗುತ್ತಾನೆ. |

**ಅಮಾವಾಸ್ಯೆ-ಪೂರ್ಣಿಮೆಗಳು ಯಾಗಾರ್ಹ;ಉಪಾಖ್ಯಾನ**

| | |
|---|---|
| ಸೋಮಸ್ಯ ವೈ ರಾಜ್ಞಃ ಅರ್ಧ ಮಾಸಸ್ಯ ರಾತ್ರಯಃ ಪತ್ನಯಃ ಆಸನ್ | ರಾಜನಾದ ಸೋಮನಿಗೆ *ಅರ್ಧಮಾಸ ರಾತ್ರಿದೇವತೆಗಳು ಪತ್ನಿಯರಾಗಿದ್ದರು. |

---

ಕರ್ಮಪರವಾಗಿವೆ.ಆದರೆ ಇಲ್ಲಿ ಆ ಪದಗಳು ಅಮಾವಾಸ್ಯಾ ಮತ್ತು ಪೂರ್ಣಿಮೆತಿಥಿಗಳು ಎಂಬ ಅರ್ಥವನ್ನು ಕೊಡುತ್ತವೆ.

ಅಮಾವಾಸ್ಯಾಶಬ್ದದ ನಿರ್ವಚನವು ಹೀಗೆ ಇದೆ; ಸೂರ್ಯಾಚಂದ್ರಮಸೌ **ಅಮಾ**=ಸಹ; **ವಸತಃ** ಇತಿ **'ಅಮಾವಾಸ್ಯಾ'** ಸೂರ್ಯಚಂದ್ರರು ಸಮೀಪದಲ್ಲಿರುವ ದಿನ. **'ದರ್ಶಃ ಸೂರ್ಯೇಂದುಸಂಗಮಃ,'** ಎಂದು ಕೋಶವಚನವಿದೆ. **'ಅಮಾ ವೈ ನೋ ಅದ್ಯ ವಸು ವಸತಿ',** ಎಂಬ ಮಾತಿನಂತೆ ಅಂತರ್ಹಿತನಾಗಿದ್ದ ದೇವೇಂದ್ರನನ್ನು ಪಿತೃಗಳು ಕರೆತಂದಾಗ ದೇವತೆಗಳು ಈ ದಿನ ನಮ್ಮ ವಸು(ಧನ)ವಾಗಿರುವ ದೇವೇಂದ್ರನು ಇಲ್ಲಿಯೇ ಜೊತೆಯಲ್ಲಿಯೇ (ಅಮಾ)ಇದ್ದಾನೆ' ಎಂದರು. ಹೀಗೆ **'ಅಮಾವಾಸ್ಯಾ'** ಶಬ್ದವು ನಿಷ್ಪನ್ನವಾಯಿತು. ಇದು ಶ್ರೌತನಿರ್ವಚನ.

---

*ಹುಣ್ಣಿಮೆಯು ಅಂತ್ಯವಾಗಿರುವ ತಿಥಿಗಳ ಒಂದು ಸಮೂಹ; ಅಮಾವಾಸ್ಯೆಯು ಅಂತ್ಯವಾಗಿರುವ ತಿಥಿಗಳ ಇನ್ನೊಂದು ಸಮೂಹ.

ನ್ಯಾಸಾಮಮಾವಾಸ್ಯಾಂ ಚ ಪೌರ್ಣಮಾಸೀಂ ಚ ನೋಪೈ

[ನೋಪೈತ್(ಳ) ತೇ..]ತ್ತೇ ಏನಮಭಿ ಸಮನಹ್ಯೇತಾಂ ತಂ

ಯಕ್ಷ್ಮ ಆರ್ಚ್ಛ-

---

ತಾಸಾಮ್ । ಅಮಾವಾಸ್ಯಾಮಿತ್ಯಮಾ-ವಾಸ್ಯಾಮ್ । ಚ । ಪೌರ್ಣಮಾಸೀಮಿತಿ ಪೌರ್ಣ-ಮಾಸೀಮ್ । ಚ । ನ । ಉಪೇತಿ । ಐತ್ ।(ಳ)। ತೇ ಇತಿ । ಏನಮ್ । ಅಭಿ । ಸಮಿತಿ। ಅನಹ್ಯೇತಾಮ್ । ತಮ್ । ಯಕ್ಷ್ಮಃ । ಆರ್ಛತ್ ।

---

| | |
|---|---|
| ತಾಸಾವ್ ಅವಾಮಾವಾಸ್ಯಾವ್ ಚ ಪೌರ್ಣವಾಸೀವ್ ಚ ನ ಉಪೈತ್ | ಸೋಮರಾಜನು ಅವರಲ್ಲಿ ಅಮಾವಾಸ್ಯೆ-ಪೌರ್ಣಮಾಸಿಗಳನ್ನು ಸಂಭೋಗಿಸದೆ ಬಿಟ್ಟುಬಿಟ್ಟನು. |
| ತೇ ಏನಮ್ ಅಭಿ ಸಮನಹ್ಯೇತಾಮ್ | ಆ ಪೌರ್ಣಮಾಸೀ-ಅಮಾವಾಸ್ಯೆಯರಿಬ್ಬರೂ ಸೋಮನನ್ನು ಸಂಭೋಗಕ್ಕಾಗಿ ಬಲಾತ್ಕರಿಸಿದರು. |
| ತಮ್ ಯಕ್ಷ್ಮಃ ಆರ್ಛತ್ | [ಅತಿಸಂಭೋಗದಿಂದ] ಆ ಸೋಮರಾಜನನ್ನು ಯಕ್ಷ್ಮರೋಗವು ವ್ಯಾಪಿಸಿತು. |

---

**ಪೂರ್ಣಮಾಸಃ=ಚಂದ್ರಃ ಯಸ್ಯಾಮ್ ತಿಥೌ=ಸಾ ಪೌರ್ಣಮಾಸೀ** ಎಂಬುದು ಪೂರ್ಣಮಾಸೀ ಶಬ್ದದ ನಿರ್ವಚನ. ಅವುಗಳು ಯಾಗಕ್ಕೆ ತಕ್ಕ ತಿಥಿಗಳೆಂದು ಈ ಉಪಾಖ್ಯಾನದಲ್ಲಿ ಹೇಳಿದೆ.

ಅಮಾವಾಸ್ಯಾ-ಪೂರ್ಣಿಮಾಪ್ರಸಂಗದಿಂದ ಸಾರ್ವತ್ರಿಕವಾಗಿ ಇರುವ ನಿಷೇಧವನ್ನು ಇಲ್ಲಿ ಪುರುಷಾರ್ಥವಾಗಿ ಹೇಳಲಾಗಿದೆ. ಆ ದಿನಗಳಂದು ಸ್ತ್ರೀಸಂಗವನ್ನು ಮಾಡಿದರೆ ನಿರ್ವೀರ್ಯನಾಗುವನೆಂಬ ಅನಿಷ್ಟವನ್ನೂ ಹೇಳಲಾಗಿದೆ. ಸಾರ್ವತ್ರಿಕವಾದ ನಿಷೇಧವನ್ನು ಕ್ರತ್ವಂಗವಾಗಿ ಪುರುಷಾರ್ಥವಾಗಿ ಹೇಳಲಾಗಿದೆ.

ದ್ರಾಜಾನಂ ಯಕ್ಷ್ಮ ಆರದಿತಿ ತದ್ರಾಜಯಕ್ಷ್ಮಸ್ಯ ಜನ್ಮ ಯತ್ಪಾಪೀ
ಯಾನಭವತ್ತತ್ಪಾಪಯಕ್ಷ್ಮಸ್ಯ ಯಜ್ಜಾಯಾಭ್ಯಾಮವಿಂದತ್ತಜ್ಜಾ
ಯೇನ್ಯಸ್ಯ ಯ ಏವಮೇತೇಷಾಂ ಯಕ್ಷ್ಮಾಣಾಂ ಜನ್ಮ ವೇದ

---

ರಾಜಾನಮ್ । ಯಕ್ಷ್ಮಃ । ಆರತ್ । ಇತಿ । ತತ್ । ರಾಜಯಕ್ಷ್ಮಸ್ಯೇತಿ ರಾಜ-
ಯಕ್ಷ್ಮಸ್ಯ । ಜನ್ಮ । ಯತ್ । ಪಾಪೀಯಾನ್ । ಅಭವತ್ । ತತ್ । ಪಾಪಯಕ್ಷ್ಮಸ್ಯೇತಿ
ಪಾಪ-ಯಕ್ಷ್ಮಸ್ಯ । ಯತ್ । ಜಾಯಾಭ್ಯಾಮ್ । ಅವಿಂದತ್ । ತತ್ । ಜಾಯೇನ್ಯಸ್ಯ।
ಯಃ। ಏವಮ್ । ಏತೇಷಾಮ್ । ಯಕ್ಷ್ಮಾಣಾಮ್ । ಜನ್ಮ । ವೇದ ।

---

| | |
|---|---|
| ರಾಜಾನಮ್ ಯಕ್ಷ್ಮಃ ಆರತ್ ಇತಿ ತತ್ ರಾಜಯಕ್ಷ್ಮಸ್ಯ ಜನ್ಮ | ರಾಜನಾದ ಸೋಮನನ್ನು ಈ ರೋಗವು ಆಕ್ರಮಿಸಿದುದರಿಂದ ಉಂಟಾದುದೇ ಈ ರಾಜಯಕ್ಷ್ಮರೋಗಜನ್ಮವೃತ್ತಾಂತ. |
| ಯತ್ ಪಾಪೀಯಾನ್ ಅಭವತ್ | ಯಾವ ಕಾರಣದಿಂದ ಸೋಮನು ರೋಗ ಗ್ರಸ್ತನಾಗಿ ಕ್ಷೀಣನಾದನೋ |
| ತತ್ ಪಾಪಯಕ್ಷ್ಮಸ್ಯ [ಜನ್ಮ] | ಆದರಿಂದ ಪಾಪಯಕ್ಷ್ಮವು ಜನಿಸಿತು. |
| ಯತ್ ಜಾಯಾಭ್ಯಾಮ್ ಅವಿಂದತ್ | ಯಾವ ಕಾರಣದಿಂದ ಇಬ್ಬರು ಪತ್ನಿಯರಿಂದ ಈ ವ್ಯಾಧಿಯು ಜನಿಸಿತೋ |
| ತತ್ ಜಾಯೇನ್ಯಸ್ಯ [ಜನ್ಮ] | ಆ ಕಾರಣದಿಂದ ಹುಟ್ಟಿದ ರೋಗವು ಜಾಯೇನ್ಯವಾಯಿತು. |
| ಯಃ ಏವಮ್ ಏತೇಷಾಮ್ ಯಕ್ಷ್ಮಾಣಾಮ್ ಜನ್ಮ ವೇದ | ಯಾವನು ಹೀಗೆ ಈ ರೋಗಗಳ ಉತ್ಪತ್ತಿಯನ್ನು ತಿಳಿದಿರುತ್ತಾನೆಯೋ |

ನೈನಮೇತೇ ಯಕ್ಷ್ಮಾವಿಂದಂತಿ ಸ ಏತೇ ಏವ ನಮಸ್ಯನ್ನುಪಾಧಾ

ವತ್ತೇ ಅಬ್ರೂತಾಂ ವರಂ ವೃಣಾವಹಾ ಆವಂ ದೇವಾನಾಂ

ಭಾಗಧೇ ಅಸಾವಾ [..ವ (೫) ಆವ] ವದಧಿ ದೇವಾ ಇಜ್ಯಾನ್ತಾ ಇತಿ

---

ನ । ಏನಮ್ । ಏತೇ । ಯಕ್ಷ್ಮಾಃ । ವಿಂದಂತಿ । ಸಃ । ಏತೇ ಇತಿ । ಏವ । ನಮಸ್ಯನ್। ಉಪೇತಿ । ಅಧಾವತ್ । ತೇ ಇತಿ । ಅಬ್ರೂತಾಮ್ । ವರಮ್ । ವೃಣಾವಹೈ । ಆವಮ್ । ದೇವಾನಾಮ್ । ಭಾಗಧೇ ಇತಿ ಭಾಗ-ಧೇ । ಅಸಾವ । (೫) । ಆವತ್। ಅಧೀತಿ । ದೇವಾಃ । ಇಜ್ಯಾಂತೈ । ಇತಿ ।

---

| | |
|---|---|
| ಏನಮ್ ಏತೇ ಯಕ್ಷ್ಮಾಃ ನ ವಿಂದಂತಿ | ಆತನನ್ನು ಈ ರೋಗಗಳು ಆಕ್ರಮಿಸುವುದಿಲ್ಲ. |

**ಮುಂದುವರೆದ ಉಪಾಖ್ಯಾನ**

| | |
|---|---|
| ಸಃ ಏತೇ ಏವ ನಮಸ್ಯನ್ ಉಪಾಧಾವತ್ | ಆ ಸೋಮರಾಜನು ಈ ಅಮಾವಾಸ್ಯಾ-ಪೌರ್ಣಮಾಸಿಗಳನ್ನು-ಕ್ಷಮಾಪಣೆಯನ್ನು ಕೇಳಿ ಗೌರವಿಸುತ್ತಾ-ಸಮೀಪಿಸಿದನು. |
| ತೇ ವರಮ್ ವೃಣಾವಹೈ [ಇತಿ] ಅಬ್ರೂತಾಮ್ | ಅವರಿಬ್ಬರೂ ನಾವು ವರವನ್ನು ಕೇಳುತ್ತೇವೆ ಎಂದರು. |
| ಆವಮ್ ದೇವಾನಾಮ್ ಭಾಗಧೇ ಅಸಾವ | ನಾವಿಬ್ಬರೂ ದೇವತೆಗಳಿಗೆ ಹವಿರ್ಭಾಗವನ್ನು ಒಯ್ಯುವವರಾಗಬೇಕು. |
| ಆವತ್ ಅಧಿ ದೇವಾಃ ಇಜ್ಯಾಂತೈ ಇತಿ | ನಮ್ಮ ಕಾಲದಲ್ಲಿಯೇ ದೇವತೆಗಳು ಹವಿರ್ಭಾಗವನ್ನು ಸ್ವೀಕರಿಸಬೇಕು ಎಂದು [ವರವನ್ನು ಕೇಳಿದರು] |

ತಸ್ಮಾಥ್ಸದೃಶೀನಾಗ್ಂ ರಾತ್ರೀಣಾಮಮಾವಾಸ್ಯಾಯಾಂ ಚ ಪೌರ್ಣಮಾಸ್ಯಾಂ ಚ ದೇವಾ ಇಜ್ಯಂತ ಏತೇ ಹಿ ದೇವಾನಾಂ ಭಾಗಧೇ ಭಾಗಧಾ ಅಸ್ಮೈ ಮನುಷ್ಯಾ ಭವಂತಿ ಯ ಏವಂ ವೇದ

---

ತಸ್ಮಾತ್ । ಸದೃಶೀನಾಮ್ । ರಾತ್ರೀಣಾಮ್ । ಅಮಾವಾಸ್ಯಾಯಾಮಿತ್ಯಮಾ-ವಾಸ್ಯಾಯಾಮ್ । ಚ । ಪೌರ್ಣಮಾಸ್ಯಾಮಿತಿ ಪೌರ್ಣ-ಮಾಸ್ಯಾಮ್ । ಚ । ದೇವಾಃ । ಇಜ್ಯಂತೇ । ಏತೇ ಇತಿ । ಹಿ । ದೇವಾನಾಮ್ । ಭಾಗಧೇ ಇತಿ ಭಾಗ-ಧೇ । ಭಾಗಧಾ ಇತಿ ಭಾಗ-ಧಾಃ । ಅಸ್ಮೈ । ಮನುಷ್ಯಾಃ । ಭವಂತಿ । ಯಃ । ಏವಮ್ । ವೇದ ।

---

| | |
|---|---|
| ತಸ್ಮಾತ್ ಸದೃಶೀನಾಮ್ ರಾತ್ರೀಣಾಮ್ | ಆದುದರಿಂದ ಸಮಾನವಾದ ರಾತ್ರಿಗಳ ಪೈಕಿ |
| ಅಮಾವಾಸ್ಯಾಯಾಮ್ ಚ ಪೌರ್ಣಮಾಸ್ಯಾಮ್ ಚ ದೇವಾಃ ಇಜ್ಯಂತೇ | ಅಮಾವಾಸ್ಯೆ ಮತ್ತು ಪೌರ್ಣಮಾಸಿಗಳಲ್ಲಿಯೂ ದೇವತೆಗಳು ಯಜ್ಞದಿಂದ ಆರಾಧಿಸಲ್ಪಡುತ್ತಾರೆ/ಹವಿರ್ಭಾಗವನ್ನು ಸ್ವೀಕರಿಸು ತ್ತಾರೆ. |
| ದೇವಾನಾಮ್ ಏತೇ ಹಿ ಭಾಗಧೇ | ಈ ಅಮಾವಾಸ್ಯಾ-ಪೌರ್ಣಮಾಸಿಗಳೇ ದೇವತೆಗಳ ಹವಿರ್ಭಾಗವನ್ನು ಧರಿಸಿ [ಇಟ್ಟುಕೊಂಡು]ದೇವತೆಗಳಿಗೆ ನೀಡುವವರಾಗಿದ್ದಾರೆ. |
| ಯಃ ಏವಮ್ ವೇದ | ಯಾವ ಯಜಮಾನನು ಈ ವಿಷಯವನ್ನು ಅರಿತಿರುವನೋ |
| ಅಸ್ಮೈ ಮನುಷ್ಯಾಃ ಭಾಗಧಾಃ ಭವಂತಿ | ಬೇರೆಯ ಮಾನವರು ಈತನಿಗೆ ಭಾಗವನ್ನು /ತೆರಿಗೆ ಮೊದಲಾದವನ್ನು ಕೊಡುವವರಾಗುತ್ತಾರೆ. |

ಭೂತಾನಿ ಕ್ಷುಧಮಘ್ನನ್ತ್ಸದ್ಯೋ ಮನುಷ್ಯಾ ಅರ್ಧಮಾಸೇ

ದೇವಾ ಮಾಸಿ ಪಿತರಃ

---

ಭೂತಾನಿ । ಕ್ಷುಧಮ್ । ಅಘ್ನನ್ನ್ । ಸದ್ಯಃ । ಮನುಷ್ಯಾಃ । ಅರ್ಧಮಾಸ ಇತ್ಯರ್ಧ-

ಮಾಸೇ । ದೇವಾಃ । ಮಾಸಿ । ಪಿತರಃ ।

---

**ಈ ಎರಡು ದಿನಗಳಲ್ಲಿಯೇ ಯಾಗಾನುಷ್ಠಾನವನ್ನು ಸಮರ್ಥಿಸುವ ಇನ್ನೊಂದು ರೀತಿ**

| | |
|---|---|
| ಭೂತಾನಿ ಕ್ಷುಧಮ್ ಅಘ್ನನ್ನ್ | ಸಮಸ್ತಪ್ರಾಣಿಗಳೂ ತಮ್ಮ ಹಸಿವನ್ನು ಹೋಗಲಾಡಿಸಿಕೊಳ್ಳುತ್ತವೆ. |
| ಮನುಷ್ಯಾಃ ಸದ್ಯಃ [ಕ್ಷುಧಮ್ ಘ್ನಂತಿ] | ಮನುಷ್ಯರು ಪ್ರತಿದಿನವೂ ಆಹಾರವನ್ನು ಸ್ವೀಕರಿಸಿ ಹಸಿವನ್ನು ಹೋಗಲಾಡಿಸಿ ಕೊಳ್ಳುತ್ತಾರೆ. |
| ದೇವಾಃ ಅರ್ಧಮಾಸೇ [ಕ್ಷುಧಮ್ ಘ್ನಂತಿ] | ದೇವತೆಗಳು ಹದಿನೈದು ದಿನಗಳಿಗೊಮ್ಮೆ ಹವಿರ್ಭಾಗಗಳಿಂದ ಹಸಿವನ್ನು ಕಳೆದು ಕೊಳ್ಳುತ್ತಾರೆ. |
| ಪಿತರಃ ಮಾಸಿ [ಕ್ಷುಧಮ್ ಘ್ನಂತಿ] | ಪಿತೃದೇವತೆಗಳು ತಿಂಗಳಿಗೊಮ್ಮೆ ಶ್ರಾದ್ಧವನ್ನು ಸ್ವೀಕರಿಸಿ, ಹಸಿವನ್ನು ನೀಗುತ್ತಾರೆ. |

---

ಈ ಸೋಮರಾಜನ ಉಪಾಖ್ಯಾನವು ಹಿಂದೆಯೂ ಬಂದಿದೆ. **[ತೈ.ಸಂ.2.3.5]** ಅಲ್ಲಿ ನಕ್ಷತ್ರಗಳಿಗೂ ಸೋಮರಾಜನಿಗೂ ಸಂಬಂಧಿಸಿದಂತೆ ಉಪಾಖ್ಯಾನವಿದೆ. ರೋಗೋತ್ಪತ್ತಿಯನ್ನು ಅರಿತವನಿಗೆ ರೋಗಗಳು ಉಂಟಾಗುವುದಿಲ್ಲ ಎಂಬಲ್ಲಿಯವರೆಗೆ ಅಂಶಗಳು ಸಮಾನವಾಗಿ ಇವೆ.

ಸೋಮರಾಜನು ಅಮಾವಾಸ್ಯೆ-ಪೌರ್ಣಮಾಸಿಗಳ ಕ್ಷಮೆಯನ್ನು ಕೋರುತ್ತಾನೆ. ಅವು ವರವನ್ನು ಕೋರುತ್ತವೆ. ಆ ದಿನಗಳಂದೇ ದೇವತೆಗಳು ಹವಿರ್ಭಾಗವನ್ನು ಪಡೆಯುವಂತೆಯೂ, ಅವೇ ದೇವತೆಗಳಿಗೆ ಹವಿರ್ಭಾಗವನ್ನು ಒಯ್ಯುವಂತೆಯೂ ವರವನ್ನು

ಸಂವತ್ಸರೇ ವನಸ್ಪತಯಸ್ತಸ್ಮಾದಹರಹರ್ಮನುಷ್ಯಾ ಅಶನ ಮಿಚ್ಛಂತೇಽರ್ಧಮಾಸೇ ದೇವಾ ಇಜ್ಯಂತೇ ಮಾಸಿ ಪಿತೃಭ್ಯಃ ಕ್ರಿಯತೇ

---

ಸಂವತ್ಸರ ಇತಿ ಸಂ-ವತ್ಸರೇ । ವನಸ್ಪತಯಃ । ತಸ್ಮಾತ್ । ಅಹರಹರಿತ್ಯಹಃ-ಅಹಃ। ಮನುಷ್ಯಾಃ । ಅಶನಮ್ । ಇಚ್ಛಂತೇ । ಅರ್ಧಮಾಸ ಇತ್ಯರ್ಧ-ಮಾಸೇ । ದೇವಾಃ । ಇಜ್ಯಂತೇ । ಮಾಸಿ । ಪಿತೃಭ್ಯ ಇತಿ ಪಿತೃ-ಭ್ಯಃ । ಕ್ರಿಯತೇ ।

---

| | |
|---|---|
| ವನಸ್ಪತಯಃ ಸಂವತ್ಸರೇ [ಕ್ಷುಧಮ್ ಘ್ನಂತಿ] | ವನಸ್ಪತಿಗಳು ವರ್ಷಕ್ಕೊಮ್ಮೆ ಫಲಗ್ರಹಣ ದಿಂದ ತೃಪ್ತವಾಗುತ್ತವೆ. |
| ತಸ್ಮಾತ್ ಅಹರಹಃ ಮನುಷ್ಯಾಃ ಅಶನಮ್ ಇಚ್ಛಂತೇ | ಆದುದರಿಂದ ಮನುಷ್ಯರು ನಿತ್ಯವೂ ಆಹಾರ ವನ್ನು ಅಪೇಕ್ಷಿಸುತ್ತಾರೆ. |
| ದೇವಾಃ ಅರ್ಧಮಾಸೇ ಇಜ್ಯಂತೇ | ದೇವತೆಗಳಿಗೆ ಹದಿನೈದು ದಿನಗಳಿಗೊಮ್ಮೆ ಹವಿರ್ಭಾಗವು ನೀಡಲ್ಪಡುತ್ತದೆ. |
| ಪಿತೃಭ್ಯಃ ಮಾಸಿ ಕ್ರಿಯತೇ | ಪಿತೃಗಳಿಗೆ ತಿಂಗಳಿಗೊಮ್ಮೆ ಅಮಾವಾಸ್ಯೆ ಯಲ್ಲಿ ಶ್ರಾದ್ಧವು ಮಾಡಲ್ಪಡುತ್ತದೆ. |

---

ಕೇಳಿ ಪಡೆಯುತ್ತವೆ. ಹೀಗಾಗಿ ರಾತ್ರಿಗಳು ಸಮಾನವಾಗಿದ್ದರೂ ಆ ಎರಡು ದಿನಗಳಂದೇ ದೇವತೆಗಳನ್ನು ಯಜ್ಞದಿಂದ ಆರಾಧಿಸುತ್ತಾರೆ.

ಯಾವ ಯಜಮಾನನು ಈ ವಿಷಯವನ್ನು ಅರಿತಿರುವನೋ ಅವನಿಗೆ ಉಳಿದವರು ತೆರಿಗೆ ಮುಂತಾದವನ್ನೂ ಕೊಡುತ್ತಾರೆ.

ಸಂವಥ್ಸರೇ ವನಸ್ಪತಯಃ ಫಲಂ ಗೃಹ್ಣಂತಿ ಯ ಏವಂ ವೇದ ಹಂತಿ ಕ್ಷುಧಂ ಭ್ರಾತೃವ್ಯಮ್॥೩೮-6॥

[ಪಶ್ಯತಿ ತಾಭ್ಯಾಮಹರ್ಯೈದಸಾವ ಫಲಗ್ಂ ಸಪ್ತ ಚ॥]

---

ಸಂವಥ್ಸರ ಇತಿ ಸಂ-ವಥ್ಸರೇ । ವನಸ್ಪತಯಃ । ಫಲಮ್ । ಗೃಹ್ಣಂತಿ । ಯಃ । ಏವಮ್ । ವೇದ । ಹಂತಿ । ಕ್ಷುಧಮ್ । ಭ್ರಾತೃವ್ಯಮ್ ॥ (೬)

---

| | |
|---|---|
| ವನಸ್ಪತಯಃ ಸಂವಥ್ಸರೇ ಫಲಮ್ ಗೃಹ್ಣಂತಿ | ಹಲಸು, ಮಾವು ಮೊದಲಾದ ವನಸ್ಪತಿಗಳು ವರ್ಷಕ್ಕೊಮ್ಮೆ ಫಲವನ್ನು ಹೊಂದುತ್ತವೆ. |
| ಯಃ ಏವಮ್ ವೇದ | ಯಾವನು ಹೀಗೆ ತಿಳಿದಿರುತ್ತಾನೆಯೋ |
| ಭ್ರಾತೃವ್ಯಮ್ ಕ್ಷುಧಮ್ ಹಂತಿ | ಅವನು ಹಸಿವೆಂಬ ಶತ್ರುವನ್ನು ನಾಶಪಡಿಸುತ್ತಾನೆ. |

---

ದರ್ಶ-ಪೂರ್ಣಮಾಸಯಾಗಗಳನ್ನು ಅಮಾವಾಸ್ಯೆ ಮತ್ತು ಪೂರ್ಣಮಾಸಿಗಳಲ್ಲಿಯೇ ಅನುಷ್ಠಿಸಬೇಕೆಂಬುದನ್ನು ಸಮರ್ಥಿಸಲು ಶ್ರುತಿಯು ಇನ್ನೊಂದು ರೀತಿಯನ್ನು ಹೇಳುತ್ತದೆ. ದೇವತೆಗಳು, ಪಿತೃಗಳು ಮತ್ತು ವನಸ್ಪತಿಗಳು ತಮ್ಮ ಹಸಿವನ್ನು ನೀಗಲು ಕಲ್ಪಿಸಿಕೊಂಡಿರುವ ಕಾಲಕ್ಕೆ ಅನುಗುಣವಾಗುವಂತೆ ದೇವತೆಗಳು ಹದಿನೈದು ದಿನಗಳಿಗೊಮ್ಮೆ ಹವಿರ್ಭಾಗವನ್ನು ಪಡೆಯುವರು.

ಈ ವಿಷಯವನ್ನು ಅರಿತವನು ಅನ್ನಸಮೃದ್ಧಿಯನ್ನು ಹೊಂದಿ ಹಸಿವಿಲ್ಲದವನಾಗುತ್ತಾನೆ. ಇದು ಜ್ಞಾನಪ್ರಶಂಸೆಯ ಅರ್ಥವಾದವಾಗಿದೆ.

## ॥ ಸಪ್ತಮೋಽನುವಾಕಃ ॥

ದೇವಾ ವೈ ನರ್ಚಿ ನ ಯಜುಷ್ಯಶ್ರಯಂತ ತೇ
ಸಾಮನ್ನೇವಾಶ್ರಯಂತ ಹಿಂ ಕರೋತಿ

---

ದೇವಾಃ । ವೈ । ನ । ಋಚಿ । ನ । ಯಜುಷಿ । ಅಶ್ರಯಂತ । ತೇ । ಸಾಮನ್ನ್ । ಏವ ।
ಅಶ್ರಯಂತ । ಹಿಮ್ । ಕರೋತಿ ।

---

ಈ ಪ್ರಪಾಠಕದಲ್ಲಿ ಇಲ್ಲಿಯವರೆಗಿನ ಆರು ಅನುವಾಕಗಳಲ್ಲಿ ದರ್ಶ–ಪೂರ್ಣಮಾಸಗಳಿಗೆ ಸಂಬಂಧಿಸಿದ ಆಧ್ವರ್ಯವದ ವಿಷಯಗಳು ಹೇಳಲ್ಪಟ್ಟಿವೆ.ಇನ್ನು ಮುಂದೆ ಹೋತೃವಿಗೆ ಸಂಬಂಧಿಸಿದ ವಿಚಾರಗಳು ಹೇಳಲ್ಪಡುತ್ತವೆ.

ಈ ಏಳನೆಯ ಮತ್ತು ಮುಂದಿನ ಎಂಟನೆಯ ಅನುವಾಕಗಳಲ್ಲಿ ಸಾಮಿಧೇನೀಮಂತ್ರಗಳ ವ್ಯಾಖ್ಯಾನವಿದೆ.

### ಸಾಮಿಧೇನಿಯ ಅನುವಚನದ ಮೊದಲು ಹಿಂಕಾರವಿಧಿ; ಅರ್ಥವಾದ

| | |
|---|---|
| ದೇವಾಃ ನ ಋಚಿ ನ ಯಜುಷಿ ಅಶ್ರಯಂತ ವೈ | ದೇವತೆಗಳು ಋಕ್ಕಿನಲ್ಲಿಯಾಗಲೀ ಯಜುಸ್ಸಿನಲ್ಲಿಯಾಗಲೀ ಸಂತುಷ್ಟರಾಗಲಿಲ್ಲ. |
| ತೇ ಸಾಮನ್ ಏವ ಆಶ್ರಯಂತ | ಆ ದೇವತೆಗಳು ಸಾಮದಲ್ಲಿಯೇ ಸಂತುಷ್ಟರಾದರು. |
| ಹಿಮ್ ಕರೋತಿ | [ಹೋತೃವು ಸಾಮಿಧೇನಿಗಳನ್ನು ಹೇಳುವ ಮೊದಲು] **'ಹಿಮ್'** ಎಂದು ಹೇಳಬೇಕು. **[ವಿಧಿ]** |

ಸಾಮ್ನೈವಾಕರ್ ಹಿಂ ಕರೋತಿ ಯತ್ರೈವ ದೇವಾ ಅಶ್ರಯಂತ
ತತ ಏವೈನಾನ್ಪ್ರಯುಂಕ್ತೇ ಹಿಂ ಕರೋತಿ ವಾಚ ಏವೈಷ
ಯೋಗೋ ಹಿಂ ಕರೋತಿ

---

ಸಾಮ । ಏವ । ಅಕಃ । ಹಿಮ್। ಕರೋತಿ । ಯತ್ರ । ಏವ । ದೇವಾಃ । ಅಶ್ರಯಂತ।
ತತಃ । ಏವ ।ಏನಾನ್ । ಪ್ರೇತಿ । ಯುಂಕ್ತೇ । ಹಿಮ್ । ಕರೋತಿ । ವಾಚಃ । ಏವ।
ಏಷಃ । ಯೋಗಃ । ಹಿಮ್ । ಕರೋತಿ ।

---

| | |
|---|---|
| ಸಾಮ ಏವ ಅಕಃ | ಇದರಿಂದ ಸಾಮಗಾನವನ್ನು ಮಾಡಿದಂತೆಯೇ ಆಯಿತು. |
| ಹಿಮ್ ಕರೋತಿ | **'ಹಿಮ್'** ಎಂದು ಹೋತೃವು ಹೇಳುತ್ತಾನೆ.* |
| ಯತ್ರ ಏವ ದೇವಾಃ ಅಶ್ರಯಂತ | ಯಾವ ಸಾಮದಲ್ಲಿ ದೇವತೆಗಳು ಸುಪ್ರೀತರಾದರೋ |
| ತತಃ ಏವ ಏನಾನ್ ಪ್ರಯುಂಕ್ತೇ | ಆ ಸಾಮದಿಂದಲೇ ಈ ದೇವತೆಗಳನ್ನು ಯಜ್ಞದಲ್ಲಿ ಸಂಬಂಧಿಸಿ ತೃಪ್ತಿಪಡಿಸುತ್ತಾನೆ. |
| ಹಿಮ್ ಕರೋತಿ | [ಹೋತೃವು] **ಹಿಮ್** ಎಂದು ಉಚ್ಚರಿಸುತ್ತಾನೆ* |
| ಏಷಃ ವಾಚಃ ಯೋಗಃ ಏವ | [ಸಾಮಪ್ರಕೃತಿಯಾದ ಋಗ್ರೂಪವಾದ ಮಾತಿನೊಡನೆ] ಇದು ಸಂಬಂಧವನ್ನುಂಟು ಮಾಡುತ್ತದೆ. |
| ಹಿಮ್ ಕರೋತಿ | ಹೋತೃವು ಹಿಂಕಾರವನ್ನು ಉಚ್ಚರಿಸುತ್ತಾನೆ.* |

---

* ಇದು ಫಲಭೇದವನ್ನು ಪ್ರಶಂಸಿಸುವುದಕ್ಕಾಗಿ ಅನುವಾದ.

ಪ್ರಜಾ ಏವ ತದ್ಯಜಮಾನಸ್ಸೃಜತೇ ತ್ರಿಃ ಪ್ರಥಮಾಮನ್ವಾಹ

ತ್ರಿರುತ್ತಮಾಂ ಯಜ್ಞಸ್ಯೈವ ತದ್ಬರ್ಸಂ

[(೧)ನಹ್ಯತ್ಯಪ್ರ..] ನಹ್ಯತ್ಯಪ್ರಸ್ರಗ್ಂಸಾಯ

---

ಪ್ರಜಾ ಇತಿ ಪ್ರ-ಜಾಃ । ಏವ । ತತ್ । ಯಜಮಾನಃ । ಸೃಜತೇ । ತ್ರಿಃ । ಪ್ರಥಮಾಮ್।

ಅನ್ವಿತಿ । ಆಹ । ತ್ರಿಃ । ಉತ್ತಮಾಮಿತ್ಯುತ್-ತಮಾಮ್ । ಯಜ್ಞಸ್ಯ । ಏವ । ತತ್।

ಬರ್ಸಮ್ ।(೧)। ನಹ್ಯತಿ । ಅಪ್ರಸ್ರಗ್ಂಸಾಯೇತ್ಯಪ್ರ-ಸ್ರಗ್ಂಸಾಯ ।

---

ತತ್ ಯಜಮಾನಃ ಪ್ರಜಾಃ ಏವ ಸೃಜತೇ

ಆ ಹಿಂಕಾರೋಚ್ಚಾರಣೆಯಿಂದ ಯಜಮಾನನು ಪ್ರಜಾಸಂಪತ್ತನ್ನು ಪಡೆಯುತ್ತಾನೆ.

**ಸಾಮಿಧೇನಿಗಳಲ್ಲಿ ವಿಶೇಷವಿಧಿಗಳು;ಪ್ರಶಂಸೆ**

ಪ್ರಥಮಾಮ್ ತ್ರಿಃ ಅನ್ವಾಹ
ಉತ್ತಮಾಮ್ ತ್ರಿಃ [ಅನ್ವಾಹ]

ಸಾಮಿಧೇನಿಗಳಲ್ಲಿ ಮೊದಲನೆಯದನ್ನು ಮೂರು ಬಾರಿ ಹಾಗೂ ಕೊನೆಯದನ್ನೂ ಮೂರು ಬಾರಿ ಹೇಳಬೇಕು.

ತತ್ ಯಜ್ಞಸ್ಯ ಏವ
ಬರ್ಸಮ್ ನಹ್ಯತಿ
ಅಪ್ರಸ್ರಗ್ಂಸಾಯ

ಇದರಿಂದ ಯಜ್ಞದ ಎರಡು ತುದಿಗಳನ್ನು ಬಲವಾಗಿ ಕಟ್ಟಿದಂತಾಗುತ್ತದೆ. ಇದು ಯಜ್ಞವು ಶಿಥಿಲವಾಗದೇ ದೃಢವಾಗಿರಲು ಕಾರಣವಾಗುತ್ತದೆ.

---

ದೇವತೆಗಳಿಗೆ ಋಕ್ಕು, ಯಜುಸ್ಸು ಸಂತೋಷವನ್ನು ಉಂಟುಮಾಡುವುದಿಲ್ಲ. ಸಾಮವೇ ಅವರಿಗೆ ತುಷ್ಟಿದಾಯಕವಾಗಿದೆ. ಸಾಮದಲ್ಲಿ ಐದು ಸಲ ಅಥವಾ ಏಳು ಸಲ ಹಿಂಕಾರವಿರುತ್ತದೆ.

ಸಂತತಮನ್ವಾಹ ಪ್ರಾಣಾನಾಮನ್ನಾದ್ಯಸ್ಯ ಸಂತತ್ಯಾ ಅಥೋ ರಕ್ಷಸಾಮಪಹತ್ಯೈ

---

ಸಂತತಮಿತಿ ಸಂ-ತತಮ್ । ಅನ್ವಿತಿ । ಆಹ । ಪ್ರಾಣಾನಾಮಿತಿ ಪ್ರ-ಅನಾನಾಮ್ । ಅನ್ನಾದ್ಯಸ್ಯೇತ್ಯನ್ನ-ಅದ್ಯಸ್ಯ । ಸಂತತ್ಯಾ ಇತಿ ಸಂ-ತತ್ಯೈ । ಅಥೋ ಇತಿ । ರಕ್ಷಸಾಮ್। ಅಪಹತ್ಯಾ ಇತ್ಯಪ-ಹತ್ಯೈ ।

---

**ಮಧ್ಯದಲ್ಲಿ ವಿಚ್ಛಿತ್ತಿ ಇಲ್ಲದೆ ಹೇಳುವ ವಿಧಿ;ಪ್ರಶಂಸೆ**

| | |
|---|---|
| ಸಂತತಮ್ ಅನ್ವಾಹ | ಉಸಿರು ಬಿಡದೇ ಸಾಮಿಧೇನಿಗಳನ್ನು ಹೇಳಬೇಕು. |
| ಪ್ರಾಣಾನಾಮ್ ಅನ್ನಾದ್ಯಸ್ಯ ಸಂತತ್ಯೈ | ಇದು ಯಜಮಾನನಿಗೆ ಪ್ರಾಣಗಳ ವಿಚ್ಛಿತ್ತಿಯಿಲ್ಲದೆ ಇರುವಿಕೆಗೂ, ಅನ್ನ ಸಂಪತ್ತಿಯು ಯಾವಾಗಲೂ ಇರುವುದಕ್ಕೂ ಕಾರಣವಾಗುತ್ತದೆ. |
| ಅಥೋ ರಕ್ಷಸಾಮ್ ಅಪಹತ್ಯೈ | ಹಾಗೂ ರಕ್ಷೋಗಣಗಳ ನಾಶಕ್ಕೂ ಕಾರಣವಾಗುತ್ತದೆ. |

---

ಇಷ್ಟಿಯಲ್ಲಿ ಸಾಮಗಳೂ ಇಲ್ಲ ಅವುಗಳನ್ನು ಗಾನ ಮಾಡುವ ಉದ್ಗಾತೃವೂ ಇರುವುದಿಲ್ಲ. ಹೋತೃವೇ ಸಾಮಿಧೇನಿಗಳ ಆರಂಭದಲ್ಲಿ **'ಹಿಮ್'** ಎಂಬುದಾಗಿ ಮೂರು ಬಾರಿ ಹೇಳಬೇಕು. ಇದರಿಂದ ಸಾಮಗಾನವನ್ನು ಮಾಡಿ ದೇವತೆಗಳನ್ನು ತೃಪ್ತಿಪಡಿಸಿದಂತೆಯೂ ಆಯಿತು. ಮಂತ್ರದೊಡನೆ ಸಂಬಂಧವನ್ನುಂಟುಮಾಡಿ ದೇವತೆಗಳನ್ನು ಯಜ್ಞದಲ್ಲಿ ಸೇರಿಸಿದಂತೆಯೂ ಆಯಿತು. ಇದರಿಂದ ಯಜಮಾನನಿಗೆ ಪ್ರಜೋತ್ಪತ್ತಿಯೂ ಉಂಟಾಗುತ್ತದೆ.

ಸಾಮಿಧೇನೀ ಋಕ್ಕುಗಳು ಹನ್ನೊಂದು ಇವೆ. ಅವುಗಳಲ್ಲಿ ಮೊದಲನೆಯದಾದ **'ಪ್ರ ವೋ ವಾಜಾ'** ಎಂಬುದನ್ನು ಮೂರು ಬಾರಿ ಹೇಳಬೇಕು.**'ಆ ಜುಹೋತ ದುವಸ್ಯತ'**

ರಾಥಂತರೀಂ ಪ್ರಥಮಾಮನ್ವಾಹ ರಾಥಂತರೋ ವಾ ಅಯಂ
ಲೋಕ ಇಮಮೇವ ಲೋಕಮಭಿಜಯತಿ

---

ರಾಥಂತರೀಮಿತಿ ರಾಥಮ್-ತರೀಮ್ । ಪ್ರಥಮಾಮ್ । ಅನ್ವಿತಿ । ಆಹ । ರಾಥಂತರ ಇತಿ ರಾಥಮ್-ತರಃ । ವೈ । ಅಯಮ್ । ಲೋಕಃ । ಇಮಮ್ । ಏವ । ಲೋಕಮ್। ಅಭೀತಿ । ಜಯತಿ ।

---

**ಸಾಮಿಧೇನಿಗಳ ಅನುವಚನದಲ್ಲಿ ವಿಶೇಷವಿಧಿ;ಪ್ರಶಂಸೆ**

| | |
|---|---|
| ರಾಥಂತರೀಮ್ ಪ್ರಥಮಾಮ್ ಅನ್ವಾಹ | ರಥಂತರಸಾಮಕ್ಕೆ ಪ್ರಕೃತಿಯಾದ* ಸಾಮಿಧೇನಿಯ ಋಕ್ಕನ್ನು ಮೊದಲು ಹೇಳಬೇಕು. |
| ಅಯಮ್ ಲೋಕಃ ರಾಥಂತರಃ ವೈ | ಈ ಭೂಲೋಕವು ರಥಂತರಸಾಮದಿಂದ ಜಯಿಸಲು ಸಾಧ್ಯವಾಗಿದೆ. |
| ಇಮಮ್ ಏವ ಲೋಕಮ್ ಅಭಿ ಜಯತಿ | ಈ ರಾಥಂತರಋಕ್ಕಿನಿಂದ ಈ ಭೂಲೋಕವನ್ನು ಯಜಮಾನನು ಜಯಿಸುತ್ತಾನೆ. |

---

ಅಥವಾ **'ತ್ವಂ ವರುಣ'** ಎಂಬ ಋಕ್ಕು ಕೊನೆಯದು. ಅದನ್ನೂ ಮೂರು ಬಾರಿ ಹೇಳಬೇಕು. ಹೀಗೆ ಆದ್ಯಂತದಲ್ಲಿ ಮೂರು ಮೂರು ಬಾರಿ ಹೇಳುವುದರಿಂದ ಹೊರೆಯನ್ನು ಹೊರಲು ಮೂಟೆಯನ್ನು ಬಲವಾಗಿ ಕಟ್ಟಿದಂತಾಗಿ ಯಜ್ಞವು ದೃಢವಾಗಿ ನಿಲ್ಲುವುದಕ್ಕೆ ಕಾರಣವಾಗುತ್ತದೆ.

ಸಾಮಿಧೇನಿಗಳನ್ನು ಹೇಳುವಾಗ ಉಸಿರನ್ನು ಬಿಡದೇ ಹೇಳಬೇಕು. ಹೀಗೆ ಪಠನ ಮಾಡುವುದರಿಂದ ಯಜಮಾನನ ಪ್ರಾಣಗಳು ವಿಚ್ಛಿತ್ತಿಯಿಲ್ಲದೆ ಇರುತ್ತವೆ.ಅನ್ನಸಂಪತ್ತಿಯೂ

---

***ಒಂದಾನೊಂದು ಸಾಮಶಾಖೆಯಲ್ಲಿ ರಥಂತರಸಾಮಕ್ಕೆ ಪ್ರಕೃತಿಯನ್ನಾಗಿ ಹೇಳಿರುವ 'ಪ್ರವೋ ವಾಜಾ'ಎಂಬ ಋಕ್ಕು.**

ತ್ರಿರ್ವಿಗೃಹ್ಣಾತಿ ತ್ರಯ ಇಮೇ ಲೋಕಾ ಇಮಾನೇವ
ಲೋಕಾನಭಿ ಜಯತಿ

---

ತ್ರಿಃ । ವೀತಿ । ಗೃಹ್ಣಾತಿ । ತ್ರಯಃ । ಇಮೇ । ಲೋಕಾಃ । ಇಮಾನ್ । ಏವ ।
ಲೋಕಾನ್ । ಅಭೀತಿ । ಜಯತಿ ।

---

**ವಿಗ್ರಹವಿಧಾನ; ಪ್ರಶಂಸೆ**

| | |
|---|---|
| ತ್ರಿಃ ವಿಗೃಹ್ಣಾತಿ | ಮೂರನೆಯ ಸಾಮಿಧೇನೀ ಋಕ್ಕನ್ನು ಪಠಿಸುವಾಗ ಮೂರು ಬಾರಿ ನಿಲ್ಲಿಸಬೇಕು.*/ ಮೊದಲನೆಯ ಸಾಮಿಧೇನಿಯನ್ನೇ ಮೂರು ಬಾರಿ ನಿಲ್ಲಿಸಿ ಹೇಳ ಬೇಕು. **[ಭ.ಭಾ,ಭಾಷ್ಯ.]** |
| ಇಮೇ ಲೋಕಾಃ ತ್ರಯಃ | ಈ ಲೋಕಗಳು ಭೂಃ, ಭುವಃ, ಸುವಃ, ಎಂದು ಮೂರಾಗಿವೆ. |
| ಇಮಾನ್ ಲೋಕಾನ್ ಏವ ಅಭಿ ಜಯತಿ | ಮೂರು ಬಾರಿ ನಿಲ್ಲಿಸಿ ಹೇಳುವುದರಿಂದ ಯಜಮಾನನು ಮೂರು ಲೋಕಗಳನ್ನು ಜಯಿಸುತ್ತಾನೆ. |

---

ಸಂತತವಾಗಿ ಇರುತ್ತದೆ. ರಾಕ್ಷಸರೂ ದೂರಾಗುವರು.

ಸಾಮಿಧೇನೀಮಂತ್ರಗಳಲ್ಲಿ ಮೊದಲನೆಯದಾಗಿ **'ಪ್ರವೋ ವಾಜಾ'** ಎಂಬ ಋಕ್ಕನ್ನು ಪಠಿಸಬೇಕು. ಸಾಮವೇದದ ಶಾಖೆಯೊಂದರಲ್ಲಿ ರಥಂತರಸಾಮಕ್ಕೆ ಪ್ರಕೃತಿ ಋಕ್ ಆಗಿ ಈ ಋಕ್ಕೇ ಹೇಳಲ್ಪಟ್ಟಿದೆ.

---

***ಮೂರನೆಯ ಋಕ್ಕಿನ ಮೊದಲನೆಯ ಪಾದವನ್ನು ಹೇಳಿದ ಮೇಲೆ ಒಮ್ಮೆ, ಎರಡನೆಯ ಪಾದವನ್ನು ಹೇಳಿದ ಮೇಲೆ ಅಂದರೆ ಅರ್ಧರ್ಚ ಪಾಠವಾದ ನಂತರ ಒಮ್ಮೆ, ಈ ಋಕ್ಕಿನ ಉಳಿದ ಅರ್ಧರ್ಚವನ್ನೂ ಮುಂದಿನ ಋಕ್ಕಿನ ಪೂರ್ವಾರ್ಧವನ್ನು ಪಠಿಸಿದ ನಂತರ ಒಮ್ಮೆ–ಹೀಗೆ ಮೂರು ಬಾರಿ ನಿಲ್ಲಿಸಬೇಕು.[ವಿಗ್ರಹ]**

ಬಾರ್ಹತೀಮುತ್ತಮಾಮನ್ವಾಹ ಬಾರ್ಹತೋ ವಾ ಅಸೌ

ಲೋಕೋಽಮುಮೇವ ಲೋಕಮಭಿ ಜಯತಿ

---

ಬಾರ್ಹತೀಮ್ । ಉತ್ತಮಾಮಿತ್ಯುತ್-ತಮಾಮ್ । ಅನ್ವಿತಿ । ಆಹ । ಬಾರ್ಹತಃ । ವೈ । ಅಸೌ । ಲೋಕಃ । ಅಮುಮ್ । ಏವ । ಲೋಕಮ್ । ಅಭೀತಿ । ಜಯತಿ ।

---

**ಬಾರ್ಹತಿಯ ವಿಧಾನ; ಪ್ರಶಂಸೆ**

| | |
|---|---|
| ಬಾರ್ಹತೀವ್ ಉತ್ತಮಾವ್ ಅನ್ವಾಹ | 'ತಂ ತ್ವಾ' ಎಂಬ ಬಾರ್ಹತೀ ಋಕ್ಕನ್ನು ಮೂರನೆಯದನ್ನಾಗಿ ಪಠಿಸಬೇಕು.* |
| ಅಸೌ ಲೋಕಃ ಬಾರ್ಹತಃ | ಈ ಸ್ವರ್ಗಲೋಕವು ಬೃಹತೀಸಾಮದಿಂದ ಜಯಿಸಲ್ಪಡುವಂತಹುದು. |
| ಅಮುವ್ ಲೋಕವ್ ಏವ ಅಭಿ ಜಯತಿ | **'ಬೃಹತ್'** ಶಬ್ದದಿಂದ ಕೂಡಿದ ಈ ಋಕ್ಕಿನಿಂದ ಯಜಮಾನನು ಸ್ವರ್ಗವನ್ನು ಜಯಿಸುವನು. |

---

ರಥಂತರಸಾಮದಿಂದ ಕೂಡಿದ ಕರ್ಮಾನುಷ್ಠಾನದಿಂದ ಈ ಲೋಕವನ್ನು ಗೆಲ್ಲಲು ಸಾಧ್ಯ. ಅಂತೆಯೇ ಭೂಲೋಕವು ರಾಥಂತರ.ಯಜಮಾನನು ಈ ಋಕ್ಕಿನಿಂದ ಭೂಲೋಕವನ್ನು ಗೆಲ್ಲುವನು.

ಮೂರನೆಯ ಸಾಮಿಧೇನೀ ಋಕ್ ಅನ್ನು ಪಠಿಸುವಾಗ **'ವಿಗ್ರಹ'**ವನ್ನು ವಿಧಾನ ಮಾಡಲಾಗಿದೆ. ವಿಗ್ರಹ ಎಂದರೆ ಋಕ್ ಅನ್ನು ಪಠಿಸುವಾಗ ನಿಲ್ಲಿಸಬೇಕಾಗಿರುವ ರೀತಿಯ ವಿಶೇಷ.

---

* ಈ ಋಕ್ಕಿನಲ್ಲಿ **'ಬೃಹಚ್ಛೋಚಾ ಯವಿಷ್ಠ್ಯ'** ಎಂಬುದಾಗಿ ಬೃಹತ್ ಶಬ್ದವಿರುವುದರಿಂದ ಇದು **ಬಾರ್ಹತೀ** ಎನಿಸಿದೆ.

ಪ್ರ ವೋ[ಪ್ರ ವಃ(೨)]ವಾಜಾ ಇತ್ಯನಿರುಕ್ತಾಂ ಪ್ರಾಜಾಪತ್ಯಾ
ಮನ್ವಾಹ ಯಜ್ಞೋ ವೈ ಪ್ರಜಾಪತಿರ್ಯಜ್ಞಮೇವ
ಪ್ರಜಾಪತಿಮಾರಭತೇ

---

ಪ್ರೇತಿ । ವಃ । (೨) । ವಾಜಾಃ । ಇತಿ । ಅನಿರುಕ್ತಾಮಿತ್ಯನಿಃ-ಉಕ್ತಾಮ್ । ಪ್ರಾಜಾಪತ್ಯಾಮಿತಿ ಪ್ರಾಜಾ-ಪತ್ಯಾಮ್ । ಅನ್ವಿತಿ । ಆಹ । ಯಜ್ಞಃ । ವೈ । ಪ್ರಜಾಪತಿರಿತಿ ಪ್ರಜಾ-ಪತಿಃ। ಯಜ್ಞಮ್ । ಏವ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಏತಿ । ರಭತೇ ।

---

## ಪ್ರಥಮ ಋಕ್ಕಿನ ಪ್ರಶಂಸೆ

| | |
|---|---|
| ಪ್ರವೋ ವಾಜಾಃ ಇತಿ ಅನಿರುಕ್ತಾಮ್ ಪ್ರಾಜಾಪತ್ಯಾಮ್ ಅನ್ವಾಹ | **'ಪ್ರ ವೋ ವಾಜಾ'** ಎಂಬ *ಅನಿರುಕ್ತ ವಾದ ಪ್ರಜಾಪತಿದೇವತಾಕವಾದ ಋಕ್ಕನ್ನು ಹೋತೃವು ಪಠಿಸುವನು. |
| ಯಜ್ಞಃ ಪ್ರಜಾಪತಿಃ ವೈ ಪ್ರಜಾಪತಿಮ್ ಯಜ್ಞಮ್ ಆರಭತೇ ಏವ | ಯಜ್ಞವು ಪ್ರಜಾಪತಿಸ್ವರೂಪವೇ ಆಗಿದೆ. ಇದರಿಂದ ಪ್ರಜಾಪತಿರೂಪವಾದ ಯಜ್ಞ ವನ್ನು ಯಜಮಾನನು ಮೊದಲು ಮಾಡಿ ದಂತಾಗುತ್ತದೆ. |

---

ಮೂರನೆಯ ಋಕ್ ಅನ್ನು ವಿಶೇಷವಿಗ್ರಹವಿಧಾನದಂತೆ ಪಠಿಸಿದರೆ ಮೂರು ಲೋಕಗಳನ್ನೂ ಯಜಮಾನನು ಗೆಲ್ಲುವನು ಎಂದು ಶ್ರುತಿಯು ಹೇಳುತ್ತದೆ. ಒಂದನೆಯ ಋಕ್ ಅನ್ನೇ ಮೂರು ಕಡೆ ನಿಲ್ಲಿಸಿ ಪಠಿಸಬೇಕೆಂಬ ಪಕ್ಷವೂ ಇದೆ.

ಹಾಗೆಯೇ ಮೂರನೆಯ ಋಕ್‌ನಲ್ಲಿ **'ಬೃಹತ್'** ಎಂಬ ಶಬ್ದವಿರುವುದರಿಂದ ಅದು **'ಬಾರ್ಹತೀ'**ಎನಿಸಿದೆ. ಅದರ ಪಾಠದಿಂದ ಯಜಮಾನನು ಸ್ವರ್ಗವನ್ನೇ ಜಯಿಸುವನು

---

* ದೇವತಾವಿಶೇಷದ ನಿರ್ದೇಶವಿಲ್ಲದ ಋಕ್ **'ಅನಿರುಕ್ತಾ'** ಎನಿಸುತ್ತದೆ. ಇಂತಹ ಋಕ್ಕುಗಳಿಗೆ ಪ್ರಜಾಪತಿಯೇ ದೇವತೆ.

ಪ್ರ ವೋ ವಾಜಾ ಇತ್ಯನ್ವಾಹಾನ್ನಂ ವೈ ವಾಜೋಽನ್ನ
ಮೇವಾವರುಂಧೇ ಪ್ರ ವೋ ವಾಜಾ ಇತ್ಯನ್ವಾಹ

---

ಪ್ರೇತಿ । ವಃ । ವಾಜಾಃ । ಇತಿ । ಅನ್ವಿತಿ । ಆಹ । ಅನ್ನಮ್ । ವೈ । ವಾಜಃ । ಅನ್ನಮ್।
ಏವ । ಅವೇತಿ । ರುಂಧೇ । ಪ್ರೇತಿ । ವಃ । ವಾಜಾಃ । ಇತಿ । ಅನ್ವಿತಿ । ಆಹ ।

---

**ಮುಂದುವರೆದ ಪ್ರಶಂಸೆ**

| | |
|---|---|
| ಪ್ರ ವೋ ವಾಜಾಃ ಇತ್ಯನ್ವಾಹ | ಹೋತೃವು 'ಪ್ರ ವೋ ವಾಜಾ' ಎಂಬ ಋಕ್ಕನ್ನು ಹೇಳುತ್ತಾನೆ. |
| ಅನ್ನಮ್ ವೈ ವಾಜಾಃ | ಅನ್ನವು ವಾಜಶಬ್ದವಾಚ್ಯವಾಗಿದೆ. |
| ಅನ್ನಮ್ ಏವ ಅವರುಂಧೇ | ಇದರಿಂದ ಯಜಮಾನನು ಅನ್ನಸಮೃದ್ಧಿಯನ್ನು ಹೊಂದುವನು. |

**'ಪ್ರ' ಎಂಬ ಉಪಸರ್ಗೋಚ್ಚಾರಣೆಯ ಪ್ರಶಂಸೆ**

| | |
|---|---|
| ಪ್ರ ವೋ ವಾಜಾಃ ಇತ್ಯನ್ವಾಹ | ಹೋತೃವು 'ಪ್ರ'ಎಂಬ ಉಪಸರ್ಗದಿಂದ ಕೂಡಿದ 'ಪ್ರ ವೋ ವಾಜಾ'ಎಂಬ ಋಕ್ಕನ್ನು ಹೇಳುತ್ತಾನೆ. |

---

ಎಂದು ಶ್ರುತಿಯು ತಿಳಿಸುತ್ತದೆ. ಇದು ಋಕ್ಕಿನ ವಿಗ್ರಹವಿಧಾನದ ಪ್ರಶಂಸೆ; ಋಕ್ಕಿನ ಪಾಠದ ಪ್ರಶಂಸೆಯ ಒಂದು ಪ್ರಕಾರವು ಇದಾಗಿದೆ.

ಹೋತೃವು **'ಪ್ರ ವೋ ವಾಜಾ'** ಎಂಬ ಋಕ್ಕಿನಿಂದ ಸಾಮಿಧೇನಿಗಳನ್ನು ಪಠಿಸಲು ಮೊದಲುಮಾಡುತ್ತಾನೆ. ಈ ಋಕ್ಕಿಗೆ ದೇವತಾನಿರ್ದೇಶವಿಲ್ಲದ ಕಾರಣ ಅನಿರುಕ್ತ ಎನಿಸುತ್ತದೆ. ಅನಿರುಕ್ತವಾದ ಮಂತ್ರಕ್ಕೆ ಪ್ರಜಾಪತಿಯೇ ದೇವತೆ. ಸೃಷ್ಟಿಗೆ ಮೊದಲು ಪ್ರಜಾಪತಿಯ ಸ್ವರೂಪವೂ ಅನಿರ್ವಾಚ್ಯವೇ ಆಗಿರುತ್ತದೆ. ಹೀಗಾಗಿ ಪ್ರಜಾಪತಿಯೂ ಅನಿರುಕ್ತನೇ. ಈ ಮಂತ್ರದಿಂದ ಯಜ್ಞದ ಆರಂಭವಾಗುತ್ತದೆ.

# ತಸ್ಮಾತ್ಪ್ರಾಚೀನಗ್ಂ ರೇತೋ ಧೀಯತೇಽಗ್ನ ಆ ಯಾಹಿ ವೀತಯ ಇತ್ಯಾಹ ತಸ್ಮಾತ್ಪ್ರತೀಚೀಃ ಪ್ರಜಾ ಜಾಯಂತೇ

---

ತಸ್ಮಾತ್ । ಪ್ರಾಚೀನಮ್ । ರೇತಃ । ಧೀಯತೇ । ಅಗ್ನೇ । ಏತಿ । ಯಾಹಿ । ವೀತಯೇ।
ಇತಿ । ಆಹ । ತಸ್ಮಾತ್ । ಪ್ರತೀಚೀಃ । ಪ್ರಜಾ ಇತಿ ಪ್ರ-ಜಾಃ । ಜಾಯಂತೇ ।

---

| | |
|---|---|
| ತಸ್ಮಾತ್ ಪ್ರಾಚೀನಮ್ ರೇತಃ ಧೀಯತೇ | ಆದುದರಿಂದ ಪ್ರಮುಖವಾಗಿರುವ/ಎದುರಾಗಿರುವ ಸ್ತ್ರೀಶರೀರದಲ್ಲಿ ಸೇರಿ ಪ್ರಜೋತ್ಪಾದಕವಾದ ರೇತಸ್ಸು ಗರ್ಭಾಶಯದಲ್ಲಿ ಇಡಲ್ಪಡುತ್ತದೆ. |

**'ಆಯಾಹಿ' ಶಬ್ದದ ಪ್ರಶಂಸೆ**

| | |
|---|---|
| ಅಗ್ನೇ ಆ ಯಾಹಿ ವೀತಯ ಇತಿ ಆಹ | *ಪ್ರಥಮಮಂತ್ರದೊಡನೆ 'ಅಗ್ನ.....ಹವ್ಯದಾತಯೇ' ಎಂದು ಹೇಳುತ್ತಾನೆ. ಇದರಲ್ಲಿ [ಆ ಯಾಹಿ=ದೇವತೆಗಳಿಗೆ ಹವಿಸ್ಸನ್ನೀಯಲು ಬಾ] ಆ ಯಾಹಿ ಶಬ್ದದ ಉಚ್ಚಾರಣೆಯಿಂದ |
| ಪ್ರತೀಚೀಃ ಪ್ರಜಾಃ ಜಾಯಂತೇ | [ರೇತಸ್ಸು ಪ್ರಜಾರೂಪವಾಗಿ ಪರಿಣಮಿಸಿದ ಫಲವಾಗಿ] ಸದೃಶರಾಗಿರುವ ಪ್ರಜೆಗಳು ಹುಟ್ಟುವರು [ಹೊರಕ್ಕೆ ಬರುವರು] |

---

ಅನ್ನವು ವಾಜಶಬ್ದವಾಚ್ಯವಾಗಿದೆ. ಈ **'ಪ್ರ ವೋ ವಾಜಾ'**ಎಂಬಲ್ಲಿ ವಾಜಶಬ್ದವು ಇರುವುದರಿಂದ ಈ ಋಕ್ಕು ಅನ್ನಪ್ರಾಪ್ತಿಗೂ ಸಾಧನವಾಗಿದೆ.

---

* **ಪ್ರ ವೋ ವಾಜಾ....ಸುಮ್ನಯುಃ ।** ಎಂಬ ಮಂತ್ರದ ಕೊನೆಯ ಪಾದದೊಡನೆ **'ಅಗ್ನ ಆ ಯಾಹಿ ವೀತಯೇ ಗೃಣಾನೋ ಹವ್ಯದಾತಯೇ'** ಎಂಬ ಎರಡನೆಯ ಮಂತ್ರದ ಭಾಗವನ್ನು ಸೇರಿಸಿ ಹೋತೃವು ಪಠಿಸುವನು.

ಪ್ರ ವೋ ವಾಜಾ[ವಾಜಾಃ(೩)]ಇತ್ಯನ್ವಾಹ ಮಾಸಾ ವೈ ವಾಜಾ

ಅರ್ಧಮಾಸಾ ಅಭಿದ್ಯವೋ ದೇವಾ ಹವಿಷ್ಮಂತೋ ಗೌರ್ಘೃತಾಚೀ

---

ಪ್ರೇತಿ । ವಃ । ವಾಜಾಃ । [(೩)] ಇತಿ । ಅನ್ವಿತಿ । ಆಹ । ಮಾಸಾಃ । ವೈ । ವಾಜಾಃ।

ಅರ್ಧಮಾಸಾ ಇತ್ಯರ್ಧ–ಮಾಸಾಃ । ಅಭಿದ್ಯವ ಇತ್ಯಭಿ–ದ್ಯವಃ । ದೇವಾಃ । ಹವಿಷ್ಮಂತಃ।

ಗೌಃ । ಘೃತಾಚೀ ।

---

**ಮಂತ್ರದಲ್ಲಿರುವ ಶಬ್ದಗಳ ಪ್ರಶಂಸೆ**

| | |
|---|---|
| ಪ್ರ ವೋ ವಾಜಾಃ ಇತಿ ಅನ್ವಾಹ | ಹೋತೃವು 'ಪ್ರ ವೋ ವಾಜಾ' ಎಂಬ ಋಕ್ಕನ್ನು ಪಠಿಸುವನು [ಈ ಮಂತ್ರಗಳ ತಾತ್ಪರ್ಯವಿದು] |
| ಮಾಸಾಃ ವೈ ವಾಜಾಃ | ಅನ್ನರೂಪವಾದ/ಎಲ್ಲ ಕರ್ಮಗಳಿಗೂ ಆಧಾರವಾದ ವಾಜಶಬ್ದವಾಚ್ಯವಾದ ಮಾಸಗಳು [ನಮ್ಮ ಇಷ್ಟಸಿದ್ಧಿಯನ್ನುಂಟು ಮಾಡಲಿ] |
| ಅರ್ಧಮಾಸಾಃ ಅಭಿದ್ಯವಃ | ಪ್ರಕಾಶವನ್ನು ಕೊಡುವ ಅಭಿದ್ಯುಶಬ್ದ ಪ್ರತಿಪಾದ್ಯವಾದ ಅರ್ಧಮಾಸಗಳೂ [ಇಷ್ಟಾರ್ಥವನ್ನು ಕೊಡಲಿ] |
| ಹವಿಷ್ಮಂತಃ ದೇವಾಃ | ಯಾಗದ ಹವಿಸ್ಸನ್ನು ಸ್ವೀಕರಿಸುವ ದೇವತೆಗಳೂ [ಇಷ್ಟಾರ್ಥಪ್ರದರಾಗಲಿ] |
| ಘೃತಾಚೀ ಗೌಃ | ಯಜ್ಞದ ಹವೀರೂಪವಾದ ತುಪ್ಪವನ್ನು ಕೊಡುವ ಗೋವು ನಮಗೆ ಅನುಕೂಲ ವಾಗಿರಲಿ. |

---

ಹೋತೃವು **'ಪ್ರ'** ಎಂಬ ಉಪಸರ್ಗದಿಂದ ಕೂಡಿದ **'ಪ್ರ ವೋ ವಾಜಾ'** ಎಂಬ ಋಕ್ಕನ್ನು ಪಠಿಸುವನು. **'ಪ್ರ'** ಎಂದರೆ ಪ್ರಮುಖವಾಗಿರುವ ಎಂದು ಅರ್ಥ;ಇದು ಉಪಸರ್ಗದ ಪ್ರಶಂಸೆ.

ಯಜ್ಞೋ ದೇವಾಞ್ಜಿಗಾತಿ ಯಜಮಾನಸ್ಸುಮ್ನಯುರಿದಮಸೀದ

ಮಸೀತ್ಯೇವ ಯಜ್ಞಸ್ಯ ಪ್ರಿಯಂ ಧಾಮಾವರುಂಧೇ ಯಂ

ಕಾಮಯೇತ ಸರ್ವಮಾಯುರಿಯಾದಿತಿ

---

ಯಜ್ಞಃ । ದೇವಾನ್ । ಜಿಗಾತಿ । ಯಜಮಾನಃ । ಸುಮ್ನಯುರಿತಿ ಸುಮ್ನ-ಯುಃ । ಇದಮ್।

ಅಸಿ । ಇದಮ್ । ಅಸಿ । ಇತಿ । ಏವ । ಯಜ್ಞಸ್ಯ । ಪ್ರಿಯಮ್ । ಧಾಮ । ಅವೇತಿ।

ರುಂಧೇ । ಯಮ್ । ಕಾಮಯೇತ । ಸರ್ವಮ್ । ಆಯುಃ । ಇಯಾತ್ । ಇತಿ ।

---

ಯಜ್ಞಃ ದೇವಾನ್ ಜಿಗಾತಿ — ಯಜ್ಞವು ತೃಪ್ತಿದಾಯಕವಾಗಿ ದೇವತೆಗಳನ್ನು ಹೊಂದಲಿ.

ಯಜಮಾನಃ ಸುಮ್ನಯುಃ — ಯಜಮಾನನು ಸುಖವನ್ನು ಬಯಸಲಿ.

ಇದಮ್ ಅಸಿ ಇದಮ್ ಅಸಿ ಇತಿ — ಹೇ ಅಗ್ನಿಯೇ! ನೀನು ಈ ಮಾಸಾದಿ ರೂಪನಾಗಿರುವೆ ಎಂದು

ಯಜ್ಞಸ್ಯ ಪ್ರಿಯಮ್ ಧಾಮ ಅವರುಂಧೇ — [ಹೋತೃವು ಹೇಳುವುದರಿಂದಲೇ] ಯಜ್ಞದ ಪ್ರಿಯವಾದ ಅಗ್ನಿರೂಪ ಸಾಧನವನ್ನು/ವಾಜಾದಿಯಜ್ಞಸಾಧನಗಳನ್ನು ಯಜಮಾನನು ಹೊಂದುವನು.

**ಆಯುಷ್ಕಾಮನಿಗಾಗಿ ವಿಧಿ-ಪ್ರಶಂಸೆ**

ಯಮ್ ಸರ್ವಮ್ ಆಯುಃ ಇಯಾತ್ ಇತಿ ಕಾಮಯೇತ — ಹೋತೃವು ಯಾವ ಯಜಮಾನನು ಪೂರ್ಣಾಯುಸ್ಸನ್ನು ಹೊಂದಲೆಂದು ಬಯಸುವನೋ

---

ಮೊದಲ ಮಂತ್ರದ ಕೊನೆಯ ಪಾದದೊಡನೆ 'ಆ ಯಾಹಿ' ಎಂಬ ಪದವನ್ನು ಸೇರಿಸಿ ಹೋತೃವು ಪಠಿಸುವನು. ಹೀಗೆ ಪಠಿಸುವುದರಿಂದ ಪ್ರಜೆಗಳು ಜನಿಸುವರು ಎಂಬುದು ಆ ಯಾಹಿ ಶಬ್ದದ ಪ್ರಶಂಸೆಯಾಗಿದೆ.

ಪ್ರ ವೋ ವಾಜಾ ಇತಿ ತಸ್ಯಾನೂಚ್ಯಾಗ್ನ ಆ ಯಾಹಿ ವೀತಯ
ಇತಿ ಸಂತತಮುತ್ತರಮರ್ಧರ್ಚಮಾ ಲಭೇತ [(ಳ)] ಪ್ರಾಣೇ
ನೈವಾಸ್ಯಾಪಾನಂ ದಾಧಾರ ಸರ್ವಮಾಯುರೇತಿ

---

ಪ್ರೇತಿ । ವಃ । ವಾಜಾಃ । ಇತಿ । ತಸ್ಯ । ಅನೂಚ್ಯೇತ್ಯನು-ಉಚ್ಯ । ಅಗ್ನೇ । ಏತಿ । ಯಾಹಿ । ವೀತಯೇ । ಇತಿ । ಸಂತತಮಿತಿ ಸಂ-ತತಮ್ । ಉತ್ತರಮಿತ್ಯುತ್-ತರಮ್ । ಅರ್ಧರ್ಚಮಿತ್ಯರ್ಧ-ಋಚಮ್ । ಏತಿ । ಲಭೇತ । [(ಳ)] ಪ್ರಾಣೇನೇತಿ ಪ್ರ-ಅನೇನ । ಏವ । ಅಸ್ಯ । ಅಪಾನಮಿತ್ಯಪ-ಅನಮ್ । ದಾಧಾರ । ಸರ್ವಮ್ । ಆಯುಃ । ಏತಿ ।

---

| | |
|---|---|
| ತಸ್ಯ ಪ್ರ ವೋ ವಾಜಾಃ ಇತಿ ಅನೂಚ್ಯ | ಆ ಯಜಮಾನನಿಗೆ ಸಂಬಂಧಿಸಿದ ಸಾಮಿಧೇನಿಯಲ್ಲಿ 'ಪ್ರ ವೋ ವಾಜಾ' ಎಂಬ ಋಕ್ಕಿನ ಬಳಿಕ |
| ಅಗ್ನೇ ಆಯಾಹಿ ವೀತಯೇ ಇತಿ ಸಂತತವ್ ಉತ್ತರವ್ ಅರ್ಧರ್ಚವ್ ಆಲಭೇತ | ವಿಚ್ಛಿತ್ತಿ ಇಲ್ಲದೆ 'ಅಗ್ನ ಆಯಾಹಿ ವೀತಯೇ' ಎಂಬ ಮುಂದಿನ ಋಕ್ಕಿನ ಅರ್ಧ ಋಕ್ಕನ್ನು ಆರಂಭಿಸಬೇಕು. |
| ಅಸ್ಯ ಪ್ರಾಣೇನ ಏವ ಅಪಾನಮ್ ದಾಧಾರ | ಇದರಿಂದ ಹೊರಗೆ ಬರುವ ಪ್ರಾಣವಾಯುವಿನೊಡನೆ ಒಳಗೆ ಹೋಗುವ ಅಪಾನವಾಯುವನ್ನು ಈ ಯಜಮಾನನಿಗಾಗಿ ಹೋತೃವು ಹಿಡಿದಿಡುತ್ತಾನೆ. |
| ಸರ್ವಮ್ ಆಯುಃ ಏತಿ | ಯಜಮಾನನು ಪೂರ್ಣಾಯುಸ್ಸನ್ನು ಹೊಂದುವನು. |

ಯೋ ವಾ ಅರತ್ನಿಗ್‌ಂ ಸಾಮೀಧೇನೀನಾಂ ವೇದಾರತ್ನಾವೇವ

ಭ್ರಾತೃವ್ಯಂ ಕುರುತೇಽರ್ಧರ್ಚೌ ಸಂ ದಧಾತ್ಯೇಷ ವಾ

ಅರತ್ನಿಸ್ಸಾಮಿಧೇನೀನಾಂ

---

ಯಃ । ವೈ । ಅರತ್ನಿಮ್ । ಸಾಮಿಧೇನೀನಾಮಿತಿ ಸಾಂ-ಇಧೇನೀನಾಮ್ । ವೇದ । ಅರತ್ನೌ । ಏವ । ಭ್ರಾತೃವ್ಯಮ್ । ಕುರುತೇ । ಅರ್ಧರ್ಚಾವಿತ್ಯರ್ಧ-ಋಚೌ । ಸಮಿತಿ। ದಧಾತಿ । ಏಷಃ । ವೈ । ಅರತ್ನಿಃ । ಸಾಮಿಧೇನೀನಾಮಿತಿ ಸಾಂ-ಇಧೇನೀನಾಮ್ ।

---

**ಮತ್ತೊಂದು ವಿಧದಲ್ಲಿ ಸಾಂತತ್ಯದ ಪ್ರಶಂಸೆ**

| | |
|---|---|
| ಯಃ ವೈ ಸಾಮಿಧೇನೀನಾಮ್ ಅರತ್ನಿಮ್ ವೇದ | ಯಾವ ಯಜಮಾನನು ಸಾಮಿಧೇನಿಗಳ *ಅರತ್ನಿಯನ್ನು ತಿಳಿದಿರುತ್ತಾನೆಯೋ |
| **[ಸಃ]** ಭ್ರಾತೃವ್ಯಮ್ ಅರತ್ನೌ ಏವ ಕುರುತೇ | ಅವನು ತನ್ನ ಕೈಯಿನ ಅರತ್ನಿಭಾಗದಲ್ಲಿಯೇ ಶತ್ರುವನ್ನು ಇಟ್ಟುಕೊಳ್ಳುತ್ತಾನೆ. |
| ಅರ್ಧರ್ಚೌ ಸಂದಧಾತಿ | ಹೋತೃವು ಅರ್ಧರ್ಚಗಳನ್ನು ಸೇರಿಸಬೇಕು. |
| ಏಷಃ ವೈ ಸಾಮಿಧೇನೀನಾಮ್ ಅರತ್ನಿಃ | ಇದೇ ಸಾಮಿಧೇನಿಗಳ ಅರತ್ನಿರೂಪವಾಗಿದೆ. |

---

ಹೋತೃವು **'ಪ್ರ ವೋ ವಾಜಾ'** ಎಂಬ ಋಕ್ಕನ್ನು ಹೇಳುತ್ತಾನೆ. ಇದರಲ್ಲಿರುವ ಶಬ್ದಗಳಿಂದ ಯಜ್ಞದ ಸಾಧನಗಳೆಲ್ಲವನ್ನೂ ಸ್ತುತಿಸಿದಂತಾಗುತ್ತದೆ. ಅಲ್ಲದೆ ಯಜಮಾನನು ಯಜ್ಞದ ಪ್ರಿಯಸ್ಥಾನವಾದ ಅಗ್ನಿಸ್ವರೂಪವನ್ನು ಪಡೆದಂತಾಗುತ್ತದೆ.

ಯಾವ ಯಜಮಾನನು ಪೂರ್ಣಾಯುಸ್ಸನ್ನು ಹೊಂದಲೆಂದು ಹೋತೃವು ಬಯಸುವನೋ, ಆ ಯಜಮಾನನಿಗೆ ಸಂಬಂಧಿಸಿದ ಸಾಮಿಧೇನಿಗಳಲ್ಲಿ **'ಪ್ರವೋ ವಾಜಾ'** ಎಂಬ

---

***ಅರತ್ನಿ=ಚಾಚಿದ ಕಿರುಬೆರಳುಳ್ಳ ಮೊಳ.**

ಯ ಏವಂ ವೇದಾರತ್ನಾವೇವ ಭ್ರಾತೃವ್ಯಂ ಕುರುತ ಋಷೇರ್-

ಋಷೇರ್ವಾ ಏತಾ ನಿರ್ಮಿತಾ ಯಥ್ಸಾಮಿಧೇನ್ಯಸ್ತಾ

ಯದಸಂಯುಕ್ತಾಃ ಸ್ಯುಃ

---

ಯಃ । ಏವಮ್ । ವೇದ । ಅರತ್ನೌ । ಏವ । ಭ್ರಾತೃವ್ಯಮ್ । ಕುರುತೇ । ಋಷೇರ್‌ಋಷೇರಿತ್ಯೃಷೇಃ-ಋಷೇಃ । ವೈ । ಏತಾಃ । ನಿರ್ಮಿತಾ ಇತಿ ನಿಃ-ಮಿತಾಃ । ಯತ್ । ಸಾಮಿಧೇನ್ಯ ಇತಿ ಸಾಂ-ಇಧೇನ್ಯಃ । ತಾಃ । ಯತ್ । ಅಸಂಯುಕ್ತಾ ಇತ್ಯಸಂ-ಯುಕ್ತಾಃ । ಸ್ಯುಃ ।

---

| | |
|---|---|
| ಯಃ ಏವಮ್ ವೇದ | ಯಾವನು ಹೀಗೆ ತಿಳಿದಿರುವನೋ, |
| ಭ್ರಾತೃವ್ಯಮ್ ಅರತ್ನೌ ಏವ ಕುರುತೇ | ಅವನು ತನ್ನ ಕೈಯಿನ ಅರತ್ನಿಪ್ರದೇಶ ದಲ್ಲಿಯೇ ಶತ್ರುವನ್ನು ಹಿಡಿದಿಟ್ಟುಕೊಂಡ ವನಾಗುತ್ತಾನೆ./ತನ್ನ ಅಧೀನ ಮಾಡಿ ಕೊಳ್ಳುತ್ತಾನೆ. |

**ಅರ್ಧ ಋಕ್ಕುಗಳನ್ನು ಕೂಡಿಸಿ ಹೇಳುವುದರ ಬಗ್ಗೆ ಇನ್ನೊಂದು ಪ್ರಶಂಸೆ**

| | |
|---|---|
| ಯತ್ ಸಾಮಿಧೇನ್ಯಃ ಏತಾಃ | ಸಾಮಿಧೇನಿಗಳೆಂಬುವು ಯಾವುವುಂಟೋ ಅವು |
| ಋಷೇಃ ಋಷೇಃ ನಿರ್ಮಿತಾಃ ವೈ | ಮಂತ್ರದ್ರಷ್ಟಾರರಾದ ಬೇರೆ ಬೇರೆ ಋಷಿಗಳಿಂದ ಪರಮಾತ್ಮನ ಅನುಗ್ರಹ ದಿಂದ ನಿರ್ಮಿತವಾದವು/ತಿಳಿದವು ಗಳಾಗಿವೆ. |
| ತಾಃ ಯತ್ ಅಸಂಯುಕ್ತಾಃ ಸ್ಯುಃ | ಅವು ಒಂದು ವೇಳೆ ಸೇರಿಕೊಳ್ಳದೆ ಬೇರೆ ಬೇರೆಯಾಗಿದ್ದರೆ, |

ಪ್ರಜಯಾ ಪಶುಭಿರ್ಯಜಮಾನಸ್ಯ ವಿ ತಿಷ್ಠೇರನ್ನರ್ಧರ್ಚೌ

ಸಂ ದಧಾತಿ ಸಂ ಯುನಕ್ತ್ಯೇವೈನಾ-

---

ಪ್ರಜಯೇತಿ ಪ್ರ-ಜಯಾ । ಪಶುಭಿರಿತಿ ಪಶು-ಭಿಃ । ಯಜಮಾನಸ್ಯ । ವೀತಿ । ತಿಷ್ಠೇರನ್ । ಅರ್ಧರ್ಚಾವಿತ್ಯರ್ಧ-ಋಚೌ । ಸಮಿತಿ । ದಧಾತಿ । ಸಮಿತಿ । ಯುನಕ್ತಿ । ಏವ । ಏನಾಃ ।

---

| | |
|---|---|
| ಯಜಮಾನಸ್ಯ ಪ್ರಜಯಾ ಪಶುಭಿಃ ವಿತಿಷ್ಠೇರನ್ | ಯಜಮಾನನ ಪ್ರಜೆಗಳು ಮತ್ತು ಪಶುಗಳು ಕೂಡ ಇರಲಾರವು. [ಪ್ರಜಾ-ಪಶು ಸಂಪತ್ತಿಯನ್ನು ತರಲಾರವು] |
| ಅರ್ಧರ್ಚೌ ಸಂದಧಾತಿ | ಹಿಂದೆ ಹೇಳಿದಂತೆ ಎರಡು ಅರ್ಧರ್ಚಗಳನ್ನು ಕೂಡಿಸಬೇಕು. |
| ಏನಾಃ ಸಂಯುನಕ್ತಿ ಏವ | ಇದರಿಂದ ಈ ಸಾಮಿಧೇನಿಗಳನ್ನು ಚೆನ್ನಾಗಿ ಕೂಡಿಸಿದಂತಾಗುತ್ತದೆ. |

---

ಋಕ್ಕಿನ ಬಳಿಕ ವಿಚ್ಛಿತ್ತಿ ಇಲ್ಲದೆ **'ಅಗ್ನ ಆಯಾಹಿ'** ಎಂಬ ಅರ್ಧರ್ಚವನ್ನು ಹೇಳಬೇಕು. ಇದರಿಂದ ಯಜಮಾನನು ಪೂರ್ಣಾಯುಸ್ಸನ್ನು ಹೊಂದುವನು.

ಇಲ್ಲಿ ಹೋತೃವಿಗೆ ಸಂಬಂಧಿಸಿದಂತೆ **'ಕಾಮಯೇತ'** ಎಂದು ಹೇಳಿದ್ದರೂ ಅದು ಯಜಮಾನನಿಗೆ ಸಂಬಂಧಿಸಿದ ಕಾಮನೆಯೇ ಆಗಿರುತ್ತದೆ. ಉಳಿದ ಕಡೆಗಳಲ್ಲಿಯೂ ಹೀಗೆಯೇ ತಿಳಿಯಬೇಕು.

ಯಜಮಾನನು ಸಾಮಿಧೇನಿಗಳ ಅರತ್ನಿಯನ್ನು ತಿಳಿಯಬೇಕು. ಸಾಮಿಧೇನಿಗಳಲ್ಲಿ ಮೊದಲಿನ ಋಕ್ಕಿನ ಉತ್ತರಾರ್ಧದೊಡನೆ ಎರಡನೆಯ ಋಕ್ಕಿನ ಪೂರ್ವಾರ್ಧವನ್ನು ಸೇರಿಸಿ ಹೇಳಬೇಕು. ಇದೇ ಸಾಮಿಧೇನಿಗಳ ಅರತ್ನಿರೂಪವಾಗಿದೆ. ಹೀಗೆ ತಿಳಿದವನು ತನ್ನ ಶತ್ರುವನ್ನು ಕೈಯಲ್ಲಿಯೇ ಹಿಡಿದಿಟ್ಟುಕೊಂಡವನಾಗುತ್ತಾನೆ.

ಸ್ತಾ ಅಸ್ಮೈ ಸಂಯುಕ್ತಾ ಅವರುದ್ಧಾಸ್ಸರ್ವಾಮಾಶಿಷಂ

ದುಹ್ರೇ ॥೪೩-7॥

[ ಬರ್ಸಂ ವೋ ಜಾಯಂತೇ ಪ್ರ ವೋ ವಾಜಾ ಲಭೇತ ದಧಾತಿ ಸಂ

ದಶ ಚ ॥ ]

---

ತಾಃ । ಅಸ್ಮೈ । ಸಂಯುಕ್ತಾ ಇತಿ ಸಂ-ಯುಕ್ತಾಃ । ಅವರುದ್ಧಾ ಇತ್ಯವ-ರುದ್ಧಾಃ । ಸರ್ವಾಮ್ । ಆಶಿಷಮಿತ್ಯಾ-ಶಿಷಮ್ । ದುಹ್ರೇ ॥7॥

---

| | |
|---|---|
| ಸಂಯುಕ್ತಾಃ ಅವರುದ್ಧಾಃ ತಾಃ | ಆ ಸಾಮಿಧೇನಿಗಳು ಚೆನ್ನಾಗಿ ಸೇರಿ ಕೊಂಡವುಗಳಾಗಿ |
| ಅಸ್ಮೈ ಸರ್ವಾಮ್ ಆಶಿಷಮ್ ದುಹ್ರೇ | ಈ ಯಜಮಾನನಿಗೆ ಸಕಲವಿಧವಾದ ಇಷ್ಟಾರ್ಥಗಳನ್ನೂ ನೀಡುತ್ತವೆ. |

---

ಸಾಮಿಧೇನೀಮಂತ್ರಗಳು ಬೇರೆ ಬೇರೆ ಋಷಿಗಳಿಂದ ತಿಳಿದವುಗಳಾಗಿವೆ. ಅವುಗಳು ಒಂದೊನ್ನೊಂದು ಸೇರದೇ ಬೇರೆ ಬೇರೆಯಾಗಿದ್ದರೆ ಋಷಿಗಳಿಂದಲೇ ಉತ್ಪನ್ನರಾದ ಪ್ರಜಾ-ಪಶುಗಳಿಂದ ಬೇರೆಯಾಗುತ್ತವೆ. ಆದುದರಿಂದ ಅವುಗಳನ್ನು ವಿಧಿಯಿರುವ ಕಡೆ ಕೂಡಿಸಿ ಹೇಳಬೇಕು. ಆಗ ಸಾಮಿಧೇನಿಗಳು ಯಜಮಾನನಿಗೆ ಬಯಸಿದ್ದೆಲ್ಲವನ್ನೂ ತಾವೇ ನೀಡುತ್ತವೆ.

ಇವೆಲ್ಲವೂ ಸಾಂತತ್ಯಪಾಠದ ಬಗೆಬಗೆಯ ಪ್ರಶಂಸೆಗಳು.

* * *

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

### ೧) 'ತ್ರಿಃ ಪ್ರಥಮಾಮನ್ವಾಹ' ಎಂಬಲ್ಲಿ ಪ್ರಾಥಮ್ಯ ಯಾವುದಕ್ಕೆ ಸೇರಿದುದು?

**[ಜೈ.ಸೂ.9.1.14]**

ಸಾಮಿಧೇನಿಗಳನ್ನು ಹೇಳುವಾಗ **'ತ್ರಿಃ ಪ್ರಥಮಾಮ್'** ಎಂದು ಶ್ರುತಿಯು ಹೇಳುತ್ತದೆ. ದರ್ಶ–ಪೂರ್ಣಮಾಸಗಳಲ್ಲಿ **'ಪ್ರ ವೋ ವಾಜಾ'** ಎಂಬ ಋಕ್ ಮೊದಲನೆಯದಾದುದರಿಂದ ಅದಕ್ಕೆ ಆವೃತ್ತಿಯು ಯುಕ್ತ. ವಿಕೃತಿಯಾಗಗಳಲ್ಲಿ ಸಾಮಿಧೇನಿಯ ಮೊದಲನೆಯ ಋಕ್ಕು ಬೇರೆಯದಿದ್ದರೆ ಅದಕ್ಕೆ ಆವೃತ್ತಿಯೇ ? ಅಥವಾ ಪ್ರಥಮಾ ಎಂಬ ಸ್ತ್ರೀಲಿಂಗ ನಿರ್ದೇಶವಿರುವುದರಿಂದ ಅದು ಋಕ್ಕಿಗೆ ಅನ್ವಯಿಸಿ ವಿಕೃತಿಯಲ್ಲಿಯೂ ಈ ಋಕ್ಕನ್ನೇ ಆವೃತ್ತಿ ಮಾಡಬೇಕೆ ? ಇದು **ಸಂಶಯ.**

**'ಪ್ರಥಮಾಮ್'** ಎಂಬುದು ಋಕ್ಕಿಗೆ ಅನ್ವಯಿಸುವುದರಿಂದ **'ಪ್ರ ವೋ ವಾಜಾ'** ಎಂಬುದು ಬೇರೆ ಸ್ಥಾನದಲ್ಲಿ ಇದ್ದರೂ ಅದನ್ನೇ ಆವೃತ್ತಿ ಮಾಡುವುದು ಯುಕ್ತ. ಇದು ಇಲ್ಲಿನ **ಪೂರ್ವಪಕ್ಷ.**

**'ಪ್ರಥಮಾಮ್'** ಎಂಬಲ್ಲಿ ಋಕ್ಕಿನಲ್ಲಿ ಅನ್ವಯವಾಗುವಂತಹ ಸ್ತ್ರೀಲಿಂಗಬೋಧಕ **'ಟಾಪ್'** ಪ್ರತ್ಯಯಕ್ಕಿಂತಲೂ ಮೊದಲು ಪಠಿತವಾಗಿರುವ **'ಪ್ರಥಮ'** ಎಂಬ ಪ್ರಾತಿಪದಿಕವು ಪ್ರಬಲವಾದುದರಿಂದ ವಿಕೃತಿಯಲ್ಲಿ ಮೊದಲನೆಯದಾಗಿ ಪಠಿತವಾಗಿರುವ ಯಾವ ಋಕ್ಕು ಇದ್ದರೂ ಅದನ್ನೇ ಆವೃತ್ತಿ ಮಾಡಬೇಕು. **'ಪ್ರ ವೋ ವಾಜಾ'** ಎಂಬುದು ಬೇರೆಯ ಸ್ಥಾನದಲ್ಲಿ ಇದ್ದರೆ ಆವೃತ್ತಿ ಮಾಡಬೇಕಿಲ್ಲ. ಏಕೆಂದರೆ ಪ್ರಾಥಮ್ಯವು ಸ್ಥಾನಧರ್ಮ. ಋಕ್ಕಿನ ಧರ್ಮವಲ್ಲ. ಇದು ಇಲ್ಲಿನ **ಸಿದ್ಧಾಂತ.**

## ॥ ಅಷ್ಟಮೋಽನುವಾಕಃ ॥

ಅಯಜ್ಞೋ ವಾ ಏಷ ಯೋಽಸಾಮಾಽಗ್ನ ಆ ಯಾಹಿ ವೀತಯ

ಇತ್ಯಾಹ ರಥಂತರಸ್ಯೈಷ ವರ್ಣ

---

ಅಯಜ್ಞಃ । ವೈ । ಏಷಃ । ಯಃ । ಅಸಾಮ । ಅಗ್ನೇ । ಆ । ಯಾಹಿ । ವೀತಯೇ ।

ಇತಿ । ಆಹ । ರಥಂತರಸ್ಯೇತಿ ರಥಂ-ತರಸ್ಯ । ಏಷಃ । ವರ್ಣಃ ।

---

ಏಳನೆಯ ಅನುವಾಕದಲ್ಲಿ ಮೊದಲನೆಯ ಸಾಮಿಧೇನೀಮಂತ್ರದ ವಿಸ್ತೃತವಾದ ವ್ಯಾಖ್ಯೆಯಿದೆ. ಈ ಎಂಟನೆಯ ಅನುವಾಕದಲ್ಲಿ ಉಳಿದ ಸಾಮಿಧೇನೀಮಂತ್ರಗಳ ಪ್ರಶಂಸೆಯಿದೆ.

### ಎರಡು, ಮೂರು ಹಾಗೂ ನಾಲ್ಕನೆಯ ಸಾಮಿಧೇನಿಗಳ ಪ್ರಶಂಸೆ

| | |
|---|---|
| ಅಯಜ್ಞಃ ವೈ ಏಷಃ ಯಃ ಅಸಾಮಾ | ಯಾವ ಯಜ್ಞವು ಸಾಮಮಂತ್ರರಹಿತವಾಗಿರುವುದೋ ಅದು ಮುಖ್ಯಯಜ್ಞವಲ್ಲ. |
| ಅಗ್ನೇ ಆ ಯಾಹಿ ವೀತಯೇ ಇತಿ ಆಹ | **'ಅಗ್ನ ಆ ಯಾಹಿ ವೀತಯೇ'** ಎಂದು ಮೊದಲಾಗಿರುವ ಮಂತ್ರವನ್ನು [ಹೋತೃವು] ಹೇಳುತ್ತಾನೆ. |
| ಏಷಃ ರಥಂತರಸ್ಯ ವರ್ಣಃ | ಸಾಮಗಳಲ್ಲಿ ಮೊದಲನೆಯದಾದ ರಥಂತರದ ಸ್ವರೂಪವೇ ಈ ಮಂತ್ರವಾಗಿದೆ. |

---

ಯಜ್ಞಗಳಲ್ಲಿ ಸಾಮಗಾನವು ಮುಖ್ಯ.ಅದಿಲ್ಲದ ಯಜ್ಞವು ಮುಖ್ಯಯಜ್ಞವೆನಿಸುವುದಿಲ್ಲ. ಈ ನ್ಯೂನತೆಯನ್ನು ಹೋತೃವು 'ಅಗ್ನ ಆ ಯಾಹಿ' ಮೊದಲಾದ ಮೂರು ಸಾಮರೂಪವಾದ ಸಾಮಿಧೇನೀಮಂತ್ರಗಳ ಪಠನದಿಂದ ಹೋಗಲಾಡಿಸುತ್ತಾನೆ.

ಸ್ತಂ ತ್ವಾ ಸಮಿದ್ಭಿರಂಗಿರ ಇತ್ಯಾಹ ವಾಮದೇವ್ಯಸ್ಯೈಷ ವರ್ಣೋ ಬೃಹದಗ್ನೇ ಸುವೀರ್ಯಮಿತ್ಯಾಹ ಬೃಹತ ಏಷ ವರ್ಣೋ ಯದೇತಂ ತೃಚಮನ್ವಾಹ

---

ತಮ್ । ತ್ವಾ । ಸಮಿದ್ಭಿರಿತಿ ಸಮಿತ್-ಭಿಃ । ಅಂಗಿರಃ । ಇತಿ । ಆಹ । ವಾಮದೇವ್ಯಸ್ಯೇತಿ ವಾಮ-ದೇವ್ಯಸ್ಯ । ಏಷಃ । ವರ್ಣಃ । ಬೃಹತ್ । ಅಗ್ನೇ । ಸುವೀರ್ಯಮಿತಿ ಸು-ವೀರ್ಯಮ್ । ಇತಿ । ಆಹ । ಬೃಹತಃ । ಏಷಃ । ವರ್ಣಃ । ಯತ್ । ಏತಮ್ । ತೃಚಮ್ । ಅನ್ವಾಹೇತ್ಯನು-ಆಹ ।

---

| | |
|---|---|
| ತಮ್ ತ್ವಾ ಸಮಿದ್ಭಿರಂಗಿರಃ ಇತಿ ಆಹ | **'ತಂ ತ್ವಾ ಸಮಿದ್ಭಿಃ'** ಎಂದು ಮೊದಲಾಗಿರುವ ಮಂತ್ರವನ್ನು ಹೋತೃವು ಪಠಿಸುವನು. |
| ಏಷಃ ವಾಮದೇವ್ಯಸ್ಯ ವರ್ಣಃ | ಇದು ವಾಮದೇವ್ಯಸಾಮದ ಸ್ವರೂಪವಾಗಿದೆ. |
| ಬೃಹದಗ್ನೇ ಸುವೀರ್ಯಮ್ ಇತಿ ಆಹ | ಹೋತೃವು **'ಸ ನಃ ಪೃಥುಃ'** ಎಂಬಲ್ಲಿ **'ಬೃಹದಗ್ನೇ'** ಎಂಬುದಾಗಿ ಬೃಹತ್ ಶಬ್ದವನ್ನು ಹೊಂದಿರುವ ಸಾಮಿಧೇನೀ ಮಂತ್ರವನ್ನು ಹೇಳುತ್ತಾನೆ. |
| ಬೃಹತಃ ಏಷಃ ವರ್ಣಃ | ಇದು ಬೃಹತ್ಸಾಮದ ರೂಪವಾಗಿದೆ. |
| ಯತ್ ಏತಮ್ ತೃಚಮ್ ಅನ್ವಾಹ | ಈ ಮೂರು ಋಕ್‌ಗಳನ್ನು ಹೇಳುವುದೆಂಬುದು ಯಾವುದುಂಟೋ [ಆದರಿಂದ] |

---

ರಥಂತರಸಾಮವು ಸಾಮಗಳಲ್ಲಿ ಮುಖ್ಯವಾದುದು. ಇಲ್ಲಿ ಪಾಠ ಮಾಡುವ ಋಕ್‌ಗಳಲ್ಲಿ **'ಅಗ್ನ ಆ ಯಾಹಿ'** ಎಂಬುದು ಮೊದಲನೆಯದಾದುದರಿಂದ ಮುಖ್ಯವಾಗಿದೆ.

ಯಜ್ಞಮೇವ ತಥ್ಸಾಮನ್ವಂತಂ ಕರೋತ್ಯಗ್ನಿರಮುಷ್ಮಿನ್ಲೋಕ

ಆಸೀದಾದಿತ್ಯೋಽಸ್ಮಿನ್ತಾವಿಮೌ ಲೋಕಾವಶಾಂತಾ

[..ವಶಾಂತೌ(೧)ಆಸ್ತಾಮ್]ವಾಸ್ತಾಂ

---

ಯಜ್ಞಮ್ । ಏವ । ತತ್ । ಸಾಮನ್ವಂತಮಿತಿ ಸಾಮನ್-ವಂತಮ್ । ಕರೋತಿ । ಅಗ್ನಿಃ । ಅಮುಷ್ಮಿನ್ । ಲೋಕೇ । ಆಸೀತ್ । ಆದಿತ್ಯಃ । ಅಸ್ಮಿನ್ । ತೌ । ಇಮೌ । ಲೋಕೌ । ಅಶಾಂತೌ । [(೧)] । ಆಸ್ತಾಮ್ ।

---

| | |
|---|---|
| ತತ್ ಯಜ್ಞಮ್ ಸಾಮನ್ವಂತಮ್ ಕರೋತಿ | ಹೋತೃವು [ಅನುವಚನದಿಂದ] ದರ್ಶ-ಪೂರ್ಣಮಾಸಯಜ್ಞಗಳನ್ನು ಸಾಮಯುಕ್ತವನ್ನಾಗಿಸುತ್ತಾನೆ. |

**ಈ ತೃಚೆಯ ಮೊದಲನೆಯ ಹಾಗೂ ಮೂರನೆಯ ಮಂತ್ರಗಳನ್ನು ಕುರಿತು ಇನ್ನೊಂದು ರೀತಿಯ ಪ್ರಶಂಸೆ**

| | |
|---|---|
| ಅಗ್ನಿಃ ಅಮುಷ್ಮಿನ್ ಲೋಕೇ ಆಸೀತ್ ಆದಿತ್ಯಃ ಅಸ್ಮಿನ್**[ಲೋಕೇ ಆಸೀತ್]** | ಒಂದು ಕಾಲದಲ್ಲಿ ಅಗ್ನಿಯು ಸ್ವರ್ಲೋಕದಲ್ಲಿ ಇದ್ದನು. ಆದಿತ್ಯನು ಈ ಭೂಲೋಕದಲ್ಲಿ ಇದ್ದನು. |
| ತೌ ಇಮೌ ಲೋಕೌ ಅಶಾಂತೌ ಆಸ್ತಾಮ್ | ಆಗ ಈ ಎರಡು ಲೋಕಗಳೂ ಶಾಂತಿ ಇಲ್ಲದವುಗಳಾಗಿದ್ದವು. |

---

ಅಥವಾ ಸಾಮಶಾಖಾಂತರದಲ್ಲಿ ಈ ಋಕ್ಕೇ ಪ್ರಕೃತಿಯಾದ ಋಕ್ಕೂ ಆಗಿರಬಹುದು. ಮೂರನೆಯ ಋಕ್ಕಿನಲ್ಲಿ 'ಬೃಹತ್'ಶಬ್ದವು ಇದೆ.ಆದುದರಿಂದ ಇದು ಬೃಹತ್ಸಾಮಸ್ವರೂಪ. ಹೀಗೆ ಈ ಸಾಮಿಧೇನೀ ಋಕ್ಕುಗಳ ಪ್ರಶಂಸೆಯು ಇದೆ.

ತೇ ದೇವಾ ಅಬ್ರುವನ್ನೇತೇಮೌ ವಿ ಪರ್ಯೂಹಾಮೇತ್ಯಗ್ನ ಆ

ಯಾಹಿ ವೀತಯ ಇತ್ಯಸ್ಮಿನ್ಲೋಕೇಽಗ್ನಿಮದಧುರ್ಬೃಹದಗ್ನೇ

ಸುವೀರ್ಯಮಿತ್ಯಮುಷ್ಮಿನ್ಲೋಕ ಆದಿತ್ಯಂ

---

ತೇ । ದೇವಾಃ । ಅಬ್ರುವನ್ನ್ । ಏತಿ । ಇತ । ಇಮೌ । ವಿ । ಪರೀತಿ । ಊಹಾಮ।

ಇತಿ । ಅಗ್ನೇ । ಏತಿ । ಯಾಹಿ । ವೀತಯೇ । ಇತಿ । ಅಸ್ಮಿನ್ನ್ । ಲೋಕೇ । ಅಗ್ನಿಮ್।

ಅದಧುಃ । ಬೃಹತ್ । ಅಗ್ನೇ । ಸುವೀರ್ಯಮಿತಿ ಸು-ವೀರ್ಯಮ್ । ಇತಿ । ಅಮುಷ್ಮಿನ್ನ್।

ಲೋಕೇ । ಆದಿತ್ಯಮ್ ।

---

| | |
|---|---|
| ತೇ ದೇವಾಃ ಏತ ಇಮೌ ವಿಪ ಯೂರ್ಹಾಮ ಇತಿ ಅಬ್ರುವನ್ನ್ | [ಆಗ] ಆ ದೇವತೆಗಳು ತಮ್ಮಲ್ಲಿಯೇ 'ಬನ್ನಿ ಈ ಅಗ್ನಿಸೂರ್ಯರನ್ನು ವ್ಯತ್ಯಾಸವಾಗಿ ಸ್ಥಾಪಿಸೋಣ' ಎಂದು ಹೇಳಿಕೊಂಡರು. |
| ಅಗ್ನೇ ಆ ಯಾಹಿ ವೀತಯೇ ಇತಿ ಅಸ್ಮಿನ್ ಲೋಕೇ ಅಗ್ನಿಮ್ ಅದಧುಃ | **'ಅಗ್ನ ಆ ಯಾಹಿ ವೀತಯೇ'** ಎಂಬ ಮಂತ್ರದಿಂದ ಈ ಭೂಲೋಕದಲ್ಲಿ ಅಗ್ನಿಯನ್ನು ಇಟ್ಟರು. |
| ಬೃಹತ್ ಅಗ್ನೇ ಸುವೀರ್ಯಮ್ ಇತಿ ಅಮುಷ್ಮಿನ್ ಲೋಕೇ ಆದಿತ್ಯಮ್ **[ಅದಧುಃ]** | **'ಬೃಹದಗ್ನೇ ಸುವೀರ್ಯಮ್'** ಎಂಬ ಮಂತ್ರದಿಂದ ಸುವರ್ಲೋಕದಲ್ಲಿ ಸೂರ್ಯನನ್ನು ಇಟ್ಟರು. |

---

ಅನೇಕ ಉಪಾಖ್ಯಾನಗಳಂತೆ ಈ ಉಪಾಖ್ಯಾನವೂ ಸಹ ಪ್ರಶಂಸಾರ್ಥವಾದ ಉಪಾಖ್ಯಾನ.

ಅಗ್ನಿಯು ಸ್ವರ್ಲೋಕದಲ್ಲಿ ಇದ್ದನಷ್ಟೆ. ದೇವತೆಗಳು ಅಮೃತಾಹಾರಿಗಳಾದುದರಿಂದ ಪಾಕದ ಆವಶ್ಯಕತೆ ಇಲ್ಲ. ಪಾಕವೇ ಅನವಶ್ಯಕವಾದುದರಿಂದ ಪಾಕಸಾಧನವಾದ ಅಗ್ನಿಯ ಅವಶ್ಯಕತೆಯೂ ಇಲ್ಲ.

ತತೋ ವಾ ಇಮೌ ಲೋಕಾವಶಾಮ್ಯತಾಂ ಯದೇವಮ

ನ್ವಾಹಾನಯೋರ್ಲೋಕಯೋಶ್ಶಾಂತ್ಯೈ ಶಾಮ್ಯತೋಽಸ್ಮೈ

ಇಮೌ ಲೋಕೌ ಯ ಏವಂ ವೇದ

---

ತತಃ । ವೈ । ಇಮೌ । ಲೋಕೌ । ಅಶಾಮ್ಯತಾಮ್ । ಯತ್ । ಏವಮ್ ।

ಅನ್ವಾಹೇತ್ಯನು-ಆಹ । ಅನಯೋಃ । ಲೋಕಯೋಃ । ಶಾಂತ್ಯೈ । ಶಾಮ್ಯತಃ ।

ಅಸ್ಮೈ। ಇಮೌ । ಲೋಕೌ । ಯಃ । ಏವಮ್ । ವೇದ ।

---

| | |
|---|---|
| ತತಃ ವೈ ಇಮೌ ಲೋಕೌ ಅಶಾಮ್ಯತಾಮ್ | ಬಳಿಕ ಈ ಎರಡು ಲೋಕಗಳೂ ಶಾಂತವಾದವು/ಸಂತಾಪವಿಲ್ಲದೆ ತಣ್ಣಗಾದವು. |
| ಯತ್ ಏವಮ್ ಅನ್ವಾಹ | ಹೋತೃವು ಹೀಗೆ ಸಾಮಿಧೇನಿಗಳನ್ನು ಹೇಳುತ್ತಾನೆಂಬುದು ಯಾವುದುಂಟೋ |
| ಅನಯೋಃ ಲೋಕಯೋಃ ಶಾಂತ್ಯೈ [ಭವತಿ] | ಆ ನಿರ್ವಚನವು ಎರಡು ಲೋಕಗಳ ಶಾಂತಿಗೆ ಕಾರಣವಾಗುತ್ತದೆ. |
| ಇಮೌ ಲೋಕೌ ಅಸ್ಮೈ ಶಾಮ್ಯತಃ | ಈ ಯಜಮಾನನಿಗೆ ಈ ಎರಡು ಲೋಕಗಳೂ ಶಾಂತವಾಗುತ್ತವೆ. |
| ಯಃ ಏವಂ ವೇದ | ಯಾವನು ಹೀಗೆ ಅರಿಯುವನೋ [ಅವನಿಗೂ ಉಭಯಲೋಕಶಾಂತಿಜೀವನವು ಲಭಿಸುವುದು.] |

---

ಭೂಲೋಕದಲ್ಲಿ ಆದಿತ್ಯನು ಇದ್ದನಷ್ಟೆ. ಮನುಷ್ಯರಿಗೆ ಸೂರ್ಯನಿಂದ ಪ್ರಕಾಶವು ಬೇಕೇ ಹೊರತು ಸುಡುವ ಸೂರ್ಯನ ಆವಶ್ಯಕತೆಯಿಲ್ಲ. ಈ ಅಗ್ನಿ-ಸೂರ್ಯರು ಬೇರೆ ಬೇರೆ ಕಡೆ ಇದ್ದುದರಿಂದ ಕ್ಷೋಭೆ ಉಂಟಾಯಿತು.

ಪಂಚದಶ ಸಾಮಿಧೇನೀರನ್ವಾಹ ಪಂಚದಶ [..ದಶ(೨)] ವಾ ಅರ್ಧಮಾಸಸ್ಯ ರಾತ್ರಯೋಽರ್ಧಮಾಸಶಸ್ಸಂವಥ್ಸರ ಆಪ್ಯತೇ ತಾಸಾಂ ತ್ರೀಣಿ ಚ ಶತಾನಿ ಷಷ್ಟಿಶ್ಚಾಕ್ಷರಾಣಿ

---

ಪಂಚದಶೇತಿ ಪಂಚ-ದಶ । ಸಾಮಿಧೇನೀರಿತಿ ಸಾಂ-ಇಧೇನೀಃ । ಅನ್ವಿತಿ । ಆಹ । ಪಂಚದಶೇತಿ ಪಂಚ-ದಶ । [(೨)]। ವೈ । ಅರ್ಧಮಾಸಸ್ಯೇತ್ಯರ್ಧ-ಮಾಸಸ್ಯ । ರಾತ್ರಯಃ। ಅರ್ಧಮಾಸಶ ಇತ್ಯರ್ಧಮಾಸ-ಶಃ । ಸಂವಥ್ಸರ ಇತಿ ಸಂ-ವಥ್ಸರಃ । ಆಪ್ಯತೇ । ತಾಸಾಮ್ । ತ್ರೀಣಿ । ಚ । ಶತಾನಿ । ಷಷ್ಟಿಃ । ಚ । ಅಕ್ಷರಾಣಿ ।

---

## ಪಂಚದಶಸಂಖ್ಯಾವಿಧಿ; ಪ್ರಶಂಸೆ

| | |
|---|---|
| ಪಂಚದಶ ಸಾಮಿಧೇನೀಃ ಅನ್ವಾಹ | ಹದಿನೈದು ಸಂಖ್ಯೆಯ ಸಾಮಿಧೇನಿಗಳನ್ನು ಹೇಳಬೇಕು. |
| ಅರ್ಧಮಾಸಸ್ಯ ರಾತ್ರಯಃ ಪಂಚದಶ ವೈ | ಒಂದು ಪಕ್ಷದ ರಾತ್ರಿಗಳ ಸಂಖ್ಯೆಯೂ ಹದಿನೈದಷ್ಟೆ. |
| ಅರ್ಧಮಾಸಶಃ ಸಂವಥ್ಸರಃ ಆಪ್ಯತೇ | ಹೀಗೆ ಇಪ್ಪತ್ತುನಾಲ್ಕು ಅರ್ಧಮಾಸಗಳಿಂದ ಸಂವಥ್ಸರಪ್ರಾಪ್ತಿಯಾಗುತ್ತದೆ. |
| ತಾಸಾಮ್ ಅಕ್ಷರಾಣಿ ತ್ರೀಣಿ ಚ ಶತಾನಿ ಷಷ್ಟಿಃ ಚ | ಆ ಸಾಮಿಧೇನೀ ಋಕ್ಕುಗಳ ಅಕ್ಷರ ಸಂಖ್ಯೆಯು ಮೂರುನೂರ ಅರವತ್ತು ಆಗಿದೆ. |

---

ದೇವತೆಗಳು ಮಾತನಾಡಿದಂತೆ ಈ ಅಗ್ನಿ-ಸೂರ್ಯರ ಬದಲಾವಣೆಯಿಂದ ಎರಡು ಲೋಕಗಳಿಗೂ ಸುಖವು ಲಭಿಸಿತು. **'ಅಗ್ನ ಆ ಯಾಹಿ ವೀತಯೇ'** ಎಂಬಲ್ಲಿ **'ಅಗ್ನಿಯೇ ನೀನು ಬಾ'** ಎಂಬ ಅರ್ಥವಿರುವುದರಿಂದ ಅಗ್ನಿಯ ಆಹ್ವಾನವು ಸ್ಪಷ್ಟವಾಗಿಯೇ ಇದೆ.

ತಾವತೀಸ್ಸಂವಥ್ಸರಸ್ಯ ರಾತ್ರಯೋಽಕ್ಷರಶ ಏವ ಸಂವಥ್ಸರಮಾ

ಪ್ನೋತಿ ನೃಮೇಧಶ್ಚ ಪರುಚ್ಛೇಪಶ್ಚ ಬ್ರಹ್ಮವಾದ್ಯಮವದೇತಾ-

---

ತಾವತೀಃ । ಸಂವಥ್ಸರಸ್ಯೇತಿ ಸಂ-ವಥ್ಸರಸ್ಯ । ರಾತ್ರಯಃ । ಅಕ್ಷರಶ ಇತ್ಯಕ್ಷರ-ಶಃ ।

ಏವ । ಸಂವಥ್ಸರಮಿತಿ ಸಂ-ವಥ್ಸರಮ್ । ಆಪ್ನೋತಿ । ನೃಮೇಧ ಇತಿ ನೃ-ಮೇಧಃ।

ಚ । ಪರುಚ್ಛೇಪಃ । ಚ । ಬ್ರಹ್ಮವಾದ್ಯಮಿತಿ ಬ್ರಹ್ಮ-ವಾದ್ಯಮ್ । ಅವದೇತಾಮ್ ।

---

| | |
|---|---|
| ತಾವತೀಃ ಸಂವತ್ಸರಸ್ಯ ರಾತ್ರಯಃ | ಒಂದು ವರ್ಷದ ರಾತ್ರಿಗಳ ಸಂಖ್ಯೆಯೂ ಅಷ್ಟೇ(360) ಆಗಿದೆ. |
| ಅಕ್ಷರಶಃ ಏವ ಸಂವಥ್ಸರಮ್ ಆಪ್ನೋತಿ | ಹೀಗೆ ದಿನಸಂಖ್ಯಾಸಮಾನಸಂಖ್ಯೆಯುಳ್ಳ ಅಕ್ಷರಗಳಿಂದಲೇ ಯಜಮಾನನು ಸಂವಥ್ಸರ ವನ್ನು/**ಸ್ವರ್ಗಲೋಕವನ್ನು** ಹೊಂದುತ್ತಾನೆ. |

**'ತಂ ತ್ವಾ ಸಮಿದ್ಭಿಃ' 'ಘೃತವತೀಃ' ಎಂಬ ಶಬ್ದದಿಂದ ಕೂಡಿದ ಸಾಮಿಧೇನಿಯ ಪ್ರಶಂಸೆ; ಆಖ್ಯಾನ**

| | |
|---|---|
| ನೃಮೇಧಃ ಚ ಪರುಚ್ಛೇಪಃ ಚ ಬ್ರಹ್ಮವಾದ್ಯಮ್ ಅವದೇತಾಮ್ | ನೃಮೇಧ-ಪರುಚ್ಛೇಪರೆಂಬ ಋಷಿಗಳು ಸಾಮಿಧೇನೀಮಂತ್ರಗಳ ವಿಷಯದಲ್ಲಿ ಒಂದು ಸಂವಾದವನ್ನು ನಡೆಸಿದರು. |

---

**'ಋತಂ ಬೃಹತ್'** ಎಂಬುದು ಸೂರ್ಯಸೂಚಕವಾಗಿದೆ. **'ಹಗ್ಂಸಶ್ಶುಚಿಷತ್'** ಎಂಬ ಮಂತ್ರದಲ್ಲಿ ಬೃಹತ್ ಎಂಬುದಕ್ಕೆ ಸೂರ್ಯನೆಂದರ್ಥ. **'ವಿಭಾಸಸಿ'** ಎಂದರೆ ಪ್ರಕಾಶಪಡಿಸು ಎಂಬುದೂ ಸೂರ್ಯಸೂಚಕವಾಗಿದೆ. ಇದು ಮಂತ್ರಗಳ ಪ್ರಶಂಸೆ.

ಹೀಗೆ ಸಾಮಿಧೇನಿಗಳನ್ನು ಸೇರಿಸಿ ಪಾಠ ಮಾಡುವುದರಿಂದ ಯಜಮಾನನು ಭೂಲೋಕ-ಸ್ವರ್ಲೋಕಗಳೆರಡರಲ್ಲಿಯೂ ಶಾಂತಿಯಿಂದ ಬಾಳುವಂತಾಗುತ್ತದೆ.

ಮಸ್ಮಿನ್ದಾರಾವಾರ್ದ್ರೇಽಗ್ನಿಂ ಜನಯಾವ ಯತರೋ ನೌ

ಬ್ರಹ್ಮೀಯಾನಿತಿ ನೃಮೇಧೋಽಭ್ಯವದತ್ಸ ಧೂಮಮಜನಯ

ತ್ಪರುಚ್ಛೇಪೋಽಭ್ಯವದ-

---

ಅಸ್ಮಿನ್ನ್ । ದಾರೌ । ಆರ್ದ್ರೇ । ಅಗ್ನಿಮ್ । ಜನಯಾವ । ಯತರಃ । ನೌ ।

ಬ್ರಹ್ಮೀಯಾನ್ । ಇತಿ । ನೃಮೇಧ ಇತಿ ನೃ-ಮೇಧಃ । ಅಭೀತಿ । ಅವದತ್ । ಸಃ।

ಧೂಮಮ್ । ಅಜನಯತ್ । ಪರುಚ್ಛೇಪಃ । ಅಭೀತಿ । ಅವದತ್ ।

---

| | |
|---|---|
| ಅಸ್ಮಿನ್ನ್ ಆರ್ದ್ರೇ ದಾರೌ ಅಗ್ನಿಮ್ ಜನಯಾವ, ನೌ ಯತರಃ ಬ್ರಹ್ಮೀಯಾನ್ ಇತಿ | 'ನಮ್ಮಲ್ಲಿ ಯಾರು ಶ್ರೇಷ್ಠ ಮಂತ್ರ ಜ್ಞಾನಿಗಳು ಎಂದು ಅರಿಯಲು [ನಮ್ಮ ಮಂತ್ರಬಲದಿಂದ] ಈ ಹಸಿಯಾದ ಕಟ್ಟಿಗೆಯಲ್ಲಿ ಅಗ್ನಿಯು ಹುಟ್ಟುವಂತೆ ಮಾಡೋಣ' ಎಂದು ಮಾತನಾಡಿಕೊಂಡರು. |
| ನೃಮೇಧಃ ಅಭ್ಯವದತ್ | ಬಳಿಕ ನೃಮೇಧನು ಸಾಮಿಧೇನಿಗಳ ಅನುವಚನವನ್ನು ಮಾಡಿದನು. |
| ಸಃ ಧೂಮಮ್ ಅಜನಯತ್ | ಅವನು [ತನ್ನ ಮಂತ್ರಪಾಠದಿಂದ] [ಹಸಿಯಾದ ಕಟ್ಟಿಗೆಯಲ್ಲಿ] ಹೊಗೆಯನ್ನುಂಟುಮಾಡಿದನಷ್ಟೆ. |
| ಪರುಚ್ಛೇಪಃ ಅಭ್ಯವದತ್ | ಬಳಿಕ ಪರುಚ್ಛೇಪನು ಸಾಮಿಧೇನೀಪಾಠ ಮಾಡಿದನು. |

---

ಹೀಗೆ ತಿಳಿದವನಿಗೂ ಇಂತಹ ಫಲವು ಸಿಕ್ಕುತ್ತದೆಯೆಂಬುದು ಜ್ಞಾನದ ಪ್ರಶಂಸೆ.

**'ಯದೇವ ವಿದ್ಯಯಾ ಕರೋತಿ'** ಎಂಬ ಶ್ರುತಿವಚನದಂತೆ ತಿಳಿದು ಮಾಡುವ ಕರ್ಮವು ಹೆಚ್ಚು ಶಕ್ತಿಯುತವಾಗುತ್ತದೆ.

ಥ್ಸೋಽಗ್ನಿಮಜನಯದೃಷ ಇತ್ಯಬ್ರವೀದ್ಯ[..ತ್ಯಬ್ರವೀತ್(೩)
ಯಥ್ಸಮಾವ]ಥ್ಸಮಾವದ್ವಿದ್ವ ಕಥಾ ತ್ವಮಗ್ನಿಮಜೀಜನೋ
ನಾಹಮಿತಿ

---

ಸಃ । ಅಗ್ನಿಮ್ । ಅಜನಯತ್ । ಋಷೇ । ಇತಿ । ಅಬ್ರವೀತ್ [(೩)] ಯತ್ । ಸಮಾವತ್ । ವಿದ್ವ । ಕಥಾ । ತ್ವಮ್ । ಅಗ್ನಿಮ್ । ಅಜೀಜನಃ । ನ । ಅಹಮ್ । ಇತಿ ।

---

| | |
|---|---|
| ಸಃ ಅಗ್ನಿಮ್ ಅಜನಯತ್ | ಅವನು ತನ್ನ ಮಂತ್ರಬಲದಿಂದ ಅಗ್ನಿಯನ್ನುಂಟುಮಾಡಿದನು. |
| **'ಋಷೇ'** ಇತಿ ಅಬ್ರವೀತ್ | [ಆಗ ನೃಮೇಧನು ಪರುಚ್ಛೇಪನನ್ನು] ಋಷೇ=ಮಂತ್ರದ್ರಷ್ಟನೇ! ಎಂದು ಸಂಬೋಧಿಸಿ, |
| ಯತ್ ಸಮಾವತ್ ವಿದ್ವ | 'ನಾವಿಬ್ಬರೂ ಸಮಾನವಾಗಿ ಸಾಮಿಧೇನಿಗಳ ವಿಷಯುವನ್ನು ತಿಳಿದಿರುವೆವು' ಎಂಬುದು ನಿಶ್ಚಯ. |
| ತ್ವಮ್ ಕಥಾ ಅಗ್ನಿಮ್ ಅಜೀಜನಃ ಅಹಮ್ ನ ಇತಿ | [ಹಾಗಿದ್ದರೂ]'ನೀನು ಹೇಗೆ ಅಗ್ನಿಯನ್ನುಂಟು ಮಾಡಿದೆ? ನಾನು ಉಂಟು ಮಾಡಲು ಸಮರ್ಥನಾಗಲಿಲ್ಲ?' ಎಂದನು. |

---

ಹೋತೃವು ಹದಿನೈದು ಸಾಮಿಧೇನಿಗಳನ್ನು ಹೇಳಬೇಕು. ಸಾಮಿಧೇನೀ ಋಕ್‌ಗಳು ಹನ್ನೊಂದು ಇವೆ. ಮೊದಲನೆಯ ಹಾಗೂ ಕೊನೆಯ ಸಾಮಿಧೇನಿಗಳನ್ನು ಮೂರು ಮೂರು ಆವೃತ್ತಿ ಮಾಡಬೇಕು. ವಾಸಿಷ್ಠಗೋತ್ರದವರಿಗೆ **'ತ್ವಂ ವರುಣ'** ಎಂದು ಆರಂಭಗೊಳ್ಳುವ ಋಕ್ಕು ಕಡೆಯದಾಗುತ್ತದೆ. ಉಳಿದವರಿಗೆ **'ಆ ಜುಹೋತ'** ಎಂಬ ಋಕ್ಕು ಕಡೆಯ ಋಕ್ ಆಗುತ್ತದೆ. ಹೇಗಾದರೂ ಋಕ್‌ಗಳ ಸಂಖ್ಯೆ ಹನ್ನೊಂದೇ ಆಗಿರುತ್ತದೆ. ಶ್ರುತಿಯಲ್ಲಿ ಪಠಿತವಾದ ಋಕ್‌ಗಳು ಹನ್ನೆರಡು.

ಸಾಮಿಧೇನೀನಾಮೇವಾಹಂ ವರ್ಣಂ ವೇದೇತ್ಯಬ್ರವೀದ್ಯ

ತ್ಘೃತವತ್ಪದಮನೂಚ್ಯತೇ ಸ ಆಸಾಂ ವರ್ಣಸ್ತಂ ತ್ವಾ

ಸಮಿದ್ಭಿರಂಗಿರ ಇತ್ಯಾಹ

---

ಸಾಮಿಧೇನೀನಾಮಿತಿ ಸಾಂ-ಇಧೇನೀನಾಮ್ । ಏವ । ಅಹಮ್ । ವರ್ಣಮ್ । ವೇದ । ಇತಿ । ಅಬ್ರವೀತ್ । ಯತ್ । ಘೃತವದಿತಿ ಘೃತ-ವತ್ । ಪದಮ್ । ಅನೂಚ್ಯತ ಇತ್ಯನು-ಉಚ್ಯತೇ । ಸಃ । ಆಸಾಮ್ । ವರ್ಣಃ । ತಮ್ । ತ್ವಾ । ಸಮಿದ್ಭಿರಿತಿ ಸಮಿತ್-ಭಿಃ । ಅಂಗಿರಃ । ಇತಿ । ಆಹ ।

---

| | |
|---|---|
| ಅಹಮ್ ಸಾಮಿಧೇನೀನಾಮ್ ವರ್ಣಮ್ ವೇದ ಇತಿ ಅಬ್ರವೀತ್ | [ಆಗ ಪರುಚ್ಛೇಪನು] 'ನಾನು ಸಾಮಿಧೇನಿಗಳ ರಹಸ್ಯವನ್ನು ಅರಿತಿರುವೆನು' [ಅಗ್ನಿಯು ಹುಟ್ಟಲು ಅದೇ ಕಾರಣ] ಎಂದು ಉತ್ತರಿಸಿದನು. |
| ಯತ್ ಘೃತವತ್ ಪದಮ್ ಅನೂಚ್ಯತೇ ಸಃ ಆಸಾಮ್ ವರ್ಣಃ | **'ಘೃತೇನ ವರ್ಧಯಾಮಸಿ'** ಎಂಬುದಾಗಿ ಘೃತಶಬ್ದದಿಂದ ಕೂಡಿದ ಯಾವ ಪಾದವಿದೆಯೋ, ಆ ಪದದ ಅರ್ಥಜ್ಞಾನ ಪೂರ್ವಕವಾದ ಅನುವಚನವಾವುದಿದೆಯೋ, ಅದೇ ಈ ಸಾಮಿಧೇನಿಗಳ ಸಾರಭೂತವಾದ ರಹಸ್ಯವಾಗಿದೆ. |
| ತಮ್ ತ್ವಾ ಸಮಿದ್ಭಿಃ ಅಂಗಿರಃ' ಇತಿ ಆಹ | ಆ ಪಾದದಿಂದ ಕೂಡಿರುವ **'ತಂ ತ್ವಾ ಸಮಿದ್ಭಿಃ ಅಂಗಿರಃ'** [ಎಲೈ! ಅಗ್ನಿಯೇ! ಇಂತಹ ನಿನ್ನನ್ನು ಸಮಿತ್ತುಗಳಿಂದಲೂ ತುಪ್ಪದಿಂದಲೂ ವೃದ್ಧಿಗೊಳಿಸುತ್ತೇನೆ] ಎಂಬ ಋಕ್ಕನ್ನು ವೇದವು ಹೇಳುತ್ತದೆ. |

ಸಾಮಿಧೇನೀಷ್ವೇವ ತಜ್ಜ್ಯೋತಿರ್ಜನಯತಿ ಸ್ತ್ರಿಯಸ್ತೇನ

ಯದೃಚಸ್ಸ್ತ್ರಿಯಸ್ತೇನ ಯದ್ಗಾಯತ್ರಿಯಸ್ತ್ರಿಯಸ್ತೇನ

ಯಥ್ಸಾಮಿಧೇನ್ಯೋ

---

ಸಾಮಿಧೇನೀಷ್ವಿತಿ ಸಾಂ–ಇಧೇನೀಷು । ಏವ । ತತ್ । ಜ್ಯೋತಿಃ । ಜನಯತಿ । ಸ್ತ್ರಿಯಃ। ತೇನ । ಯತ್ । ಋಚಃ । ಸ್ತ್ರಿಯಃ । ತೇನ । ಯತ್ । ಗಾಯತ್ರಿಯಃ । ಸ್ತ್ರಿಯಃ । ತೇನ । ಯತ್ । ಸಾಮಿಧೇನ್ಯ ಇತಿ ಸಾಂ–ಇಧೇನ್ಯಃ ।

---

| | |
|---|---|
| ಸಾಮಿಧೇನೀಷು ಏವ ತತ್ ಜ್ಯೋತಿಃ ಜನಯತಿ | [ಈ ಮಂತ್ರಬಲದಿಂದ] ಸಾಮಿಧೇನಿಗಳಲ್ಲಿಯೇ ಹೋತೃವು ಜ್ಯೋತಿಯನ್ನು ಉಂಟು ಮಾಡುತ್ತಾನೆ. |

**'ವೃಷಣಂ ತ್ವಾ ವಯಮ್' ಎಂಬ ಮಂತ್ರದ ವಿಶೇಷ ಪ್ರಶಂಸೆ**

| | |
|---|---|
| ಯತ್ ಋಚಃ ತೇನ ಸ್ತ್ರಿಯಃ | "ಋಕ್" ಶಬ್ದವು ಸ್ತ್ರೀಲಿಂಗವಾದುದರಿಂದ ಸಾಮಿಧೇನಿಗಳು ಸ್ತ್ರೀಯರಂತೆ. |
| ಯತ್ ಗಾಯತ್ರಿಯಃ ತೇನ ಸ್ತ್ರಿಯಃ | ಗಾಯತ್ರೀಛಂದಸ್ಕವಾದುದರಿಂದ ಸ್ತ್ರೀಲಿಂಗವಾದ ಗಾಯತ್ರೀಶಬ್ದವಾಚ್ಯವಾಗಿ ಅವು ಸ್ತ್ರೀಯರಂತೆ. |
| ಯತ್ ಸಾಮಿಧೇನ್ಯಃ ತೇನ ಸ್ತ್ರಿಯಃ | ಸ್ತ್ರೀಲಿಂಗವಾದ ಸಾಮಿಧೇನೀಶಬ್ದದಿಂದ ಹೇಳಲ್ಪಡುವುದರಿಂದ ಸಾಮಿಧೇನಿಗಳು ಸ್ತ್ರೀಯರೇ. |

---

ಹದಿನೈದು ಋಕ್‌ಗಳನ್ನು ಪಾಠ ಮಾಡಿದಾಗ 11 ಋಕ್‌ಗಳು ಗಾಯತ್ರೀ ಛಂದಸ್ಸಿನಲ್ಲಿರುವುದರಿಂದ ಪ್ರತಿ ಋಕ್‌ಗೆ 24 ಅಕ್ಷರಗಳಂತೆ 24×11=264 ಅಕ್ಷರಗಳಾಗುತ್ತವೆ. ಮೊದಲನೆಯ ಮತ್ತು **'ಆ ಜುಹೋತ'** ಎಂಬ ಋಕ್ಕಿಗೆ ಆವೃತ್ತಿ ಇರುವು

ವೃಷಣ್ವತೀಮನ್ವಾಹ[ಮನ್ವಾಹ(ಳ)]ತೇನ ಪುಗ್ಂಸ್ವತೀಸ್ತೇನ ಸೇಂದ್ರಾಸ್ತೇನ ಮಿಥುನಾ ಅಗ್ನಿರ್ದೇವಾನಾಂ ದೂತ ಆಸೀ-

ವೃಷಣ್ವತೀಮಿತಿ ವೃಷಣ್ಣ್-ವತೀಮ್ । ಅನ್ವಿತಿ । ಆಹ । [(ಳ)] । ತೇನ । ಪುಗ್ಂಸ್ವತೀಃ। ತೇನ । ಸೇಂದ್ರಾ, ಇತಿ ಸ-ಇಂದ್ರಾಃ । ತೇನ । ಮಿಥುನಾಃ । ಅಗ್ನಿಃ । ದೇವಾನಾಮ್। ದೂತಃ । ಆಸೀತ್ ।

---

| | |
|---|---|
| ವೃಷಣ್ವತೀಮ್ ಅನ್ವಾಹ | **'ವೃಷಣಂ ತ್ವಾ'** ಎಂಬುದಾಗಿ **'ವೃಷನ್'** ಎಂಬ ಪುಲ್ಲಿಂಗ ಶಬ್ದದಿಂದ ಕೂಡಿರುವ ಋಕ್ ಅನ್ನು ಹೋತೃವು ಹೇಳುತ್ತಾನೆ. |
| ತೇನ ಪುಗ್ಂಸ್ವತೀಃ | ಅದರಿಂದ ಸಾಮಿಧೇನಿಗಳು ಪುರುಷ ಯುಕ್ತವಾಗುತ್ತವೆ. |
| ತೇನ ಸೇಂದ್ರಾಃ | ಇದರಿಂದ ಇಂದ್ರಯುಕ್ತವಾದವೂ, ಇಂದ್ರಿಯ ಶಕ್ತಿಯುಕ್ತವಾದವುಗಳೂ ಆಗುತ್ತವೆ. |
| ತೇನ ಮಿಥುನಾಃ | ಆದರಿಂದ ಸ್ತ್ರೀಪುಂರೂಪವಾದ ಜೋಡಿಗಳಾದಂತೆಯೂ ಆಗುತ್ತದೆ. |

**'ಅಗ್ನಿಂ ದೂತಂ ವೃಣೀಮಹೇ' ಎಂಬ ಮಂತ್ರದ ಪ್ರಶಂಸೆ**

| | |
|---|---|
| ಅಗ್ನಿಃ ದೇವಾನಾಮ್ ದೂತಃ ಆಸೀತ್ | ಅಗ್ನಿದೇವನು ದೇವತೆಗಳಿಗೆ ಕಾರ್ಯ ನಿರ್ವಾಹಕನಾದ ದೂತನಾಗಿದ್ದನು. |

---

ದರಿಂದ 4×24=96 ಅಕ್ಷರಗಳಾಗುತ್ತದೆ. ಹೀಗೆ 264+96=360 ಅಕ್ಷರಗಳಾಗುತ್ತವೆ.

ವಾಸಿಷ್ಠರಿಗೆ ಅಕ್ಷರಗಳ ಸಂಖ್ಯೆಯು [ಕಡೆಯ ಋಕ್ ಆದ **'ತ್ವಂ ವರುಣ'** ಎಂಬಲ್ಲಿ ತ್ರಿಷ್ಟುಪ್ ಛಂದಸ್ಸಿನ 44 ಅಕ್ಷರಗಳಿರುವುದರಿಂದ [ 10×24=240] ಪ್ರಥಮ ಋಕ್ಕಿನ ಎರಡು ಮತ್ತು ಮೂರನೆಯ ಆವೃತ್ತಿಯಿಂದ 240+48=288, ಕಡೆಯ **'ತ್ವಂ ವರುಣ'** ಎಂಬ ಋಕ್ಕಿನ ಮೂರು ಆವೃತ್ತಿ(44×3=132; 288+132=420)] 60ರಷ್ಟು ಹೆಚ್ಚಾಗುತ್ತದೆ. ಹೀಗಾಗಿ ಸಂವತ್ಸರದ ರಾತ್ರಿಯ ಸಂಖ್ಯೆಯಾಗುವುದಿಲ್ಲ.ಆದರೂ ವಾಸಿಷ್ಠೇತರರಿಗೆ ವಿಹಿತವಾದ

ದುಶನಾ ಕಾವ್ಯೋಽಸುರಾಣಾಂ ತೌ ಪ್ರಜಾಪತಿಂ ಪ್ರಶ್ನಮೈತಾಗ್ಂ

ಸ ಪ್ರಜಾಪತಿರಗ್ನಿಂ ದೂತಂ ವೃಣೀಮಹ ಇತ್ಯಭಿ ಪರ್ಯಾವರ್ತತ

---

ಉಶನಾ । ಕಾವ್ಯಃ । ಅಸುರಾಣಾಮ್ । ತೌ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಪ್ರಶ್ನಮ್ । ಐತಾಮ್ । ಸಃ । ಪ್ರಜಾಪತಿರಿತಿ ಪ್ರಜಾ-ಪತಿಃ । ಅಗ್ನಿಮ್ । ದೂತಮ್। ವೃಣೀಮಹೇ । ಇತಿ । ಅಭೀತಿ । ಪರ್ಯಾವರ್ತತೇತಿ ಪರಿ-ಆವರ್ತತ ।

---

| | |
|---|---|
| ಕಾವ್ಯಃ ಉಶನಾ ಅಸುರಾಣಾಮ್ **[ದೂತಃ ಆಸೀತ್]** | ಕವಿಯ ಮಗನಾದ ಉಶನಸನು ಅಸುರರ ದೂತನಾಗಿದ್ದನು. |
| ತೌ ಪ್ರಜಾಪತಿಮ್ ಪ್ರಶ್ನಮ್ ಐತಾಮ್ | ಅವರಿಬ್ಬರಿಗೂ ಪ್ರಜಾಪತಿದೇವನ ಬಳಿಗೆ ಬಂದು [ನಮ್ಮಿಬ್ಬರಲ್ಲಿ ಯಾರು ಸಂಧಿ-ವಿಗ್ರಹಾದಿಕಾರ್ಯಗಳಲ್ಲಿಯೂ ಸಮರ್ಥರಾದ ದೂತರು?] ಎಂದು ಪ್ರಶ್ನಿಸಿದರು. |
| ಸಃ ಪ್ರಜಾಪತಿಃ ಅಗ್ನಿಮ್ ದೂತಮ್ ವೃಣೆಮಹೇ ಇತಿ ಅಭಿ ಪರ್ಯಾವರ್ತತ | ಆ ಪ್ರಜಾಪತಿಯು [ನಾವು ಅಗ್ನಿಯನ್ನೇ ದೂತನನ್ನಾಗಿ ಆರಿಸಿಕೊಳ್ಳುತ್ತೇವೆ ಎಂಬ] **'ಅಗ್ನಿಂ ದೂತಂ ವೃಣೀಮಹೇ'**-ಈ ಮಂತ್ರದಿಂದ ಉತ್ತರಿಸಿ, ಉಶನಸನ ಕಡೆಯಿಂದ ಪರಾಙ್ಮುಖನಾಗಿ ಅಗ್ನಿಗೆ ಅಭಿಮುಖನಾದನು. |

---

ಹನ್ನೊಂದನೆಯ ಋಕ್ ಗಾಯತ್ರೀಛಂದಸ್ಸಿನಲ್ಲಿ ಇರುವುದರಿಂದ ಪ್ರಶಂಸಾರ್ಥವಾದ ಅರ್ಥವಾದಕ್ಕೆ ದೋಷವಿಲ್ಲ.

**'ತಂ ತ್ವಾ ಸಮಿದ್ಭಿರಂಗಿರಃ'** ಎಂಬ ಋಕ್ಕಿನ ಪ್ರಶಂಸೆಗಾಗಿ ನೃಮೇಧ-ಪರುಚ್ಛೇಪ ಋಷಿಗಳ ಆಖ್ಯಾನವಿದೆ. **'ಘೃತ'** ಶಬ್ದದಿಂದ ಕೂಡಿದ ಸಾಮಿಧೇನಿಯನ್ನು ಅನುವಚನ ಮಾಡಿದುದರಿಂದ ಪರುಚ್ಛೇಪನು ಹಸಿಕಟ್ಟಿಗೆಯಲ್ಲಿ ಅಗ್ನಿಯು ಹುಟ್ಟುವಂತೆ ಮಾಡಿದನು. ಇದೇ ಸಾಮಿಧೇನಿಯ ರಹಸ್ಯ, 'ಈ ಗುಟ್ಟನ್ನು ತಿಳಿದುದರಿಂದ ನಾನು ಅಗ್ನಿಯನ್ನು ಉತ್ಪಾದಿಸಲು

ತತೋ ದೇವಾ ಅಭವನ್ಪರಾಸುರಾ ಯಸ್ಯೈವಂ

ವಿದುಷೋಽಗ್ನಿಂ ದೂತಂ ವೃಣೀಮಹ ಇತ್ಯನ್ವಾಹ

ಭವತ್ಯಾತ್ಮನಾ ಪರಾಽಸ್ಯ ಭ್ರಾತೃವ್ಯೋ ಭವತ್ಯ-

---

ತತಃ । ದೇವಾಃ । ಅಭವನ್ನ್ । ಪರೇತಿ । ಅಸುರಾಃ । ಯಸ್ಯ । ಏವಮ್ । ವಿದುಷಃ। ಅಗ್ನಿಮ್ । ದೂತಮ್ । ವೃಣೀಮಹೇ । ಇತಿ । ಅನ್ವಾಹೇತ್ಯನು-ಆಹ । ಭವತಿ । ಆತ್ಮನಾ । ಪರೇತಿ । ಅಸ್ಯ । ಭ್ರಾತೃವ್ಯಃ । ಭವತಿ ।

---

| | |
|---|---|
| ತತಃ ದೇವಾಃ ಅಭವನ್ | ಅನಂತರ ದೇವತೆಗಳು ಅಗ್ನಿಯನ್ನು ದೂತನನ್ನಾಗಿ ಹೊಂದಿ ವಿಜಯಿಗಳಾದರು. |
| ಅಸುರಾಃ ಪರಾ **[ಅಭವನ್ನ್]** | ಅಸುರರು ಸೋತುಹೋದರು. |
| ಏವಮ್ ವಿದುಷಃ ಯಸ್ಯ 'ಅಗ್ನಿಮ್ ದೂತಮ್ ವೃಣೀಮಹೇ' ಇತಿ ಅನ್ವಾಹ | ಈ ರೀತಿ ಅರಿತ ಯಾವ ಯಜಮಾನನಿಗಾಗಿ ಹೋತೃವು ಸಾಮಿಧೇನಿಗಳಲ್ಲಿ **'ಅಗ್ನಿಂ ದೂತಂ ವೃಣೀಮಹೇ'** ಎಂಬ ಮಂತ್ರವನ್ನು ಹೇಳುತ್ತಾನೆಯೋ |
| **[ಸಃ]** ಆತ್ಮನಾ ಭವತಿ | ಆ ಯಜಮಾನನು ತಾನೇ ವಿಜಯಿಯಾಗುವನು. |
| ಅಸ್ಯ ಭ್ರಾತೃವ್ಯಃ ಪರಾ ಭವತಿ | ಈ ಯಜಮಾನನ ಹಗೆಯು ಸೋತುಹೋಗುವನು. |

---

ಸಮರ್ಥನಾದೆನು. ನೀನು ಸಾಮಿಧೇನಿಪಾಠವನ್ನು ಮಾಡಿದರೂ ಅಗ್ನಿಯನ್ನು ಉತ್ಪಾದಿಸಲು ಶಕ್ತನಾಗಲಿಲ್ಲ'ಎಂದು ಪರುಚ್ಛೇಪನು ನೃಮೇಧನಿಗೆ ಉತ್ತರಿಸಿದನು.

ಋಕ್,ಗಾಯತ್ರೀ ಸಾಮಿಧೇನೀ ಶಬ್ದಗಳು ಸ್ತ್ರೀ ಶಬ್ದವಾಚ್ಯವಾದುದರಿಂದ ಸ್ತ್ರೀಯರಂತೆ. ವೃಷ ಶಬ್ದವು ಪುಲ್ಲಿಂಗವಾದುದರಿಂದ ಪುರುಷನಂತೆ. ಇವುಗಳ ಯೋಗದಿಂದ ಸ್ತ್ರೀಪುರುಷಯುಗ್ಮವಾದಂತಾಗುತ್ತದೆ. ಇದು **'ವೃಷಣಂ ತ್ವಾ'** ಎಂಬ ಮಂತ್ರದ ಪ್ರಶಂಸೆ.

–ಧ್ವರವತೀಮನ್ವಾಹ ಭ್ರಾತೃವ್ಯಮೇವೈತಯಾ[ವೈತಯಾ(೫)

ಧ್ವರತಿ] ಧ್ವರತಿ ಶೋಚಿಷ್ಕೇಶಸ್ತಮೀಮಹ ಇತ್ಯಾಹ

---

ಅಧ್ವರವತೀಮಿತ್ಯಧ್ವರ–ವತೀಮ್ । ಅನ್ವಿತಿ । ಆಹ । ಭ್ರಾತೃವ್ಯಮ್ । ಏವ ।

ಏತಯಾ । [(೫)] । ಧ್ವರತಿ । ಶೋಚಿಷ್ಕೇಶ ಇತಿ ಶೋಚಿಃ–ಕೇಶಃ । ತಮ್ ।

ಈಮಹೇ । ಇತಿ । ಆಹ ।

---

**'ಅಧ್ವರಶಬ್ದದಿಂದ ಕೂಡಿದ ಮಂತ್ರಗಳ ಪ್ರಶಂಸೆ**

| | |
|---|---|
| ಅಧ್ವರವತೀಮ್ ಅನ್ವಾಹ | ಅಧ್ವರ[ಹಿಂಸೆಯನ್ನು ಹೋಗಲಾಡಿಸುವವನು] ಎಂಬ ಪದದಿಂದ ಕೂಡಿದ ಮಂತ್ರವನ್ನು ಹೋತೃವು ಹೇಳುತ್ತಾನೆ. |
| ಏತಯಾ ಭ್ರಾತೃವ್ಯಮ್ ಏವ ಧ್ವರತಿ | ಇದರಿಂದ ಯಜಮಾನನ ಶತ್ರುವನ್ನೇ ಹಿಂಸಿಸಿ, ಯಜಮಾನನು ಹಿಂಸೆಗೆ ಒಳಗಾಗದಂತೆ ಮಾಡುತ್ತಾನೆ. |

**'ಸಮಿಧ್ಯಮಾನಃ' ಎಂಬ ಮಂತ್ರದ ತೃತೀಯಪಾದದ ಪ್ರಶಂಸೆ**

| | |
|---|---|
| ಶೋಚಿಷ್ಕೇಶಃ ತಮ್ ಈಮಹೇ ಇತಿ ಆಹ | ಹೋತೃವು ಈ ಮಂತ್ರವನ್ನು ಹೇಳುವಾಗ 'ಪವಿತ್ರಗೊಳಿಸುವ ರಶ್ಮಿಗಳೇ ಕೇಶದಂತೆ ಇರುವ ಅಗ್ನಿಯನ್ನು ಸಮೀಪಿಸುವೆವು' ಎಂದು ಹೇಳುತ್ತಾನೆ. |

---

ಇದರಂತೆಯೇ **'ಸಮಗ್ನಿರಿಧ್ಯತೇ ವೃಷಾ'** ಎಂಬ ವೃಷ ಶಬ್ದಯುಕ್ತವಾದ **'ಈಡೇನ್ಯಃ'** ಎಂಬ ಋಕ್ಕೂ **'ವೃಷೋ ಅಗ್ನಿಃ ಸಮಿಧ್ಯತೇ'**ಎಂಬ ಋಕ್ಕೂ ವೃಷಣ್ವತಿಗಳೇ. ಅವುಗಳೂ ಈ ಅರ್ಥವಾದದಿಂದ ಪ್ರಶಂಸಿಸಲ್ಪಡುತ್ತವೆ.

ಸಾಮಿಧೇನಿಗಳಲ್ಲಿ **'ಅಗ್ನಿಂ ದೂತಂ ವೃಣೀಮಹೇ'**ಎಂಬ ಮಂತ್ರದ ಪ್ರಶಂಸೆ ಇದು.

---

* **ಸಮಿಧ್ಯಮಾನೋ ಅಧ್ವರೇ; ಸಮಿದ್ಧೋ ಅಗ್ನ...ಯಕ್ಷಿ ಸ್ವಧ್ವರ; ಆ ಜುಹೋತ...ಪ್ರಯತ್ಯಧ್ವರೇ;**ಎಂಬ ಅಧ್ವರಶಬ್ದಯುಕ್ತವಾದ ಮಂತ್ರಗಳು.

* **ಶುಕ್ರೋ ದೈತ್ಯಗುರುಃ ಕಾವ್ಯ ಉಶನಾ ಭಾರ್ಗವಃ ಕವಿಃ–ಅಮರಕೋಶ.**

ಪವಿತ್ರಮೇವೈತದ್ಯಜಮಾನಮೇವೈತಯಾ ಪವಯತಿ ಸಮಿದ್ಧೋ
ಅಗ್ನ ಆಹುತೇತ್ಯಾಹ ಪರಿಧಿಮೇವೈತಂ ಪರಿ ದಧಾತ್ಯಸ್ಕಂದಾಯ

---

ಪವಿತ್ರಮ್ । ಏವ । ಏತತ್ । ಯಜಮಾನಮ್ । ಏವ । ಏತಯಾ । ಪವಯತಿ ।
ಸಮಿದ್ಧ ಇತಿ ಸಂ-ಇದ್ಧಃ । ಅಗ್ನೇ । ಆಹುತೇತ್ಯಾ-ಹುತ । ಇತಿ । ಆಹ । ಪರಿಧಿಮಿತಿ
ಪರಿ-ಧಿಮ್ । ಏವ । ಏತಮ್ । ಪರೀತಿ । ದಧಾತಿ । ಅಸ್ಕಂದಾಯ ।

---

ಏತತ್ ಪವಿತ್ರಮ್ ಏವ ಯಜಮಾನಮ್ ಏತಯಾ ಪವಯತಿ ಏವ — ಈ ಋಕ್ಕು ಪವಿತ್ರವಾದುದೇ. ಈ ಋಕ್ಕಿನಿಂದಲೇ ಹೋತೃವು ಯಜಮಾನನನ್ನು ಶುದ್ಧಿಗೊಳಿಸುವನು.

**'ಸಮಿದ್ಧೋ ಅಗ್ನ ಆಹುತ....'ಎಂಬ ಮಂತ್ರವು ಪರಿಧಿಯೆಂದು ಪ್ರಶಂಸೆ**

ಸಮಿದ್ಧೋ ಅಗ್ನೇ ಆಹುತ ಇತಿ ಆಹ — ಹೋತೃವು 'ಎಲೈ! ಅಗ್ನಿಯೇ! ನೀನು ಸಮಿತ್ತುಗಳಿಂದ ಜ್ವಲಿತನಾಗಿದ್ದೀಯೆ' ಎಂದು ಹೇಳುತ್ತಾನೆ.

ಏತಮ್ ಪರಿಧಿಮ್ ಏವ ಪರಿದಧಾತಿ ಅಸ್ಕಂದಾಯ — ಈ ಮಂತ್ರವನ್ನು ಪರಿಧಿಯನ್ನಾಗಿ [ಕೊನೆಯ ಮಂತ್ರವನ್ನಾಗಿ] ಮಾಡುತ್ತಾನೆ. [ಇದು ಸಮಿತ್ತುಗಳು ಅತ್ತ ಇತ್ತ ಹೋಗಿ] ನಾಶವಾಗದಿರುವುದಕ್ಕೆ [ಕಾರಣವಾಗುತ್ತದೆ.]

---

ಶುಕ್ರನಿಗೆ ಕವಿಯೆಂದೂ ಕಾವ್ಯನೆಂದೂ ಹೆಸರಿದೆ*. ಕಾವ್ಯವೆಂಬುದು ಗೋತ್ರನಿಮಿತ್ತವಾದ ಹೆಸರು. ಅಗ್ನಿಯು ದೂತನಾದುದರಿಂದ ದೇವತೆಗಳು ವಿಜಯಿಗಳಾದರೆಂದು ಈ ಮಂತ್ರದ ಪ್ರಶಂಸೆ.

ಅಧ್ವರಶಬ್ದದಿಂದ ಕೂಡಿದ ಮಂತ್ರಗಳಿಂದ ಯಜಮಾನನು ಹಿಂಸೆಗೆ ಒಳಗಾಗದಂತೆ ಮಾಡುತ್ತಾನೆ. ಇದು ಅಧ್ವರಶಬ್ದದಿಂದ ಕೂಡಿದ ಋಕ್ಕುಗಳ ಪ್ರಶಂಸೆ.

ಯದತ ಊರ್ಧ್ವಮಭ್ಯಾದಧ್ಯಾದ್ಯಥಾ ಬಹಿಃಪರಿಧಿ ಸ್ಕಂದತಿ

ತಾದೃಗೇವ ತತ್ತ್ರಯೋ ವಾ ಅಗ್ನಯೋ ಹವ್ಯವಾಹನೋ

ದೇವಾನಾಂ

---

ಯತ್ । ಅತಃ । ಊರ್ಧ್ವಮ್ । ಅಭ್ಯಾದಧ್ಯಾದಿತ್ಯಭಿ-ಆದಧ್ಯಾತ್ । ಯಥಾ । ಬಹಿಃಪರಿಧೀತಿ ಬಹಿಃ-ಪರಿಧಿ । ಸ್ಕಂದತಿ । ತಾದೃಕ್ । ಏವ । ತತ್ । ತ್ರಯಃ । ವೈ । ಅಗ್ನಯಃ । ಹವ್ಯವಾಹನ ಇತಿ ಹವ್ಯ-ವಾಹನಃ । ದೇವಾನಾಮ್ ।

---

**ಮುಂದೆ ಸಮಿದಾಧಾನದ ನಿಷೇಧ;ಅರ್ಥವಾದ**

| | |
|---|---|
| ಯತ್ ಅತಃ ಊರ್ಧ್ವಮ್ ಅಭ್ಯಾದಧ್ಯಾತ್ | **'ಸಮಿದ್ಧೋ ಅಗ್ನ'** ಎಂಬ ಮಂತ್ರದಿಂದ ಸಮಿತ್ತುಗಳನ್ನು ಹಾಕಿದ ಮೇಲೆ **'ಆ ಜುಹೋತ'** ಎಂಬ ಮಂತ್ರದಿಂದ ಸಮಿದಾಧಾನ ಮಾಡುವುದೆಂಬುದು |
| ಯಥಾ ಬಹಿಃಪರಿಧಿ ಸ್ಕಂದತಿ ತಾದೃಕ್ ಏವ ತತ್ | ಹೇಗೆ ಪರಿಧಿಯ ಹೊರಗಡೆ ಬಿದ್ದಿರುವ ಹವಿಸ್ಸುಗಳು ನಿಷ್ಫಲವಾದವುಗಳೋ ಹಾಗೆಯೇ ಅದೂ ನಿಷ್ಫಲವಾಗುತ್ತದೆ. |

**ಹವ್ಯವಾಹನಪದದ ಪ್ರಶಂಸೆ;ಅದರ ಉಪಾಖ್ಯಾನ**

| | |
|---|---|
| ಅಗ್ನಯಃ ತ್ರಯಃ ವೈ | ಅಗ್ನಿಗಳು ಮೂವರು ಇರುವರಷ್ಟೆ. |
| ದೇವಾನಾಮ್ ಹವ್ಯವಾಹನಃ | ದೇವತೆಗಳಿಗೆ ಹವ್ಯವಾಹನಾಗ್ನಿಯೂ, |

---

**'ಸಮಿಧ್ಯಮಾನಃ'** ಎಂಬ ಈ ಮಂತ್ರದಲ್ಲಿ **'ಅಗ್ನಿಃ ಪಾವಕಃ'** ಎಂಬ ಮಂತ್ರಭಾಗವು ಅಗ್ನಿಯನ್ನು ಶುದ್ಧನೆಂದೂ ಶುದ್ಧಿಗೊಳಿಸುವವನೆಂದೂ ಹೇಳಿದೆ. ಇಲ್ಲಿ ಆ ಅಗ್ನಿಯ ಕಿರಣಗಳೂ[ಜ್ವಾಲೆಗಳೂ]ಪರಿಶೋಧಿಸುತ್ತವೆಯೆಂದು ಹೇಳಿದೆ.

ಕವ್ಯವಾಹನಃ ಪಿತೃಣಾಗ್ಂ ಸಹರಕ್ಷಾ ಅಸುರಾಣಾಂ ತ

ಏತರ್ಹ್ಯಾಶಗ್ಂಸಂತೇ ಮಾಂ ವರಿಷ್ಯತೇ ಮಾ[ಮಾಮ್(೬)

ಇತಿ] ಮಿತಿ ವೃಣೀಧ್ವಗ್ಂ ಹವ್ಯವಾಹನಮಿತ್ಯಾಹ

---

ಕವ್ಯವಾಹನ ಇತಿ ಕವ್ಯ-ವಾಹನಃ । ಪಿತೃಣಾಮ್ । ಸಹರಕ್ಷಾ ಇತಿ ಸಹ-ರಕ್ಷಾಃ ।

ಅಸುರಾಣಾಮ್। ತೇ । ಏತರ್ಹಿ । ಏತಿ । ಶಗ್ಂಸಂತೇ । ಮಾಮ್ । ವರಿಷ್ಯತೇ । ಮಾಮ್।

[(೬)]। ಇತಿ ।ವೃಣೀಧ್ವಮ್ । ಹವ್ಯವಾಹನಮಿತಿ ಹವ್ಯ-ವಾಹನಮ್ । ಇತಿ । ಆಹ ।

---

| | |
|---|---|
| ಪಿತೃಣಾಮ್ ಕವ್ಯವಾಹನಃ | ಪಿತೃದೇವತೆಗಳಿಗೆ ಕವ್ಯವಾಹನಾಗ್ನಿಯೂ, |
| ಅಸುರಾಣಾಮ್ ಸಹರಕ್ಷಾಃ | ಅಸುರರಿಗೆ ಸಹರಕ್ಷೋಗ್ನಿಯೂ [ಹೀಗೆ ಮೂವರು ಇರುವರು] |
| ತೇ ಏತರ್ಹಿ ಮಾಮ್ ವರಿಷ್ಯತೇ ಮಾವಮ್ **[ವರಿಷ್ಯತೇ]** ಇತಿ ಆಶಗ್ಂಸಂತೇ | ಆ ಮೂವರೂ ಅಗ್ನಿಗಳು 'ನನ್ನನ್ನೇ ಆರಿಸಿಕೊಳ್ಳುತ್ತಾರೆ, ನನ್ನನ್ನೇ ಆರಿಸಿಕೊಳ್ಳುತ್ತಾರೆ'. ಎಂಬುದಾಗಿ ಆಶಿಸುತ್ತಿರುತ್ತಾರೆ. |
| ಹವ್ಯವಾಹನಮ್ ವೃಣೀಧ್ವಮ್ ಇತಿ ಆಹ | 'ಹವ್ಯವಾಹನಾಗ್ನಿಯನ್ನೇ ನೀವು ಆರಿಸಿಕೊಳ್ಳಿ' ಎಂದು ಈ ಸಾಮಿಧೇನೀಮಂತ್ರವು ಹೇಳುತ್ತದೆ. |

---

**'ಸಮಿದ್ಧೋ ಅಗ್ನ ಆಹುತ'** ಎಂಬ ಮಂತ್ರವನ್ನು ಪರಿಧಿಯನ್ನಾಗಿ ಹೋತೃವು ಪಠಿಸುವನು.

ಇಲ್ಲಿ **'ಪ್ರಣವೇ ಪ್ರಣವೇ ಸಮಿಧಮಾದಧಾತಿ'** [ಆಪ.ಶ್ರೌ.ಸೂ ೨-೧೨-೪] ಎಂಬುದಾಗಿ ಸಾಮಾನ್ಯವಿಧಿಯು ಇದೆ.**'ಸಮಿದ್ಧೋ ಅಗ್ನೇ'**=ಎಲೈ ಅಗ್ನಿಯೇ!ನೀನು ಸಮಿದಾಹುತಿಗಳಿಂದ ಜ್ವಲಿತನಾಗಿದ್ದೀಯೆ'.ಎಂದು ಹೇಳುತ್ತಿರುವುದರಿಂದ ಸಾಮಿಧೇನಿಗಳಿಂದ ಸಾಧಿಸಬೇಕಾದ ಅಗ್ನಿಜ್ವಲನಕಾರ್ಯವು ಮುಗಿದಂತಾಗುತ್ತದೆ. ಹೀಗಾಗಿ ಈ ಮಂತ್ರಾಂತದಲ್ಲಿ ಸಮರ್ಪಿಸಬೇಕಾದ ಒಂದು ಸಮಿಧೆಯನ್ನೂ, ಕೊನೆಯ ಮಂತ್ರದ ಮೂರು ಆವೃತ್ತಿಯಿಂದ

ಯ ಏವ ದೇವಾನಾಂ ತಂ ವೃಣೀತ ಆರ್ಷೇಯಂ ವೃಣೀತೇ

ಬಂಧೋರೇವ ನೈತ್ಯಥೋ ಸಂತತ್ಯೈ॥

---

ಯಃ । ಏವ। ದೇವಾನಾಮ್ । ತಮ್ । ವೃಣೀತೇ । ಆರ್ಷೇಯಮ್ । ವೃಣೀತೇ।

ಬಂಧೋಃ । ಏವ । ನ । ಏತಿ । ಅಥೋ ಇತಿ । ಸಂತತ್ಯಾ ಇತಿ ಸಂ-ತತ್ಯೈ॥ ।

---

| | |
|---|---|
| ಯಃ ದೇವಾನಾಮ್ ಏವ ತಮ್ ವೃಣೀತೇ | ಇದರಿಂದ ಯಾವನು ದೇವತೆಗಳ ಅಗ್ನಿಯೋ ಅವನನ್ನೇ ಆಯ್ಕೆ ಮಾಡಿದಂತಾಗುತ್ತದೆ. |

**ಹೋತೃಪ್ರವರದಲ್ಲಿ ವಿಶೇಷವಿಧಿ;ಅದರ ಪ್ರಶಂಸೆ**

| | |
|---|---|
| ಆರ್ಷೇಯಮ್ ವೃಣೀತೇ | ಯಜಮಾನನ ಪ್ರವರಕ್ಕೆ ಸಂಬಂಧಿಸಿದ ಋಷಿಗಳ ಪುತ್ರನಂತೆ ಅಗ್ನಿಯನ್ನು ವರಿಸಬೇಕು. |
| ಬಂಧೋಃ ಏವ ನ ಏತಿ | ಇದರಿಂದ ಯಜಮಾನನು ಬಂಧುಗಳಿಂದ ದೂರನಾಗುವುದಿಲ್ಲ. |
| ಅಥೋ ಸಂತತ್ಯೈ॥ | ಅದು ಪುತ್ರಸಂತತಿಗೂ/ಪರಂಪರೆಗೂ ಕಾರಣವಾಗುತ್ತದೆ. |

---

ಸಮರ್ಪಿಸಬೇಕಾದ ಮೂರು ಸಮಿಧೆಗಳನ್ನೂ [ಒಟ್ಟು ನಾಲ್ಕು ಸಮಿತ್ತುಗಳನ್ನೂ] **'ಸಮಿದ್ಧೋ ಅಗ್ನೇ'** ಎಂದು ಹೇಳುವಾಗಲೇ ಸಮರ್ಪಿಸಬೇಕೆಂಬ ವಿಧಿಯನ್ನು ಕಲ್ಪಿಸಿಕೊಳ್ಳಬೇಕು.

**'ಆ ಜುಹೋತ...'** ಮಂತ್ರದಿಂದ ಸಮಿದಾಧಾನವನ್ನು ಮಾಡಿದರೆ-ಪರಿಧಿಯ ಹೊರಗಡೆ ಬಿದ್ದ ಹವಿಸ್ಸುಗಳು ಅಗ್ನಿಯ ಭ್ರಾತೃಗಳಿಗೆ ಸೇರಿಹೋಗುವ ಕಾರಣ ಪರಿಧಿಯ ಒಳಗಡೆಯೇ ಹವನ ಮಾಡಬೇಕೆಂಬ ವಿಧಿಯು **'ಅಗ್ನೇಸ್ತ್ರಯಃ'** ಎಂಬ ಬ್ರಾಹ್ಮಣದಲ್ಲಿ ಹೇಳಿರುವುದರಿಂದ-ನಿಷ್ಫಲವಾಗುತ್ತದೆ.

ದೇವತೆಗಳಿಗೆ, ಪಿತೃದೇವತೆಗಳಿಗೆ ಅಸುರರಿಗೆ ಮೂವರು ಅಗ್ನಿಗಳಿರುವರು. ಅವರು ನಮ್ಮನ್ನೇ ಆಯ್ಕೆ ಮಾಡಲೆಂದು ಬಯಸುತ್ತಿರುತ್ತಾರೆ. **'ವೃಣೀಧ್ವಮ್ ಹವ್ಯವಾಹನಮ್'** ಎಂಬ

ಪರಸ್ತಾದರ್ವಾಚೋ ವೃಣೀತೇ ತಸ್ಮಾತ್ಪರಸ್ತಾದರ್ವಾಂಚೋ ಮನುಷ್ಯಾನ್ಪಿತರೋಽನು ಪ್ರ ಪಿಪತೇ॥೫೦-೪॥

[ಆಶಾನ್ತಾವಾಹ ಪಂಚದಶಾಬ್ರುವೀದನ್ವಾಹೈತಯಾ ವರಿಷ್ಯತೇ ಮಾ ವೇಕಾನ್ನತ್ರಿಗ್‌ಂಶಚ್ಚ ॥ ]

---

ಪರಸ್ತಾತ್ । ಅರ್ವಾಚಃ । ವೃಣೀತೇ । ತಸ್ಮಾತ್ । ಪರಸ್ತಾತ್ । ಅರ್ವಾಂಚಃ । ಮನುಷ್ಯಾನ್ । ಪಿತರಃ । ಅನು । ಪ್ರೇತಿ । ಪಿಪತೇ । [(೮)]

---

| | |
|---|---|
| ಪರಸ್ತಾತ್ ಅರ್ವಾಚಃ ವೃಣಿತೇ | ಮೊದಲ ಋಷಿಯಿಂದ ಮೊದಲು ಮಾಡಿ ಅನಂತರದ ಋಷಿಗಳಿಗೆ ಸಂಬಂಧಿಸಿದ ವನನ್ನಾಗಿ ವರಿಸಬೇಕು. |
| ತಸ್ಮಾತ್ ಅರ್ವಾಂಚಃ ಪಿತರಃ ಪರಸ್ತಾತ್ ಮನುಷ್ಯಾನ್ ಅನು ಪ್ರಪಿಪತೇ | ಆದುದರಿಂದ ಪೂರ್ವಜರಾದ ಪಿತೃಗಳು ಅನಂತರದ ಕುಲಜರನ್ನು ರಕ್ಷಿಸುತ್ತಾರೆ. |

---

ಸಾಮಿಧೇನಿಯಿಂದ ದೇವಾಗ್ನಿಯನ್ನೇ ಆಯ್ಕೆ ಮಾಡಿದಂತಾಗುತ್ತದೆ.

ಹೀಗೆ ಈ ಬ್ರಾಹ್ಮಣಭಾಗದಲ್ಲಿ ಸಾಮಿಧೇನೀಮಂತ್ರಗಳ ಪ್ರಶಂಸೆಯು ಮಾಡಲ್ಪಟ್ಟಿದೆ.

ಸಾಮಿಧೇನಿಗಳ ಕೊನೆಯಲ್ಲಿ ಪ್ರಣವವನ್ನು ಹೇಳಿದ ಮೇಲೆ ಹೋತೃವು **'ಅಗ್ನೇ ಮಹಾಗ್‌ಂ ಅಸಿ ಬ್ರಾಹ್ಮಣ ಭಾರತ'** ಎಂಬ ನಿಗದವನ್ನು ಹೇಳಿ ಯಜಮಾನನ ಪ್ರವರದ ಋಷಿಗಳಿಗೆ ಸಂಬಂಧಿಸಿದಂತೆ **[ಭಾರ್ಗವ-ಚ್ಯವನ-ಆಪ್ನವಾನ-ಔರ್ವ-ಜಾಮದಗ್ನ್ಯ ಗೋತ್ರಾಪ್ರತ್ಯಂ]** ಪ್ರವರವನ್ನು ಹೇಳಬೇಕು ಇದರಿಂದ ಬಂಧುಗಳಿಂದ ದೂರವಾದಂತೆಯೂ ಆಗುವುದಿಲ್ಲ. ಸಂತತಿಯೂ ವರ್ಧಿಸುತ್ತದೆ. ಪೂರ್ವಜರಿಂದ ರಕ್ಷಣೆಯೂ ದೊರೆಯುತ್ತದೆ.

## ॥ ನವಮೋಽನುವಾಕಃ ॥

ಅಗ್ನೇ ಮಹಾಗ್ಂ ಅಸೀತ್ಯಾಹ ಮಹಾನ್, ಹ್ಯೇಷ ಯದಗ್ನಿ

ರ್ಬ್ರಾಹ್ಮಣೇತ್ಯಾಹ ಬ್ರಾಹ್ಮಣೋ ಹ್ಯೇಷ

---

ಅಗ್ನೇ । ಮಹಾನ್ । ಅಸಿ । ಇತಿ । ಆಹ । ಮಹಾನ್ । ಹಿ । ಏಷಃ । ಯತ್ । ಅಗ್ನಿಃ।

ಬ್ರಾಹ್ಮಣ । ಇತಿ । ಆಹ । ಬ್ರಾಹ್ಮಣಃ । ಹಿ । ಏಷಃ ।

---

ಈ ಹಿಂದಿನ ಎಂಟನೆಯ ಅನುವಾಕದಲ್ಲಿ ಸಾಮಿಧೇನೀಮಂತ್ರಗಳ ವಿವರಣೆಯು ಹೇಳಲ್ಪಟ್ಟಿದೆ. ಒಂಭತ್ತನೆಯ ಈ ಅನುವಾಕದಲ್ಲಿ ನಿಗದಗಳ ವ್ಯಾಖ್ಯಾನವು ಇದೆ.

### ಪ್ರವರಮಂತ್ರಾರ್ಥ ವಿವರಣೆ

| | |
|---|---|
| ಅಗ್ನೇ ಮಹಾನ್ ಅಸಿ ಇತಿ ಆಹ | ಅಗ್ನಿಯೇ! ನೀನು ಸ್ವಭಾವದಿಂದಲೇ ಮಹಾತ್ಮನಾಗಿದ್ದೀಯೆ ಎಂದು ಮಂತ್ರವು ಹೇಳುತ್ತದೆ. |
| ಯತ್ ಅಗ್ನಿಃ ಏಷಃ ಮಹಾನ್ ಹಿ | ಯಾವ ಅಗ್ನಿಯುಂಟೋ ಆತನು ಮಹಾಂತನಷ್ಟೇ. |
| ಬ್ರಾಹ್ಮಣ ಇತಿ ಆಹ | ಅಗ್ನಿಯನ್ನು ಮಂತ್ರವು **'ಬ್ರಾಹ್ಮಣ'** ಎಂದು ಹೇಳುತ್ತದೆ. |
| ಏಷಃ ಬ್ರಾಹ್ಮಣಃ ಹಿ | ಈ ಅಗ್ನಿಯು ಬ್ರಾಹ್ಮಣಾಭಿಮಾನಿ[ಬ್ರಾಹ್ಮಣ ಜಾತಿಯವನಷ್ಟೆ]ಯಷ್ಟೇ. |

---

**'ಅಗ್ನೇ ಮಹಾಗ್ಂ ಅಸಿ'** ಎಂಬ ಮಂತ್ರದಿಂದ ಅಗ್ನಿಯನ್ನು ಸ್ತುತಿಸಲಾಗಿದೆ. ಅಗ್ನಿಯು ದೇವತೆಗಳಿಗೆ ಸಮರ್ಪಿಸುವ ಹವ್ಯಗಳಿಗೆ ಆಧಾರನಾಗಿರುವುದರಿಂದ ಅವನು ಮಹಾತ್ಮನು. ಆತನು ಬ್ರಾಹ್ಮಣನೊಡನೆಯೇ ಜನಿಸಿದವನು. ಬ್ರಾಹ್ಮಣವರ್ಣಾಭಿಮಾನಿಯಾಗಿ ಇರುವವನು.

ಭಾರತೇತ್ಯಾಹೈಷ ಹಿ ದೇವೇಭ್ಯೋ ಹವ್ಯಂ ಭರತಿ ದೇವೇದ್ಧ

ಇತ್ಯಾಹ ದೇವಾ ಹ್ಯೇತಮೈಂಧತ ಮನ್ವಿದ್ಧ ಇತ್ಯಾಹ

---

ಭಾರತ । ಇತಿ । ಆಹ । ಏಷಃ । ಹಿ । ದೇವೇಭ್ಯಃ । ಹವ್ಯಮ್ । ಭರತಿ। ದೇವೇದ್ಧ

ಇತಿ ದೇವ-ಇದ್ಧಃ । ಇತಿ । ಆಹ । ದೇವಾಃ । ಹಿ । ಏತಮ್ । ಐಂಧತ । ಮನ್ವಿದ್ಧ

ಇತಿ ಮನು-ಇದ್ಧಃ । ಇತಿ । ಆಹ ।

---

| | |
|---|---|
| ಭಾರತ ಇತಿ ಆಹ | ಮಂತ್ರವು ಅಗ್ನಿಯನ್ನು **'ಭಾರತ'** ಎಂದು ಹೇಳುತ್ತಿದೆ. |
| ಏಷಃ ಹಿ ದೇವೇಭ್ಯಃ ಹವ್ಯಮ್ ಭರತಿ | ಈ ಅಗ್ನಿಯೇ ದೇವತೆಗಳಿಗೆ ಹವಿಸ್ಸನ್ನು ಒಯ್ಯು ವವನಷ್ಟೇ/ಹವಿಸ್ಸನ್ನು ಧರಿಸಿರುತ್ತಾನಷ್ಟೇ. |

**ಅನಂತರ ಅಸೌ ಅಸೌ=ಯಜಮಾನನು ಈ ಪ್ರವರದವನು, ಎಂದು ನಿರ್ದೇಶಿಸಬೇಕು.**

**ಶ್ವಾಸವಿಚ್ಛೇದ ಮಾಡದೇ ಹೇಳುವ ಏಳು ನಿವಿತ್ಪದಗಳ ವ್ಯಾಖ್ಯಾನ.**

| | |
|---|---|
| ದೇವೇದ್ಧಃ ಇತಿ ಆಹ | ಮಂತ್ರವು **'ದೇವೇದ್ಧಃ'** ಎಂದು ಹೇಳುತ್ತದೆ. |
| ಏತಮ್ ದೇವಾಃ ಹಿ ಐಂಧತ | ದೇವತೆಗಳು ತಮ್ಮ ಯಾಗಗಳಲ್ಲಿ ಅಗ್ನಿಯು ಜ್ವಲಿಸುವಂತೆ ಮಾಡಿದರಷ್ಟೆ. |
| ಮನ್ವಿದ್ಧಃ ಇತಿ ಆಹ | ಮಂತ್ರವು **'ಮನ್ವಿದ್ಧಃ'** ಎಂದು ಹೇಳುತ್ತದೆ. |

---

ಅವನು ಭಾರತನು. ದೇವತೆಗಳಿಗೆ ಹವಿಸ್ಸನ್ನು ಧರಿಸುವವನು. ಕೊಂಡೊಯ್ಯುವವನು. ಈ ಮಂತ್ರದ ಅನಂತರ ಯಜಮಾನನು ಇಂತಹ ಪ್ರವರದವನೆಂಬುದನ್ನು ನಿರ್ದೇಶಿಸ ಬೇಕು. ಬಳಿಕ ಉಸಿರನ್ನು ಬಿಡದೆ ನಿವಿತ್ಪದಗಳನ್ನು ಹೇಳಬೇಕು.

ಮನುರ್ಹ್ಯೇತಮುತ್ತರೋ ದೇವೇಭ್ಯ ಐಂಧರ್ಷಿಷ್ಟುತ ಇತ್ಯಾಹ ರ್ಷಯೋ ಹ್ಯೇತಮಸ್ತುವನ್ವಿಪ್ರಾನುಮದಿತ ಇತ್ಯಾಹ [..ತ್ಯಾಹ (೧)] ವಿಪ್ರಾ ಹ್ಯೇತೇ ಯಚ್ಛುಶ್ರುವಾಗ್ಂಸಃ ಕವಿಶಸ್ತ ಇತ್ಯಾಹ

---

ಮನುಃ । ಹಿ । ಏತಮ್ । ಉತ್ತರ ಇತ್ಯುತ್-ತರಃ । ದೇವೇಭ್ಯಃ । ಐಂಧ । ಋಷಿಷ್ಟುತ ಇತ್ಯೃಷಿ-ಸ್ತುತಃ । ಇತಿ । ಆಹ । ಋಷಯಃ । ಹಿ । ಏತಮ್। ಅಸ್ತುವನ್ನ್। ವಿಪ್ರಾನುಮದಿತ ಇತಿ ವಿಪ್ರ-ಅನುಮದಿತಃ । ಇತಿ । ಆಹ । [(೧)] । ವಿಪ್ರಾಃ । ಹಿ। ಏತೇ । ಯತ್ । ಶುಶ್ರುವಾಗ್ಂಸಃ । ಕವಿಶಸ್ತ ಇತಿ ಕವಿ-ಶಸ್ತಃ । ಇತಿ । ಆಹ ।

---

| | |
|---|---|
| ಏತಮ್ ದೇವೇಭ್ಯಃ ಉತ್ತರಃ ಮನುಃ ಐಂಧ | ಮನುವು ದೇವಯಾಗಾನಂತರ ತನ್ನ ಯಾಗ ದಲ್ಲಿ ಅಗ್ನಿಪ್ರಜ್ವಾಲನೆಯನ್ನು ಮಾಡಿದ ನಷ್ಟೆ. |
| ಋಷಿಷ್ಟುತಃ ಇತಿ ಆಹ | ಋಷಿಷ್ಟುತನೆಂದು ಶ್ರುತಿಯು ಹೇಳುತ್ತದೆ. |
| ಋಷಯಃ ಏತಮ್ ಅಸ್ತುವನ್ ಹಿ | ಮೇಧಾವಿಗಳಾದ ಋಷಿಗಳು ಈ ಅಗ್ನಿಯನ್ನು ಸ್ತುತಿಸುತ್ತಿರುವರಷ್ಟೆ. |
| ವಿಪ್ರಾನುಮದಿತಃ ಇತಿ ಆಹ | **'ವಿಪ್ರಾನುಮದಿತ'**ನು ಎಂದು ಶ್ರುತಿಯು ಹೇಳುತ್ತದೆ/ಈತನು ಬ್ರಾಹ್ಮಣರಿಂದ ತೃಪ್ತಿ ಪಡಿಸಲ್ಪಟ್ಟವನೂ, ಸ್ತುತಿಸಲ್ಪಟ್ಟವನೂ ಆಗಿರು ವನಷ್ಟೆ. |
| ಯತ್ ಶುಶ್ರುವಾಗ್ಂಸಃ ಏತೇ ವಿಪ್ರಾಃ ಹಿ | ಯಾವ ಬ್ರಾಹ್ಮಣರು ವೇದಾಧ್ಯಯನ ಸಂಪನ್ನರೋ ಅವರೇ ವಿಪ್ರರಷ್ಟೆ. |
| ಕವಿಶಸ್ತಃ ಇತಿ ಆಹ | ಮಂತ್ರವು ಸೂಕ್ಷ್ಮಮತಿಗಳಿಂದ ಸ್ತುತಿಸಲ್ಪಟ್ಟ ವನೆಂದು ಹೇಳುತ್ತದೆ. |

ಕವಯೋ ಹ್ಯೇತೇ ಯಚ್ಛುಶ್ರುವಾಗ್ಂಸೋ ಬ್ರಹ್ಮಸಗ್ಂಶಿತ ಇತ್ಯಾಹ ಬ್ರಹ್ಮಸಗ್ಂಶಿತೋ ಹ್ಯೇಷ ಘೃತಾಹವನ ಇತ್ಯಾಹ ಘೃತಾಹುತಿರ್ಹ್ಯಸ್ಯ ಪ್ರಿಯತಮಾ ಪ್ರಣೀರ್ಯಜ್ಞಾನಾಮಿತ್ಯಾಹ

---

ಕವಯಃ । ಹಿ । ಏತೇ । ಯತ್ । ಶುಶ್ರುವಾಗ್ಂಸಃ । ಬ್ರಹ್ಮಸಗ್ಂಶಿತ ಇತಿ ಬ್ರಹ್ಮ-ಸಗ್ಂಶಿತಃ । ಇತಿ । ಆಹ । ಬ್ರಹ್ಮಸಗ್ಂಶಿತ ಇತಿ ಬ್ರಹ್ಮ-ಸಗ್ಂಶಿತಃ । ಹಿ । ಏಷಃ। ಘೃತಾಹವನ ಇತಿ ಘೃತ-ಆಹವನಃ । ಇತಿ । ಆಹ । ಘೃತಾಹುತಿರಿತಿ ಘೃತ-ಆಹುತಿಃ । ಹಿ । ಅಸ್ಯ । ಪ್ರಿಯತಮೇತಿ ಪ್ರಿಯ-ತಮಾ । ಪ್ರಣೀರಿತಿ ಪ್ರ-ನೀಃ । ಯಜ್ಞಾನಾಮ್ । ಇತಿ । ಆಹ ।

---

| | |
|---|---|
| ಯತ್ ಶುಶ್ರುವಾಗ್ಂಸಃ ಏತೇ ಕವಯಃ ಹಿ | ವೇದ-ವೇದಾರ್ಥವನ್ನು ತಿಳಿದವರೇ ಕವಿಗಳಷ್ಟೆ. |
| ಬ್ರಹ್ಮಸಗ್ಂಶಿತಃ ಇತಿ ಆಹ | ಬ್ರಹ್ಮಸಂಶಿತನೆಂದು ಶ್ರುತಿಯು ಹೇಳುತ್ತದೆ. |
| ಏಷಃ ಬ್ರಹ್ಮಸಗ್ಂಶಿತಃ ಹಿ | ಈ ಅಗ್ನಿಯು ಮಂತ್ರಗಳಿಂದ ಸಮಿದಾಧಾನ ಪೂರ್ವಕವಾಗಿ ಪ್ರಜ್ವಾಲಿತನಾದವನಷ್ಟೆ. |
| ಘೃತಾಹವನಃ ಇತಿ ಆಹ | ಮಂತ್ರವು ಅಗ್ನಿಯನ್ನು **'ಘೃತಾಹವನ'** ಎಂದು ಹೇಳುತ್ತದೆ. |
| ಅಸ್ಯ ಘೃತಾಹುತಿಃ ಪ್ರಿಯತಮಾ ಹಿ | ಆಜ್ಯದ ಆಹುತಿಯು ಅಗ್ನಿಗೆ ಅತ್ಯಂತ ಪ್ರಿಯವಾದುದಷ್ಟೆ. |

**ಶ್ವಾಸವಿಚ್ಛೇದವನ್ನು ಮಾಡಿದ ನಂತರ ನಾಲ್ಕು ನಿವಿತ್ತುಗಳ ವಿವರಣೆ.**

| | |
|---|---|
| ಪ್ರಣೀರ್ಯಜ್ಞಾನಾಮ್ ಇತಿ ಆಹ | ಮಂತ್ರವು ಅಗ್ನಿಯನ್ನು **'ಯಜ್ಞಾನಾಮ್ ಪ್ರಣೀಃ'** ಎನ್ನುತ್ತದೆ. |

ಪ್ರಣೀರ್ಹ್ಯೇಷ ಯಜ್ಞಾನಾಗ್ಂ ರಥೀರಧ್ವರಾಣಾಮಿತ್ಯಾಹೈಷ ಹಿ ದೇವರಥೋಽತೂರ್ತೋ ಹೋತೇತ್ಯಾಹ ನ ಹ್ಯೇತಂ ಕಶ್ಚನ [(೨)] ತರತಿ ತೂರ್ಣಿರ್ ಹವ್ಯವಾಡಿತ್ಯಾಹ

---

ಪ್ರಣೀರಿತಿ ಪ್ರ-ನೀಃ । ಹಿ । ಏಷಃ । ಯಜ್ಞಾನಾಮ್ । ರಥೀಃ । ಅಧ್ವರಾಣಾಮ್ । ಇತಿ। ಆಹ । ಏಷಃ । ಹಿ । ದೇವರಥ ಇತಿ ದೇವ-ರಥಃ । ಅತೂರ್ತಃ । ಹೋತಾ । ಇತಿ। ಆಹ । ನ । ಹಿ । ಏತಮ್ । ಕಃ । ಚನ । [(೨)] । ತರತಿ । ತೂರ್ಣಿಃ । ಹವ್ಯವಾಡಿತಿ ಹವ್ಯ-ವಾಟ್ । ಇತಿ । ಆಹ ।

---

| | |
|---|---|
| ಏಷಃ ಯಜ್ಞಾನಾಮ್ ಪ್ರಣೀಃ ಹಿ ರಥೀಃ ಅಧ್ವರಾಣಾಮ್ ಇತಿ ಆಹ | ಈ ಅಗ್ನಿಯು ಯಜ್ಞಗಳ ಪ್ರವರ್ತಕನಷ್ಟೆ. ಅಗ್ನಿಯು '**ಅಧ್ವರಾಣಾಮ್ ರಥೀಃ**' ಎಂದು ಶ್ರುತಿಯು ಹೇಳುತ್ತದೆ. |
| ಏಷಃ ದೇವರಥಃ ಹಿ | ಈ ಅಗ್ನಿಯು ದೇವತೆಗಳಿಗೆ ಹವಿಸ್ಸನ್ನು ಒಯ್ಯುವ ರಥದಂತೆ ಇರುವನಷ್ಟೆ. |
| ಅತೂರ್ತಃ ಹೋತಾ ಇತಿ ಆಹ | ಶ್ರುತಿಯು ಅಗ್ನಿಯನ್ನು 'ಅತೂರ್ತೋ ಹೋತಾ' ಎಂದು ಪ್ರಶಂಸಿಸುತ್ತದೆ. |
| ಏತಮ್ ಕಶ್ಚನ ನ ತರತಿ ಹಿ | ಈ ಹೋತೃವಾದ [ಆಹ್ವಾನ ಮಾಡುವ, ಹೋಮಕ್ಕೆ ಆಶ್ರಯನಾದ] ಅಗ್ನಿಯನ್ನು ಯಾರೂ ಮೀರಲಾರರಷ್ಟೆ. |
| ತೂರ್ಣಿಃ ಹವ್ಯವಾಟ್ ಇತಿ ಆಹ | ಶ್ರುತಿಯು ಅಗ್ನಿಯನ್ನು '**ತೂರ್ಣಿಃ ಹವ್ಯ ವಾಟ್**' ಎಂದು ಹೇಳುತ್ತದೆ. |

---

ಹೋತೃವು ಶ್ವಾಸವಿಚ್ಛೇದವನ್ನು ಮಾಡದೆ, ದೇವೇದ್ಧಃ, ಮನ್ವಿದ್ಧಃ, ಋಷಿಷ್ಟುತಃ, ವಿಪ್ರಾನುಮದಿತಃ, ಕವಿಶಸ್ತಃ, ಬ್ರಹ್ಮಸಗ್ಂಶಿತಃ ಮತ್ತುಘೃತಾಹವನಗಳೆಂಬ ಏಳು ನಿವಿತ್ಪದಗಳನ್ನು ಹೇಳಬೇಕು.

ಸರ್ವಗ್ಂ ಹ್ಯೇಷ ತರತ್ಯಾಸ್ಪಾತ್ರಂ ಜುಹೂರ್ದೇವಾನಾಮಿ

ತ್ಯಾಹ ಜುಹೂರ್ಹ್ಯೇಷ ದೇವಾನಾಂ ಚಮಸೋ ದೇವಪಾನ

ಇತ್ಯಾಹ ಚಮಸೋ ಹ್ಯೇಷ ದೇವಪಾನೋಽರಾಗ್ಂ

---

ಸರ್ವಮ್ । ಹಿ । ಏಷಃ । ತರತಿ । ಆಸ್ಪಾತ್ರಮ್ । ಜುಹೂಃ । ದೇವಾನಾಮ್ । ಇತಿ। ಆಹ।

ಜುಹೂಃ । ಹಿ । ಏಷಃ । ದೇವಾನಾಮ್ । ಚಮಸಃ । ದೇವಪಾನ ಇತಿ ದೇವ-ಪಾನಃ । ಇತಿ।

ಆಹ । ಚಮಸಃ । ಹಿ । ಏಷಃ । ದೇವಪಾನ ಇತಿ ದೇವ-ಪಾನಃ । ಅರಾನ್ ।

---

| | |
|---|---|
| ಏಷಃ ಸರ್ವಮ್ ತರತಿ ಹಿ | ಈ ಅಗ್ನಿಯು ಹವಿಸ್ಸನ್ನು ಸಮರ್ಪಿಸಲು ಎಲ್ಲ ದೇವತೆಗಳನ್ನೂ ಹೊಂದುತ್ತಾನೆ. |

**ಉಚ್ಛ್ವಾಸದ ಆನಂತರ ಹೇಳುವ ನಾಲ್ಕು ನಿವಿನ್ಮಂತ್ರಗಳು-ವ್ಯಾಖ್ಯಾನ**

| | |
|---|---|
| ಆಸ್ಪಾತ್ರಮ್ ಜುಹೂಃ ದೇವಾನಾಮ್ ಇತಿ ಆಹ | ಶ್ರುತಿಯು 'ಅಗ್ನಿಯೇ! ನೀನು ದೇವತೆಗಳಿಗೆ ಹವಿಸ್ಸನ್ನು ಸಮರ್ಪಿಸುವ ಅಯೋಮಯ/ ಲೋಹಮಯಜುಹೂವಿನಂತೆ ಇರುವೆ' ಎಂದು ಹೇಳುತ್ತದೆ. |
| ಏಷಃ ದೇವಾನಾಮ್ ಜುಹೂಃ ಹಿ | ಈ ಅಗ್ನಿಯು ದೇವತೆಗಳಿಗೆ ಹವಿಸ್ಸನ್ನು ನೀಡುವ ಜುಹೂವೇ ಆಗಿದ್ದಾನಷ್ಟೆ. |
| ಚಮಸಃ ದೇವಪಾನಃ ಇತಿ ಆಹ | ಶ್ರುತಿಯು [ಮನುಷ್ಯರು ಸೋಮರಸವನ್ನು ಕುಡಿಯಲು ಬಯಸುವ] 'ಚಮಸಪಾತ್ರೆಯಂತೆ [ಈ ಅಗ್ನಿಯು] ದೇವತೆಗಳಿಗೆ ಸೋಮರಸವನ್ನು ಒದಗಿಸುವ ಚಮಸವಾಗಿದ್ದಾನೆ' ಎಂದು ಹೇಳುತ್ತದೆ. |
| ಏಷಃ ದೇವಪಾನಃ ಚಮಸಃ ಹಿ | ಈ ಅಗ್ನಿಯು ದೇವತೆಗಳಿಗೆ ಸೋಮರಸಪಾನ ಸಾಧನವಾದ ಪಾತ್ರೆಯಷ್ಟೆ. |

ಇವಾಗ್ನೇ ನೇಮಿರ್ದೇವಾಗ್‌ಸ್ತ್ವಂ ಪರಿಭೂರಸೀತ್ಯಾಹ

ದೇವಾನ್, ಹ್ಯೇಷ ಪರಿಭೂರ್ಯದ್ಬ್ರೂಯಾದಾ ವಹ

ದೇವಾನ್ದೇವಯತೇ ಯಜಮಾನಾಯೇತಿ

---

ಇವ । ಅಗ್ನೇ । ನೇಮಿಃ । ದೇವಾನ್ । ತ್ವಮ್ । ಪರಿಭೂರಿತಿ ಪರಿ–ಭೂಃ। ಅಸಿ । ಇತಿ । ಆಹ । ದೇವಾನ್ । ಹಿ । ಏಷಃ । ಪರಿಭೂರಿತಿ ಪರಿ–ಭೂಃ । ಯತ್। ಬ್ರೂಯಾತ್ । ಏತಿ । ವಹ । ದೇವಾನ್ । ದೇವಯತ ಇತಿ ದೇವ–ಯತೇ । ಯಜಮಾನಾಯ । ಇತಿ ।

---

| | |
|---|---|
| ಅಗ್ನೇ! ನೇಮಿಃ ಅರಾನ್ ಇವ ದೇವಾನ್ ತ್ವಮ್ ಪರಿಭೂಃ ಅಸಿ ಇತಿ ಆಹ | ಶ್ರುತಿಯು 'ಹೇ! ಅಗ್ನಿಯೇ! ಗಾಲಿಯ ಅರೆ ಪಟ್ಟಿಗಳನ್ನು ಕೂಡಿಸುವ ಚಕ್ರದ ಸುತ್ತು ಪಟ್ಟಿಯಂತೆ ನೀನು ಎಲ್ಲ ದೇವತೆಗಳನ್ನು ಜೋಡಿಸುವ ಪರಿಧಿಯಾಗಿರುವೆ' ಎಂದು ಹೇಳುತ್ತದೆ. |
| ಏಷಃ ದೇವಾನ್ ಪರಿಭೂಃ ಹಿ | ಈ ಅಗ್ನಿಯು ಎಲ್ಲ ದೇವತೆಗಳನ್ನು ಆಹ್ವಾನಿಸಿ, ಹವಿಸ್ಸನ್ನು ಒಯ್ಯುವುದರಿಂದ ಎಲ್ಲರನ್ನೂ ವ್ಯಾಪಿಸಿರುತ್ತಾನೆ. |
| ಯತ್ ಬ್ರೂಯಾತ್ ಆ ವಹ ದೇವಾನ್ ದೇವಯತೇ ಯಜಮಾನಾಯ ಇತಿ | ಒಂದು ವೇಳೆ **'ದೇವಯತೇ'** ಎಂಬ ಪದವು ಸೇರಿರುವ 'ದೇವಾನ್ ಆವಹ ಯಜಮಾನಾಯ' ಎಂದು ಹೋತೃವು ಹೇಳಿದರೆ |

---

ಶ್ವಾಸವನ್ನು ಬಿಟ್ಟ ನಂತರ ನಾಲ್ಕು ನಿವಿನ್ಮಂತ್ರಗಳನ್ನು ಹೇಳಬೇಕು.

ದೀರ್ಘವಾದ ಉಚ್ಛ್ವಾಸವನ್ನು ಮಾಡಿ ಅನಂತರ ಈ ನಾಲ್ಕು ನಿವಿನ್ಮಂತ್ರಗಳನ್ನು ಹೇಳಬೇಕು.

ಭ್ರಾತೃವ್ಯಮಸ್ಮೈ [(೩)ಜನಯೇ..] ಜನಯೇದಾವಹ
ದೇವಾನ್, ಯಜಮಾನಾಯೇತ್ಯಾಹ ಯಜಮಾನಮೇವೈತೇನ
ವರ್ಧಯತ್ಯಗ್ನಿಮಗ್ನ ಆವಹ

---

ಭ್ರಾತೃವ್ಯಮ್ । ಅಸ್ಮೈ । [(೩)] । ಜನಯೇತ್ । ಏತಿ । ವಹ । ದೇವಾನ್ । ಯಜಮಾನಾಯ । ಇತಿ । ಆಹ । ಯಜಮಾನಮ್ । ಏವ । ಏತೇನ । ವರ್ಧಯತಿ। ಅಗ್ನಿಮ್ । ಅಗ್ನೇ । ಏತಿ । ವಹ ।

---

| | |
|---|---|
| ಅಸ್ಮೈ ಭ್ರಾತೃವ್ಯಮ್ ಜನಯೇತ್ | ಯಜಮಾನನಿಗೆ ಶತ್ರುಗಳು ಹುಟ್ಟುವಂತೆ ಮಾಡಬಹುದು. |
| ಆ ವಹ ದೇವಾನ್ ಯಜಮಾನಾಯ ಇತಿ ಆಹ | ಆದುದರಿಂದ **'ಯಜಮಾನಾಯ ದೇವಾನ್ ಆ ವಹ'** ಎಂದು ಶ್ರುತಿಯು ಹೇಳುತ್ತದೆ. |
| ಏತೇನ ಯಜಮಾನಮ್ ಏವ ವರ್ಧಯತಿ | ಹೀಗೆ ಹೇಳುವ ಹೋತೃವು ಯಜಮಾನನನ್ನೇ ದೇವತಾನುಗ್ರಹದಿಂದ ವೃದ್ಧಿ ಹೊಂದುವಂತೆ ಮಾಡುತ್ತಾನೆ. |

**ದೇವತಾಹ್ವಾನಮಂತ್ರಗಳು; ಪ್ರಶಂಸೆ**

| | |
|---|---|
| ಅಗ್ನಿಮ್ ಅಗ್ನೇ ಆ ವಹ | ಅಗ್ನಿದೇವನೇ! ಪ್ರಥಮಾಜ್ಯಭಾಗದ ದೇವತೆಯಾದ ಅಗ್ನಿಯನ್ನು ಆಹ್ವಾನಿಸು. |

---

ಇವುಗಳಲ್ಲಿ ನಾಲ್ಕನೆಯ ಮಂತ್ರವು ಹೀಗಿದೆ. **'ಆವಹ ದೇವಾನ್ ಯಜಮಾನಾಯ'** ಈ ಶಾಖೆಯಲ್ಲಿ ಈ ಮಂತ್ರವು ಈ ರೀತಿಯಲ್ಲಿಯೇ ಪಠಿತವಾಗಿದೆ. ಶಾಖಾಂತರದಲ್ಲಿ **'ದೇವಯತೇ'** ಎಂಬ ಪದದೊಡನೆ ಸೇರಿ ಪಠಿತವಾಗಿದೆ. ಆ ಮಂತ್ರವು ಇಲ್ಲಿ ಸೂಕ್ತವಾಗುವುದಿಲ್ಲವೆಂದು ಬ್ರಾಹ್ಮಣದ ವಿವರಣೆ. ಈ ವಿವರಣೆಯು ಎರಡು ಭಾಷ್ಯಗಳಲ್ಲಿ ಎರಡು ರೀತಿಯಲ್ಲಿದೆ.

ಸೋಮಮಾವಹೇತ್ಯಾಹ ದೇವತಾ ಏವ ತದ್ಯಥಾಪೂರ್ವ

ಮುಪಹ್ವಯತ ಆ ಚಾಗ್ನೇ ದೇವಾನ್, ವಹ ಸುಯಜಾ ಚ

ಯಜ ಜಾತವೇದ ಇತ್ಯಾಹಾ–

---

ಸೋಮಮ್ । ಏತಿ । ವಹ । ಇತಿ । ಆಹ । ದೇವತಾಃ । ಏವ । ತತ್ । ಯಥಾಪೂರ್ವಮಿತಿ ಯಥಾ–ಪೂರ್ವಮ್ । ಉಪೇತಿ । ಹ್ವಯತೇ । ಏತಿ । ಚ । ಅಗ್ನೇ। ದೇವಾನ್ । ವಹ । ಸುಯಜೇತಿ ಸು–ಯಜಾ । ಚ । ಯಜ । ಜಾತವೇದ ಇತಿ ಜಾತ–ವೇದಃ । ಇತಿ । ಆಹ ।

---

| | |
|---|---|
| ಸೋಮಮ್ ಆ ವಹ | ದ್ವಿತೀಯಾಜ್ಯಭಾಗದೇವತೆಯಾದ ಸೋಮನನ್ನು ಆಹ್ವಾನಿಸು. |
| ಇತಿ ಆಹ | ಹೀಗೆ ಶ್ರುತಿಯು ಹೇಳುತ್ತದೆ. |
| ತತ್ ಯಥಾಪೂರ್ವಮ್ ದೇವತಾಃ ಏವ ಉಪಹ್ವಯತೇ | ಹೀಗೆಯೇ ಯಾಗದೇವತೆಗಳೆಲ್ಲರನ್ನೂ ಅನುಕ್ರಮವಾಗಿ[ಆಹ್ವಾನಿಸಬೇಕು] ಶ್ರುತಿಯು ಆಹ್ವಾನಿಸುತ್ತದೆ. |

**ಆಹ್ವಾನಮಂತ್ರದ ನಿಗಮನವಾಕ್ಯ;ಅರ್ಥವಾದ**

| | |
|---|---|
| ಜಾತವೇದಃ ಅಗ್ನೇ | ದೇವತೆಗಳೆಲ್ಲರನ್ನೂ ತಿಳಿದಿರುವ ಅಗ್ನಿ ದೇವನೇ! |
| ದೇವಾನ್ ಚ ಆ ವಹ ಸುಯಜಾ ಚ ಯಜ ಇತಿ ಆಹ | 'ದೇವತೆಗಳನ್ನು ಯಜ್ಞಕ್ಕಾಗಿ ಆಹ್ವಾನಿಸು. ಒಳ್ಳೆಯ ಯಾಗದಿಂದ ದೇವತೆಗಳನ್ನು ಆರಾಧಿಸು'. ಹೀಗೆ ಶ್ರುತಿಯು ಹೇಳುತ್ತದೆ. |

---

ಸಾಯಣಾಚಾರ್ಯರ ಭಾಷ್ಯದಲ್ಲಿ **'ದೇವಯತೇ'** ಎಂಬ ಪದಕ್ಕೆ **'ದೇವಾನ್ ಆತ್ಮನಃ ಇಚ್ಛತಿ'** ಎಂಬ ವಿಗ್ರಹವಾಕ್ಯದಂತೆ ದೇವತೆಗಳನ್ನು ತನಗಾಗಿ ಅಪೇಕ್ಷಿಸುವವನು

–ಗ್ನಿಮೇವ ತಥ್ಸಗ್‍ಂಶ್ಯತಿ ಸೋಽಸ್ಯ ಸಗ್‍ಂಶಿತೋ ದೇವೇಭ್ಯೋ

ಹವ್ಯಂ ವಹತ್ಯಗ್ನಿರ್ ಹೋತೇ [ಹೋತಾ(ಳ)ಇತ್ಯಾ..]

ತ್ಯಾಹಾಗ್ನಿರ್ವೈ ದೇವಾನಾಗ್‍ಂ ಹೋತಾ

---

ಅಗ್ನಿಮ್ । ಏವ । ತತ್ । ಸಮಿತಿ । ಶ್ಯತಿ । ಸಃ । ಅಸ್ಯ । ಸಗ್‍ಂಶಿತ ಇತಿ ಸಂ–ಶಿತಃ।

ದೇವೇಭ್ಯಃ । ಹವ್ಯಮ್ । ವಹತಿ । ಅಗ್ನಿಃ । ಹೋತಾ । [(ಳ)] । ಇತಿ । ಆಹ । ಅಗ್ನಿಃ।

ವೈ । ದೇವಾನಾಮ್ । ಹೋತಾ ।

---

| | |
|---|---|
| ತತ್ ಅಗ್ನಿಮ್ ಏವ ಸಂಶ್ಯತಿ | ಆ ಮಂತ್ರಪಾಠವು ಅಗ್ನಿಯನ್ನೇ ತೀಕ್ಷ್ಣವಾಗಿರುವಂತೆ ಮಾಡುತ್ತದೆ. [ಚುರುಕಾಗಿರುವಂತೆ ಮಾಡುತ್ತದೆ] |
| ಸಗ್‍ಂಶಿತಃ ಸಃ ಅಸ್ಯ ಹವ್ಯಮ್ ದೇವೇಭ್ಯಃ ವಹತಿ | ಈ ಪ್ರಾರ್ಥನೆಯಿಂದ ತೀಕ್ಷ್ಣವಾಗಿರುವ ಆ ಅಗ್ನಿಯು ದೇವತೆಗಳಿಗಾಗಿ ಯಜಮಾನನು ಕೊಡುವ ಹವಿಸ್ಸನ್ನು ಒಯ್ಯುತ್ತಾನೆ. |

**'ಅಗ್ನಿರ್ ಹೋತಾ ವೇತ್ವಗ್ನಿಃ'ಎಂಬ ಮಂತ್ರದ ವಿವರಣೆ**

| | |
|---|---|
| ಅಗ್ನಿರ್ ಹೋತಾ ಇತ್ಯಾಹ | ಅಗ್ನಿಯೇ ದೇವತೆಗಳನ್ನು ಆಹ್ವಾನಿಸುವವನು ಎಂದು ಶ್ರುತಿಯು ಹೇಳುತ್ತದೆ/ಹೋತೃವು ಹೇಳುತ್ತಾನೆ. |
| ಅಗ್ನಿಃ ವೈ ದೇವಾನಾಮ್ ಹೋತಾ | ಅಗ್ನಿಯೇ ದೇವತೆಗಳ*ಹೋತೃವಷ್ಟೆ. |

---

ಎಂದು ಅರ್ಥ. ತನಗಾಗಿ ದೇವತೆಗಳನ್ನು ಬಯಸುವವನು ಎಂಬ ಪದಪ್ರಯೋಗವನ್ನು ಮಾಡಿದರೆ ಬೇರೆಯವರೂ ಈ ದೇವತೆಗಳನ್ನೇ ಬಯಸಬಹುದಾದುದರಿಂದ

---

*ದೇವತೆಗಳನ್ನು ಕರೆದು ಅವರಿಗೆ ಹವಿಸ್ಸನ್ನು ಒಯ್ಯುವವನು.

ಯ ಏವ ದೇವಾನಾಗ್ಂ ಹೋತಾ ತಂ ವೃಣೀತೇ ಸ್ಮೋ

ವಯಮಿತ್ಯಾಹಾತ್ಮಾನಮೇವ ಸತ್ತ್ವಂ ಗಮಯತಿ

---

ಯಃ । ಏವ । ದೇವಾನಾಮ್ । ಹೋತಾ । ತಮ್ । ವೃಣೀತೇ । ಸ್ಮಃ । ವಯಮ್।

ಇತಿ । ಆಹ । ಆತ್ಮಾನಮ್ । ಏವ । ಸತ್ತ್ವಮಿತಿ ಸತ್-ತ್ವಮ್ । ಗಮಯತಿ ।

---

| | |
|---|---|
| ಯಃ ದೇವಾನಾಮ್ ಹೋತಾ ತಮ್ ಏವ ವೃಣೀತೇ | ಈ ಮಂತ್ರಪಾಠದಿಂದ ಯಾವನು ದೇವತೆಗಳ ಹೋತೃವೋ ಆ ಅಗ್ನಿಯನ್ನೇ ಹೋತೃವು ವರಣೆ ಮಾಡುತ್ತಾನೆ. |

**ಈ ಮಂತ್ರದ ಮತ್ತೊಂದು ವಾಕ್ಯದ ವ್ಯಾಖ್ಯಾನ**

| | |
|---|---|
| ವಯಮ್ ಸ್ಮಃ ಇತಿ ಆಹ | [ದೇವಹೋತೃವಾದ ನಿನ್ನೊಡನೆ ಮನುಷ್ಯ ಹೋತೃಗಳಾದ] ನಾವೂ ಇದ್ದೇವೆ ಎಂದು ಹೋತೃವು ಹೇಳುತ್ತಾನೆ. |
| ಆತ್ಮಾನಮ್ ಸತ್ತ್ವಮ್ ಏವ ಗಮಯತಿ | ಇದರಿಂದ ತಾನು ಹೋತೃವಾಗಿರುವಿಕೆಯನ್ನೂ ಪ್ರಸಿದ್ಧಿಪಡಿಸುತ್ತಾನೆ. |

---

ಅದೇ ದೇವತೆಗಳನ್ನೇ ಇಬ್ಬರೂ ಬಯಸಿದಂತಾಗಿ ಶತ್ರುವು ಹುಟ್ಟುವಂತೆ ಆದೀತು. ಹೀಗಾಗಿ ಶ್ರುತಿಯು ಅದನ್ನು ನಿರಾಕರಿಸಿ, 'ದೇವತೆಗಳನ್ನು ಈ ಯಜಮಾನನಿಗಾಗಿ ಆಹ್ವಾನಿಸು' ಎಂದು ಅರ್ಥವನ್ನು ಕೊಡುವ ಮಂತ್ರವನ್ನೇ ಪಠಿಸಬೇಕೆಂದು ಹೇಳುತ್ತಾ ಇದೆ.

ಭಟ್ಟಭಾಸ್ಕರಭಾಷ್ಯದಲ್ಲಿ **'ಯಜಮಾನಾಯ ದೇವಾನ್ ಆವಹ'** ಎಂದು ಹೇಳುವುದರಿಂದಲೇ ದೇವತೆಗಳನ್ನು ಈ ಯಜಮಾನನು ಅಪೇಕ್ಷಿಸುವನು ಎಂಬ ಅರ್ಥವು ತಿಳಿಯುತ್ತಿರುವಾಗ ಪುನಃ ದೇವತೆಗಳನ್ನು ತನಗಾಗಿ ಬಯಸುವ ಯಜಮಾನನಿಗಾಗಿ, ಎಂಬ ಅರ್ಥವನ್ನು ನೀಡುವ **'ದೇವಯತೇ ಯಜಮಾನಾಯ'** ಎಂಬ ವಾಕ್ಯದಲ್ಲಿ **'ದೇವಯತೇ'** ಎಂಬ ವಿಶೇಷಣವು ದೇವತೆಗಳಲ್ಲದವರನ್ನು ಬಯಸುವುದಿಲ್ಲ ಎಂಬ ಅರ್ಥದ ಮೂಲಕ ಯಜಮಾನನು

ಸಾಧು ತೇ ಯಜಮಾನ ದೇವತೇತ್ಯಾಹಾಶಿಷಮೇವೈತಾ

ಮಾಶಾಸ್ತೇ ಯದ್ಬ್ರೂಯಾದ್ಯೋಽಗ್ನಿಗ್ಂ ಹೋತಾರಮವೃಥಾ

---

ಸಾಧು । ತೇ । ಯಜಮಾನ । ದೇವತಾ । ಇತಿ । ಆಹ । ಆಶಿಷಮಿತ್ಯಾ-ಶಿಷಮ್ । ಏವ । ಏತಾಮ್ । ಏತಿ । ಶಾಸ್ತೇ । ಯತ್ । ಬ್ರೂಯಾತ್ । ಯಃ । ಅಗ್ನಿಮ್ । ಹೋತಾರಮ್। ಅವೃಥಾಃ ।

---

## ಮಂತ್ರದ ಮತ್ತೊಂದು ವಾಕ್ಯದ ವಿವರಣೆ

| | |
|---|---|
| ಯಜಮಾನ ತೇ ದೇವತಾ ಸಾಧು ಇತಿ ಆಹ | 'ಓ! ಯಜಮಾನನೇ! ನಿನಗೆ ಯಾಗದೇವತೆಯು ಒಳ್ಳೆಯದನ್ನುಂಟುಮಾಡಲಿ' ಹೀಗೆ ಹೋತೃವು ಹೇಳುತ್ತಾನೆ. |
| ಏತಾವ್ ಆಶಿಷವ್ ಏವ ಆಶಾಸ್ತೇ | ಇದರಿಂದ ಹೋತೃವು ಯಜಮಾನನಿಗೆ ಈ ಶುಭಾಶಂಸನೆಯನ್ನೇ ಮಾಡುತ್ತಾನೆ. |

## ಶಾಖಾಂತರೀಯಮಂತ್ರವು ಸಾಧುವಲ್ಲವೆಂದು ನಿರೂಪಣೆ

| | |
|---|---|
| ಯಃ ಅಗ್ನಿಮ್ ಹೋತಾರಮ್ ಅವೃಥಾಃ **[ಸಾಧು ತೇ ಯಜಮಾನ ದೇವತಾ]** | ಯಾವ ನೀನು ಅಗ್ನಿಯನ್ನು ಹೋತೃವನ್ನಾಗಿ ಆಯ್ಕೆ ಮಾಡಿದ್ದೀಯೋ [ಅಂತಹ ನಿನಗೆ ಒಳ್ಳೆಯದನ್ನು ಮಾಡಲಿ.] |

---

ಶತ್ರುಗಳನ್ನು ಹೊಂದಿದವನು ಎಂಬ ಅರ್ಥವನ್ನು ತಿಳಿಸೀತು. ಹೀಗಾಗಿ **'ದೇವಯತೇ'** ಎಂಬ ಪದವನ್ನು ಸೇರಿಸದೇ ಪಾಠವನ್ನು ಮಾಡಬೇಕೆಂಬುದು ಶ್ರುತಿಯ ಅಭಿಪ್ರಾಯ ಎಂದು ತಿಳಿಸಿರುತ್ತಾರೆ.

ಹೀಗೆ **'ದೇವಯತೇ'** ಎಂಬ ಪದವನ್ನು ಬಿಟ್ಟು ಆಹ್ವಾನ ಮಾಡುವುದರಿಂದ ಹೋತೃವು ಯಜಮಾನನನ್ನೇ ದೇವತಾನುಗ್ರಹದಿಂದ ವೃದ್ಧಿ ಹೊಂದುವಂತೆ ಮಾಡುತ್ತಾನೆ.

ಇತ್ಯಗ್ನಿನೋಭಯತೋ ಯಜಮಾನಂ ಪರಿಗೃಹ್ಣೀಯಾತ್ಪ್ರಮಾ
-ಯುಕಃ ಸ್ಯಾದ್ಯಜಮಾನದೇವತ್ಯಾ ವೈ ಜುಹೂ-

---

ಇತಿ । ಅಗ್ನಿನಾ । ಉಭಯತಃ । ಯಜಮಾನಮ್ । ಪರೀತಿ । ಗೃಹ್ಣೀಯಾತ್ । ಪ್ರಮಾಯುಕ ಇತಿ ಪ್ರ-ಮಾಯುಕಃ । ಸ್ಯಾತ್ । ಯಜಮಾನದೇವತ್ಯೇತಿ ಯಜಮಾನ-ದೇವತ್ಯಾ । ವೈ । ಜುಹೂಃ ।

---

| | |
|---|---|
| ಇತಿ ಯತ್ ಬ್ರೂಯಾತ್ | ಹೀಗೆ ಇರುವ ಶಾಖಾಂತರಮಂತ್ರವನ್ನು ಹೋತೃವು ಹೇಳಿದರೆ |
| ಯಜಮಾನಮ್ ಉಭಯತಃ ಅಗ್ನಿನಾ ಪರಿಗೃಹ್ಣೀಯಾತ್ | 'ಅಗ್ನಿರ್ ಹೋತಾ-ಅಗ್ನಿಗ್ಂ ಹೋತಾರಮ್' ಎಂದು ಎರಡು ಕಡೆಗಳಲ್ಲಿಯೂ ಅಗ್ನಿಯಿಂದ ಸುತ್ತುವರೆದಂತಾಗುತ್ತದೆ. |
| ಪ್ರಮಾಯುಕಃ ಸ್ಯಾತ್ | ಅಗ್ನಿದಾಹಾಧಿಕ್ಯದಿಂದ ಯಜಮಾನನು ಮರಣವನ್ನು ಪಡೆಯುತ್ತಾನೆ. |

**'ಘೃತವತೀಮ್' ಎಂಬ ಏಕವಚನದ ಸಮರ್ಥನೆ**

| | |
|---|---|
| ಜುಹೂಃ ಯಜಮಾನದೇವತ್ಯಾ ವೈ | ಹೋಮಸಾಧನವಾದ ಜುಹೂವಿಗೆ ಯಜಮಾನನೇ ದೇವತೆ. |

---

ದೇವತಾಹ್ವಾನಮಂತ್ರಗಳಲ್ಲಿ ಅಗ್ನಿ ಮತ್ತು ಸೋಮರ ಆಹ್ವಾನವು ಎಲ್ಲ ದೇವತೆಗಳ ಆಹ್ವಾನಕ್ಕೂ ಉಪಲಕ್ಷಣವಾಗಿದೆ.

'ಹೇ! ಅಗ್ನಿದೇವನೇ! ನೀನು ದೇವತೆಗಳೆಲ್ಲರನ್ನೂ ತಿಳಿದಿರುವವನು. ನೀನು ಯಜ್ಞಕ್ಕಾಗಿ ದೇವತೆಗಳನ್ನು ಆಮಂತ್ರಿಸು. ಈ ಅರ್ಥವನ್ನು ನೀಡುವ ಮಂತ್ರದ ಪಾಠವು ಅಗ್ನಿಯನ್ನು ಚುರುಕಾಗಿರುವಂತೆ ಮಾಡುತ್ತದೆ. ಈ ರೀತಿ ತೀಕ್ಷ್ಣನಾದ ಅಗ್ನಿಯು ಹವಿಸ್ಸುಗಳನ್ನು ದೇವತೆಗಳಿಗಾಗಿ ಒಯ್ಯುತ್ತಾನೆ. ಇದು ಆಹ್ವಾನಮಂತ್ರದ ಕೊನೆಯ ವಾಕ್ಯ.

ಭ್ರಾತೃವ್ಯದೇವತ್ಯೋಪಭೃ [ಭೃತ್(೫)ಯದ್ದ್ವೇ] ದ್ಯದ್ದ್ವೇ ಇವ ಬ್ರೂಯಾದ್ಭ್ರಾತೃವ್ಯಮಸ್ಮೈ ಜನಯೇದ್ಘೃತವತೀ ಮಧ್ವರ್ಯೋ ಸ್ರುಚಮಾಸ್ಯಸ್ವೇತ್ಯಾಹ

---

ಭ್ರಾತೃವ್ಯದೇವತ್ಯೇತಿ ಭ್ರಾತೃವ್ಯ-ದೇವತ್ಯಾ । ಉಪಭೃದಿತ್ಯುಪ-ಭೃತ್ । [(೫)] । ಯತ್ । ದ್ವೇ ಇತಿ । ಇವ । ಬ್ರೂಯಾತ್ । ಭ್ರಾತೃವ್ಯಮ್ । ಅಸ್ಮೈ । ಜನಯೇತ್। ಘೃತವತೀಮಿತಿ ಘೃತ-ವತೀಮ್ । ಅಧ್ವರ್ಯೋ ಇತಿ । ಸ್ರುಚಮ್ । ಏತಿ । ಅಸ್ಯಸ್ವ। ಇತಿ । ಆಹ ।

---

| | |
|---|---|
| ಉಪಭೃತ್ ಭ್ರಾತೃವ್ಯದೇವತ್ಯಾ | ಜುಹೂವಿಗೆ ಸಹಾಯಕವಾಗಿರುವ ಉಪಭೃತ್ತಿಗೆ ಶತ್ರುವೇ ದೇವತೆ[ಅಧ್ವರ್ಯುವು ಎರಡನ್ನೂ ತೆಗೆದುಕೊಳ್ಳಬೇಕು] |
| ಯತ್ ದ್ವೇ ಇವ ಬ್ರೂಯಾತ್ | [ಹೀಗಾಗಿ] ದ್ವಿವಚನದಂತೆ **'ಸ್ರುಚೌ'** ಎಂದು ಹೇಳಿದರೆ |
| ಅಸ್ಮೈ ಭ್ರಾತೃವ್ಯಮ್ ಜನಯೇತ್ | [ಎರಡು ಪಾತ್ರೆಗಳಿಗೂ ಸಮಪ್ರಾಧಾನ್ಯವನ್ನು ಕೊಟ್ಟಂತಾಗಿ] ಯಜಮಾನನಿಗೆ ಶತ್ರುವನ್ನುಂಟುಮಾಡಿದಂತಾಗುತ್ತದೆ. |
| ಅಧ್ವರ್ಯೋ ಘೃತವತೀಮ್ ಸ್ರುಚಮ್ ಆಸ್ಯಸ್ವ ಇತಿ ಆಹ | 'ಅಧ್ವರ್ಯುವೇ! ಆಜ್ಯಪೂರ್ಣವಾದ ಜುಹೂವನ್ನು ತೆಗೆದುಕೋ' ಎಂದು ಶ್ರುತಿಯು ಹೇಳುತ್ತದೆ. |

---

ಹವ್ಯವಾಹನಾಗ್ನಿಯು ದೇವತೆಗಳ ದೂತನೆಂದು ಹಿಂದೆ ಬಂದಿದೆ. ಹೋತೃವು ದೇವತೆಗಳ ಹೋತೃವನ್ನೇ ಆಯ್ಕೆ ಮಾಡುತ್ತಾನೆ. ವರಣ ಮಾಡುವಾಗ **'ಅಹಂ ಮಾನುಷಃ'** ಎಂದು ಹೇಳಬೇಕು. **'ಸ್ಮಃ ವಯಮ್'** ಎಂದು ಹೇಳುವುದರಿಂದ ಮತ್ತೆ ಹೇಳಿದಂತಾಗಿದೆ.

ಯಜಮಾನಮೇವೈತೇನ ವರ್ಧಯತಿ ದೇವಾಯುವಮಿತ್ಯಾಹ

ದೇವಾನ್, ಹ್ಯೇಷಾಽವತಿ ವಿಶ್ವವಾರಾಮಿತ್ಯಾಹ

---

ಯಜಮಾನಮ್ । ಏವ । ಏತೇನ । ವರ್ಧಯತಿ । ದೇವಾಯುವಮಿತಿ ದೇವ-ಯುವಮ್ । ಇತಿ । ಆಹ । ದೇವಾನ್ । ಹಿ । ಏಷಾ । ಅವತಿ । ವಿಶ್ವವಾರಾಮಿತಿ ವಿಶ್ವ-ವಾರಾಮ್ । ಇತಿ । ಆಹ ।

---

| | |
|---|---|
| ಏತೇನ ಯಜಮಾನಮ್ ಏವ ವರ್ಧಯತಿ | ಇದರಿಂದ ಹೋತೃವು ಯಜಮಾನನನ್ನೇ ಐಶ್ವರ್ಯಾದಿಗಳಿಂದ ಅಭಿವೃದ್ಧಿ ಹೊಂದಿದವನನ್ನಾಗಿ ಮಾಡಿತ್ತಾನೆ. |

**ಈ ಮಂತ್ರಭಾಗದ ಪ್ರಶಂಸೆ**

| | |
|---|---|
| ದೇವಾಯುವಮ್ ಇತಿ ಆಹ | ಶ್ರುತಿಯು– ಸ್ರುಚವನ್ನು ದೇವತೆಗಳಿಗೆ ಹೋಮಾದಿಗಳನ್ನು ಮಾಡುವ ಸಾಧನವಾಗಿ ದೇವಸಂಬಂಧಿಯೆಂದು–ಹೇಳುತ್ತದೆ. |
| ಏಷಾ ದೇವಾನ್ ಅವತಿ ಹಿ | ಈ ಜುಹೂವು ಹವಿಸ್ಸಿನ ಸಮರ್ಪಣೆಯಿಂದ ದೇವತೆಗಳನ್ನು ತೃಪ್ತಿಪಡಿಸಿ ರಕ್ಷಿಸುತ್ತದೆಯಷ್ಟೆ. |

---

ಹೋತೃವು ಯಜಮಾನನಿಗೆ ಯಾಗದೇವತೆಯು ಒಳ್ಳೆಯದನ್ನು ಮಾಡಲೆಂದು ಶುಭಾಶಂಸನೆಯನ್ನು ಮಾಡುತ್ತಾನೆ.

ಶಾಖಾಂತರೀಯಮಂತ್ರವಾದ **'ಯೋಽಗ್ನಿಗ್ಂ ಹೋತಾರಂ ಅವೃಥಾಃ'** ಎಂಬ ಮಂತ್ರವನ್ನು ಹೇಳಬಾರದು. ಆರಂಭದಲ್ಲಿ **'ಅಗ್ನಿರ್ ಹೋತಾ'** ಎಂದು ಅಗ್ನಿಯನ್ನು ಹೇಳಿ ಮತ್ತೆ **'ಯೋಽಗ್ನಿಮ್'** ಎಂದು ಹೇಳಿದರೆ ಎರಡು ಕಡೆಯಲ್ಲಿ ಅಗ್ನಿಯನ್ನು ಹೇಳಿದಂತಾಗಿ, ಅದರಿಂದ ದಾಹಾಧಿಕ್ಯವನ್ನುಂಟುಮಾಡಿದರೆ ಯಜಮಾನನು ಮರಣವನ್ನಪ್ಪುತ್ತಾನೆ. ಹೀಗಾಗಿ ಆ ಶಾಖಾಂತರೀಯಮಂತ್ರವನ್ನು ಹೇಳಬಾರದು.

ವಿಶ್ವಾಗ್ಂ ಹ್ಯೇಷಾಽವತೀಡಾಮಹ್ಯೈ ದೇವಾಗ್ಂ ಈಡೇನ್ಯಾ

ನ್ನಮಸ್ಯಾಮ ನಮಸ್ಯಾನ್, ಯಜಾಮ ಯಜ್ಞಿಯಾ-

---

ವಿಶ್ವಮ್ । ಹಿ । ಏಷಾ । ಅವತಿ । ಈಡಾಮಹ್ಯೈ । ದೇವಾನ್ । ಈಡೇನ್ಯಾನ್ ।

ನಮಸ್ಯಾಮ । ನಮಸ್ಯಾನ್ । ಯಜಾಮ । ಯಜ್ಞಿಯಾನ್ ।

---

ವಿಶ್ವವಾರಾಮ್ ಇತಿ ಆಹ — ಈ ಮಂತ್ರಭಾಗವು ಜುಹೂವು ವಿಶ್ವವನ್ನೂ ರಕ್ಷಿಸುತ್ತದೆಯೆಂದು ಹೇಳುತ್ತದೆ.

ಏಷಾ ವಿಶ್ವಮ್ ಅವತಿ ಹಿ — ರಾಕ್ಷಸರೇ ಮೊದಲಾದವರು ಮಾಡುವ ಪೀಡೆಗಳನ್ನು ಹೋಮಾದಿಗಳಿಂದ ನಿವಾರಿಸಿ ಈ ಜುಹೂವು ರಕ್ಷಿಸುವದಷ್ಟೆ.

**ಮಂತ್ರದ ಶೇಷಭಾಗದ ವಿವರಣೆ; ಪ್ರಶಂಸೆ**

ಈಡೇನ್ಯಾನ್ ದೇವಾನ್ ಈಡಾಮಹ್ಯೈ — ಹೊಗಳಲು ಯೋಗ್ಯರಾದ ಕೀರ್ತಿವಂತರನ್ನು ಸ್ತುತಿಸೋಣ.

ನಮಸ್ಯಾನ್ ನಮಸ್ಯಾಮ — ನಮಸ್ಕರಿಸಲು ಯೋಗ್ಯರನ್ನು ನಮಸ್ಕರಿಸೋಣ.

ಯಜ್ಞಿಯಾನ್ ಯಜಾಮ — ಯಾಗದಿಂದ ಆರಾಧಿಸಬೇಕಾದವರನ್ನು ಯಾಗದಿಂದ ಆರಾಧಿಸೋಣ.

---

ಬಳಿಕ ಅಧ್ವರ್ಯುವು ಜುಹೂ-ಉಪಭೃತ್ ಎರಡನ್ನೂ ತೆಗೆದುಕೊಳ್ಳುತ್ತಾನೆ.ಜುಹೂವಿಗೆ ಯಜಮಾನನು ದೇವತೆ. ಉಪಭೃತ್ತಿಗೆ ಯಜಮಾನನ ಹಗೆಯು ಸ್ವಾಮಿ. **'ಸ್ರುಚೌ'**ಎಂದು ದ್ವಿವಚನವನ್ನು ಹೇಳಿದರೆ ಜುಹೂ-ಉಪಭೃತ್ತುಗಳಿಗೆ ಸಮಪ್ರಾಧಾನ್ಯವನ್ನು ಕೊಟ್ಟಂತಾಗಿ ಯಜಮಾನನ ವೈರಿಯನ್ನು ವೃದ್ಧಿಗೊಳಿಸಿದಂತಾಗುತ್ತದೆ.**'ಸ್ರುಚಮ್'**ಎಂದು ಏಕವಚನವನ್ನು ಹೇಳುವುದರಿಂದ ಜುಹೂವು ಸಾಕ್ಷಾತ್ ಹೋಮಸಾಧನವಾಗಿರುವುದರಿಂದ ಅದಕ್ಕೆ ಇರುವ ಪ್ರಾಶಸ್ತ್ಯವನ್ನು ಹೇಳಿದಂತಾಗಿ, ಆರ್ಥಿಕವಾಗಿ ಉಪಭೃತ್ ಅನ್ನು ತೆಗೆದುಕೊಂಡರೂ ಅದಕ್ಕೆ ಸಮಪ್ರಾಧಾನ್ಯವಿಲ್ಲದಿರುವುದರಿಂದ ಯಜಮಾನನಿಗೇ ಐಶ್ವರ್ಯಾದಿಗಳ ವೃದ್ಧಿಯು ಉಂಟಾಗುತ್ತದೆ.

ನಿತ್ಯಾಹ ಮನುಷ್ಯಾ ವಾ ಈಡೇನ್ಯಾಃ ಪಿತರೋ ನಮಸ್ಯಾ ದೇವಾ ಯಜ್ಞಿಯಾ ದೇವತಾ ಏವ ತದ್ಯಥಾಭಾಗಂ ಯಜತಿ ॥೫೬-೨॥

[ವಿಪ್ರಾನುಮದಿತ ಇತ್ಯಾಹ ಚನಾಸ್ಯೈ ಹೋತ್ರೋಪಭೃದ್ದೇವತಾ ಏವ ತ್ರೀಣಿ ಚ ॥]

---

ಇತಿ । ಆಹ । ಮನುಷ್ಯಾಃ । ವೈ । ಈಡೇನ್ಯಾಃ । ಪಿತರಃ । ನಮಸ್ಯಾಃ । ದೇವಾಃ । ಯಜ್ಞಿಯಾಃ । ದೇವತಾಃ । ಏವ । ತತ್ । ಯಥಾಭಾಗಮಿತಿ ಯಥಾ-ಭಾಗಮ್ । ಯಜತಿ । [(೬)]

---

| | |
|---|---|
| ಇತಿ ಆಹ | ಹೀಗೆಂದು ಶ್ರುತಿಯು ಹೇಳುತ್ತದೆ |
| ಮನುಷ್ಯಾಃ ಈಡೇನ್ಯಾಃ ವೈ | ಮನುಷ್ಯರು ಸ್ತುತಿಪ್ರಿಯರಾಗಿರುತ್ತಾರೆ. |
| ಪಿತರಃ ನಮಸ್ಯಾಃ | ಪಿತೃದೇವತೆಗಳು ನಮಸ್ಕಾರಪ್ರಿಯರು. |
| ದೇವಾಃ ಯಜ್ಞಿಯಾಃ | ದೇವತೆಗಳು ಯಾಗಹವಿಸ್ಸಿನಿಂದ ಪ್ರೀತರಾಗ ತಕ್ಕವರು. |
| ತತ್ ದೇವತಾಃ ಯಥಾ ಭಾಗಮ್ ಯಜತಿ ಏವ | ಈ ಮಂತ್ರಪಾಠದಿಂದ ಯಜಮಾನನು ಮನುಷ್ಯ-ಪಿತೃ-ದೇವತೆಗಳಿಗೆ ತಕ್ಕ ಭಾಗವನ್ನು ಸಮರ್ಪಿಸಿ ಪೂಜಿಸಿದವನಾಗುತ್ತಾನೆ. |

---

ಜುಹೂವು ದೇವತೆಗಳಿಗೆ ಹವಿಸ್ಸನ್ನು ಅರ್ಪಿಸಿ ತೃಪ್ತಿಪಡಿಸುವುದರಿಂದ **'ದೇವಾಯು'**ವಾಗಿದೆ. ಜುಹೂವು ರಾಕ್ಷಸಾದಿಬಾಧಾನಿವಾರಕವಾದುದರಿಂದ **'ವಿಶ್ವವಾರಾ'** ಎನ್ನಿಸಿಕೊಳ್ಳುವುದು.

ಶ್ರುತಿಯು ಹೊಗಳಲು ಯೋಗ್ಯರಾದವರನ್ನು ಹೊಗಳೋಣ. ನಮಸ್ಕರಿಸಲು ಯೋಗ್ಯರಿಗೆ ನಮನವನ್ನು ಸಲ್ಲಿಸೋಣ.ಯಾಗಾರ್ಹರನ್ನು ಯಾಗದಿಂದ ಆರಾಧಿಸೋಣ ಎಂದು ಹೇಳುತ್ತದೆ.

ಮನುಷ್ಯರನ್ನು ಹೊಗಳುವುದೂ,ಪಿತೃಗಳನ್ನು ನಮಸ್ಕರಿಸುವುದೂ, ದೇವತೆಗಳಿಗೆ ಯಾಗದಲ್ಲಿ ಹವಿಸ್ಸನ್ನು ಸಮರ್ಪಿಸುವುದೂ-ಅವರನ್ನು ತೃಪ್ತಿಪಡಿಸುವ ವಿಧಾನಗಳು.

ಇಲ್ಲಿ **'ಸುಯಜಾ ಚ ಯಜ ಜಾತವೇದಃ'** ಎಂದು [ಒಳ್ಳೆಯ ಯಾಗದಿಂದ ದೇವತೆಗಳನ್ನು ತೃಪ್ತಿಪಡಿಸು] ಎಂದು ಹೇಳಿರುವುದು ಪ್ರಕೃತಕ್ಕೆ ಉಚಿತವಾಗಿದೆ.

* * *

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

**೧)ಚಾತುರ್ಮಾಸ್ಯೇಷ್ಟಿಯಲ್ಲಿ ಪ್ರಕೃತಿಯಿಂದ ಆಗುವ 'ಆಜ್ಯಪ' ಶಬ್ದದ ಸ್ವರೂಪವೇನು? [ಜೈ.ಸೂ.10.4]**

ಚಾತುರ್ಮಾಸ್ಯೇಷ್ಟಿಯಲ್ಲಿ ಪ್ರಕೃತಿಯಿಂದ ಆವಾಹನ-ಸ್ವಾಹಾಕಾರ-ಅಯಾಡ್ಘೋಷಣ ಮಂತ್ರಗಳು ಅತಿದಿಷ್ಟವಾಗಿ ಬರುತ್ತವೆ. ಪ್ರಕೃತಿಯಲ್ಲಿ ಆವಾಹನದಲ್ಲಿ **'ದೇವಾಗ್ಂ ಆಜ್ಯಪಾಗ್ಂ ಆವಹ'** ಎಂದಿದೆ. ಸ್ವಾಹಾಕಾರದಲ್ಲಿ **'ಸ್ವಾಹಾ ದೇವಾಗ್ಂ ಆಜ್ಯಪಾನ್'** ಎಂದಿದೆ. ಅಯಾಟ್ ಮಂತ್ರದಲ್ಲಿ **'ಅಯಾಡ್ದೇವಾನಾಮಾಜ್ಯಪಾನಾಂ ಪ್ರಿಯಾ ಧಾಮಾನಿ'** ಎಂದಿದೆ. ಘೋಷಣಮಂತ್ರದಲ್ಲಿ **'ದೇವಾ ಆಜ್ಯಪಾ ಆಜ್ಯಮಜುಷಂತ'** ಎಂದಿದೆ. ಇವುಗಳಲ್ಲಿ ಆಜ್ಯಪ ಎಂಬ ಶಬ್ದವಿದೆ.

ಚಾತುರ್ಮಾಸ್ಯೇಷ್ಟಿಯಲ್ಲಿ ಪೃಷದಾಜ್ಯವು ಹವಿಸ್ಸಾಗಿರುವುದರಿಂದ ಈ ದ್ರವ್ಯಕ್ಕೆ ಅನುಗುಣವಾಗಿ ಆಜ್ಯಪ ಶಬ್ದದ ವಿಕಾರವಿದೆಯೇ? ಇಲ್ಲವೇ? ಇದು ಇಲ್ಲಿನ **ಸಂಶಯ.**

**'ದ್ವಯಂ ಚ ವಾ ಇದಂ ಸರ್ಪಿಶ್ಚೈವ ದಧಿ ಚ'** ಎಂದು ಇರುವುದರಿಂದ **'ದಧ್ಯಾಜ್ಯಪಾನ್'** ಎಂದು ಊಹವನ್ನು ಮಾಡಬೇಕು. ಇದು ಒಂದು ಪಕ್ಷ.

ಆಜ್ಯವು ಉಪಸ್ತರಣ–ಅಭಿಘಾರಣಗಳಿಗೆ ಸೀಮಿತವಾಗಿರುವುದರಿಂದ ದಧಿಯೇ ದ್ರವ್ಯ. ಆದುದರಿಂದ ಚಾತುರ್ಮಾಸ್ಯೇಷ್ಟಿಯಲ್ಲಿ **'ದಧಿಪಾನ್'** ಎಂದು ಊಹವನ್ನು ಮಾಡಬೇಕು. ಇದು ಇನ್ನೊಂದು ಪಕ್ಷ.

ಪೃಷದಾಜ್ಯವು ದಧಿ–ಆಜ್ಯಗಳ ಮಿಶ್ರಣವಾದರೂ ದಧಿ–ಆಜ್ಯಗಳಿಗಿಂತಲೂ ಬೇರೆಯ ದ್ರವ್ಯವೇ ಆಗಿರುವುದರಿಂದ **'ಪೃಷದಾಜ್ಯಪಾನ್'** ಎಂದು ಊಹವನ್ನು ಮಾಡಬೇಕೆಂದು ಇನ್ನೊಂದು ಪಕ್ಷ. ಹೀಗೆ ಈ ಮೂರೂ **ಪೂರ್ವಪಕ್ಷ**ಗಳಾಗಿವೆ.

ಇಲ್ಲಿಯ **ಸಿದ್ಧಾಂತ**ವು ಹೀಗಿದೆ; ಪೃಷತ್ ಎಂದರೆ ಚಿತ್ರಿತವಾದುದು ಎಂಬ ಅರ್ಥ. ಇದು ಆಜ್ಯದ ಗುಣವಾಗಿದೆ. ಈ ಚಿತ್ರತೆಯು ದಧಿಯಿಂದ ಉಂಟಾದುದು. ಹೀಗಾಗಿ ಚಿತ್ರತೆಗೆ ದಧಿಯು ಸಾಧನ ಮಾತ್ರ. ಹೀಗಾಗಿ ಆಜ್ಯವೇ ದ್ರವ್ಯವಾದುದರಿಂದ ಪ್ರಕೃತಿಯಾಗದಂತೆಯೇ ಚಾತುರ್ಮಾಸ್ಯೇಷ್ಟಿಯಲ್ಲಿಯೂ ಸಹ **'ಆಜ್ಯಪಾನ್'** ಮೊದಲಾಗಿಯೇ ಹೇಳಬೇಕು.

# ॥ ದಶಮೋಽನುವಾಕಃ ॥

ತ್ರೀಗ್ಂಸ್ತೃಚಾನನು ಬ್ರೂಯಾದ್ರಾಜನ್ಯಸ್ಯ ತ್ರಯೋ ವಾ

ಅನ್ಯೇ ರಾಜನ್ಯಾತ್ಪುರುಷಾ ಬ್ರಾಹ್ಮಣೋ ವೈಶ್ಯಶ್ಶೂದ್ರ-

---

ತ್ರೀನ್ । ತೃಚಾನ್ । ಅನ್ವಿತಿ । ಬ್ರೂಯಾತ್ । ರಾಜನ್ಯಸ್ಯ । ತ್ರಯಃ । ವೈ । ಅನ್ಯೇ ।

ರಾಜನ್ಯಾತ್ । ಪುರುಷಾಃ । ಬ್ರಾಹ್ಮಣಃ । ವೈಶ್ಯಃ । ಶೂದ್ರಃ ।

---

ಒಂಬತ್ತನೆಯ ಅನುವಾಕದಲ್ಲಿ ಪ್ರವರ-ನಿವಿನ್ಮಂತ್ರಾದಿಗಳು ವಿವೃತವಾಗಿವೆ.ಈ ಹತ್ತನೆಯ ಅನುವಾಕದಲ್ಲಿ ನೈಮಿತ್ತಿಕ-ಕಾಮ್ಯಸಾಮಿಧೇನಿಗಳು ಹೇಳಲ್ಪಡುತ್ತವೆ.

**ರಾಜನ್ಯನು ಯಜಮಾನನಾದರೆ ತೃಚತ್ರಯವಿಧಿ;ಪ್ರಶಂಸೆ**

| | |
|---|---|
| ರಾಜನ್ಯಸ್ಯ ತ್ರೀನ್ ತೃಚಾನ್ ಅನುಬ್ರೂಯಾತ್ | ಪಟ್ಟಭದ್ರನಾದ ರಾಜನ್ಯನು ಯಜಮಾನನಾಗಿರುವ ಯಜ್ಞದಲ್ಲಿ ಹೋತೃವು ಮೂರು *ತೃಚಗಳನ್ನು ಸಾಮಿಧೇನಿಯಲ್ಲಿ ಹೇಳಬೇಕು. |
| ರಾಜನ್ಯಾತ್ ಅನ್ಯೇ ತ್ರಯಃ ಪುರುಷಾಃ ಬ್ರಾಹ್ಮಣಾಃ ವೈಶ್ಯಃ ಶೂದ್ರಃ ವೈ | ಕ್ಷತ್ರಿಯನಿಗಿಂತಲೂ ಬೇರೆಯಾಗಿರುವ ಪುರುಷರು ಬ್ರಾಹ್ಮಣ-ವೈಶ್ಯ-ಶೂದ್ರರೆಂಬ ಮೂರೂ ಜಾತಿಯವರು. |

---

ರಾಜನ್ಯನು ಯಜಮಾನನಾದಾಗ ಸಾಮಿಧೇನಿಗಳನ್ನು ಹೇಳುವಾಗ ಹೋತೃವು

---

*ತೃಚ=ಮೂರು ಋಕ್‌ಗಳ ಗುಂಪು. 'ಪ್ರ ವೋ ವಾಜಾ' ಎಂಬುದನ್ನು ಮೂರು ಬಾರಿ ಆವೃತ್ತಿ ಮಾಡಿದ ಒಂದನೆಯ ತೃಚ. 'ಅಗ್ನ ಆಯಾಹಿ' ಎಂಬ ಮೂರು ಋಕ್‌ಗಳು. 'ತ್ವಂ ವರುಣ' ಎಂಬುದನ್ನು ಮೂರು ಬಾರಿ ಆವೃತ್ತಿ ಮಾಡಿದ ಮೂರನೆಯ ತೃಚ.

ಸ್ತಾನೇವಾಸ್ಮಾ ಅನುಕಾನ್ಕರೋತಿ ಪಂಚದಶಾನು ಬ್ರೂಯಾ
ದ್ರಾಜನ್ಯಸ್ಯ ಪಂಚದಶೋ ವೈ ರಾಜನ್ಯಸ್ಸ್ವ ಏವೈನಗ್ಗ್ಂ
ಸ್ತೋಮೇ ಪ್ರತಿಷ್ಠಾಪಯತಿ

---

ತಾನ್ । ಏವ । ಅಸ್ಮೈ । ಅನುಕಾನಿತ್ಯನು-ಕಾನ್ । ಕರೋತಿ । ಪಂಚದಶೇತಿ ಪಂಚ-ದಶ । ಅನ್ವಿತಿ । ಬ್ರೂಯಾತ್ । ರಾಜನ್ಯಸ್ಯ । ಪಂಚದಶ ಇತಿ ಪಂಚ-ದಶಃ । ವೈ । ರಾಜನ್ಯಃ । ಸ್ವೇ । ಏವ । ಏನಮ್ । ಸ್ತೋಮೇ । ಪ್ರತೀತಿ । ಸ್ಥಾಪಯತಿ ।

---

| | |
|---|---|
| ಅಸ್ಮೈ ತಾನ್ ಅನುಕಾನ್ ಏವ ಕರೋತಿ | [ಈ ತೃಚಗಳ ಅನುವಚನದಿಂದ] ಹೋತೃವು ಬೇರೆಯ ಮೂರು ವರ್ಣದವರನ್ನೂ ರಾಜನ್ಯನ ಅನುಯಾಯಿಗಳಾಗುವಂತೆ/ಪ್ರೀತಿಯುಳ್ಳವರಾಗುವಂತೆ ಮಾಡುತ್ತಾನೆ. |

**ಸಾಮಿಧೇನೀಸಂಖ್ಯಾವಿಧಿ;ಅದರ ಪ್ರಶಂಸೆ**

| | |
|---|---|
| ರಾಜನ್ಯಸ್ಯ ಪಂಚದಶ ಅನು ಬ್ರೂಯಾತ್ | ರಾಜನ್ಯನು ಯಜಮಾನನಾದಾಗ ಹೋತೃವು ಹದಿನೈದು ಸಂಖ್ಯೆಯ ಸಾಮಿಧೇನಿಗಳನ್ನು ಹೇಳಬೇಕು. |
| ರಾಜನ್ಯಃ ಪಂಚದಶಃ ವೈ ಏನಮ್ ಸ್ವೇ ಏವ ಸ್ತೋಮೇ ಪ್ರತಿಷ್ಠಾಪಯತಿ | ರಾಜನ್ಯನೂ ಪಂಚದಶನಾಗಿರುತ್ತಾನೆಯಷ್ಟೆ.* ಈ ಅನುವಚನದಿಂದ ಹೋತೃವು ಯಜಮಾನನನ್ನು ತನ್ನದಾದ ಸ್ತೋಮದಲ್ಲಿಯೇ ಪ್ರತಿಷ್ಠಿತನಾಗಿರುವಂತೆ ಮಾಡುತ್ತಾನೆ. |

---

ಮೂರು ತೃಚಗಳನ್ನು ಹೇಳಬೇಕು.ಇದೊಂದು ನೈಮಿತ್ತಿಕವಿಧಿ; ಹಾಗೂ ಅದರ ಪ್ರಶಂಸೆ.

---

*ರಾಜನ್ಯನೂ,ಪಂಚದಶಸ್ತೋಮವೂ ಪ್ರಜಾಪತಿಬ್ರಹ್ಮನ ಎದೆಯಿಂದಲೂ,ತೋಳಿನಿಂದಲೂ ಜನಿಸಿದುದರಿಂದ ರಾಜನ್ಯನಿಗೂ ಪಂಚದಶಸಂಖ್ಯೆಗೂ ಸಂಬಂಧವಿದೆ.

ತ್ರಿಷ್ಟುಭಾ ಪರಿದಧ್ಯಾದಿಂದ್ರಿಯಂ ವೈ ತ್ರಿಷ್ಟುಗಿಂದ್ರಿಯ

ಕಾಮಃ ಖಲು ವೈ ರಾಜನ್ಯೋ ಯಜತೇ ತ್ರಿಷ್ಟುಭೈವಾಸ್ಮಾ

ಇಂದ್ರಿಯಂ ಪರಿ ಗೃಹ್ಣಾತಿ

---

ತ್ರಿಷ್ಟುಭಾ । ಪರೀತಿ । ದಧ್ಯಾತ್ । ಇಂದ್ರಿಯಮ್ । ವೈ । ತ್ರಿಷ್ಟುಕ್ । ಇಂದ್ರಿಯಕಾಮ ಇತೀಂದ್ರಿಯ-ಕಾಮಃ । ಖಲು । ವೈ । ರಾಜನ್ಯಃ । ಯಜತೇ । ತ್ರಿಷ್ಟುಭಾ । ಏವ । ಅಸ್ಮೈ । ಇಂದ್ರಿಯಮ್ । ಪರೀತಿ । ಗೃಹ್ಣಾತಿ ।

---

**ಪರಿಧಾನೀಯಕ್ಕಾಗಿ ತ್ರಿಷ್ಟುಪ್ ಛಂದಸ್ಸಿನ ಮಂತ್ರದ ವಿಧಿ; ಪ್ರಶಂಸೆ**

| | |
|---|---|
| ತ್ರಿಷ್ಟುಭಾ ಪರಿದಧ್ಯಾತ್ | ತ್ರಿಷ್ಟುಪ್ ಛಂದಸ್ಸಿನ 'ತ್ವಂ ವರುಣ' ಎಂಬ ಋಕ್ಕಿನಿಂದ ಮುಗಿಸಬೇಕು. |
| ಇಂದ್ರಿಯಮ್ ವೈ ತ್ರಿಷ್ಟುಕ್ | ಇಂದ್ರನ ಸಂಬಂಧದಿಂದ ತ್ರಿಷ್ಟುಪ್ ಛಂದಸ್ಸು ಇಂದ್ರಿಯಶಕ್ತಿರೂಪವೇ ಆಗಿದೆ. |
| ರಾಜನ್ಯಃ ಇಂದ್ರಿಯಕಾಮಃ ಖಲು ಯಜತೇ ವೈ | ಶತ್ರುವನ್ನು ಜಯಿಸಬಯಸುವ ರಾಜನ್ಯನು ಇಂದ್ರಿಯಶಕ್ತಿಕಾಮನಾಗಿ ತಾನೇ ಯಾಗವನ್ನು ಅನುಷ್ಠಿಸುತ್ತಾನೆ! |
| ಅಸ್ಮೈ ತ್ರಿಷ್ಟುಭಾ ಏವ ಇಂದ್ರಿಯಮ್ ಪರಿಗೃಹ್ಣಾತಿ | ಈ ತ್ರಿಷ್ಟುಪ್ ಛಂದಸ್ಸಿನಿಂದಲೇ ಹೋತೃವು ಯಜಮಾನನಿಗೆ ಇಂದ್ರಿಯಶಕ್ತಿಯುಂಟಾಗುವಂತೆ ಮಾಡುತ್ತಾನೆ. |

---

**'ಪಂಚದಶ ಸಾಮಿಧೇನೀರನ್ವಾಹ'** ಎಂಬ ವಚನವು ಬ್ರಾಹ್ಮಣಾದಿವರ್ಣತ್ರಯಕ್ಕೂ ಸಾಧಾರಣವಾದುದರಿಂದ, ಸಾಮಿಧೇನಿಗಳಲ್ಲಿ ಸಾಮಾನ್ಯವಾಗಿಯೇ ಪಂಚದಶಸಂಖ್ಯೆಯು ಇದೆ. ಆದರೂ **'ತ್ರಿಗ್ಂಸ್ತ್ರ್ಯಚಾನ್'** ಎಂಬ ವಿಶೇಷವಿಧಿಯಿಂದ ಬಾಧವು ಉಂಟಾಗದಂತೆ ಮಾಡುವುದಕ್ಕಾಗಿ ಮತ್ತೆ ಇಲ್ಲಿ ವಿಧಿಯಿದೆ.

ಯದಿ ಕಾಮಯೇತ [(೧)ಬ್ರಹ್ಮವರ್ಚ] ಬ್ರಹ್ಮವರ್ಚಸಮ
ಸ್ತ್ವಿತಿ ಗಾಯತ್ರಿಯಾ ಪರಿದಧ್ಯಾದ್ಬ್ರಹ್ಮವರ್ಚಸಂ ವೈ
ಗಾಯತ್ರೀ ಬ್ರಹ್ಮವರ್ಚಸಮೇವ ಭವತಿ

---

ಯದಿ । ಕಾಮಯೇತ ।[(೧)]। ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಅಸ್ತು ।
ಇತಿ । ಗಾಯತ್ರಿಯಾ । ಪರೀತಿ । ದಧ್ಯಾತ್ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್।
ವೈ । ಗಾಯತ್ರೀ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಏವ । ಭವತಿ ।

---

**ಬ್ರಹ್ಮವರ್ಚಸಕಾಮನಿಗೆ ಗಾಯತ್ರೀಛಂದಸ್ಸಿನ ಪರಿಧಾನೀಯವಿಧಿ**

| | |
|---|---|
| ಯದಿ ಬ್ರಹ್ಮವರ್ಚಸಮ್ ಅಸ್ತು ಇತಿ ಕಾಮಯೇತ | ಒಂದು ವೇಳೆ ಯಜಮಾನನು ತನಗೆ ಬ್ರಹ್ಮ ವರ್ಚಸವುಂಟಾಗಲಿ ಎಂದು ಬಯಸುವುದಾದರೆ |
| ಗಾಯತ್ರಿಯಾ ಪರಿದಧ್ಯಾತ್ | [ಆಗ ಹೋತೃವು] 'ಆ ಜುಹೋತ' ಎಂಬ ಋಕ್ಕಿನಿಂದ ಮುಗಿಸಬೇಕು. |
| ಗಾಯತ್ರೀ ಬ್ರಹ್ಮವರ್ಚಸಮ್ ವೈ | [ಉಪನಯನದಲ್ಲಿ ಉಪದೇಶಿಸುವ]ಗಾಯತ್ರಿಯು [ಬ್ರಹ್ಮವರ್ಚಸಕ್ಕೆ ಕಾರಣವಾಗಿ] ಬ್ರಹ್ಮವರ್ಚಸವೇ ಆಗಿದೆ. |
| ಬ್ರಹ್ಮವರ್ಚಸವ್ ಭವತಿ ಏವ | ಇದರಿಂದ ರಾಜನಿಗೆ ಬ್ರಹ್ಮವರ್ಚಸವೇ ಉಂಟಾಗುತ್ತದೆ. |

---

ಸಾಮಿಧೇನಿಗಳಲ್ಲಿ ಸರ್ವವರ್ಣಸಾಧಾರಣವಾಗುವಂತೆ **'ತ್ವಂ ವರುಣ'** ಎಬ ಋಕ್ಕು ವಿಕಲ್ಪವಾಗಿ ವಿಹಿತವಾಗಿದೆ. ರಾಜನ್ಯನು ಯಜಮಾನನಾದಾಗ ಅದೇ ನಿತ್ಯವಾಗಿ ವಿಹಿತವಾಗಿದೆ.

ರಾಜನ್ಯನು ಯಜಮಾನನಾಗಿರುವಾಗ ಹೋತೃವು ಪಂಚದಶ ಸಾಮಿಧೇನಿಗಳನ್ನು ಹೇಳಬೇಕು.ಇಂದ್ರಿಯಶಕ್ತಿಯನ್ನು ರಾಜನ್ಯನು ಬಯಸುವವನಾದುದರಿಂದ ತ್ರಿಷ್ಟುಪ್ ಛಂದಸ್ಸಿನ

ಸಪ್ತದಶಾನು ಬ್ರೂಯಾದ್ವೈಶ್ಯಸ್ಯ ಸಪ್ತದಶೋ ವೈ ವೈಶ್ಯಸ್ಸ್ವ

ಏವೈನಗ್ಂ ಸ್ತೋಮೇ ಪ್ರತಿಷ್ಠಾಪಯತಿ

---

ಸಪ್ತದಶೇತಿ ಸಪ್ತ-ದಶ । ಅನ್ವಿತಿ । ಬ್ರೂಯಾತ್ । ವೈಶ್ಯಸ್ಯ । ಸಪ್ತದಶ ಇತಿ ಸಪ್ತ-

ದಶಃ । ವೈ । ವೈಶ್ಯಃ । ಸ್ವೇ । ಏವ । ಏನಮ್ । ಸ್ತೋಮೇ । ಪ್ರತೀತಿ । ಸ್ಥಾಪಯತಿ।

---

**ವೈಶ್ಯನು ಯಜಮಾನನಾದರೆ ಸಾಪ್ತದಶ್ಯವಿಧಿ; ಪ್ರಶಂಸೆ**

| | |
|---|---|
| ವೈಶ್ಯಸ್ಯ ಸಪ್ತದಶ ಅನು ಬ್ರೂಯಾತ್ | ವೈಶ್ಯನು ಯಜಮಾನನಾದಾಗ ಹೋತೃವು *ಸಪ್ತದಶಸಂಖ್ಯೆಯಲ್ಲಿ ಸಾಮಿಧೇನ್ಯನುವಚನ ಮಾಡಬೇಕು. |
| ವೈಶ್ಯಃ ಸಪ್ತದಶಃ ವೈ | ವೈಶ್ಯನು* ಸಪ್ತದಶಸ್ತೋಮಸ್ವರೂಪನಾಗಿರುತ್ತಾನೆ. |
| ಏನಮ್ ಸ್ವೇ ಸ್ತೋಮೇ ಏವ ಪ್ರತಿಷ್ಠಾಪಯತಿ | ಇದರಿಂದ ಹೋತೃವು ಯಜಮಾನನಾದ ವೈಶ್ಯನನ್ನು ತನ್ನ ಸ್ತೋಮದಲ್ಲಿಯೇ ಪ್ರತಿಷ್ಠಿತನಾಗುವಂತೆ ಮಾಡುತ್ತಾನೆ. |

---

ಮಂತ್ರದಿಂದ ಮುಗಿಸಬೇಕು.

ಯಜಮಾನನು ಬ್ರಹ್ಮವರ್ಚಸವನ್ನು ಬಯಸುವವನಾದರೆ, ಗಾಯತ್ರೀಛಂದಸ್ಸಿನ ಮಂತ್ರದಿಂದ ಮುಗಿಸಬೇಕು.

ವೈಶ್ಯನು ಯಜಮಾನನಾದರೆ ಹದಿನೇಳು ಸಾಮಿಧೇನಿಗಳನ್ನು ಹೇಳಬೇಕು. ಇದರಿಂದ ವೈಶ್ಯನನ್ನು ಅವನ ಸ್ತೋಮದಲ್ಲಿಯೇ ಪ್ರತಿಷ್ಠಾಪನೆ ಮಾಡಿದಂತಾಗುತ್ತದೆ.

---

*'ಪೃಥುಪಾಜಾ ಅಮರ್ತ್ಯಃ' 'ತಗ್ಂ ಸಬಾಧೋ ಯತಃ ಸ್ರುಚಃ' ಎಂಬ ಋಕ್ಕುಗಳನ್ನು 'ಸಮಿಧ್ಯಮಾನೋ ಅಧ್ವರೇ', 'ಸಮಿದ್ಧೋ ಅಗ್ನ ಆಹುತ' ಎಂಬ ಋಕ್ಕುಗಳ ಮಧ್ಯದಲ್ಲಿ ಸೇರಿಸಬೇಕು.

*ವೈಶ್ಯನೂ, ಸಪ್ತದಶಸ್ತೋಮವೂ ಪ್ರಜಾಪತಿಬ್ರಹ್ಮನ ಮಧ್ಯಪ್ರದೇಶದಿಂದ ಜನಿಸಿದುದರಿಂದ ವೈಶ್ಯನಿಗೂ ಸಪ್ತದಶಸಂಖ್ಯೆಗೂ ಸಂಬಂಧವಿದೆ.

ಜಗತ್ಯಾ ಪರಿ ದಧ್ಯಾಜ್ಜಾಗತಾ ವೈ ಪಶವಃ ಪಶುಕಾಮಃ ಖಲು ವೈ ವೈಶ್ಯೋ ಯಜತೇ ಜಗತ್ಯೈವಾಸ್ಮೈ ಪಶೂನ್ಪರಿಗೃಹ್ಣಾ-

---

ಜಗತ್ಯಾ । ಪರೀತಿ । ದಧ್ಯಾತ್। ಜಾಗತಾಃ । ವೈ । ಪಶವಃ । ಪಶುಕಾಮ ಇತಿ ಪಶು-ಕಾಮಃ । ಖಲು । ವೈ । ವೈಶ್ಯಃ । ಯಜತೇ । ಜಗತ್ಯಾ । ಏವ । ಅಸ್ಮೈ । ಪಶೂನ್। ಪರೀತಿ । ಗೃಹ್ಣಾತಿ ।

---

**ಪರಿಧಾನದಲ್ಲಿ ಜಗತೀಛಂದಸ್ಸಿನ ವಿಧಿ; ಪ್ರಶಂಸೆ**

| | |
|---|---|
| ಜಗತ್ಯಾ ಪರಿದಧ್ಯಾತ್ | ವೈಶ್ಯನು ಯಜಮಾನನಾಗಿದ್ದಾಗ ಹೋತೃವು [* 'ಸಮಿಧ್ಯಮಾನೋ ಅಮೃತಸ್ಯ ರಾಜಸಿ/ **ಜನಸ್ಯ ಗೋಪಾಃ] ಎಂಬ ಜಗತೀ ಛಂದಸ್ಸಿನ ಋಕ್ಕಿನಿಂದ ಪೂರ್ಣಗೊಳಿಸಬೇಕು. |
| ಪಶವಃ ಜಾಗತಾಃ ವೈ | ಪಶುಗಳು ಜಗತೀಛಂದಸ್ಸಿನಿಂದ ಲಭಿಸತಕ್ಕವುಗಳು. |
| ವೈಶ್ಯಃ ಪಶುಕಾಮಃ ಖಲು ವೈ ಯಜತೇ | ವೈಶ್ಯನು ಕ್ಷೀರ-ದಧಿ-ಘೃತಾದಿಗಳನ್ನು ಬಯಸಿಯೇ ಯಾಗವನ್ನು ಮಾಡುತ್ತಾನೆಯಷ್ಟೆ. |
| ಅಸ್ಮೈ ಜಗತ್ಯಾ ಏವ ಪಶೂನ್ ಪರಿಗೃಹ್ಣಾತಿ | ಹೋತೃವು ಈ ಯಜಮಾನನಿಗಾಗಿ ಜಗತೀ ಛಂದಸ್ಸಿನ ಋಕ್ಕಿನಿಂದಲೇ ಪಶುಗಳನ್ನು ಹೊಂದುತ್ತಾನೆ. |

---

ಜಗತೀ ಛಂದಸ್ಸಿನ ಮಂತ್ರದಿಂದ ಸಾಮಿಧೇನಿಯನ್ನು ಮಗಿಸಬೇಕು. ವೈಶ್ಯನು ಪಶುಕಾಮನಾದುದರಿಂದ, ಪಶುಗಳು ಜಗತೀಛಂದಸ್ಸಿನಿಂದ ಲಭಿಸತಕ್ಕವಾಗಿರುತ್ತವೆಯಷ್ಟೆ. ಜಗತೀ ಛಂದಸ್ಸಿಗೂ ಪಶುಗಳಿಗೂ ಸಂಬಂಧವಿದೆಯೆಂದು ಹಲವೆಡೆಗಳಲ್ಲಿ ಶ್ರುತಿಯಲ್ಲಿ ಬಂದಿದೆ.

ಇನ್ನು ಮುಂದೆ ಕಾಮ್ಯಸಾಮಿಧೇನಿಗಳು ಹೇಳಲ್ಪಡುತ್ತವೆ. ಶ್ರೇಷ್ಠಸ್ಥಿತಿಯನ್ನು ಬಯಸುವ

---

*ಋ.5.28.2 *ತೈ.ಸಂ.4.4.4

ತ್ಯೇಕವಿಗ್ಂಶತಿಮನು ಬ್ರೂಯಾತ್ಪ್ರತಿಷ್ಠಾಕಾಮಸ್ಯೈಕವಿಗ್ಂಶಃ

ಸ್ತೋಮಾನಾಂ ಪ್ರತಿಷ್ಠಾ ಪ್ರತಿಷ್ಠಿತ್ಯೈ [..ಷ್ಠಿತ್ಯೈ(೨)] ಚತು

ರ್ವಿಗ್ಂಶತಿಮನು ಬ್ರೂಯಾದ್ಬ್ರಹ್ಮವರ್ಚಸಕಾಮಸ್ಯ

---

ಏಕವಿಗ್ಂಶತಿಮಿತ್ಯೇಕ-ವಿಗ್ಂಶತಿಮ್ । ಅನ್ವಿತಿ । ಬ್ರೂಯಾತ್ । ಪ್ರತಿಷ್ಠಾಕಾಮಸ್ಯೇತಿ ಪ್ರತಿಷ್ಠಾ-ಕಾಮಸ್ಯ । ಏಕವಿಗ್ಂಶ ಇತ್ಯೇಕ-ವಿಗ್ಂಶಃ । ಸ್ತೋಮಾನಾಮ್ । ಪ್ರತಿಷ್ಠೇತಿ ಪ್ರತಿ-ಸ್ಥಾ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ।[(೨)]। ಚತುರ್ವಿಗ್ಂಶತಿಮಿತಿ ಚತುಃ-ವಿಗ್ಂಶತಿಮ್ । ಅನ್ವಿತಿ । ಬ್ರೂಯಾತ್ । ಬ್ರಹ್ಮವರ್ಚಸಕಾಮಸ್ಯೇತಿ ಬ್ರಹ್ಮವರ್ಚಸ-ಕಾಮಸ್ಯ ।

---

**ಪ್ರತಿಷ್ಠಾಕಾಮನಿಗಾಗಿ ಏಕವಿಂಶತಿಸಂಖ್ಯಾವಿಧಿ; ಪ್ರಶಂಸೆ**

| | |
|---|---|
| ಪ್ರತಿಷ್ಠಾಕಾಮಸ್ಯ | ಶ್ರೇಷ್ಠಸ್ಥಿತಿಯನ್ನು ಬಯಸುವ ಯಜಮಾನನ ಯಜ್ಞದಲ್ಲಿ |
| ಏಕವಿಗ್ಂಶತಿಮ್ ಅನುಬ್ರೂಯಾತ್ | ಇಪ್ಪತ್ತೊಂದು ಸಂಖ್ಯೆಯಲ್ಲಿ ಸಾಮಿಧೇನಿಗಳನ್ನು ಹೇಳಬೇಕು. |
| ಸ್ತೋಮಾನಾಂ ಏಕವಿಗ್ಂಶಃ ಪ್ರತಿಷ್ಠಾ | ಸ್ತೋಮಗಳ ಪೈಕಿ ಏಕವಿಂಶಸ್ತೋಮವು ಪ್ರತಿಷ್ಠಿತವಾಗಿದೆ. |
| ಪ್ರತಿಷ್ಠಿತ್ಯೈ | ಈ ಸ್ತೋಮವು ಯಜಮಾನನ ಪ್ರತಿಷ್ಠೆಗೆ ಕಾರಣವಾಗುತ್ತದೆ. |

**ಚತುರ್ವಿಂಶತಿಸಂಖ್ಯಾವಿಧಿ; ಪ್ರಶಂಸೆ**

| | |
|---|---|
| ಬ್ರಹ್ಮವರ್ಚಸಕಾಮಸ್ಯ ಚತುರ್ವಿಗ್ಂಶತಿಮ್ ಅನುಬ್ರೂಯಾತ್ | ಬ್ರಹ್ಮವರ್ಚಸವನ್ನು ಬಯಸುವ ಯಜಮಾನನಿಗಾಗಿ ಇಪ್ಪತ್ನಾಲ್ಕು ಸಂಖ್ಯೆಯಲ್ಲಿ ಸಾಮಿಧೇನಿಗಳನ್ನು ಹೇಳಬೇಕು. |

ಚತುರ್ವಿಗ್ಂಶತ್ಯಕ್ಷರಾ ಗಾಯತ್ರೀ ಗಾಯತ್ರೀ ಬ್ರಹ್ಮವರ್ಚಸಂ

ಗಾಯತ್ರಿಯೈವಾಸ್ಮೈ ಬ್ರಹ್ಮವರ್ಚಸಮವರುಂಧೇ

ತ್ರಿಗ್ಂಶತಮನು ಬ್ರೂಯಾದನ್ನಕಾಮಸ್ಯ

---

ಚತುರ್ವಿಗ್ಂಶತ್ಯಕ್ಷರೇತಿ ಚತುರ್ವಿಗ್ಂಶತಿ-ಅಕ್ಷರಾ । ಗಾಯತ್ರೀ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಗಾಯತ್ರಿಯಾ । ಏವ । ಅಸ್ಮೈ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಅವೇತಿ । ರುಂಧೇ । ತ್ರಿಗ್ಂಶತಮ್ । ಅನ್ವಿತಿ । ಬ್ರೂಯಾತ್। ಅನ್ನಕಾಮಸ್ಯೇತ್ಯನ್ನ-ಕಾಮಸ್ಯ ।

---

| | |
|---|---|
| ಗಾಯತ್ರೀ ಚತುರ್ವಿಗ್ಂಶ ತ್ಯಕ್ಷರಾ | ಗಾಯತ್ರೀ ಛಂದಸ್ಸಿಗೆ ಇಪ್ಪತ್ನಾಲ್ಕು ಅಕ್ಷರಗಳಿವೆ. |
| ಗಾಯತ್ರೀ ಬ್ರಹ್ಮವರ್ಚಸಮ್ | ಉಪನಯನದಲ್ಲಿ ಉಪದೇಶಿಸುವ ಗಾಯತ್ರಿಯು ಬ್ರಹ್ಮವರ್ಚಸದ ಸಾಧನವಾಗಿದೆ. |
| ಅಸ್ಮೈ ಗಾಯತ್ರಿಯಾ ಏವ ಬ್ರಹ್ಮವರ್ಚಸಮ್ ಅವರುಂಧೇ | ಹೋತೃವು ಈ ಯಜಮಾನನಿಗೆ ಗಾಯತ್ರಿಯಿಂದಲೇ ಬ್ರಹ್ಮವರ್ಚಸವನ್ನು ಒದಗಿಸಿ ಕೊಡುತ್ತಾನೆ. |

**ಅನ್ನಕಾಮನಿಗೆ ತ್ರಿಂಶತ್ಸಂಖ್ಯಾಸಾಮಿಧೇನೀವಿಧಿ; ಪ್ರಶಂಸೆ**

| | |
|---|---|
| ಅನ್ನಕಾಮಸ್ಯ ತ್ರಿಗ್ಂಶತಮ್ ಅನುಬ್ರೂಯಾತ್ | ಅನ್ನವನ್ನು ಅಪೇಕ್ಷಿಸುವ ಯಜಮಾನನಿಗಾಗಿ ಮೂವತ್ತು ಸಂಖ್ಯೆಯ ಸಾಮಿಧೇನಿಗಳನ್ನು ಹೇಳಬೇಕು. |

---

ಯಜಮಾನನಿಗಾಗಿ ಇಪ್ಪತ್ತೊಂದು ಸಂಖ್ಯೆಯ ಸಾಮಿಧೇನಿಗಳನ್ನು ಹೇಳಬೇಕು. ಸ್ತೋಮಗಳಲ್ಲಿ ಏಕವಿಂಶಸ್ತೋಮದಲ್ಲಿ ತ್ರಿವೃತ್, ಪಂಚದಶ ಹಾಗೂ ಸಪ್ತದಶಸ್ತೋಮಗಳು ಅಂತರ್ಗತವಾಗಿರುವುದರಿಂದ ಆ ಸ್ತೋಮವು ಪ್ರತಿಷ್ಠಿತವಾಗಿದೆ.

ತ್ರಿಗ್ಂಶದಕ್ಷರಾ ವಿರಾಡನ್ನಂ ವಿರಾಡ್ವಿರಾಜ್ಯೈವಾಸ್ಮಾ ಅನ್ನಾದ್ಯಮ

ವರುಂಧೇ ದ್ವಾತ್ರಿಗ್ಂಶತಮನು ಬ್ರೂಯಾತ್ಪ್ರತಿಷ್ಠಾಕಾಮಸ್ಯ

---

ತ್ರಿಗ್ಂಶದಕ್ಷರೇತಿ ತ್ರಿಗ್ಂಶತ್-ಅಕ್ಷರಾ । ವಿರಾಡಿತಿ ವಿ-ರಾಟ್ । ಅನ್ನಮ್ । ವಿರಾಡಿತಿ

ವಿ-ರಾಟ್ । ವಿರಾಜೇತಿ ವಿ-ರಾಜಾ । ಏವ । ಅಸ್ಮೈ । ಅನ್ನಾದ್ಯಮಿತ್ಯನ್ನ- ಅದ್ಯಮ್।

ಅವೇತಿ । ರುಂಧೇ । ದ್ವಾತ್ರಿಗ್ಂಶತಮ್ । ಅನ್ವಿತಿ । ಬ್ರೂಯಾತ್ । ಪ್ರತಿಷ್ಠಾಕಾಮಸ್ಯೇತಿ

ಪ್ರತಿಷ್ಠಾ-ಕಾಮಸ್ಯ ।

---

| | |
|---|---|
| ತ್ರಿಗ್ಂಶದಕ್ಷರಾ ವಿರಾಟ್ | ವಿರಾಟ್ ಛಂದಸ್ಸು ಮೂವತ್ತು ಅಕ್ಷರಗಳದ್ದು. |
| ಅನ್ನಮ್ ವಿರಾಟ್ | ಅನ್ನವು ವಿರಾಟ್ ಛಂದಸ್ಸಿಂದ ಸಾಧಿಸಲ್ಪಡುತ್ತದೆ. |
| ಅಸ್ಮೈ ವಿರಾಜಾ ಏವ ಅನ್ನಾದ್ಯಮ್ ಅವರುಂಧೇ | ಹೋತೃವು ಈ ಯಜಮಾನನಿಗೆ ವಿರಾಟ್ ಛಂದಸ್ಸಿನಿಂದಲೇ ಅನ್ನ ಭೋಜನ ಸಾಮರ್ಥ್ಯವನ್ನು ದೊರಕಿಸಿ ಕೊಡುತ್ತಾನೆ. |

**ಪ್ರತಿಷ್ಠಾಕಾಮನಿಗೆ ಮೂವತ್ತೆರಡು ಸಂಖ್ಯೆಯ ಸಾಮಿಧೇನೀವಿಧಿ; ಪ್ರಶಂಸೆ**

| | |
|---|---|
| ಪ್ರತಿಷ್ಠಾಕಾಮಸ್ಯ ದ್ವಾತ್ರಿಗ್ಂಶತಮ್ ಅನು ಬ್ರೂಯಾತ್ | ಮೇಲಾದ ಸ್ಥಿತಿಯನ್ನು ಬಯಸುವ ಯಜಮಾನನಿಗೆ ಮೂವತ್ತೆರಡು ಸಂಖ್ಯೆಯಲ್ಲಿ ಹೋತೃವು ಸಾಮಿಧೇನಿಗಳನ್ನು ಹೇಳಬೇಕು. |

---

ಬ್ರಹ್ಮವರ್ಚಸವನ್ನು ಬಯಸುವ ಯಜಮಾನನಿಗಾಗಿ ಇಪ್ಪತ್ತನಾಲ್ಕು ಸಂಖ್ಯೆಯ ಸಾಮಿಧೇನಿಗಳನ್ನೂ, ಅನ್ನಕಾಮನಾದ ಯಜಮಾನನಿಗೆ ಮೂವತ್ತು ಸಂಖ್ಯೆಯ ಸಾಮಿಧೇನಿಗಳನ್ನೂ ಹೇಳಬೇಕು.

ದ್ವಾತ್ರಿಗ್ಂಶದಕ್ಷರಾಽನುಷ್ಟುಗನುಷ್ಟುಪ್ಛಂದಸಾಂ ಪ್ರತಿಷ್ಠಾ

ಪ್ರತಿಷ್ಠಿತ್ಯೈಲ ಷಟ್ತ್ರಿಗ್ಂಶತಮನು ಬ್ರೂಯಾತ್ಪಶುಕಾಮಸ್ಯ

ಷಟ್ತ್ರಿಗ್ಂಶದಕ್ಷರಾ ಬೃಹತೀ

---

ದ್ವಾತ್ರಿಗ್ಂಶದಕ್ಷರೇತಿ ದ್ವಾತ್ರಿಗ್ಂಶತ್-ಅಕ್ಷರಾ । ಅನುಷ್ಟುಗಿತ್ಯನು-ಸ್ತುಕ್ । ಅನುಷ್ಟುಬಿತ್ಯನು-ಸ್ತುಪ್ । ಛಂದಸಾಮ್ । ಪ್ರತಿಷ್ಠೇತಿ ಪ್ರತಿ-ಸ್ಥಾ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈಲ । ಷಟ್ತ್ರಿಗ್ಂಶತಮಿತಿ ಷಟ್-ತ್ರಿಗ್ಂಶತಮ್ । ಅನ್ವಿತಿ । ಬ್ರೂಯಾತ್। ಪಶುಕಾಮಸ್ಯೇತಿ ಪಶು-ಕಾಮಸ್ಯ । ಷಟ್ತ್ರಿಗ್ಂಶದಕ್ಷರೇತಿ ಷಟ್ತ್ರಿಗ್ಂಶತ್-ಅಕ್ಷರಾ । ಬೃಹತೀ ।

---

| | |
|---|---|
| ಅನುಷ್ಟುಕ್ ದ್ವಾತ್ರಿಗ್ಂಶದಕ್ಷರಾ | ಅನುಷ್ಟುಪ್ ಛಂದಸ್ಸು ಮೂವತ್ತೆರಡು ಅಕ್ಷರಗಳುಳ್ಳದ್ದು. |
| ಛಂದಸಾಮ್ ಅನುಷ್ಟುಪ್ | ವಾಗ್ರೂಪವಾದ ಅನುಷ್ಟುಪ್ ಛಂದಸ್ಸು ಛಂದಸ್ಸುಗಳಲ್ಲಿ ಮೇಲಾದುದು. |
| ಪ್ರತಿಷ್ಠಾ ಪ್ರತಿಷ್ಠಿತ್ಯೈಲ | ಈ ಕಾರಣದಿಂದ ಈ ಸಂಖ್ಯೆಯ ಸಾಮಿಧೇನಿಗಳು ಪ್ರತಿಷ್ಠೆಗೆ ಕಾರಣವಾಗುತ್ತವೆ. |

**ಪಶುಕಾಮನಿಗೆ ಮೂವತ್ತಾರು ಅಕ್ಷರಗಳ ಸಾಮಿಧೇನೀವಿಧಿ; ಪ್ರಶಂಸೆ**

| | |
|---|---|
| ಪಶುಕಾಮಸ್ಯ ಷಟ್ತ್ರಿಗ್ಂಶತಮ್ ಅನುಬ್ರೂಯಾತ್ | ಪಶುಸಂಪತ್ತನ್ನು ಬಯಸುವ ಯಜಮಾನನಿಗಾಗಿ ಹೋತೃವು ಮೂವತ್ತಾರು ಸಂಖ್ಯೆಯಲ್ಲಿ ಸಾಮಿಧೇನಿಗಳನ್ನು ಹೇಳಬೇಕು. |
| ಬೃಹತೀ ಷಟ್ತ್ರಿಗ್ಂಶದಕ್ಷರಾ | ಬೃಹತೀ ಛಂದಸ್ಸು ಮೂವತ್ತಾರು ಅಕ್ಷರಗಳನ್ನು ಹೊಂದಿದೆ. |

ಬಾರ್ಹತಾಃ ಪಶವೋ ಬೃಹತ್ಯೈವಾಸ್ಮೈ ಪಶೂನವರುಂಧೇ

ಚತುಶ್ಚತ್ವಾರಿಗ್ಂಶತಮನು ಬ್ರೂಯಾದಿಂದ್ರಿಯಕಾಮಸ್ಯ

---

ಬಾರ್ಹತಾಃ । ಪಶವಃ । ಬೃಹತ್ಯಾ । ಏವ । ಅಸ್ಮೈ । ಪಶೂನ್ ।[(೩)]। ಅವೇತಿ।
ರುಂಧೇ । ಚತುಶ್ಚತ್ವಾರಿಗ್ಂಶತಮಿತಿ ಚತುಃ-ಚತ್ವಾರಿಗ್ಂಶತಮ್ । ಅನ್ವಿತಿ ।
ಬ್ರೂಯಾತ್ । ಇಂದ್ರಿಯಕಾಮಸ್ಯೇತೀಂದ್ರಿಯ-ಕಾಮಸ್ಯ ।

---

| | |
|---|---|
| ಪಶವಃ ಬಾರ್ಹತಾಃ | ಬೃಹತೀ ಛಂದಸ್ಸಿನಿಂದ ಲಭ್ಯವಾಗುವ ಪಶುಗಳು ಬಾರ್ಹತಗಳಾಗಿವೆ. |
| ಅಸ್ಮೈ ಬೃಹತ್ಯಾ ಏವ ಪಶೂನ್ ಅವರುಂಧೇ | ಹೋತೃವು ಈ ಯಜಮಾನನಿಗೆ ಬೃಹತೀ ಛಂದಸ್ಸಿನಿಂದಲೇ ಪಶುಸಂಪತ್ತು ಲಭ್ಯ ವಾಗುವಂತೆ ಮಾಡುತ್ತಾನೆ. |

**ಇಂದ್ರಿಯಶಕ್ತಿಗಾಗಿ ನಲವತ್ತನಾಲ್ಕು ಸಂಖ್ಯೆಯ ಸಾಮಿಧೇನೀವಿಧಿ; ಪ್ರಶಂಸೆ**

| | |
|---|---|
| ಇಂದ್ರಿಯಕಾಮಸ್ಯ | ಇಂದ್ರಿಯಶಕ್ತಿಯನ್ನು ಬಯಸುವ ಯಜ ಮಾನನಿಗಾಗಿ |
| ಚತುಶ್ಚತ್ವಾರಿಗ್ಂಶತಮ್ ಅನು ಬ್ರೂಯಾತ್ | ಹೋತೃವು ನಲವತ್ತನಾಲ್ಕು ಸಂಖ್ಯೆಯಲ್ಲಿ ಸಾಮಿಧೇನಿಗಳನ್ನು ಹೇಳಬೇಕು. |

---

ಹೋತೃವು ಅಷ್ಟೇ ಅಕ್ಷರಗಳುಳ್ಳ ಗಾಯತ್ರೀ ಮತ್ತು ವಿರಾಟ್ ಛಂದಸ್ಸಿನಿಂದ ಆಯಾ ಫಲವು ದೊರೆಯುವಂತೆ ಮಾಡುತ್ತಾನೆ.

ಪ್ರತಿಷ್ಠಾಕಾಮನಿಗಾಗಿ ಮೂವತ್ತೆರಡು ಸಂಖ್ಯೆಯಲ್ಲಿಯೂ,ಪಶುಕಾಮನಾದ ಯಜಮಾನನಿಗೆ ಮೂವತ್ತಾರು ಸಂಖ್ಯೆಯಲ್ಲಿಯೂ, ಇಂದ್ರಿಯಶಕ್ತಿಯನ್ನು ಬಯಸುವನಿಗಾಗಿ ನಲವತ್ತನಾಲ್ಕು ಸಂಖ್ಯೆಯಲ್ಲಿಯೂ ಸಾಮಿಧೇನಿಗಳನ್ನು ಹೋತೃವು ಹೇಳಬೇಕು.

ಚತುಶ್ಚತ್ವಾರಿಗ್ಂಶದಕ್ಷರಾ ತ್ರಿಷ್ಟುಗಿಂದ್ರಿಯಂ ತ್ರಿಷ್ಟುಪ್ತ್ರಿಷ್ಟುಭೈ

ವಾಸ್ಮಾ ಇಂದ್ರಿಯಮವರುಂಧೇऽಷ್ಟಾಚತ್ವಾರಿಗ್ಂಶತಮನು

ಬ್ರೂಯಾತ್ಪಶುಕಾಮಸ್ಯಾಷ್ಟಾಚತ್ವಾರಿಗ್ಂಶದಕ್ಷರಾ ಜಗತೀ

---

ಚತುಶ್ಚತ್ವಾರಿಗ್ಂಶದಕ್ಷರೇತಿ ಚತುಶ್ಚತ್ವಾರಿಗ್ಂಶತ್–ಅಕ್ಷರಾ । ತ್ರಿಷ್ಟುಕ್ । ಇಂದ್ರಿಯಮ್।

ತ್ರಿಷ್ಟುಪ್। ತ್ರಿಷ್ಟುಭಾ । ಏವ । ಅಸ್ಮೈ । ಇಂದ್ರಿಯಮ್ । ಅವೇತಿ । ರುಂಧೇ । ಅಷ್ಟಾ

ಚತ್ವಾರಿಗ್ಂಶತ ಮಿತ್ಯಷ್ಟಾ–ಚತ್ವಾರಿಗ್ಂಶತಮ್ । ಅನ್ವಿತಿ । ಬ್ರೂಯಾತ್ । ಪಶುಕಾಮ ಸ್ಯೇತಿ

ಪಶು–ಕಾಮಸ್ಯ । ಅಷ್ಟಾಚತ್ವಾರಿಗ್ಂಶದಕ್ಷರೇತ್ಯಷ್ಟಾಚತ್ವಾರಿಗ್ಂಶತ್–ಅಕ್ಷರಾ । ಜಗತೀ ।

---

| | |
|---|---|
| ತ್ರಿಷ್ಟುಕ್ ಚತುಶ್ಚತ್ವಾರಿಗ್ಂಶ ದಕ್ಷರಾ | ತ್ರಿಷ್ಟುಪ್ ಛಂದಸ್ಸು ನಲವತ್ತನಾಲ್ಕು ಅಕ್ಷರಗಳಿಂದ ಕೂಡಿದೆ. |
| ಇಂದ್ರಿಯಮ್ ತ್ರಿಷ್ಟುಪ್ | ಇಂದ್ರದೇವತಾಕವಾದ ತ್ರಿಷ್ಟುಪ್ ಛಂದಸ್ಸು ಇಂದ್ರಿಯಶಕ್ತಿಸ್ವರೂಪವೇ ಆಗಿದೆ. |
| ಅಸ್ಮೈ ತ್ರಿಷ್ಟುಭಾ ಏವ ಇಂದ್ರಿಯಮ್ ಅವರುಂಧೇ | ಹೋತೃವು ಈ ಯಜಮಾನನಿಗಾಗಿ ತ್ರಿಷ್ಟುಪ್ ಛಂದಸ್ಸಿನಿಂದಲೇ ಇಂದ್ರಿಯ ಶಕ್ತಿಯನ್ನು ಒದಗಿಸಿಕೊಡುತ್ತಾನೆ. |

**ಪಶುಕಾಮನಾದ ಯಜಮಾನನಿಗಾಗಿ ನಲವತ್ತೆಂಟು ಸಂಖ್ಯೆಯ ಸಾಮಿಧೇನೀವಿಧಿ; ಪ್ರಶಂಸೆ**

| | |
|---|---|
| ಪಶುಕಾಮಸ್ಯ ಅಷ್ಟಾಚತ್ವಾರಿಗ್ಂ ಶತಮ್ ಅನುಬ್ರೂಯಾತ್ | ಪಶುಸಂಪತ್ತನ್ನು ಬಯಸುವ ಯಜಮಾನನಿಗಾಗಿ ಹೋತೃವು ನಲವತ್ತೆಂಟು ಸಂಖ್ಯೆಯ ಸಾಮಿಧೇನಿಗಳನ್ನು ಪಠಿಸಬೇಕು. |
| ಜಗತೀ ಅಷ್ಟಾಚತ್ವಾರಿಗ್ಂಶದಕ್ಷರಾ | ಛಂದಸ್ಸುಗಳಲ್ಲಿ ಜಗತೀ ಛಂದಸ್ಸು ನಲವತ್ತೆಂಟು ಅಕ್ಷರಗಳುಳ್ಳದ್ದಾಗಿದೆ. |

ಜಾಗತಾಃ ಪಶವೋ ಜಗತ್ಯೈವಾಸ್ಮೈ ಪಶೂನವ ರುಂಧೇ

ಸರ್ವಾಣಿ ಛಂದಾಗ್ಂಸ್ಯನು ಬ್ರೂಯಾದ್ಬಹುಯಾಜಿನಃ

---

ಜಾಗತಾಃ । ಪಶವಃ । ಜಗತ್ಯಾ । ಏವ । ಅಸ್ಮೈ । ಪಶೂನ್ । ಅವೇತಿ । ರುಂಧೇ । ಸರ್ವಾಣಿ । ಛಂದಾಗ್ಂಸಿ । ಅನ್ವಿತಿ । ಬ್ರೂಯಾತ್ । ಬಹುಯಾಜಿನ ಇತಿ ಬಹು-ಯಾಜಿನಃ ।

---

| | |
|---|---|
| ಪಶವಃ ಜಾಗತಾಃ | ಜಗತಿಯಿಂದ ಲಬ್ಧವಾಗುವ ಪಶುಗಳು ಜಾಗತಗಳಾಗಿವೆಯಷ್ಟೆ. |
| ಅಸ್ಮೈ ಜಗತ್ಯಾ ಏವ ಪಶೂನ್ ಅವರುಂಧೇ | ಹೋತೃವು ಈ ಯಜಮಾನನಿಗಾಗಿ ಪಶುಸಾಧನವಾದ ಜಗತೀ ಛಂದಸ್ಸಿನಿಂದಲೇ ಪಶುಸಂಪತ್ತಿಯನ್ನು ಸಂಪಾದಿಸಿಕೊಡುತ್ತಾನೆ. |

**ಬಹುಯಾಜಿಯಾದ ಸೋಮಯಾಜಿಗಾಗಿ ಗಾಯತ್ರೀ,ತ್ರಿಷ್ಟುಪ್,ಜಗತೀ ಛಂದಸ್ಸಿನ ಸಾಮಿಧೇನೀವಿಧಿ; ಪ್ರಶಂಸೆ**

| | |
|---|---|
| ಬಹುಯಾಜಿನಃ ಸರ್ವಾಣಿ ಛಂದಾಗ್ಂಸಿ ಅನುಬ್ರೂಯಾತ್ | ದೀಕ್ಷಣೀಯಾದಿ ಇಷ್ಟಿಗಳನ್ನೂ, ಅಗ್ನೀಷೋಮೀಯಾದಿಪಶುಯಾಗಗಳನ್ನೂ, ಐಂದ್ರವಾಯವಾದಿಗ್ರಹಸೋಮಯಾಗಗಳನ್ನೂ ಮಾಡಿರುವ ಸೋಮಯಾಜಿಗಾಗಿ ಅವನ ದರ್ಶ-ಪೂರ್ಣಮಾಸಗಳಲ್ಲಿ ಹೋತೃವು ಗಾಯತ್ರೀ,ತ್ರಿಷ್ಟುಪ್,ಜಗತೀ ಎಂಬ ಎಲ್ಲ ಛಂದಸ್ಸುಗಳನ್ನೂ ಹೊಂದಿರುವ ಸಾಮಿಧೇನಿಗಳನ್ನು ಹೇಳಬೇಕು. |

---

ಹೀಗೆ ಹೇಳುವುದರಿಂದ ಆಯಾ ಛಂದಸ್ಸಿನ ಸಂಖ್ಯೆಯಲ್ಲಿರುವ ಸಾಮಿಧೇನಿಗಳನ್ನು ಹೇಳಿದಂತಾಗಿ,ಆಯಾ ಛಂದಸ್ಸಿನಿಂದ ಆಯಾ ಫಲಗಳನ್ನು ಹೋತೃವು ಒದಗಿಸಿಕೊಡುತ್ತಾನೆ. ಗಾಯತ್ರಿಯು ಬ್ರಹ್ಮವರ್ಚಸಸಾಧನ,ತ್ರಿಷ್ಟುಪ್ ಇಂದ್ರಿಯಸಾಧನ,ಜಗತಿಯು ಪಶುಸಾಧನ,

ಸರ್ವಾ॑ಣಿ॒ ವಾ ಏ॒ತಸ್ಯ॒ ಛಂದಾ॒ಗ್ಂ॒ಸ್ಯವ॑ರುದ್ಧಾನಿ॒ ಯೋ॑ ಬಹುಯಾ॒ಜ್ಯಪ॑ರಿಮಿತ॒ಮನು॑ಬ್ರೂ॒ಯಾದಪ॑ರಿಮಿತ॒ಸ್ಯಾವ॑ರುದ್ಧ್ಯೈ ॥೬೦-10॥

[ಕಾ॒ಮಯೇ॑ತ॒ ಪ್ರತಿ॑ಷ್ಠಿತ್ಯೈ॒ ಪ॒ಶೂನ್ತ್ಸ॒ಪ್ತಚ॑ತ್ವಾರಿಗ್ಂಶಚ್ಚ॥]

---

ಸರ್ವಾ॑ಣಿ । ವೈ । ಏ॒ತಸ್ಯ॑ । ಛಂದಾ॑ಗ್ಂಸಿ । ಅವ॑ರುದ್ಧಾ॒ನೀತ್ಯವ॑-ರು॒ದ್ಧಾ॒ನಿ॒ । ಯಃ । ಬ॒ಹು॒ಯಾ॒ಜೀತಿ॑ ಬಹು-ಯಾ॒ಜೀ । ಅಪ॑ರಿಮಿತ॒ಮಿತ್ಯಪ॑ರಿ-ಮಿ॒ತ॒ಮ್ । ಅನ್ವಿತಿ॑ । ಬ್ರೂ॒ಯಾ॒ತ್। ಅಪ॑ರಿಮಿತ॒ಸ್ಯೇತ್ಯಪ॑ರಿ-ಮಿ॒ತ॒ಸ್ಯ॒ । ಅವ॑ರುದ್ಧ್ಯಾ॒ ಇತ್ಯವ॑-ರು॒ದ್ಧ್ಯೈ॒ ॥[60]

---

| | |
|---|---|
| ಯಃ ಬಹುಯಾಜೀ ಏತಸ್ಯ ಸರ್ವಾಣಿ ಛಂದಾಗ್ಂಸಿ ಅವರುದ್ಧಾನಿ ವೈ | ಇಷ್ಟಿ,ಪಶು, ಸೋಮಯಾಗಗಳನ್ನು ಅನುಷ್ಠಿಸಿರುವ ಬಹುಯಾಜಿಯಾದ ಈ ಯಜಮಾನನಿಗೆ ಈ ಎಲ್ಲಾ ಛಂದಸ್ಸುಗಳೂ ಮೂರು ಸವನಗಳಲ್ಲಿ ಮಾಡುವ ಯಾಗಗಳಿಂದಲೇ ಪ್ರಾಪ್ತವಾಗಿವೆಯಷ್ಟೆ. |

**ಅಪರಿಮಿತಫಲಪ್ರಾಪ್ತಿಗಾಗಿ ಅಪರಿಮಿತಸಂಖ್ಯೆಯ ಸಾಮಿಧೇನೀವಿಧಾನ; ಪ್ರಶಂಸೆ**

| | |
|---|---|
| ಅಪರಿಮಿತಮ್ ಅನುಬ್ರೂಯಾತ್ | ಬಹುಯಾಜಿಯಾದ ಸೋಮಯಾಜಿ ಯಜಮಾನನಿಗಾಗಿ ಅಪರಿಮಿತಸಂಖ್ಯೆಯಲ್ಲಿ ಹೋತೃವು ಸಾಮಿಧೇನಿಗಳನ್ನು ಹೇಳಬೇಕು. |
| ಅಪರಿಮಿತಸ್ಯ ಅವರುದ್ಧ್ಯೈ | ಇದು ಯಜಮಾನನಿಗೆ ಪರಿಮಿತಿಯಿಲ್ಲದ ಫಲಪ್ರಾಪ್ತಿಗೆ ಸಾಧನವಾಗುತ್ತದೆ. |

---

ಎಂದು ಶ್ರುತಿಯಲ್ಲಿ ಬೇರೆಡೆಯಲ್ಲಿಯೂ ಉಕ್ತವಾಗಿದೆ.

ಇಷ್ಟಿಗಳನ್ನೂ, ಅಗ್ನೀಷೋಮೀಯಾದಿಪಶುಯಾಗಗಳನ್ನೂ, ಐಂದ್ರವಾಯವಾದಿ ಗ್ರಹಸೋಮಯಾಗಗಳನ್ನೂ ಅನುಷ್ಠಿಸುವ ಯಜಮಾನನು ಬಹುಯಾಜಿಯಾದ ಸೋಮಯಾಜಿ ಎನ್ನಿಸುವನು.

ಅಂತಹ ಯಜಮಾನನಿಗಾಗಿ ಅನೇಕ ಛಂದಸ್ಸುಗಳನ್ನು ಹೊಂದಿರುವ ಸಾಮಿಧೇನಿಗಳನ್ನು ದರ್ಶ-ಪೂರ್ಣಮಾಸಗಳಲ್ಲಿ ಹೇಳಬೇಕು.

ಈ ಯಜಮಾನನಿಗೆ ಪರಿಮಿತಿಯಿಲ್ಲದ ಫಲಪ್ರಾಪ್ತಿಗಾಗಿ ಅಪರಿಮಿತಸಂಖ್ಯೆಯಲ್ಲಿ ಸಾಮಿಧೇನಿಗಳನ್ನು ಹೇಳಬೇಕು. ಇಲ್ಲಿ ಅಪರಿಮಿತವೆಂದರೆ ಮೂರು ತೃಚಗಳಿಂದ ಆರಂಭಿಸಿ ನಲವತ್ತೆಂಟು ಸಂಖ್ಯೆಯ ಋಕ್‌ಗಳಲ್ಲಿ ಹೆಚ್ಚಿನ ಸಂಖ್ಯೆಯ ಋಕ್‌ಗಳನ್ನು ಪಠಿಸಬೇಕು ಎಂದು ಅರ್ಥ.ಈ ಸಂಖ್ಯೆಯ ಆಯ್ಕೆಯಲ್ಲಿ ಯಜಮಾನನ ಇಚ್ಛೆಯೇ ನಿಯಾಮಕವಾಗುತ್ತದೆ. ಇಷ್ಟೇ ಸಂಖ್ಯೆಯೆಂಬ ನಿಯಮವು ವಾಚನಿಕವಲ್ಲ.

* * *

## ಅನುವಾಕದ ವಿಶೇಷ ವಿಷಯಗಳು

### ೧) ಸಾಮಿಧೇನಿಗಳಲ್ಲಿ ಸಂಖ್ಯಾಸಂಪತ್ತಿಯು ಹೇಗೆ?

ಸಾಮಿಧೇನಿಗಳು ಹದಿನೈದು ಇರಬೇಕೆಂಬ ವಿಧಿಯಿದೆ. **'ಪಂಚದಶ ಸಾಮಿಧೇನೀರನ್ವಾಹ'** ಎಂಬ ಶ್ರುತಿವಾಕ್ಯದಂತೆ, **ತ್ರಿಃ ಪ್ರಥಮಾಮನ್ವಾಹ, ತ್ರಿರುತ್ತಮಾಮ್** ಎಂಬ ವಾಕ್ಯದಂತೆಯೂ ಪಠಿತವಾಗಿರುವ 12 ಸಾಮಿಧೇನಿಗಳಲ್ಲಿ ಮೊದಲನೆಯದನ್ನು ಮೂರು ಬಾರಿಯೂ, ಅಂತಿಮ ಸಾಮಿಧೇನಿಯನ್ನು ಮೂರು ಬಾರಿಯೂ ಆವೃತ್ತಿ ಮಾಡಿ ಈ ಸಂಖ್ಯಾಸಂಪತ್ತಿಯನ್ನು ಮಾಡಬೇಕು. ಕಡೆಯ ಸಾಮಿಧೇನಿಯನ್ನಾಗಲೀ ಅದರ ಹಿಂದಿನ ಸಾಮಿಧೇನಿಯನ್ನಾಗಲೀ ವೈಕಲ್ಪಿಕವಾಗಿ ತೆಗೆದುಕೊಳ್ಳಬಹುದು. ಹೀಗಾಗಿ[3+9+3] ಹದಿನೈದು ಸಂಖ್ಯೆಯು ಸಿದ್ಧಿಸುತ್ತದೆ.

**'ಪೃಥುಪಾಜಾ ಅಮರ್ತ್ಯಃ, ತಗ್ಂ ಸಬಾಧೋ ಯತಃ ಸ್ರುಚಃ'** ಎಂಬ ಋಕ್‌ಗಳನ್ನು**[ತೈ.ಬ್ರಾ.3.6.1]** **'ಸಮಿಧ್ಯಮಾನೋ ಅಧ್ವರೇ, ಸಮಿದ್ಧೋ ಅಗ್ನ ಆಹುತ'** ಎಂಬ ಋಕ್‌ಗಳ ಮಧ್ಯದಲ್ಲಿ ಸೇರಿಸಬೇಕು. ಹೀಗಾಗಿ ಹಿಂದಿನಂತೆ [15+2=17]ಹದಿನೇಳು ಸಂಖ್ಯೆಯು ಸಿದ್ಧಿಸುತ್ತದೆ.

ಸಮಿಧ್ಯಮಾನ ಋಕ್‌ಗಳಲ್ಲಿ ವೈಶ್ಯನಿಗೆ **'ಸಮಿಧ್ಯಮಾನೋ ಅಮೃತಸ್ಯ ರಾಜನಿ'[ಋ.ಸಂ.5.28.2]**ಎಂಬ ಋಕ್ ಅನ್ನು ವೈಶ್ಯನಿಗಾಗಿ ಹೇಳಲಾಗಿದೆ.

ಇಪ್ಪತ್ತೊಂದರಿಂದ ಆರಂಭಿಸಿ ವಿವಿಧಸಂಖ್ಯಾಸಂಪತ್ತಿಗಾಗಿ ಕೆಲವು ಋಕ್‌ಗಳನ್ನೂ, ಅವುಗಳನ್ನು ಪಠಿಸಬೇಕಾದ ಸ್ಥಾನವನ್ನೂ, ಋಕ್‌ಗಳ ಸಂಖ್ಯೆಯನ್ನೂ ತಿಳಿಸಿರುತ್ತಾರೆ.

ಸಾಮಿಧೇನಿಗಳಲ್ಲಿ ಮೊದಲನೆಯದಾದ **'ಪ್ರವೋ ವಾಜಾ'** ಎಂಬ ಋಕ್ಕಿನ ಅನಂತರ **'ಈಡೇ ಅಗ್ನಿಮ್'** ಮೊದಲಾದ ಎರಡು ಋಕ್‌ಗಳನ್ನು ಪಾಠ ಮಾಡಬೇಕು. ಅನಂತರ ಪಾಠಕ್ರಮದಂತೆ **'ಅಗ್ನ ಆ ಯಾಹಿ'** ಮೊದಲಾದವನ್ನು ಪಠಿಸಬೇಕು. ಆ ಮಂತ್ರಗಳಲ್ಲಿ **'ಸಮಿಧ್ಯಮಾನಃ'** ಮತ್ತು **'ಸಮಿದ್ಧಃ'** ಋಕ್‌ಗಳ ಮಧ್ಯದಲ್ಲಿ **'ತ್ವಾಮಗ್ನೇ ಪುಷ್ಕರಾತ್'** ಮೊದಲಾದ ಮೂರು ತೃಚಗಳನ್ನು ಪಠಿಸಬೇಕು. **'ಅಗ್ನಿಮಗ್ನಿಮ್'** ಎಂದು ಹನ್ನೊಂದು ಋಕ್‌ಗಳು. **'ಪೃಥುಪಾಜಾ'** ಎಂದು ಎಂಟು ಋಕ್‌ಗಳು.

ನಲವತ್ತೆಂಟು ಸಂಖ್ಯೆಗಾಗಿ ಬೇಕಾದಷ್ಟು(3)ಋಕ್‌ಗಳನ್ನು ಋಗ್ವೇದದಿದ ಆರಿಸಿಕೊಳ್ಳಬೇಕು.

**'ಧಾಯ್ಯಾ'** ಎಂಬ ಸಂಜ್ಞೆಯುಳ್ಳ ಋಕ್‌ಗಳಿಗೆ ಮಾತ್ರ **'ಸಮಿಧ್ಯಮಾನಃ' 'ಸಮಿದ್ಧಃ'** ಋಕ್‌ಗಳ ಮಧ್ಯದಲ್ಲಿಯೂ,ಉಳಿದವುಗಳಿಗೆ ಪರಿಧಾನೀಯ (ಕೊನೆಯ) ಋಕ್ಕಿಗೆ ಮೊದಲೂ, ಪ್ರಕ್ಷೇಪ ಎಂದು ಸಂಪ್ರದಾಯವನ್ನು ತಿಳಿದವರು ಹೇಳುತ್ತಾರೆ.

## ೨) ಮೀಮಾಂಸಾ

### ಅ) ಅನಾರಭ್ಯ ಅಧೀತವಾದ ಸಪ್ತದಶಸಂಖ್ಯೆಯು ಎಲ್ಲಿ?

**[ಜೈ.ಸೂ.3.6.3]**

**'ಸಪ್ತದಶ ಸಾಮಿಧೇನೀರನುಬ್ರೂಯಾತ್'** ಎಂಬ ಶ್ರುತಿವಚನವಿದೆ. ಈ ವಚನವು ಯಾವ ಪ್ರಕರಣವಿಶೇಷದಲ್ಲಿ ಪಠಿತವಾಗಿಲ್ಲ.ಈ ರೀತಿಯ ಪಾಠವನ್ನು **'ಅನಾರಭ್ಯ ಅಧೀತ'** ಎನ್ನುತ್ತಾರೆ. ಹದಿನೇಳು ಸಂಖ್ಯೆಯು ಸಾಮಿಧೇನಿಗಳು ಇರಬೇಕೆನ್ನುವುದು ಪ್ರಕೃತಿಯಾಗದಲ್ಲಿಯೋ ? ವಿಕೃತಿಯಾಗದಲ್ಲಿಯೋ? ಇದು ಇಲ್ಲಿನ **ಸಂಶಯ.**

**'ಅನಾರಭ್ಯಾಧೀತಾನಾಂ ಪ್ರಕೃತಿಗಾಮಿತ್ವಮ್'** ಎಂಬುದು ಸಾಮಾನ್ಯ ನಿಯಮ. ಅದರಂತೆ ಪ್ರಕೃತಿಯಾಗವಾದ ದರ್ಶ-ಪೂರ್ಣಮಾಸಯಾಗದಲ್ಲಿಯೇ ಈ ವಾಕ್ಯದ ಅನ್ವಯವಾಗಬೇಕು. ಆದರೆ **'ಪಂಚದಶ ಸಾವಿಧೇನೀರನ್ವಾಹ'**ಎಂಬುದಾಗಿ ಪ್ರಕೃತಿ ಯಾಗದಲ್ಲಿ ಹದಿನೈದು ಸಾಮಿಧೇನಿಗಳು ಎಂದು ನಿಯತವಾಗಿದೆ. ಹಾಗಾದರೆ ಈ ಸಪ್ತದಶ ಸಂಖ್ಯೆಯೊಡನೆ ಪಂಚದಶ ಸಂಖ್ಯೆಗೆ ವಿಕಲ್ಪವಾಗುತ್ತದೆ. ಇದು ಇಲ್ಲಿನ **ಪೂರ್ವಪಕ್ಷ.**

**'ಪಂಚದಶ ಸಾಮಿಧೇನೀರನ್ವಾಹ'** ಎಂಬುದು ಪ್ರಕರಣದಲ್ಲಿ ಪಠಿತವಾದುದು. ಅದು ಪ್ರಬಲ. ಹೀಗಾಗಿ ಸಪ್ತದಶ ಸಂಖ್ಯೆಯು **ಮಿತ್ರವಿಂದಾ-ಅಧ್ವರಕಲ್ಪಾ** ಮೊದಲಾದ ವಿಕೃತಿಗಳಲ್ಲಿ ನಿವೇಶವನ್ನು ಪಡೆಯುತ್ತದೆ. ಇದು ಇಲ್ಲಿನ **ಸಿದ್ಧಾಂತ.**

## ಅ) 'ಸಪ್ತದಶಾನುಬ್ರೂಯಾತ್ ವೈಶ್ಯಸ್ಯ' ಎಂಬಲ್ಲಿ ಹೇಗೆ?

**[ಜೈ.ಸೂ.3.6.5]**

**'ಸಪ್ತದಶಾನುಬ್ರೂಯಾತ್ ವೈಶ್ಯಸ್ಯ'**ಎಂಬ ವಚನವಿದೆ.**'ಪಂಚದಶ ಸಾಮಿಧೇನೀ ರನುಬ್ರೂಯಾತ್'**ಎಂಬ ಸಾಮಾನ್ಯವಚನವಿದೆ.ಇಲ್ಲಿಯೂ ಸಹ ಹಿಂದಿನ ವಿಚಾರ ದಂತೆಯೇ ಸಾಪ್ತದಶ್ಯವು ವಿಕೃತಿಯಾಗದಲ್ಲಿಯೇ ಅನ್ವಯಪಡುತ್ತದೆ. ಇದು ಇಲ್ಲಿನ **ಪೂರ್ವಪಕ್ಷ.**

ಪಾಂಚದಶ್ಯವು ನಿಮಿತ್ತಗಳು ಯಾವುದೂ ಇಲ್ಲದ ಕಡೆಗಳಲ್ಲಿ ಚರಿತಾರ್ಥವಾಗುತ್ತದೆ. ನೈಮಿತ್ತಿಕವಾಗಿ ಹೇಳಿರುವ ಸಾಪ್ತದಶ್ಯವು ನಿರವಕಾಶವೆನಿಸಿ ಸಾಮಾನ್ಯವಾಗಿ ಹೇಳಿರುವ ಪಾಂಚದಶ್ಯಕ್ಕಿಂತಲೂ ಪ್ರಬಲವಾಗಿರುತ್ತದೆ. ಹೀಗಾಗಿ ವೈಶ್ಯನಿಗೆ ಹೇಳಿರುವ ಸಾಪ್ತದಶ್ಯವು ಪ್ರಕೃತಿಯಲ್ಲಿಯೇ ನಿವೇಶನಗೊಳ್ಳುವುದು. ಇದರಂತೆಯೇ **'ಚಮಸೇನ ಅಪಃ ಪ್ರಣಯತಿ, ಗೋದೋಹನೇನ ಪಶುಕಾಮಸ್ಯ' [ಆಪ.ಶ್ರೌ.ಸೂ.1.16.2]** ಎಂಬಲ್ಲಿಯೂ ಪಶುಕಾಮನಾದವನು ಮಾಡುವ ಅಪ್ಪ್ರಣಯನವು ಗೋದೋಹನಪಾತ್ರೆಯಿಂದ ಪ್ರಕೃತಿಯಾಗದಲ್ಲಿಯೇ.

## ಇ) ವೈಮೃಧಗಳು ಅಪೂರ್ವಕರ್ಮಗಳೇ?

ಯಾವ ವಿಶಿಷ್ಟಪ್ರಕರಣವೂ ಇಲ್ಲದೆ **'ಸಪ್ತದಶ ಸಾಮಿಧೇನೀರನುಬ್ರೂಯಾತ್'** ಎಂಬ ವಚನವಿದೆ. ಈ ವಚನವು ಅನಾರಭ್ಯಾಧೀತವಾದುದರಿಂದ **'ಅನಾರಭ್ಯಾಧೀತಾನಾಂ ಪ್ರಕೃತಿ ಗಾಮಿತ್ವಮ್'** ಎಂಬ ವಚನದಂತೆ ಈ ಸಾಮಿಧೇನಿಗಳ ಸಾಪ್ತದಶ್ಯಕ್ಕೆ ಪ್ರಕೃತಿಯಾಗದಲ್ಲಿಯೇ ನಿವೇಶವೆಂದು ತಿಳಿಯುತ್ತದೆ. ಪ್ರಕೃತಿಯಾಗದಲ್ಲಿ **'ಪಂಚದಶ ಸಾಮಿಧೇನೀಃ'** ಎಂದಿರುವುದರಿಂದ ಸಾಪ್ತದಶ್ಯವು ವಿಕೃತಿಗಾಮಿಯಾಗಿದೆಯೆಂದು ತಿಳಿಯುತ್ತದೆ.

ವೈಮೃಧ–ಪಶು–ಮಿತ್ರವಿಂದಾದಿಗಳಲ್ಲಿ **'ಸಪ್ತದಶ ಸಾಮಿಧೇನೀಃ'** ಎಂಬ ವಚನವು ಇದೆ. ಅನಾರಭ್ಯವಾದದಿಂದ ಈ ವಿಕೃತಿಯಾಗಗಳಲ್ಲಿ ಸಾಪ್ತದಶ್ಯವು ಪುನಃ ವಿಧಿಸಲ್ಪಟ್ಟಂತೆ ಆಗಿದೆ. ಗೃಹಮೇಧೀಯೇಷ್ಟಿಯಲ್ಲಿ **'ಆಜ್ಯಭಾಗೌ ಯಜತಿ'** ಎಂಬುದಾಗಿ ಅಂಗಗಳನ್ನು ಶ್ರುತಿಯು ವಿಧಿಸುತ್ತದೆ. ಈ ಗೃಹಮೇಧೀಯೇಷ್ಟಿಯು ಅಪೂರ್ವಕರ್ಮ. **'ಅಪೂರ್ವ ಹೋಮಾಃ ಯಾವದುಕ್ತಧರ್ಮಾಣಃ'** ಎಂಬ ವಚನದಂತೆ ವಿಶೇಷವಾಗಿ ಅಲ್ಲಿ ಹೇಳಿರುವ ಕರ್ಮಗಳನ್ನು ಮಾತ್ರ ಅನುಷ್ಠಿಸಬೇಕು ಎಂದು ಅರ್ಥ. ಈ ಇಷ್ಟಿಯು ದರ್ಶಪೂರ್ಣಮಾಸದ ವಿಕೃತಿಯಲ್ಲ.ಇದನ್ನೇ ಶ್ರುತಿಯು ಗೃಹಮೇಧೀಯಪ್ರಕರಣದಲ್ಲಿ **'ನ ಸಾಮಿಧೇನೀ ರನ್ವಾಹ'** ಮುಂತಾದ ವಚನಗಳಿಂದ ಸ್ಪಷ್ಟಪಡಿಸಿದೆ.

ಪ್ರಕೃತ ವೈಮೃಧೇಷ್ಟಿಯಲ್ಲಿ **'ಸಪ್ತದಶ ಸಾಮಿಧೇನೀಃ'** ಎಂಬ ವಚನವಿರುವುದರಿಂದ ಆಜ್ಯಭಾಗವಚನದಂತೆಯೇ ಆಗಿ ವೈಮೃಧೇಷ್ಟಿಯನ್ನು ಅಪೂರ್ವಕರ್ಮವನ್ನಾಗಿಸುತ್ತವೆ. ಇದು ಇಲ್ಲಿನ **ಪೂರ್ವಪಕ್ಷ.**

ವೈಮೃಧಾದಿಗಳಲ್ಲಿರುವ ವಚನಗಳು ನೇರವಾಗಿ ಸಾಪ್ತದಶ್ಯವನ್ನು ಹೇಳುತ್ತವೆ. ಪ್ರಕೃತಿಯಲ್ಲಿ ಪಾಂಚದಶ್ಯವಿದೆ. ಹೀಗಾಗಿ **'ಅನಾರಭ್ಯಾಧೀತಾನಾಂ ಪ್ರಕೃತೌ ನಿವೇಶಃ'** ಎಂಬ ನ್ಯಾಯವು ಅನ್ವಯಿಸುವುದಿಲ್ಲ. ಪ್ರಾಕರಣಿಕವಿಧಿಗಳು ವೈಮೃಧಾದಿಗಳಲ್ಲಿ ಸಾಪ್ತ ದಶ್ಯವನ್ನು ಹೇಳುತ್ತವೆ. ಹೀಗಾಗಿ ಈ ಸಾಪ್ತದಶ್ಯವಿಧಿಯು ಆಜ್ಯಭಾಗದಂತೆ ಅಲ್ಲ.ಅಂತೆಯೇ ಈ ವೈಮೃಧಾದಿಗಳು ಅಪೂರ್ವಕರ್ಮವಾಗುವುದಿಲ್ಲ ಇದು ಇಲ್ಲಿನ **ಸಿದ್ಧಾಂತ.**

## ಈ) ಕಾಮ್ಯಸಾಮಿಧೇನಿಗಳಲ್ಲಿ ಸಂಖ್ಯಾಸಂಪತ್ತಿಯು ಹೇಗೆ ? [ಜೈ.ಸೂ.10.5.10]

ಕಾಮ್ಯಸಾಮಿಧೇನಿಗಳಲ್ಲಿ ಇಪ್ಪತ್ತೊಂದು ಮೊದಲಾದ ಸಂಖ್ಯಾಸಂಪತ್ತಿಯು ಹೇಗೆ? ಪಠಿತವಾಗಿರುವ ಋಕ್‌ಗಳ ಆವೃತ್ತಿಯಿಂದ ಸಂಖ್ಯೆಯನ್ನು ಸಿದ್ಧಿಸಿಕೊಳ್ಳಬೇಕೆ ? ಅಥವಾ ಬೇರೆ ಕಡೆಯಲ್ಲಿ ಪಠಿತವಾಗಿರುವ ಬೇರೆಯ ಋಕ್‌ಗಳನ್ನು ಸೇರಿಸಿಕೊಂಡು ಇಲ್ಲಿ ಪಠಿಸಬೇಕೆ? ಇದು ಇಲ್ಲಿನ **ಸಂಶಯ.**

**'ತ್ರಿಃ ಪ್ರಥಮಾಮನ್ವಾಹ..'** ಎಂಬ ವಚನದಂತೆ ಮೊದಲನೆಯ ಋಕ್ ಅನ್ನೂ ಕೊನೆಯ ಋಕ್ ಅನ್ನೂ ಅವೃತ್ತಿ ಮಾಡಿ ಪಾಂಚದಶ್ಯವನ್ನು ಪಡೆಯುವಂತೆಯೇ ಇಪ್ಪತ್ತೊಂದು ಮುಂತಾದ ಸಂಖ್ಯೆಯನ್ನು ಪಡೆಯಲು ಅನುಕೂಲವಾಗುವಂತೆ ಮೊದಲನೆಯ ಹಾಗೂ ಅಂತಿಮ ಋಕ್ ಅನ್ನು ಆವೃತ್ತಿಮಾಡುವದು ಯುಕ್ತ. ಇದು ಇಲ್ಲಿನ **ಪೂರ್ವಪಕ್ಷ.**

**'ತ್ರಿಃ ಪ್ರಥಮಾಮನ್ವಾಹ'** ಎಂಬ ವಾಕ್ಯದಿಂದ ಮೂರು ಸಂಖ್ಯೆಯನ್ನು ವಿಧಿಸಿರುವ ತಾತ್ಪರ್ಯವು ಬೇರೆ. ಪಠಿತವಾಗಿರುವ ಋಕ್‌ಗಳಲ್ಲಿ ಮೊದಲನೆಯ ಮತ್ತು ಅಂತಿಮವಾದ ಋಕ್‌ಗಳನ್ನು ಆವೃತ್ತಿ ಮಾಡಿ ಆರು ಸಂಖ್ಯೆಯನ್ನು ಪಡೆಯಬೇಕು ಎಂದಷ್ಟೇ ವಿಧಿಸಿದರೆ, ಮೊದಲನೆಯದನ್ನು ಎರಡು ಬಾರಿ, ಕೊನೆಯದನ್ನು ನಾಲ್ಕು ಬಾರಿ ಪಠಿಸಿ,[2+4=6] ಅಥವಾ ಮೊದಲನೆಯದನ್ನು ನಾಲ್ಕು ಬಾರಿ, ಕೊನೆಯದನ್ನು ಎರಡು ಬಾರಿ ಪಠಿಸಿ [4+2] ಆರು ಸಂಖ್ಯೆಯ ಸಿದ್ಧಿಯನ್ನು ಅನುಷ್ಠಾತೃಗಳು ಮಾಡಿಕೊಂಡಾರು ಎಂದು [3+3] ಸಂಖ್ಯೆಯನ್ನು ಶ್ರುತಿಯು ವಿಧಿಸಿದೆ. ಹೀಗಾಗಿ 21 ಮುಂತಾದ ಸಂಖ್ಯೆಗಳಿಗಾಗಿ ಋಕ್‌ಗಳನ್ನು ಬೇರೆ ಕಡೆಯಿಂದ ಆಗಮ ಮಾಡಿಕೊಂಡು ಪಠಿಸಿ, ಸಂಖ್ಯಾಪೂರ್ತಿಯನ್ನು ಮಾಡಿಕೊಳ್ಳಬೇಕು. ಇದು ಇಲ್ಲಿನ **ಸಿದ್ಧಾಂತ.**



## ॥ ಏಕಾದಶೋಽನುವಾಕಃ ॥

ನಿವೀತಂ ಮನುಷ್ಯಾಣಾಂ ಪ್ರಾಚೀನಾವೀತಂ ಪಿತೃಣಾ-
ಮುಪವೀತಂ ದೇವಾನಾಮುಪವ್ಯಯತೇ

---

ನಿವೀತಮಿತಿ ನಿ-ವೀತಮ್ । ಮನುಷ್ಯಾಣಾಮ್ । ಪ್ರಾಚೀನಾವೀತಮಿತಿ ಪ್ರಾಚೀನ-ಆವೀತಮ್ । ಪಿತೃಣಾಮ್ । ಉಪವೀತಮಿತ್ಯುಪ-ವೀತಮ್ । ದೇವಾನಾಮ್ । ಉಪೇತಿ । ವ್ಯಯತೇ ।

---

ಹಿಂದಿನ ಹತ್ತನೆಯ ಅನುವಾಕದಲ್ಲಿ ಕಾಮ್ಯಸಾಮಿಧೇನಿಗಳೂ, ಸಾಮಿಧೇನಿಗಳಿಗೆ ಸಂಬಂಧಿಸಿದ ಬೇರೆಯ ವಿಷಯಗಳೂ ಉಕ್ತವಾಗಿವೆ. ಈ ಹನ್ನೊಂದನೆಯ ಅನುವಾಕದಲ್ಲಿ ಹೋತೃವಿಗೆ ಸಂಬಂಧಿಸಿದ ಕೆಲವು ವಿಷಯಗಳೂ, ಉಳಿದ ಋತ್ವಿಜರಿಗೆ ಸಂಬಂಧಿಸಿದ ನಿಯಮವೂ, ಆಹಾರವಿಷಯವೂ ಹೇಳಲ್ಪಡುತ್ತವೆ.

### ಉಪವೀತವಿಧಿ; ಅದರ ಪ್ರಶಂಸೆ

| | |
|---|---|
| ಮನುಷ್ಯಾಣಾಮ್ ನಿವೀತಮ್ | ಮನುಷ್ಯರಿಗೆ ನಿವೀತವು [ಉಪವೀತವನ್ನು ಮಾಲೆಯನ್ನಾಗಿ ಹಾಕಿಕೊಳ್ಳುವುದು] ಪ್ರಶಸ್ತವಾಗಿದೆ. |
| ಪಿತೃಣಾಮ್ ಪ್ರಾಚೀನಾವೀತಮ್ | ಪಿತೃಗಳಿಗೆ ಪ್ರಾಚೀನಾವೀತವು [ಉಪವೀತವನ್ನು ಎಡಕ್ಕೆ ಹಾಕಿಕೊಳ್ಳುವುದು] ಪ್ರಶಸ್ತವಾದುದು. |
| ದೇವಾನಾಮ್ ಉಪವೀತಮ್ | ದೇವತೆಗಳಿಗೆ ಉಪವೀತವು [ಯಜ್ಞೋಪವೀತವನ್ನು ಬಲಕ್ಕೆ ಹಾಕಿಕೊಳ್ಳುವುದು] ಶ್ರೇಷ್ಠ ವಾಗಿದೆ. |
| ಉಪವ್ಯಯತೇ | [ಹೋತೃವೂ,ಮಿಕ್ಕ ಋತ್ವಿಜರೂ] ಉಪವೀತವಾಗಿ ಯಜ್ಞೋಪವೀತವನ್ನೂ ವಸ್ತ್ರವನ್ನೂ ಹಾಕಿಕೊಳ್ಳಬೇಕು. |

ದೇವಲಕ್ಷ್ಮಮೇವ ತತ್ಕುರುತೇ ತಿಷ್ಠನ್ನನ್ವಾಹ ತಿಷ್ಠನ್ಹ್ಯಾಶ್ರುತತರಂ ವದತಿ ತಿಷ್ಠನ್ನನ್ವಾಹ ಸುವರ್ಗಸ್ಯ ಲೋಕಸ್ಯಾಭಿಜಿತ್ಯಾ

---

ದೇವಲಕ್ಷ್ಮಮಿತಿ ದೇವ-ಲಕ್ಷ್ಮಮ್ । ಏವ । ತತ್ । ಕುರುತೇ । ತಿಷ್ಠನ್ । ಅನ್ವಿತಿ। ಆಹ । ತಿಷ್ಠನ್ । ಹಿ । ಆಶ್ರುತತರಮಿತ್ಯಾಶ್ರುತ-ತರಮ್ । ವದತಿ । ತಿಷ್ಠನ್ ।ಅನ್ವಿತಿ। ಆಹ । ಸುವರ್ಗಸ್ಯೇತಿ ಸುವಃ-ಗಸ್ಯ । ಲೋಕಸ್ಯ । ಅಭಿಜಿತ್ಯಾ ಇತ್ಯಭಿ-ಜಿತ್ಯೈ ।

---

| | |
|---|---|
| ತತ್ ದೇವಲಕ್ಷ್ಮಮ್ ಏವ ಕುರುತೇ | ಹೀಗೆ ಉಪವೀತವನ್ನು ಹಾಕಿಕೊಳ್ಳುವುದು ದೇವತೆಗಳ ಚಿಹ್ನೆಯನ್ನು [ಲಕ್ಷಣವನ್ನು] ಉಂಟು ಮಾಡುತ್ತದೆ. |

**ಸಾಮಿಧೇನಿಗಳು-ಯಾಜ್ಯೆಗಳು ಇವುಗಳನ್ನು ಹೋತೃವು ಹೇಳಬೇಕಾದ ರೀತಿ; ಪ್ರಶಂಸೆ**

| | |
|---|---|
| ತಿಷ್ಠನ್ ಅನ್ವಾಹ | ಹೋತೃವು ನಿಂತುಕೊಂಡು ಸಾಮಿಧೇನಿಗಳ ಅನುವಚನವನ್ನು ಮಾಡಬೇಕು. |
| ತಿಷ್ಠನ್ ಹಿ ಆಶ್ರುತತರಮ್ ವದತಿ | ನಿಂತುಕೊಂಡು ಹೇಳುವವನು ಕೇಳುವವರಿಗೆ ಚೆನ್ನಾಗಿ ಕೇಳುವಂತೆ ಹೇಳುತ್ತಾನೆ. [ಆದುದರಿಂದ ನಿಂತುಕೊಂಡು ಹೇಳಬೇಕು.] |
| ತಿಷ್ಠನ್ ಅನ್ವಾಹ ಸುವರ್ಗಸ್ಯ ಲೋಕಸ್ಯ ಅಭಿಜಿತ್ಯೈ | ನಿಂತುಕೊಂಡು ಹೇಳುವುದು ಸ್ವರ್ಗಪ್ರಾಪ್ತಿಗೆ ಕಾರಣವಾಗುತ್ತದೆ. |

---

ಮನುಷ್ಯರಿಗೆ ಸಂಬಂಧಿಸಿದ ಋಷಿತರ್ಪಣಾದಿಕರ್ಮಗಳಿಗೆ ನಿವೀತವನ್ನು ಹಾಕಿಕೊಳ್ಳುವುದು ಪ್ರಶಸ್ತ. ಪಿತೃಕಾರ್ಯಗಳಿಗೆ ಪ್ರಾಚೀನಾವೀತವೂ, ದೇವಕಾರ್ಯಗಳಿಗಾಗಿ ಉಪವೀತವೂ ಪ್ರಶಸ್ತ.

ಆಸೀನೋ ಯಜತ್ಯಸ್ಮಿನ್ನೇವ ಲೋಕೇ ಪ್ರತಿತಿಷ್ಠತಿ ಯತ್ಕ್ರೌಂಚ

ಮನ್ವಾಹಾಽಸುರಂ ತದ್ಯನ್ಮಂದ್ರಂ ಮಾನುಷಂ

---

ಆಸೀನಃ । ಯಜತಿ । ಅಸ್ಮಿನ್ನ್ । ಏವ । ಲೋಕೇ । ಪ್ರತೀತಿ । ತಿಷ್ಠತಿ । ಯತ್ ।

ಕ್ರೌಂಚಮ್ । ಅನ್ವಾಹೇತ್ಯನು-ಆಹ । ಆಸುರಮ್ । ತತ್ । ಯತ್ । ಮಂದ್ರಮ್ ।

ಮಾನುಷಮ್ ।

---

**ಯಾಜ್ಯಾನುವಚನದಲ್ಲಿ ಕುಳಿತಿರಬೇಕೆಂಬ ವಿಧಿ; ಪ್ರಶಂಸೆ**

| | |
|---|---|
| ಆಸೀನಃ ಯಜತಿ | ಹೋತೃವು ಯಾಜ್ಯೆಯನ್ನು ಕುಳಿತುಕೊಂಡು ಹೇಳಬೇಕು. |
| ಅಸ್ಮಿನ್ ಲೋಕೇ ಏವ ಪ್ರತಿ ತಿಷ್ಠತಿ | ಇದರಿಂದ ಈ ಭೂಲೋಕದಲ್ಲಿ ಸ್ಥಿರನಾಗಿ ಕುಳಿತುಕೊಂಡಿರುವಂತೆ ಆಗುತ್ತದೆ. |

**ಮಧ್ಯಮಸ್ವರವಿಧಿ; ಪ್ರಶಂಸೆ**

| | |
|---|---|
| ಯತ್ ಕ್ರೌಂಚಮ್ ಅನ್ವಾಹ ಆಸುರಮ್ ತತ್ | ಕ್ರೌಂಚಪಕ್ಷಿಯ ಕೂಗಿನಂತೆ ಅತ್ಯುಚ್ಚಧ್ವನಿಯಲ್ಲಿ ಹೇಳುವಿಕೆಯು ರಾಕ್ಷಸಸಂಬಂಧಿಯಾಗುತ್ತದೆ. |
| ಯತ್ ಮಂದ್ರಮ್ ತತ್ ಮಾನುಷಮ್ | ಮೆಲುದನಿಯಲ್ಲಿ ಹೇಳುವುದು ಯಾವುದುಂಟೋ ಅದು ಮನುಷ್ಯಸಂಬಂಧಿಯಾಗುತ್ತದೆ. |

---

ಇಲ್ಲಿ ಉಪವೀತವಿಧಿಯು ಮುಖ್ಯವಾದುದು. ಉಳಿದ ಭಾಗವು ಪ್ರಶಂಸಾರ್ಥವಾದ ಅರ್ಥವಾದ.

ಈ ಬ್ರಾಹ್ಮಣಭಾಗದಲ್ಲಿ **'ಉಪವ್ಯಯತೇ'** ಎಂದು ಏಕವಚನದಲ್ಲಿ ಪಾಠವಿರುವುದರಿಂದ ಈ ವಿಧಿಯು ಹೋತೃವಿಗೆ ಮಾತ್ರ ಅನ್ವಯಿಸುತ್ತದೆ. ಇತರ ಋತ್ವಿಜರಿಗೆ ಸಾಮಾನ್ಯನಿಯಮದಂತೆ ಉಪವೀತವಿಧಿಯಿರುತ್ತದೆ. [ಭ.ಭಾ.ಭಾ]

ತದ್ಯದಂತರಾ ತತ್ಸದೇವಮಂತರಾಽನೂಚ್ಯಗ್ಂ ಸದೇವತ್ವಾಯ ವಿದ್ವಾಗ್ಂಸೋ ವೈ [(೧)]ಪುರಾ ಹೋತಾರೋಽಭೂವನ್ತ-ಸ್ಮಾದ್ವಿಧೃತಾ ಅಧ್ವಾನೋಽಭೂವನ್ನ

---

ತತ್ । ಯತ್ । ಅಂತರಾ । ತತ್ । ಸದೇವಮಿತಿ ಸ-ದೇವಮ್ । ಅಂತರಾ । ಅನೂಚ್ಯಮಿತ್ಯನು-ಉಚ್ಯಮ್ । ಸದೇವತ್ವಾಯೇತಿ ಸದೇವ-ತ್ವಾಯ । ವಿದ್ವಾಗ್ಂಸಃ । ವೈ । [(೧)] । ಪುರಾ । ಹೋತಾರಃ । ಅಭೂವನ್ನ್ । ತಸ್ಮಾತ್ । ವಿಧೃತಾ ಇತಿ ವಿ- ಧೃತಾಃ। ಅಧ್ವಾನಃ । ಅಭೂವನ್ನ್ । ನ ।

---

| | |
|---|---|
| ಯತ್ ಅಂತರಾ ತತ್ ಸದೇವಮ್ | ಈ ಎರಡರ ಮಧ್ಯದ ಧ್ವನಿಯಲ್ಲಿ ಹೇಳುವುದು ದೇವಸಂಬಂಧಿಯಾಗುತ್ತದೆ. |
| ಅಂತರಾ ಅನೂಚ್ಯಮ್ ಸದೇವತ್ವಾಯ | ದೇವಸಂಬಂಧಿಯಾಗುವುದಕ್ಕಾಗಿ ಮಧ್ಯಮ ಧ್ವನಿಯಲ್ಲಿ ಸಾಮಿಧೇನಿಗಳ ಅನುವಚನವನ್ನು ಮಾಡಬೇಕು. |

**ನಿಂತುಕೊಳ್ಳುವ ರೀತಿಯ ವಿಧಿ; ಪ್ರಶಂಸೆ**

| | |
|---|---|
| ಪುರಾ ವಿದ್ವಾಗ್ಂಸಃ ವೈ ಹೋತಾರಃ ಅಭೂವನ್ | ಹಿಂದೆ ಜ್ಞಾನಿಗಳಾದ ಬ್ರಾಹ್ಮಣರು ಹೋತೃಗಳಾಗಿದ್ದರು. |
| ತಸ್ಮಾತ್ ವಿಧೃತಾಃ ಅಧ್ವಾನಃ ಅಭೂವನ್ | ಆದುದರಿಂದ ಮಾರ್ಗಗಳು ಸ್ಪಷ್ಟವಾಗಿ ತಿಳಿಯಲ್ಪಟ್ಟವುಗಳಾಗಿದ್ದವು. |

---

ಹೋತೃವು ನಿಂತುಕೊಂಡು ಸಾಮಿಧೇನಿಗಳ ಅನುವಚನವನ್ನು ಮಾಡಬೇಕು. ನಿಂತುಕೊಂಡು ಹೇಳುವುದರಿಂದ ಎಲ್ಲರಿಗೂ ಚೆನ್ನಾಗಿ ಕೇಳುತ್ತದೆಯಷ್ಟೆ.

ನಿಂತವನಿಗೆ ಊರ್ಧ್ವಲೋಕವು ಸಮೀಪವಾಗುವುದರಿಂದ ನಿಂತುಕೊಂಡು ಅನುವಚನವನ್ನು ಮಾಡಿದರೆ ದೇವತೆಗಳು ಪ್ರಸನ್ನರಾಗುವರು. ಇದು ಬೇಗನೇ ಸ್ವರ್ಗಪ್ರಾಪ್ತಿಗೆ ಕಾರಣವಾಗುತ್ತದೆ.

ಪಂಥಾನಸ್ಸಮರುಕ್ಷನ್ನಂತರ್ವೇದ್ಯನ್ಯಃ ಪಾದೋ ಭವತಿ ಬಹಿ-
ರ್ವೇದ್ಯನ್ಯೋಽಥಾನ್ವಾಹಾಧ್ವನಾಂ ವಿಧೃತ್ಯೈ ॥

---

ಪಂಥಾನಃ । ಸಮಿತಿ । ಅರುಕ್ಷನ್ನ್ । ಅಂತರ್ವೇದೀತ್ಯಂತಃ-ವೇದಿ । ಅನ್ಯಃ । ಪಾದಃ ।
ಭವತಿ । ಬಹಿರ್ವೇದೀತಿ ಬಹಿಃ-ವೇದಿ । ಅನ್ಯಃ । ಅಥ । ಅನ್ವಿತಿ । ಆಹ । ಅಧ್ವನಾಮ್ ।
ವಿಧೃತ್ಯಾ ಇತಿ ವಿ-ಧೃತ್ಯೈ ॥ ।

---

| | |
|---|---|
| ಪಂಥಾನಃ ನ ಸಮರುಕ್ಷನ್ನ್ | ಮಾರ್ಗಗಳು ಸಂಕೀರ್ಣವಾಗಿ ಭ್ರಾಂತಿಗೆ ಕಾರಣವಾಗಲಿಲ್ಲ. |
| ಅನ್ಯಃ ಪಾದಃ ಅಂತರ್ವೇದಿ ಭವತಿ | ವೇದಿಯ ಒಳಗಡೆ ಎಡಗಾಲು ಇರಬೇಕು. |
| ಅನ್ಯಃ ಬಹಿರ್ವೇದಿ [ಭವತಿ] | ವೇದಿಯ ಹೊರಭಾಗದಲ್ಲಿ ಬಲಗಾಲು ಇರಬೇಕು. |
| ಅಥ ಅನು ಆಹ | ಹೀಗೆ ನಿಂತುಕೊಂಡು ಹೋತೃವು ಸಾಮಿಧೇನಿಗಳನ್ನು ಹೇಳಬೇಕು. |
| ಅಧ್ವನಾಮ್ ವಿಧೃತ್ಯೈ | ಆಗ ಮಾರ್ಗಗಳ ಸ್ಪಷ್ಟಜ್ಞಾನವು ಉಂಟಾಗಿ ಮಾರ್ಗಗಳ ಮಿಶ್ರಣವಾಗುವುದಿಲ್ಲ. |

---

ಇದು ನಿಂತುಕೊಂಡು ಅನುವಚನವನ್ನು ಮಾಡಬೇಕೆಂಬ ವಿಧಿಯ ಪ್ರಶಂಸೆ. ಹೋತೃವು ಯಾಜ್ಯಾನುವಾಕ್ಯೆಗಳನ್ನು ಕುಳಿತುಕೊಂಡು ಪಠಿಸಬೇಕು. ನಿಂತವನಿಗಿಂತಲೂ ಕುಳಿತಿರುವವನು ಸ್ಥಿರನಷ್ಟೆ. ಅಂತೆಯೇ ಕುಳಿತು ಹೇಳುವುದರಿಂದ ಈ ಭೂಲೋಕದಲ್ಲಿ ಸ್ಥಿರವಾಗಿ ಕುಳಿತಿರುವಂತೆ ಆಗುತ್ತದೆ.

ಸಾಮಿಧೇನಿಗಳ ಅನವಚನವನ್ನು ಮಧ್ಯಮಸ್ವರದಲ್ಲಿ ಹೇಳಬೇಕು. ಅತ್ಯುಚ್ಚ ಧ್ವನಿಯಲ್ಲಿ ಹೇಳಿದರೆ ಕ್ರೌಂಚಪಕ್ಷಿಯ ಕೂಗಿನಂತಾಗಿ ರಾಕ್ಷಸಸಂಬಂಧಿಯಾಗುತ್ತದೆ. ಮೆಲುದನಿಯಲ್ಲಿ ಹೇಳಿದರೆ ಅದು ಮನುಷ್ಯಸಂಬಂಧಿಯಾಗುತ್ತದೆ. ದೇವಸಂಬಂಧಿಯಾಗುವುದಕ್ಕಾಗಿ ಸಾಮಿಧೇನಿಗಳನ್ನು ಮಧ್ಯಮಧ್ವನಿಯಲ್ಲಿ ಹೇಳಬೇಕು.

ಪಥಾಮಸಗ್ಂರೋಹಾಯಾಥೋ ಭೂತಂ ಚೈವ
ಭವಿಷ್ಯಚ್ಚಾವರುಂಧೇಽಥೋ ಪರಿಮಿತಂ ಚೈವಾಽಪರಿಮಿತಂ
ಚಾಽವರುಂಧೇಽಥೋ

---

ಪಥಾಮ್ । ಅಸಗ್ಂರೋಹಾಯೇತ್ಯಸಂ-ರೋಹಾಯ । ಅಥೋ ಇತಿ । ಭೂತಮ್। ಚ । ಏವ । ಭವಿಷ್ಯತ್ । ಚ । ಅವೇತಿ । ರುಂಧೇ । ಅಥೋ ಇತಿ । ಪರಿಮಿತಮಿತಿ ಪರಿ-ಮಿತಮ್ । ಚ । ಏವ । ಅಪರಿಮಿತಮಿತ್ಯಪರಿ-ಮಿತಮ್ । ಚ । ಅವೇತಿ । ರುಂಧೇ । ಅಥೋ ಇತಿ ।

---

| | |
|---|---|
| ಪಥಾಮ್ ಅಸಗ್ಂರೋಹಾಯ | ಮಾರ್ಗಗಳ ವಿಷಯದಲ್ಲಿ ಭ್ರಾಂತಿಯಾಗದಿರುವುದಕ್ಕೂ ಇದು ನಿಮಿತ್ತವಾಗುತ್ತದೆ. |

**ಪಾದಪ್ರಕ್ಷೇಪದ ಪ್ರಶಂಸೆಯ ಅರ್ಥವಾದ**

| | |
|---|---|
| ಅಥೋ ಭೂತಮ್ ಚ ಭವಿಷ್ಯತ್ ಚ ಏವ ಅವರುಂಧೇ | ಮತ್ತು [ಒಳಗಿನ ಪಾದಪ್ರಕ್ಷೇಪದಿಂದ] ಸಂಭವಿಸಿರುವ ಇಷ್ಟಪ್ರಾಪ್ತಿಯನ್ನೂ, [ಹೊರಗಡೆ ಪಾದವನ್ನು ಇಡುವುದರಿಂದ] ಸಂಭವಿಸುವ ಇಷ್ಟಲಾಭವನ್ನೂ ಹೊಂದಿದಂತಾಗುತ್ತದೆ. |
| ಅಥೋ ಪರಿಮಿತಮ್ ಚ ಅಪರಿಮಿತಮ್ ಚ ಏವ ಅವರುಂಧೇ | [ಮತ್ತು ವೇದಿಯ ಒಳಗಡೆ ಪಾದಪ್ರಕ್ಷೇಪದಿಂದ] ಪರಿಮಿತಫಲಪ್ರಾಪ್ತಿಯನ್ನೂ, [ಹೊರಗಡೆ ಪಾದಪ್ರಕ್ಷೇಪದಿಂದ] ಅಪರಿಮಿತಫಲಪ್ರಾಪ್ತಿಯನ್ನೂ ಹೊದಿದಂತಾಗುತ್ತದೆ. |

---

ಅಜ್ಞನಾದ ಹೋತೃವು ಎರಡು ಕಾಲುಗಳನ್ನೂ ವೇದಿಯ ಒಳಗಡೆ ಇಟ್ಟು ಸಾಮಿಧೇನಿಗಳ ಅನುವಚನವನ್ನು ಮಾಡಿದರೆ ಮಾರ್ಗಗಳು ಮಿಶ್ರಗೊಂಡಂತೆ ಆಗುತ್ತದೆ.ಹೊರಗಡೆಯೇ

ಗ್ರಾಮ್ಯಾಗ್‍ಂಶ್ಚೈವ ಪಶೂನಾರಣ್ಯಾಗ್‍ಂಶ್ಚಾವರುಂಧೇಽಥೋ

[..ಧೇಽಥೋ(೨)ದೇವಲೋಕಂ] ದೇವಲೋಕಂ ಚೈವ

ಮನುಷ್ಯಲೋಕಂ ಚಾಭಿ ಜಯತಿ

---

ಗ್ರಾಮ್ಯಾನ್ । ಚ । ಏವ । ಪಶೂನ್ । ಆರಣ್ಯಾನ್ । ಚ । ಅವೇತಿ । ರುಂಧೇ । ಅಥೋ ಇತಿ । [(೨)] । ದೇವಲೋಕಮಿತಿ ದೇವ–ಲೋಕಮ್ । ಚ । ಏವ । ಮನುಷ್ಯಲೋಕಮಿತಿ ಮನುಷ್ಯ–ಲೋಕಮ್ । ಚ । ಅಭೀತಿ । ಜಯತಿ ।

---

ಅಥೋ ಗ್ರಾಮ್ಯಾನ್ ಚ
ಪಶೂನ್ ಆರಣ್ಯಾನ್ ಚ
ಅವರುಂಧೇ ಏವ
ಅಥೋ ದೇವಲೋಕಮ್ ಚ
ಮನುಷ್ಯಲೋಕಮ್ ಚ ಏವ
ಅಭಿಜಯತಿ

ವೇದಿಯ ಅಂತರ್ನಿವೇಶದಿಂದ ಏಳು *ಗ್ರಾಮ್ಯ ಪಶುಗಳನ್ನೂ ಬಹಿಃಪ್ರಕ್ಷೇಪದಿಂದ ಏಳು *ಆರಣ್ಯಪಶುಗಳನ್ನೂ ಪಡೆದಂತಾಗುತ್ತದೆ. ಮತ್ತು ವೇದಿಯ ಅಂತಃಪ್ರಕ್ಷೇಪದಿಂದ ದೇವ ಲೋಕವನ್ನೂ ಬಹಿಃಪ್ರಕ್ಷೇಪದಿಂದ ಮನುಷ್ಯ ಲೋಕವನ್ನೂ ಜಯಿಸಿದವನಾಗುತ್ತಾನೆ.

---

ಇಟ್ಟಿದ್ದರೆ ಮಾರ್ಗಗಳ ವಿಷಯದಲ್ಲಿ ಭ್ರಾಂತಿಯುಂಟಾಗುತ್ತದೆ. ಆದುದರಿಂದ ಹಿಂದಿನ ವಿದ್ವಾಂಸರಾದ ಹೋತೃಗಳಂತೆ ಎಡಗಾಲನ್ನು ವೇದಿಯ ಒಳಗಿಟ್ಟು, ಬಲಗಾಲನ್ನು ಹೊರಗಡೆ ಇಟ್ಟು ಅನುವಚನವನ್ನು ಮಾಡುವುದರಿಂದ ಯಾವ ದೋಷವೂ ಉಂಟಾಗುವುದಿಲ್ಲ. ಮುಂದೆ ಹೇಳುವ ಫಲಗಳೂ ಲಭಿಸುತ್ತವೆ.

ವೇದಿಯ ಒಳಗಡೆ ಒಂದು ಪಾದವನ್ನೂ, ಹೊರಗಡೆ ಒಂದು ಪಾದವನ್ನೂ ಇಟ್ಟು ಸಾಮಿಧೇನ್ಯನುವಚನವನ್ನು ಮಾಡಿದರೆ ಉಂಟಾದ ಮತ್ತು ಉಂಟಾಗಲಿರುವ ಫಲವನ್ನೂ, ಪರಿಮಿತ ಹಾಗೂ ಅಪರಿಮಿತಫಲವನ್ನೂ, ದೇವಲೋಕ ಮತ್ತು ಮನುಷ್ಯಲೋಕವನ್ನೂ ಜಯಿಸುವನು.

---

***ಗೋವು, ಅಶ್ವ, ಆಡು,ಕುರಿ, ಪುರುಷ, ಕತ್ತೆ, ಮತ್ತು ಒಂಟೆ** ಇವು ಗ್ರಾಮ್ಯಪಶುಗಳು.

***ದ್ವಿಖುರ, ಹಿಂಸ್ರ, ಪಕ್ಷಿ, ಸರೀಸೃಪ, ಆನೆ, ಕೋತಿ,** ಮತ್ತು **ನಾದೇಯ** ಇವು ಆರಣ್ಯಪಶುಗಳು.

ದೇವಾ ವೈ ಸಾಮಿಧೇನೀರನೂಚ್ಯ ಯಜ್ಞಂ ನಾನ್ವಪಶ್ಯನ್ಥ್ಸ

ಪ್ರಜಾಪತಿಸ್ತೂಷ್ಣೀಮಾಘಾರಮಾಘಾರಯತ್ತತೋ ವೈ

ದೇವಾ ಯಜ್ಞಮನ್ವಪಶ್ಯನ್,

---

ದೇವಾಃ । ವೈ । ಸಾಮಿಧೇನೀರಿತಿ ಸಾಂ-ಇಧೇನೀಃ । ಅನೂಚ್ಯೇತ್ಯನು-ಉಚ್ಯ । ಯಜ್ಞಮ್। ನ । ಅನ್ವಿತಿ । ಅಪಶ್ಯನ್ನ್ । ಸಃ । ಪ್ರಜಾಪತಿರಿತಿ ಪ್ರಜಾ-ಪತಿಃ । ತೂಷ್ಣೀಮ್ । ಆಘಾರಮಿತ್ಯಾ-ಘಾರಮ್ । ಏತಿ । ಅಘಾರಯತ್ । ತತಃ । ವೈ । ದೇವಾಃ । ಯಜ್ಞಮ್ । ಅನ್ವಿತಿ । ಅಪಶ್ಯನ್ನ್ ।

---

## ಪ್ರಥಮಾಘಾರವಿಧಿ; ಅರ್ಥವಾದ

| | |
|---|---|
| ದೇವಾಃ ವೈ ಸಾಮಿಧೇನೀಃ ಅನೂಚ್ಯ ಯಜ್ಞಮ್ ನ ಅನ್ವಪಶ್ಯನ್ | ದೇವತೆಗಳು ಸಾಮಿಧೇನಿಗಳ ಅನುವಚನದಲ್ಲಿ ಮಗ್ನರಾಗಿ ಮುಂದಿನ ಯಜ್ಞಭಾಗಗಳನ್ನು ನೆನಪಿಗೆ ತಂದುಕೊಳ್ಳಲಿಲ್ಲ. |
| ಸಃ ಪ್ರಜಾಪತಿಃ ತೂಷ್ಣಿಮ್ ಆಘಾರಮ್ ಆಘಾರಯತ್ | ಆಗ ಪ್ರಜಾಪತಿದೇವನು ಮಂತ್ರವಿಲ್ಲದೆಯೇ ಮಾನಸಿಕವಾಗಿಯೇ ಆಘಾರಹೋಮವನ್ನು ಮಾಡಿದನು. |
| ತತಃ ವೈ ದೇವಾಃ ಯಜ್ಞಮ್ ಅನ್ವಪಶ್ಯನ್ | ಬಳಿಕ ದೇವತೆಗಳು ಮುಂದೆ ಮಾಡಬೇಕಾದ ಯಜ್ಞಪ್ರಯೋಗವನ್ನು ಮನಸ್ಸಿಗೆ ತಂದುಕೊಂಡರು. |

---

ಇದು ಪಾದಪ್ರಕ್ಷೇಪದ ಪ್ರಶಂಸಾರ್ಥವಾದ. ಇಲ್ಲಿ ಹೋತಾ ಅವರುಂಧೇ= ಹೋತೃವು ಪಡೆಯುವನು ಎಂದು ಇದ್ದರೂ ಋತ್ವಿಜರ ಕಾರ್ಯಫಲವೆಲ್ಲವೂ ಯಜಮಾನಗಾಮಿಯೆಂದೇ ತಿಳಿಯಬೇಕು.

ಈ ಉಪಾಖ್ಯಾನವು ಆಘಾರಹೋಮದ ಪ್ರಶಂಸೆಯಾಗಿದೆ.

ಯತ್ತೂಷ್ಣೀಮಾಘಾರಮಾಘಾರಯತಿ ಯಜ್ಞಸ್ಯಾನುಖ್ಯಾತ್ಯಾ ಅಥೋ ಸಾಮಿಧೇನೀರೇವಾಭ್ಯನಕ್ತ್ಯಲೂಕ್ಷೋ ಭವತಿ ಯ ಏವಂ ವೇದಾಥೋ ತರ್ಪಯತ್ಯೇವೈನಾಸ್ತೃಪ್ಯತಿ

---

ಯತ್ । ತೂಷ್ಣೀಮ್ । ಆಘಾರಮಿತ್ಯಾ-ಘಾರಮ್ । ಆಘಾರಯತೀತ್ಯಾ-ಘಾರಯತಿ। ಯಜ್ಞಸ್ಯ । ಅನುಖ್ಯಾತ್ಯಾ ಇತ್ಯನು-ಖ್ಯಾತ್ಯೈ । ಅಥೋ ಇತಿ । ಸಾಮಿಧೇನೀರಿತಿ ಸಾಂ-ಇಧೇನೀಃ । ಏವ । ಅಭೀತಿ । ಅನಕ್ತಿ । ಅಲೂಕ್ಷಃ । ಭವತಿ । ಯಃ । ಏವಮ್। ವೇದ । ಅಥೋ ಇತಿ । ತರ್ಪಯತಿ । ಏವ । ಏನಾಃ । ತೃಪ್ಯತಿ ।

---

| | |
|---|---|
| ಯತ್ ತೂಷ್ಣೀಮ್ ಆಘಾರಮ್ ಆಘಾರಯತಿ | ಹೀಗೆ ಮಂತ್ರರಹಿತವಾಗಿ ಪ್ರಥಮಾಘಾರ ಹೋಮವನ್ನು ಮಾಡುವುದು ಯಾವುದುಂಟೋ [ಅದು] |
| ಯಜ್ಞಸ್ಯ ಅನುಖ್ಯಾತ್ಯೈ | ಯಜ್ಞದ ಪ್ರಯೋಗದ ನೆನಪಿಗೆ ಕಾರಣ ವಾಗುತ್ತದೆ. |
| ಅಥೋ ಸಾಮಿಧೇನೀಃ ಏವ ಅಭ್ಯನಕ್ತಿ | ಮತ್ತು ಸಾಮಿಧೇನೀಸಮಿತ್ತುಗಳೆಲ್ಲವನ್ನೂ ತುಪ್ಪದಿಂದ ತೋಯಿಸಿದಂತೆಯೂ ಆಗುತ್ತದೆ. |
| ಯಃ ಏವಮ್ ವೇದ ಅಲೂಕ್ಷಃ ಭವತಿ | ಹೀಗೆ ತಿಳಿದ ವಿದ್ವಾಂಸನು ಕಾಠಿನ್ಯರಹಿತ ನಾಗಿಯೂ ಸ್ನೇಹಯುಕ್ತನಾಗಿಯೂ ಆಗುತ್ತಾನೆ. |
| ಅಥೋ ಏನಾಃ ತರ್ಪಯತಿ ಏವ | ಮತ್ತು ಈ ಆಘಾರಹೋಮದಿಂದ ಸಾಮಿಧೇನೀ ಸಮಿತ್ತುಗಳನ್ನೂ ದೇವತೆಗಳನ್ನೂ ತೃಪ್ತಿಪಡಿಸಿ ದಂತಾಗುತ್ತದೆ. |

---

ಫಲಪ್ರಾಪ್ತಿಯ ಜ್ಞಾನವು ಆಸಕ್ತಿಯನ್ನು ಉಂಟುಮಾಡುವುದಕ್ಕಾಗಿದೆ. ಇದಕ್ಕೆ ಸಂಬಂಧಿಸಿದಂತೆ **'ರೋಚನಾರ್ಥಾ ಫಲಶ್ರುತಿಃ'**ಎಂಬ ವಚನವಿದೆ.

ಪ್ರಜಯಾ ಪಶುಭಿರ್ಯ ಏವಂ ವೇದ ಯದೇಕಯಾಽಽಘಾರಯೇ

ದೇಕಾಂ ಪ್ರೀಣೀಯಾದ್ಯದ್ವಾಭ್ಯಾಂ ದ್ವೇ ಪ್ರೀಣೀಯಾದ್ಯ

ತ್ತಿಸೃಭಿರತಿ ತದ್ರೇಚಯೇನ್ಮನಸಾಽಽಘಾರಯತಿ

---

ಪ್ರಜಯೇತಿ ಪ್ರ-ಜಯಾ । ಪಶುಭಿರಿತಿ ಪಶು-ಭಿಃ । [(೩)] । ಯಃ । ಏವಮ್ । ವೇದ ।

ಯತ್ । ಏಕಯಾ । ಆಘಾರಯೇದಿತ್ಯಾ-ಘಾರಯೇತ್ । ಏಕಾಮ್ । ಪ್ರೀಣೀಯಾತ್ ।

ಯತ್ । ದ್ವಾಭ್ಯಾಮ್ । ದ್ವೇ ಇತಿ । ಪ್ರೀಣೀಯಾತ್ । ಯತ್ । ತಿಸೃಭಿರಿತಿ ತಿಸೃ-ಭಿಃ ।

ಅತೀತಿ । ತತ್ । ರೇಚಯೇತ್ । ಮನಸಾ । ಏತಿ । ಘಾರಯತಿ ।

---

| | |
|---|---|
| ಯಃ ಏವಮ್ ವೇದ ಪ್ರಜಯಾ ಪಶುಭಿಃ ತೃಪ್ಯತಿ | ಹೀಗೆ ತಿಳಿದವನು ಪ್ರಜಾಪಶುಸಂಪತ್ತಿನಿಂದ ತೃಪ್ತಿ ಹೊಂದುವನು. |

**ತೂಷ್ಣೀಮಾಘಾರಹೋಮದ ಪ್ರಶಂಸೆ**

| | |
|---|---|
| ಯತ್ ಏಕಯಾ ಆಘಾರಯೇತ್ ಏಕಾಮ್ ಪ್ರೀಣೀಯಾತ್ | ಒಂದು ಮಂತ್ರದಿಂದ ಆಘಾರಹೋಮವನ್ನು ಮಾಡುವುದು ಯಾವುದುಂಟೋ ಅದರಿಂದ ಒಬ್ಬ ಸಮಿದಭಿಮಾನಿ ದೇವತೆಯನ್ನು ಸಂತೋಷ ಪಡಿಸುವನು. |
| ಯತ್ ದ್ವಾಭ್ಯಾಮ್ **[ಆಘಾರಯೇತ್]** ದ್ವೇ ಪ್ರೀಣೀಯಾತ್ | ಎರಡು ಮಂತ್ರಗಳಿಂದ ಹೋಮ ಮಾಡುವುದರಿಂದ ಇಬ್ಬರು ಸಮಿದಭಿಮಾನಿದೇವತೆಗಳನ್ನು ತೃಪ್ತಿಪಡಿಸಿದಂತಾಗುವುದು. |
| ಯತ್ ತಿಸೃಭಿಃ **[ಆಘಾರಯೇತ್]** ತತ್ ಅತಿ ರೇಚಯೇತ್ | ಮೂರು ಮಂತ್ರಗಳಿಂದ ಹೋಮಮಾಡುವುದರಿಂದ ಒಂದು ಮಂತ್ರದಿಂದ ಒಂದು ಕರ್ಮವೆಂಬ ಸಾಮಾನ್ಯನಿಯಮವನ್ನು ಮೀರಿದವನಾಗುತ್ತಾನೆ. |
| ಮನಸಾ ಆಘಾರಯತಿ | ಮನಸ್ಸಿನಿಂದ ಮಂತ್ರವಿಲ್ಲದೆಯೇ ಆಘಾರ ಹೋಮವನ್ನು ಅನುಷ್ಠಿಸಬೇಕು. |

ಮನಸಾ ಹ್ಯನಾಪ್ತಮಾಪ್ಯತೇ ತಿರ್ಯಂಚಮಾ

ಘಾರಯತ್ಯಛಂಬಟ್ಕಾರಂ ವಾಕ್ಚ ಮನಶ್ಚಾರ್ತೀಯೇತಾಮಹಂ

ದೇವೇಭ್ಯೋ ಹವ್ಯಂ ವಹಾಮೀತಿ ವಾಗಬ್ರವೀ-

---

ಮನಸಾ । ಹಿ । ಅನಾಪ್ತಮ್ । ಆಪ್ಯತೇ । ತಿರ್ಯಂಚಮ್ । ಏತಿ । ಘಾರಯತಿ । ಅಛಂಬಟ್ಕಾರಮಿತ್ಯಛಂಬಟ್-ಕಾರಮ್ । ವಾಕ್ । ಚ । ಮನಃ । ಚ । ಆರ್ತೀಯೆ ತಾಮ್। ಅಹಮ್ । ದೇವೇಭ್ಯಃ । ಹವ್ಯಮ್ । ವಹಾಮಿ । ಇತಿ । ವಾಕ್ । ಅಬ್ರವೀತ್ ।

---

| | |
|---|---|
| ಮನಸಾ ಹಿ ಅನಾಪ್ತಮ್ ಆಪ್ಯತೇ | ಮನೋಬಲದಿಂದ ಬೇರೆಯ ರೀತಿಯಲ್ಲಿ ಹೊಂದಲು ಸಾಧ್ಯವಾಗದೇ ಇರುವುದೂ ಪ್ರಾಪ್ತವಾಗುತ್ತದಯಷ್ಟೆ. |
| ತಿರ್ಯಂಚಮ್ ಆಘಾರಯತಿ | ವಾಯವ್ಯದಿಂದ ಆಗ್ನೇಯದವರೆಗೆ ಎಲ್ಲಾ ಸಮಿತ್ತುಗಳು ಸ್ಪರ್ಶಿಸುವಂತೆ ಆಘಾರಹೋಮವನ್ನು ಮಾಡಬೇಕು. |
| ಅಛಂಬಟ್ಕಾರಮ್ | ಯಾವ ಸಮಿತ್ತೂ ಆಜ್ಯಸ್ಪರ್ಶವನ್ನು ಹೊಂದದೇ ವ್ಯರ್ಥವಾಗದಂತೆ ಇದರಿಂದ ಆಗುತ್ತದೆ. |

**ಮಾನಸಿಕವಾದ ಆಘಾರವಿಧಿ; ಅದರ ಉಪಾಖ್ಯಾನ**

| | |
|---|---|
| ವಾಕ್ ಚ ಮನಃ ಚ ಆರ್ತೀಯೇತಾಮ್ | ವಾಕ್ಕೂ ಮತ್ತು ಮನಸ್ಸೂ ದೇವತೆಗಳಿಗೆ ಹವ್ಯವನ್ನು ಒಯ್ಯುವ ವಿಷಯದಲ್ಲಿ ಆದರಾತಿಶಯವನ್ನು ಹೊಂದಿದ್ದವು. |
| ಅಹಮ್ ದೇವೇಭ್ಯಃ ಹವ್ಯಮ್ ವಹಾಮಿ ಇತಿ ವಾಕ್ ಅಬ್ರವೀತ್ | 'ನಾನು ದೇವತೆಗಳಿಗೆ ಹವಿಸ್ಸನ್ನು ಒಯ್ಯುತ್ತೇನೆ' ಎಂದು ಮಾತು ಹೇಳಿತು. |

ದಹಂ ದೇವೇಭ್ಯ ಇತಿ ಮನಸ್ತೌ ಪ್ರಜಾಪತಿಂ ಪ್ರಶ್ನಮೈತಾಗ್ಂ ಸೋಽಬ್ರವೀ [ವೀತ್(೩)ಪ್ರಜಾ..] ತ್ಪ್ರಜಾಪತಿರ್ದೂತೀರೇವ ತ್ವಂ ಮನಸೋಽಸಿ

---

ಅಹಮ್ । ದೇವೇಭ್ಯಃ । ಇತಿ । ಮನಃ । ತೌ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಪ್ರಶ್ನಮ್ । ಐತಾಮ್ । ಸಃ । ಅಬ್ರವೀತ್। [(೪)] । ಪ್ರಜಾಪತಿರಿತಿ ಪ್ರಜಾ-ಪತಿಃ । ದೂತೀಃ । ಏವ । ತ್ವಮ್ । ಮನಸಃ । ಅಸಿ ।

---

ಅಹವ್ ದೇವೇಭ್ಯಃ **[ಹವ್ಯಂ ವಹಾಮಿ]** ಇತಿ ಮನಃ **[ಅಬ್ರುವೀತ್]**

ಮನಸ್ಸೂ 'ನಾನು ದೇವತೆಗಳಿಗೆ ಹವ್ಯವನ್ನು ಒಯ್ಯುತ್ತೇನೆ' ಎಂದು ಹೇಳಿತು.

ತೌ ಪ್ರಜಾಪತಿಮ್ ಪ್ರಶ್ನಮ್ ಐತಾಮ್

ವಾಕ್-ಮನಸ್ಸುಗಳು ಪ್ರಜಾಪತಿದೇವನ ಬಳಿಗೆ ಹೋಗಿ ನಿರ್ಣಯಕ್ಕಾಗಿ ಪ್ರಶ್ನೆಯನ್ನು ಮುಂದಿಟ್ಟವು.

ಸಃ ಪ್ರಜಾಪತಿಃ ಮನಸಃ ದೂತೀಃ ಏವ ತ್ವಮ್ ಅಸಿ

ಆ ಪ್ರಜಾಪತಿಬ್ರಹ್ಮನು [ವಾಕ್ ಅನ್ನು ಕುರಿತು] ಓ! ವಾಕ್ಕೇ! ನೀನು ಮನಸ್ಸಿನ ದೂತಿಯೇ ಆಗಿರುವೆ.

---

ಮನಸಾ ಮಾಡುವ ಹೋಮವನ್ನು ಮತ್ತೂ ವಿವರಿಸಲಾಗಿದೆ. ತೈತ್ತಿರೀಯಬ್ರಾಹ್ಮಣದಲ್ಲಿಯೂ ಕೂಡ **'ವೇದೇನೋಪಯತ್ಯ....ಸ್ರುವೇಣಾಘಾರಮಾಘಾರಯತಿ'**ಎಂದು ಆಘಾರವಿಧಿಯು ಇದೆ. ಇಲ್ಲಿ ತೂಷ್ಣೀಂಹೋಮಾದಿಗಳಿಗಾಗಿ, ಅವುಗಳ ವಿಶೇಷವಿಧಿಗಾಗಿ ಆಘಾರಹೋಮವನ್ನು ಹೇಳಲಾಗಿದೆ. ಹೀಗಾಗಿ ಪುನರುಕ್ತಿಯಿಲ್ಲ.

ಮಾನಸಿಕವಾಗಿ ಮಾಡುವ ಹೋಮದ ಪ್ರಶಂಸೆಗಾಗಿ ಈ ಆಖ್ಯಾನವಿದೆ.

ಯದ್ಧಿ ಮನಸಾ ಧ್ಯಾಯತಿ ತದ್ವಾಚಾ ವದತೀತಿ ತತ್ಖಲು ತುಭ್ಯಂ ನ ವಾಚಾ ಜುಹವನ್ನಿತ್ಯಬ್ರವೀತ್ತಸ್ಮಾನ್ಮನಸಾ ಪ್ರಜಾಪತಯೇ ಜುಹ್ವತಿ ಮನ ಇವ ಹಿ ಪ್ರಜಾಪತಿಃ ಪ್ರಜಾಪತೇರಾಪ್ತ್ಯೈ ॥೮॥

ಯತ್ । ಹಿ । ಮನಸಾ । ಧ್ಯಾಯತಿ । ತತ್ । ವಾಚಾ । ವದತಿ । ಇತಿ । ತತ್ । ಖಲು । ತುಭ್ಯಮ್ । ನ । ವಾಚಾ । ಜುಹವನ್ನ್ । ಇತಿ । ಅಬ್ರವೀತ್ । ತಸ್ಮಾತ್ । ಮನಸಾ । ಪ್ರಜಾಪತಯ ಇತಿ ಪ್ರಜಾ-ಪತಯೇ । ಜುಹ್ವತಿ । ಮನಃ । ಇವ । ಹಿ । ಪ್ರಜಾಪತಿರಿತಿ ಪ್ರಜಾ-ಪತಿಃ । ಪ್ರಜಾಪತೇರಿತಿ ಪ್ರಜಾ-ಪತೇಃ । ಆಪ್ತ್ಯೈ ॥೮॥

| | |
|---|---|
| ಯತ್ ಮನಸಾ ಧ್ಯಾಯತಿ ತತ್ ವಾಚಾ ವದತಿ ಹಿ ಇತಿ ಅಬ್ರವೀತ್ | ಏಕೆಂದರೆ ಯಾವುದನ್ನು ಮೊದಲು ಮನಸ್ಸಿನಿಂದ ಆಲೋಚಿಸುತ್ತಾರೆಯೋ ಅದನ್ನೇ ಮಾತಿನಿಂದ ಹೇಳುತ್ತಾರಷ್ಟೆ ಎಂದು ಹೇಳಿದನು. |
| ತತ್ ತುಭ್ಯಮ್ ವಾಚಾ ನ ಜುಹವನ್ ಖಲು ಇತಿ ಅಬ್ರವೀತ್ | ಆಗ ಕುಪಿತಳಾದ ವಾಕ್ [ನೀನು ಹೀಗೆ ನನ್ನನ್ನು ದೂತಿಯೆಂದು ಹೀಯಾಳಿಸಿರುವುದರಿಂದ] ನಿನಗೆ ಯಾರೂ ವಾಕ್ಕಿನಿಂದ ಹೋಮ ಮಾಡದಿರಲಿ ಎಂದುಬಿಟ್ಟಳು. |
| ತಸ್ಮಾತ್ ಮನಸಾ ಪ್ರಜಾಪತಯೇ ಜುಹ್ವತಿ | ಹೀಗಾಗಿ ಪ್ರಜಾಪತಿಗೆ ಮನಸ್ಸಿನಿಂದಲೇ ಹೋಮವನ್ನು ಮಾಡುತ್ತಾರೆ. |
| ಪ್ರಜಾಪತಿಃ ಮನಃ ಇವ ಹಿ | ಸಂಕಲ್ಪಮಾತ್ರದಿಂದಲೇ ಜಗತ್ತನ್ನು ಸೃಷ್ಟಿಸುವ ಪ್ರಜಾಪತಿಯು ಎಲ್ಲವನ್ನೂ ಹೊಂದಬಲ್ಲ ಮನಸ್ಸಿನಂತೆಯೇ ಇರುವನಷ್ಟೆ. |
| ಪ್ರಜಾಪತೇಃ ಆಪ್ತ್ಯೈ ॥೮॥ | ಈ ಮಾನಸಿಕ ಆಘಾರಹೋಮವು ಪ್ರಜಾಪತಿಯು ತೃಪ್ತಿ ಪಡೆಯುವುದಕ್ಕೆ ಸಾಧನವಾಗುತ್ತದೆ. |

ಪರಿಧೀನ್ಥ್ಸಂಮಾರ್ಷ್ಟಿ ಪುನಾತ್ಯೇವೈನಾನ್ತ್ರಿರ್ಮಧ್ಯಮಂ ತ್ರಯೋ ವೈ ಪ್ರಾಣಾಃ ಪ್ರಾಣಾನೇವಾಭಿ ಜಯತಿ ತ್ರಿರ್ದಕ್ಷಿಣಾರ್ಧ್ಯಂ

---

ಪರಿಧೀನಿತಿ ಪರಿ-ಧೀನ್ । ಸಮಿತಿ । ಮಾರ್ಷ್ಟಿ । ಪುನಾತಿ । ಏವ । ಏನಾನ್ । ತ್ರಿಃ । ಮಧ್ಯಮಮ್ । ತ್ರಯಃ । ವೈ । ಪ್ರಾಣಾ ಇತಿ ಪ್ರ-ಅನಾಃ । ಪ್ರಾಣಾನಿತಿ ಪ್ರ-ಅನಾನ್। ಏವ । ಅಭೀತಿ । ಜಯತಿ । ತ್ರಿಃ । ದಕ್ಷಿಣಾರ್ಧ್ಯಮಿತಿ ದಕ್ಷಿಣ-ಅರ್ಧ್ಯಮ್ ।

---

**ಪರಿಧಿಸಮ್ಮಾರ್ಜನ; ಪ್ರಶಂಸೆ**

| | |
|---|---|
| ಪರಿಧೀನ್ ಸಂಮಾರ್ಷ್ಟಿ | ಆಗ್ನೀಧ್ರನು ಪರಿಧಿಗಳನ್ನು ಸಮ್ಮಾರ್ಜನ ಮಾಡಬೇಕು. |
| ಏನಾನ್ ಪುನಾತಿ ಏವ | ಇದರಿಂದ ಈ ಪರಿಧಿಗಳನ್ನು ಶುದ್ಧಿಗೊಳಿಸಿ ದಂತಾಗುತ್ತದೆ. |
| ಮಧ್ಯಮಮ್ ತ್ರಿಃ **[ಸಂಮಾರ್ಷ್ಟಿ]** | ಮಧ್ಯದಲ್ಲಿ ಇಟ್ಟಿರುವ ಪರಿಧಿಯನ್ನು ಮೂರು ಬಾರಿ ಸಮ್ಮಾರ್ಜನೆ ಮಾಡಬೇಕು. |
| ಪ್ರಾಣಾಃ ತ್ರಯಃ ವೈ | ಪ್ರಾಣ-ಅಪಾನ-ವ್ಯಾನಗಳೆಂಬುದಾಗಿ ಪ್ರಾಣಗಳು ಮೂರಾಗಿವೆ. |
| ಪ್ರಾಣಾನ್ ಏವ ಅಭಿಜಯತಿ | ಈ ಸಮ್ಮಾರ್ಜನಗಳಿಂದ ಪ್ರಾಣಗಳನ್ನು ಜಯಿಸಿದಂತೆ ಆಗುತ್ತದೆ. |
| ದಕ್ಷಿಣಾರ್ಧ್ಯಮ್ ತ್ರಿಃ | ಬಲಭಾಗದಲ್ಲಿರುವ (ದಕ್ಷಿಣದ)ಪರಿಧಿಯನ್ನು ಮೂರು ಸಲ ಸಮ್ಮಾರ್ಜನ ಮಾಡಬೇಕು. |

---

ಮಾತು ಹಾಗೂ ಮನಸ್ಸುಗಳು ದೇವತೆಗಳಿಗೆ ಹವಿಸ್ಸನ್ನು ಒಯ್ಯಲು ಬಯಸಿದಾಗ ಪ್ರಜಾಪತಿಯು ಮನಸ್ಸಿನ ದೂತಿಯೆಂದು ಮಾತಿಗೆ ಹೇಳಿದಾಗ ಕುಪಿತಳಾದ ವಾಕ್ಕು ಪ್ರಜಾಪತಿಗೆ ಮನೋ

ತ್ರಯ [ತ್ರಯಃ(೪)] ಇಮೇ ಲೋಕಾ ಇಮಾನೇವ ಲೋಕಾನ
ಭಿಜಯತಿ ತ್ರಿರುತ್ತರಾರ್ಧ್ಯಂ ತ್ರಯೋ ವೈ ದೇವಯಾನಾಃ
ಪಂಥಾನಸ್ತಾನೇವಾಭಿಜಯತಿ ತ್ರಿರುಪ ವಾಜಯತಿ ತ್ರಯೋ ವೈ
ದೇವಲೋಕಾ

---

ತ್ರಯಃ । [(೫)] । ಇಮೇ । ಲೋಕಾಃ । ಇಮಾನ್ । ಏವ । ಲೋಕಾನ್ । ಅಭೀತಿ ।
ಜಯತಿ । ತ್ರಿಃ । ಉತ್ತರಾರ್ಧ್ಯಮಿತ್ಯುತ್ತರ-ಅರ್ಧ್ಯಮ್ । ತ್ರಯಃ । ವೈ । ದೇವಯಾನಾ
ಇತಿ ದೇವ-ಯಾನಾಃ । ಪಂಥಾನಃ । ತಾನ್ । ಏವ । ಅಭೀತಿ । ಜಯತಿ । ತ್ರಿಃ ।
ಉಪೇತಿ । ವಾಜಯತಿ । ತ್ರಯಃ । ವೈ । ದೇವಲೋಕಾ ಇತಿ ದೇವ-ಲೋಕಾಃ ।

---

| | |
|---|---|
| ಇಮೇ ಲೋಕಾಃ ತ್ರಯಃ | ಈ ಲೋಕಗಳು ಮೂರಾಗಿವೆ. |
| ಇಮಾನ್ ಲೋಕಾನ್ ಏವ ಅಭಿಜಯತಿ | ಈ ಸಮ್ಮಾರ್ಜನದಿಂದ ಈ ಮೂರು ಲೋಕಗಳನ್ನೂ ಗೆಲ್ಲುತ್ತಾನೆ. |
| ಉತ್ತರಾರ್ಧ್ಯಮ್ ತ್ರಿಃ | ಎಡಭಾಗದ (ಉತ್ತರಭಾಗದ) ಪರಿಧಿಯನ್ನು ಮೂರು ಬಾರಿ ಸಮ್ಮಾರ್ಜನ ಮಾಡಬೇಕು. |
| ದೇವಯಾನಾಃ ಪಂಥಾನಃ ತ್ರಯಃ ವೈ | ದೇವಲೋಕದ ಮಾರ್ಗಗಳು ಮೂರಷ್ಟೆ. |
| ತಾನ್ ಅಭಿ ಜಯತಿ ಏವ | ಈ ಸಮ್ಮಾರ್ಜನೆಯಿಂದ ಆ ಮಾರ್ಗಗಳನ್ನು ಜಯಿಸುತ್ತಾನೆ. |
| ತ್ರಿಃ ಉಪವಾಜಯತಿ | ವೇದದಿಂದ ಅಗ್ನಿಯನ್ನು ಮೂರು ಬಾರಿ ಸುತ್ತಬೇಕು. |
| ದೇವಲೋಕಾಃ ತ್ರಯಃ ವೈ | ದೇವಲೋಕಗಳು ಮೂರಾಗಿವೆಯಷ್ಟೆ. |

---

ಹೋಮವೆಂದು ಹೇಳಿದರು. ಪ್ರಾಜಾಪತ್ಯೇಷ್ಟಿಯಂತಹ ವಿಶೇಷ ವಿಹಿತವಾದ ಸ್ಥಳಗಳಲ್ಲಿ ಪ್ರಜಾಪತಿಗೆ

ದೇವಲೋಕಾನೇವಾಭಿ ಜಯತಿ ದ್ವಾದಶ ಸಂ ಪದ್ಯಂತೇ ದ್ವಾದಶ ಮಾಸಾಸ್ಸಂವಥ್ಸರಸ್ಸಂವಥ್ಸರಮೇವ ಪ್ರೀಣಾತ್ಯಥೋ ಸಂವಥ್ಸರ ಮೇವಾಸ್ಮಾ ಉಪದಧಾತಿ ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ

---

ದೇವಲೋಕಾನಿತಿ ದೇವ-ಲೋಕಾನ್ । ಏವ । ಅಭೀತಿ । ಜಯತಿ । ದ್ವಾದಶ । ಸಮಿತಿ। ಪದ್ಯಂತೇ । ದ್ವಾದಶ । ಮಾಸಾಃ । ಸಂವಥ್ಸರ ಇತಿ ಸಂ-ವಥ್ಸರಃ । ಸಂವಥ್ಸರಮಿತಿ ಸಂ-ವಥ್ಸರಮ್ । ಏವ । ಪ್ರೀಣಾತಿ । ಅಥೋ ಇತಿ । ಸಂವಥ್ಸರಮಿತಿ ಸಂ-ವಥ್ಸರಮ್ । ಏವ । ಅಸ್ಮೈ । ಉಪೇತಿ । ದಧಾತಿ । ಸುವರ್ಗಸ್ಯೇತಿ ಸುವಃ-ಗಸ್ಯ । ಲೋಕಸ್ಯ । ಸಮಷ್ಟ್ಯೈ ಇತಿ ಸಂ-ಅಷ್ಟ್ಯೈ ।

---

| | |
|---|---|
| ದೇವಲೋಕಾನ್ ಅಭಿ ಜಯತಿ ಏವ | ಈ ಅಗ್ನಿಕಂಪನದಿಂದ ಮೂರು ದೇವಲೋಕಗಳನ್ನೂ ಜಯಿಸುತ್ತಾನೆ. |
| ದ್ವಾದಶ ಸಂಪದ್ಯಂತೇ | ಹೀಗೆ ಒಟ್ಟು ಸಂಖ್ಯೆಯು ಹನ್ನೆರಡಾಯಿತು. |
| ದ್ವಾದಶ ಮಾಸಾಃ ಸಂವಥ್ಸರಃ | ಹನ್ನೆರಡು ತಿಂಗಳುಗಳು ಒಂದು ಸಂವತ್ಸರ. |
| ಸಂವಥ್ಸರಮ್ ಏವ ಪ್ರೀಣಾತಿ | ಈ ದ್ವಾದಶಸಂಖ್ಯೆಯಿಂದ ಸಂವತ್ಸರದೇವತೆಯನ್ನು ತೃಪ್ತಿಪಡಿಸಿದಂತೆ ಆಗುತ್ತದೆ. |
| ಅಥೋ | ಮತ್ತು |
| ಅಸ್ಮೈ ಸಂವಥ್ಸರಮ್ ಏವ ಉಪದಧಾತಿ | ಈ ಯಜಮಾನನಿಗೆ ಈ ಸಂವತ್ಸರವನ್ನು ಕರ್ಮೋಪಯೋಗಿಯಾಗುವಂತೆ ಮಾಡುತ್ತಾನೆ. |
| ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ | ಇದು ಯಜಮಾನನಿಗೆ ಸ್ವರ್ಗಪ್ರಾಪ್ತಿಗೆ ಕಾರಣವಾಗುತ್ತದೆ. |

---

ಮಂತ್ರಗಳಿಂದಲೇ ಹೋಮ. ಸಾಮಾನ್ಯವಾಗಿ ಪ್ರಜಾಪತಿಗೆ ಮಾನಸಿಕಹೋಮವೆಂದು ಇಟ್ಟುಕೊಳ್ಳಬಹುದು.

ಆಘಾರಮಾಘಾರಯತಿ ತಿರ ಇವ [ಇವ(೫)] ವೈ ಸುವರ್ಗೋ

ಲೋಕಸ್ಸುವರ್ಗಮೇವಾಸ್ಮೈ ಲೋಕಂ ಪ್ರರೋಚಯ

ತ್ಯೃಜುಮಾಘಾರಯತ್ಯೃಜುರಿವ ಹಿ

---

ಆಘಾರಮಿತ್ಯಾ-ಘಾರಮ್ । ಏತಿ । ಘಾರಯತಿ । ತಿರಃ । ಇವ । [(೬)] । ವೈ ।

ಸುವರ್ಗ ಇತಿ ಸುವಃ-ಗಃ । ಲೋಕಃ । ಸುವರ್ಗಮಿತಿ ಸುವಃ-ಗಮ್ । ಏವ । ಅಸ್ಮೈ।

ಲೋಕಮ್ । ಪ್ರೇತಿ । ರೋಚಯತಿ । ಋಜುಮ್ । ಏತಿ । ಘಾರಯತಿ । ಋಜುಃ।

ಇವ । ಹಿ ।

---

**ಆಘಾರಗುಣಪ್ರಶಂಸೆ; ದ್ವಿತೀಯಾಘಾರವಿಧಿ; ಪ್ರಶಂಸೆ**

| | |
|---|---|
| ಆಘಾರಮ್ ಆಘಾರಯತಿ | ಅಧ್ವರ್ಯುವು ದ್ವಿತೀಯಾಘಾರಹೋಮವನ್ನು ಅಡ್ಡಲಾಗಿ ನೈಋತ್ಯ ಮೂಲೆಯಿಂದ ಈಶಾನ್ಯ ಮೂಲೆಯವರೆಗೆ ಮಾಡುತ್ತಾನೆ. |
| ಸುವರ್ಗಃ ಲೋಕಃ ತಿರಃ ಇವ ವೈ | ಸ್ವರ್ಗಲೋಕವು ಅಡ್ಡಲಾಗಿ ಇರುವಂತೆಯೇ ಕಾಣುತ್ತದೆಯಷ್ಟೆ. |
| ಅಸ್ಮೈ ಸುವರ್ಗಮ್ ಲೋಕಮ್ ಏವ ಪ್ರರೋಚಯತಿ | ಈ ಯಜಮಾನನಿಗೆ ಸ್ವರ್ಗಲೋಕವು ತಿರೋಹೋಮದಿಂದ ಪ್ರಕಾಶಿಸುವಂತಾಗುತ್ತದೆ. |
| ಋಜುಮ್ ಆಘಾರಯತಿ | ಆಘಾರಹೋಮವನ್ನು ನೇರವಾಗಿ ಮಾಡಬೇಕು. |
| ಪ್ರಾಣಃ ಋಜುಃ ಇವ ಹಿ | ಪ್ರಾಣವಾಯುವು ಹೃದಯದಿಂದ ಹೊರಟು ಮುಖದಿಂದ ಹೊರಗೆ ಬರುವವರೆಗೆ ನೇರವಾಗಿರುವಂತೆಯೇ ಇದೆಯಷ್ಟೆ. |

---

ಬಳಿಕ ಪರಿಧಿಗಳ ಸಮ್ಮಾರ್ಜನ. ಆಗ್ನೀಧ್ರನು ಇಧ್ಮಗಳನ್ನು ಕಟ್ಟಿರುವ ದರ್ಭೆಗಳಿಂದ ಸ್ಫ್ಯವನ್ನು ಜೊತೆಗೆ ಇಟ್ಟುಕೊಂಡು ಅಥವಾ ಸ್ಫ್ಯರಹಿತವಾಗಿ ಮೂರು ಮೂರು ಬಾರಿ ಪರಿಧಿಗಳನ್ನು ಸಮ್ಮಾರ್ಜನ ಮಾಡಬೇಕು. **[ಆಪ. ಶ್ರೌ.ಸೂ.೨.೧೪.೧]**

ಪ್ರಾಣಸ್ಸಂತತಮಾಘಾರಯತಿ ಪ್ರಾಣಾನಾಮನ್ನಾದ್ಯಸ್ಯ
ಸಂತತ್ಯಾ ಅಥೋ ರಕ್ಷಸಾಮಪಹತ್ಯೈ ಯಂ ಕಾಮಯೇತ
ಪ್ರಮಾಯುಕಸ್ಸ್ಯಾದಿತಿ

---

ಪ್ರಾಣ ಇತಿ ಪ್ರ-ಅನಃ । ಸಂತತಮಿತಿ ಸಂ-ತತಮ್ । ಏತಿ । ಘಾರಯತಿ । ಪ್ರಾಣಾನಾಮಿತಿ ಪ್ರ-ಅನಾನಾಮ್ । ಅನ್ನಾದ್ಯಸ್ಯೇತ್ಯನ್ನ-ಅದ್ಯಸ್ಯ । ಸಂತತ್ಯಾ ಇತಿ ಸಂ-ತತ್ಯೈ । ಅಥೋ ಇತಿ । ರಕ್ಷಸಾಮ್ । ಅಪಹತ್ಯಾ ಇತ್ಯಪ-ಹತ್ಯೈ । ಯಮ್ । ಕಾಮಯೇತ। ಪ್ರಮಾಯುಕ ಇತಿ ಪ್ರ-ಮಾಯುಕಃ । ಸ್ಯಾತ್ । ಇತಿ ।

---

| | |
|---|---|
| ಸಂತತಮ್ ಆಘಾರಯತಿ | ವಿಚ್ಛಿತ್ತಿ ಇಲ್ಲದಂತೆ ಆಘಾರಹೋಮವನ್ನು ಅನುಷ್ಠಿಸಬೇಕು. |
| ಪ್ರಾಣಾನಾಮ್ ಅನ್ನಾದ್ಯಸ್ಯ ಸಂತತ್ಯೈ | [ಇದರಿಂದ] ಪ್ರಾಣಗಳು ವಿಚ್ಛಿತ್ತಿ ಇಲ್ಲದಂತೆ ಆಗುತ್ತವೆ. ಒಳ್ಳೆಯ ಅನ್ನಭೋಗದ ವಿಚ್ಛಿತ್ತಿಯೂ ಆಗದು. |
| ಅಥೋ ರಕ್ಷಸಾಮ್ ಅಪಹತ್ಯೈ | ಮತ್ತು ರಾಕ್ಷಸರ ಪ್ರವೇಶಕ್ಕೂ ಅವಕಾಶವಿಲ್ಲದಂತಾಗಿ ರಾಕ್ಷಸನಾಶಕ್ಕೂ ಕಾರಣವಾಗುತ್ತದೆ. |

**ಕಾಮ್ಯವಿಧಿ; ಅದರ ವ್ಯಾಖ್ಯಾನ**

| | |
|---|---|
| ಪ್ರಮಾಯುಕಃ ಸ್ಯಾತ್ ಇತಿ ಯಮ್ ಕಾಮಯೇತ ತಸ್ಯ | ಅಧ್ವರ್ಯುವು ಯಾವ ಯಜಮಾನನು ಮರಣ ಹೊಂದಬೇಕೆಂದು ಬಯಸುವನೋ ಅವನ ಯಜ್ಞದಲ್ಲಿ |

---

ಆಗ್ನೀಧ್ರನು ಪರಿಧಿಗಳನ್ನು ಸಮ್ಮಾರ್ಜನ ಮಾಡುವುದರಿಂದ ಅವುಗಳನ್ನು ಶುದ್ಧಿಗೊಳಿಸಿದಂತಾಗುತ್ತದೆ. ಮಧ್ಯದ ಪರಿಧಿಯನ್ನೂ, ದಕ್ಷಿಣಪರಿಧಿಯನ್ನೂ ಉತ್ತರಪರಿಧಿಯನ್ನೂ ಮೂರು ಬಾರಿ ಸಮ್ಮಾರ್ಜನ ಮಾಡಬೇಕು.ಇದರಿಂದ ಪ್ರಾಣಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಸರಿಯಾಗಿರುವಂತೆಯೂ, ಭೂಲೋಕ, ಭುವರ್ಲೋಕ (ಅಂತರಿಕ್ಷಲೋಕ) ಸ್ವರ್ಗಲೋಕಗಳ

ಜಿಹ್ಮಂ ತಸ್ಯಾಽಘಾರಯೇತ್ಪ್ರಾಣಮೇವಾಸ್ಮಾಜ್ಜಿಹ್ಮಂ ನಯತಿ ತಾಜಕ್ಪ್ರಮೀಯತೇ ಶಿರೋ ವಾ ಏತದ್ಯಜ್ಞಸ್ಯ ಯದಾಘಾರ ಆತ್ಮಾ ಧ್ರುವಾ

---

ಜಿಹ್ಮಮ್ । ತಸ್ಯ । ಏತಿ । ಘಾರಯೇತ್ । ಪ್ರಾಣಮಿತಿ ಪ್ರ-ಅನಮ್ । ಏವ । ಅಸ್ಮಾತ್ । ಜಿಹ್ಮಮ್ । ನಯತಿ । ತಾಜಕ್ । ಪ್ರೇತಿ । ಮೀಯತೇ । ಶಿರಃ । ವೈ । ಏತತ್ । ಯಜ್ಞಸ್ಯ । ಯತ್ । ಆಘಾರ ಇತ್ಯಾ-ಘಾರಃ । ಆತ್ಮಾ । ಧ್ರುವಾ ।[(೭)]

---

| | |
|---|---|
| ಜಿಹ್ಮಮ್ ಆಘಾರಯೇತ್ | ವಕ್ರವಾಗಿ ಆಘಾರಹೋಮವನ್ನು ಮಾಡಬೇಕು. |
| ಅಸ್ಮಾತ್ ಪ್ರಾಣಮ್ ಜಿಹ್ಮಮ್ ಏವ ನಯತಿ | [ಈ ವಕ್ರಾಘಾರಹೋಮದಿಂದ] ಪ್ರಾಣ ವಾಯುವು ಈ ಯಜಮಾನನಿಂದ ವಕ್ರವಾಗಿ ಚಲಿಸುವಂತೆ ಮಾಡುತ್ತಾನೆ. |
| ತಾಜಕ್ ಪ್ರಮೀಯತೇ | ಇದರಿಂದ ಉಸಿರಾಟಕ್ಕೆ ತೊಂದರೆಯಾಗಿ ಯಜಮಾನನು ಒಡನೆಯೇ ಮರಣವನ್ನು ಹೊಂದುತ್ತಾನೆ. |

**ಧ್ರುವಾಪಾತ್ರಸಮಂಜನವಿಧಿ; ಆದರ ಪ್ರಶಂಸೆ**

| | |
|---|---|
| ಯತ್ ಆಘಾರಃ ಏತತ್ | ಆಘಾರಹೋಮವೆಂಬುದು ಯಾವುದುಂಟೋ |
| ಯಜ್ಞಸ್ಯ ಶಿರಃ ವೈ | ಇದು ಯಜ್ಞದ ಶಿರಃಪ್ರಾಯವಾಗಿದೆ. |
| ಧ್ರುವಾ ಆತ್ಮಾ | ಧ್ರುವಾಪಾತ್ರವು ಆತ್ಮಪ್ರಾಯವಾಗಿದೆ. |

---

ಜಯವೂ,ದೇವಲೋಕದ ಮಾರ್ಗಗಳಾದ ಯಮಲೋಕದ ಪರಿಹಾರವೂ, ಸ್ವರ್ಗ-ಬ್ರಹ್ಮಲೋಕಗಳ ಪ್ರಾಪ್ತಿಯೂ ಆಗುತ್ತದೆ.

ಬಳಿಕ ವೇದದಿಂದ ಅಗ್ನಿಯನ್ನು ಮೂರು ಬಾರಿ ಸುತ್ತಬೇಕು. ಕಂಪಿಸಬೇಕು. ಈ ಅಗ್ನಿಕಂಪನದಿಂದ ಯಮಲೋಕ, ಸ್ವರ್ಗಲೋಕ, ಬ್ರಹ್ಮಲೋಕಗಳನ್ನು ಯಮಲೋಕದ

[ಧ್ರುವಾ(೬)ಆಘಾರ]ಽಘಾರಮಾಘಾರ್ಯ ಧ್ರುವಾಗ್ಂ

ಸಮನಕ್ತ್ಯಾತ್ಮನ್ನೇವ ಯಜ್ಞಸ್ಯ ಶಿರಃ ಪ್ರತಿ ದಧಾತ್ಯಗ್ನಿ

ರ್ದೇವಾನಾಂ ದೂತ ಆಸೀದ್ದೈವ್ಯೋಽಸುರಾಣಾಂ

---

ಆಘಾರಮಿತ್ಯಾ-ಘಾರಮ್ । ಆಘಾರ್ಯೇತ್ಯಾ-ಘಾರ್ಯ । ಧ್ರುವಾಮ್ । ಸಮಿತಿ । ಅನಕ್ತಿ । ಆತ್ಮನ್ನ್ । ಏವ । ಯಜ್ಞಸ್ಯ । ಶಿರಃ । ಪ್ರತೀತಿ । ದಧಾತಿ । ಅಗ್ನಿಃ । ದೇವಾನಾಮ್ । ದೂತಃ । ಆಸೀತ್ । ದೈವ್ಯಃ । ಅಸುರಾಣಾಮ್।

---

| | |
|---|---|
| ಆಘಾರಮ್ ಆಘಾರ್ಯ ಧ್ರುವಾಮ್ ಸಮನಕ್ತಿ | ಅಧ್ವರ್ಯುವು ಆಘಾರಹೋಮವನ್ನು ಮಾಡಿದ ಬಳಿಕ ಆಘಾರಶೇಷದಿಂದ ಧ್ರುವಾ ಸಮಂಜನವನ್ನು ಮಾಡಬೇಕು. |
| ಯಜ್ಞಸ್ಯ ಶಿರಃ ಆತ್ಮನ್ ಏವ ಪ್ರತಿದಧಾತಿ | ಈ ಧ್ರುವಾಸಮಂಜನದಿಂದ ಅಧ್ವರ್ಯುವು ತನ್ನಲ್ಲಿಯೇ ಯಜ್ಞದ ಶಿರಸ್ಸನ್ನು ನೆಲೆಗೊಳಿಸುತ್ತಾನೆ. |

**ಅಧ್ವರ್ಯುಕರ್ತೃಕಹೋತೃವರಣ; ಉಪಾಖ್ಯಾನ**

| | |
|---|---|
| ಅಗ್ನಿಃ ದೇವಾನಾಮ್ ದೂತಃ ಆಸೀತ್ ಅಸುರಾಣಾಮ್ ದೈವ್ಯಃ **[ದೂತಃ ಆಸೀತ್]** | ಮಾನುಷಾಗ್ನಿಯು ದೇವತೆಗಳಿಗೆ ಹವ್ಯವನ್ನು ಒಯ್ಯುವ ದೂತನಾಗಿದ್ದನು. ದೈವ್ಯ [*ನಾಕ]ವೆಂಬ ಹೆಸರಿನ ಅಗ್ನಿಯು ಅಸುರರಿಗೆ ಹವ್ಯವಾಹಕನಾದ ದೂತನಾಗಿದ್ದನು. |

---

ಪರಿಹಾರ, ಸ್ವರ್ಗ-ಬ್ರಹ್ಮಲೋಕಗಳ ಪ್ರಾಪ್ತಿಯ ಮೂಲಕ ಗೆಲ್ಲುತ್ತಾನೆ.
ಸಂಖ್ಯೆಗಳನ್ನು ಪ್ರಶಂಸಿಸಿ ಫಲಪ್ರಾಪ್ತಿಯನ್ನು ಹೇಳುವುದು ಅರ್ಥವಾದದ ಒಂದು ರೀತಿ.
ಆಘಾರಹೋಮವನ್ನು ಇಲ್ಲಿ ವಿಧಿಸಲಾಗಿದೆ. ಬ್ರಾಹ್ಮಣಗ್ರಂಥದಲ್ಲಿಯೇ ಆಘಾರವಿಧಿಯು ಇದೆ.ಇಲ್ಲಿ ಆಘಾರವಿಧಿಯನ್ನು ಅನುವಾದ ಮಾಡಿ ಋಜುತ್ವ, ಸಾಂತತ್ಯಾದಿಗುಣಗಳನ್ನು

---

***ದಿವಿ ನಾಕೋ ನಾಮಾಗ್ನಿಃ** ॥ **ತೈ. ಬ್ರಾ.೩.೨.೩**

ತೌ ಪ್ರಜಾಪತಿಂ ಪ್ರಶ್ನಮೈತಾಗ್ಂ ಸ ಪ್ರಜಾಪತಿರ್ಬ್ರಾಹ್ಮಣ

ಮಬ್ರವೀದೇತದ್ವಿಬ್ರೂಹೀತ್ಯಾಶ್ರಾವಯೇತೀದಂ

---

ತೌ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಪ್ರಶ್ನಮ್ । ಐತಾಮ್ । ಸಃ । ಪ್ರಜಾಪತಿರಿತಿ ಪ್ರಜಾ-ಪತಿಃ । ಬ್ರಾಹ್ಮಣಮ್ । ಅಬ್ರವೀತ್ । ಏತತ್ । ವೀತಿ । ಬ್ರೂಹಿ । ಇತಿ। ಏತಿ । ಶ್ರಾವಯ । ಇತಿ । ಇದಮ್ ।

---

| | |
|---|---|
| ತೌ ಪ್ರಜಾಪತಿಮ್ ಪ್ರಶ್ನಮ್ ಐತಾಮ್ | ಅವರಿಬ್ಬರೂ [ಈ ಯಾಗದ ಹವಿಸ್ಸನ್ನು ಯಾರು ಒಯ್ಯಬೇಕು?]ಎಂಬ ಪ್ರಶ್ನೆಯ ಉತ್ತರಕ್ಕಾಗಿ ಪ್ರಜಾಪತಿಯ ಬಳಿಗೆ ಬಂದರು. |
| ಸಃ ಪ್ರಜಾಪತಿಃ ಬ್ರಾಹ್ಮಣಮ್ | ಆಗ ಪ್ರಜಾಪತಿಯು *ಬ್ರಾಹ್ಮಣಾಗ್ನಿಯನ್ನು ಕುರಿತು |
| ಏತತ್ ವಿಬ್ರೂಹಿ ಇತಿ ಅಬ್ರವೀತ್ | 'ನೀನೇ ಇದೆಲ್ಲವನ್ನೂ ಹೇಳಿ ದೇವತೆಗಳಿಗೆ ಹವಿಸ್ಸನ್ನು ಒಯ್ಯುವವನಾಗು'ಎಂದು ಹೇಳಿದನು. [ಅದೆಲ್ಲವೂ ಏನೆಂದರೆ] |
| ಆಶ್ರಾವಯ ಇತಿ | ಅಧ್ವರ್ಯುವು **'ಆಶ್ರಾವಯ'** ಎಂದು ಹೇಳುತ್ತಾನೆ. [ಅದರ ಅಭಿಪ್ರಾಯವೇನೆಂದರೆ] |

---

ಹೇಳಲಾಗಿದೆ. ಆದುದರಿಂದಲೇ ಇದನ್ನು ಅನುಬ್ರಾಹ್ಮಣವೆಂದು ಸಂಪ್ರದಾಯವನ್ನು ತಿಳಿದವರು ಹೇಳುತ್ತಾರೆ.

ಆಘಾರಹೋಮದ ಕಾಮ್ಯವಿಧಿಯನ್ನು ಹೇಳುತ್ತಾರೆ. ಅಧ್ವರ್ಯುವು ಯಜಮಾನನ ಮರಣವನ್ನು ಬಯಸುವುದಾದರೆ ಎಂದು ಮೇಲ್ನೋಟಕ್ಕೆ ಅರ್ಥವು ತೋರುವುದು. ಋತ್ವಿಜರು ಯಜಮಾನನ ಶ್ರೇಯಸ್ಸನ್ನೇ ಬಯಸಬೇಕು. ಹೀಗಾಗಿ ಶ್ರುತ್ಯರ್ಥವನ್ನು ಹೀಗೆ ವಿವರಿಸಬಹುದು:-ವಕ್ರವಾಗದಂತೆ ಅಧ್ವರ್ಯುವು ಎಚ್ಚರಿಕೆಯಿಂದ ನೇರವಾಗಿ ಆಘಾರ ಹೋಮವನ್ನು ಮಾಡಬೇಕು. ಅಥವಾ ಯಜಮಾನನು ಶತ್ರುವಿನ ಮರಣವನ್ನು ಬಯಸಿದಲ್ಲಿ

***ಬ್ರಹ್ಮಣಿ=ವೇದೇ; ವಿಹಿತಂ ಕರ್ಮ ಸಾಧಯಿತುಂ ಪ್ರವೃತ್ತಃ ಅಗ್ನಿಃ ಬ್ರಾಹ್ಮಣಾಗ್ನಿಃ =ವೇದಬೋಧಿತ ಕರ್ಮಗಳನ್ನು ಅನುಷ್ಠಿಸುವ ಮಾನುಷಾಗ್ನಿ.**

# ದೇವಾಃ ಶೃಣುತೇತಿ ವಾವ ತದಬ್ರವೀದಗ್ನಿರ್ದೇವೋ ಹೋತೇತಿ ಯ ಏವ ದೇವಾನಾಂ ತಮವೃಣೀತ ತತೋ ದೇವಾ [ದೇವಾಃ(೮)]

---

ದೇವಾಃ । ಶೃಣುತ । ಇತಿ । ವಾವ । ತತ್ । ಅಬ್ರವೀತ್ । ಅಗ್ನಿಃ । ದೇವಃ । ಹೋತಾ। ಇತಿ । ಯಃ । ಏವ । ದೇವಾನಾಮ್ । ತಮ್ । ಅವೃಣೀತ । ತತಃ । ದೇವಾಃ । [(೮)]।

---

| | |
|---|---|
| ದೇವಾಃ ಇದಮ್ ಶೃಣುತ ಇತಿ ವಾವ ತತ್ ಅಬ್ರವೀತ್ | 'ಎಲೈ! ದೇವತೆಗಳೇ! ಹವಿರ್ದಾನಕ್ಕಾಗಿ ಯಜಮಾನನು ಮಾಡುವ ಪ್ರಾರ್ಥನೆಯನ್ನು ಕೇಳಿರಿ' ಎಂದಷ್ಟೇ ತಾನೇ ಹೇಳುತ್ತಾನೆ. |
| ಅಗ್ನಿಃ ದೇವಃ ಹೋತಾ ಇತಿ | ಮಾನುಷಾಗ್ನಿಯೇ ದೇವತೆಗಳಿಗೆ ಹವ್ಯವನ್ನು ಒಯ್ಯುವವನು ಎಂದು ಶ್ರುತಿಯು ಹೇಳುತ್ತದೆ. |
| ಯಃ ದೇವಾನಾಮ್ ತಮ್ ಏವ ಅವೃಣೀತ | [ಹೀಗೆ ಪ್ರಜಾಪತಿಯು] ಯಾವ ಮಾನುಷಾಗ್ನಿಯು ದೇವತೆಗಳಿಗೆ ಹವ್ಯವನ್ನು ಒಯ್ಯುವವನೋ ಅವನನ್ನೇ ಹೋತೃವನ್ನಾಗಿ ಆಯ್ಕೆ ಮಾಡಿದನು. |
| ತತಃ ದೇವಾಃ ಅಭವನ್ನ್ | ಬಳಿಕ ದೇವತೆಗಳು ವಿಜಯಿಗಳಾದರು. |

---

ಹೀಗೆ ಸಂಕಲ್ಪಿಸಿ, ವಕ್ರವಾಗಿ ಹೋಮವನ್ನು ಮಾಡಬೇಕು ಎಂದೂ ವಿವರಿಸಬಹುದು. ಶ್ರುತಿಯಲ್ಲಿ ಬೇರೆ ಹಲವು ಕಡೆ ಈ ರೀತಿಯ ವಚನಗಳು ಇವೆ. ಇದೇ ನ್ಯಾಯವನ್ನೇ ಎಲ್ಲ ಕಡೆಗೂ ಅನ್ವಯಿಸಿಕೊಳ್ಳಬೇಕು.

ಅಧ್ವರ್ಯುವು ಆಘಾರಹೋಮಶೇಷದಿಂದ ಧ್ರುವಾಪಾತ್ರೆಯ ಸಮಂಜನವನ್ನು ಮಾಡಬೇಕು. ಇದರಿಂದ ಯಜ್ಞದ ಶಿರಸ್ಸೆನಿಸಿದುದನ್ನು ತನ್ನಲ್ಲಿಯೇ ನೆಲೆಗೊಳಿಸುತ್ತಾನೆ.

ಅಧ್ವರ್ಯುವು ಮಾಡಬೇಕಾದ ಹೋತೃವರಣವನ್ನು ಕುರಿತಾದ ಉಪಾಖ್ಯಾನವಿದು. ಈ ವರಣಕ್ಕಿಂತ ಹಿಂದಿನ ವರಣಗಳನ್ನು ಹೋತೃವು ಮಾಡಬೇಕು.ಇದನ್ನೂ ಮುಂದಿನ ವರಣಗಳನ್ನೂ ಅಧ್ವರ್ಯುವು ಮಾಡಬೇಕು.ದೈವ್ಯ ಹಾಗೂ ಮಾನುಷಾಗ್ನಿಗಳಿಂದ

ಅಭವನ್ಪರಾಽಸುರಾ ಯಸ್ಯೈವಂ ವಿದುಷಃ ಪ್ರವರಂ

ಪ್ರವೃಣತೇ ಭವತ್ಯಾತ್ಮನಾ ಪರಾಽಸ್ಯ ಭ್ರಾತೃವ್ಯೋ ಭವತಿ

---

ಅಭವನ್ । ಪರೇತಿ । ಅಸುರಾಃ । ಯಸ್ಯ । ಏವಮ್ । ವಿದುಷಃ । ಪ್ರವರಮಿತಿ ಪ್ರ-ವರಮ್ । ಪ್ರವೃಣತ ಇತಿ ಪ್ರ-ವೃಣತೇ । ಭವತಿ । ಆತ್ಮನಾ । ಪರೇತಿ । ಅಸ್ಯ । ಭ್ರಾತೃವ್ಯಃ । ಭವತಿ ।

---

| | |
|---|---|
| ಅಸುರಾಃ ಪರಾ [**ಅಭವನ್**] | ಅಸುರರು ಪರಾಜಿತರಾದರು. |
| ಏವಮ್ ವಿದುಷಃ ಯಸ್ಯ ಪ್ರವರಮ್ ಪ್ರವೃಣತೇ | ಹೀಗೆ ತಿಳಿದಿರುವ ಯಾವ ಯಜಮಾನನ ಯಜ್ಞದಲ್ಲಿ ಹೀಗೆ ಯಜಮಾನನ ಪ್ರವರಪೂರ್ವಕವಾಗಿ ಹೋತೃವರಣವನ್ನು ಮಾಡುತ್ತಾರೆಯೋ |
| ಭವತಿ ಆತ್ಮನಾ | ಅವನು ತಾನು ಜಯಶಾಲಿಯಾಗುತ್ತಾನೆ. |
| ಅಸ್ಯ ಭ್ರಾತೃವ್ಯಃ ಪರಾ ಭವತಿ | ಈ ಯಜಮಾನನ ಶತ್ರುವು ಪರಾಜಿತನಾಗುತ್ತಾನೆ. |

---

ಪ್ರಶ್ನಿಸಲ್ಪಟ್ಟ ಪ್ರಜಾಪತಿಯು ಮಾನುಷಾಗ್ನಿಯನ್ನೇ ದೇವತೆಗಳಿಗೆ ಹವ್ಯವನ್ನು ಕೊಂಡೊಯ್ಯುವಂತೆ ಹೇಳಿದನು.

ಅಧ್ವರ್ಯುವು**'ಆಶ್ರಾವಯ'**ಎಂದು ಹೇಳುತ್ತಾನೆ.ಹೇ ದೇವತೆಗಳೇ! ಹವಿರ್ನಿರ್ವಾಪಕ್ಕಾಗಿ ಯಜಮಾನನು ಮಾಡುವ ಪ್ರಾರ್ಥನೆಯನ್ನು ಆಲಿಸಿರಿ ಎಂದು ಅದರ ಅರ್ಥ.ಪ್ರಜಾಪತಿಯು ಮಾನುಷಾಗ್ನಿಯನ್ನೇ ಹೋತೃವನ್ನಾಗಿ ವರಿಸಿದನು.ಹಿಂದೆ **'ಆರ್‌ಷೇಯಂ ವೃಣೀತೇ'** ಎಂಬುದಾಗಿ ವಿಹಿತವಾದ ಅಗ್ನಿವಿಷಯಕವಾದ ವರಣವು ಹೋತೃಕರ್ತೃಕವಾದುದು.

ಹಿಂದಿನ ವರಣದಲ್ಲಿ **'ಭಾರ್ಗವ-ಚ್ಯಾವನ-ಆಪ್ನವಾನ-ಔರ್ವ-ಜಾಮದಗ್ನ್ಯ'** ಎಂದು ಮೇಲಿನಿಂದ ಕೆಳಗಿನವರೆಗೆ ಹೇಳಿದರೆ ಈ ಅಧ್ವರ್ಯು ಮಾಡುವ ವರಣದಲ್ಲಿ **'ಜಮದಗ್ನಿವತ್, ಔರ್ವವತ್, ಅಪ್ನವಾನವತ್, ಚ್ಯವನವತ್,ಭೃಗುವತ್,** ಎಂದು ಕೆಳಗಿನಿಂದ ಮೇಲಿನವರೆಗೆ ಹೇಳಬೇಕು.

ಯದ್ಬ್ರಾಹ್ಮಣಶ್ಚಾಬ್ರಾಹ್ಮಣಶ್ಚ ಪ್ರಶ್ನಮೇಯಾತಾಂ
ಬ್ರಾಹ್ಮಣಾಯಾಧಿ ಬ್ರೂಯಾದ್ಯದ್ಬ್ರಾಹ್ಮಣಾಯಾಧ್ಯಾಹಾ-
ತ್ಮನೇಽಧ್ಯಾಹ ಯದ್ಬ್ರಾಹ್ಮಣಂ ಪರಾಹಾತ್ಮಾನಂ ಪರಾಽಹ

---

ಯತ್ । ಬ್ರಾಹ್ಮಣಃ । ಚ । ಅಬ್ರಾಹ್ಮಣಃ । ಚ । ಪ್ರಶ್ನಮ್ । ಏಯಾತಾಮಿತ್ಯಾ-
ಇಯಾತಾಮ್ । ಬ್ರಾಹ್ಮಣಾಯ । ಅಧೀತಿ । ಬ್ರೂಯಾತ್ । ಯತ್ । ಬ್ರಾಹ್ಮಣಾಯ ।
ಅಧ್ಯಾಹೇತ್ಯಧಿ-ಆಹ । ಆತ್ಮನೇ । ಅಧೀತಿ । ಆಹ । ಯತ್ । ಬ್ರಾಹ್ಮಣಮ್ ।
ಪರಾಹೇತಿ ಪರಾ-ಆಹ । ಆತ್ಮಾನಮ್ । ಪರೇತಿ । ಆಹ ।

---

### ಬ್ರಾಹ್ಮಣಾಗ್ನಿವರಣದ ಪ್ರಶಂಸೆ ಅಥವಾ ಪುರುಷಾರ್ಥವಿಧಿ

| | |
|---|---|
| ಯತ್ ಬ್ರಾಹ್ಮಣಃ ಚ | ಬ್ರಾಹ್ಮಣನು ಮತ್ತು ಬ್ರಾಹ್ಮಣೇತರನು ಆಧಿಕ್ಯ |
| ಅಬ್ರಾಹ್ಮಣಃ ಚ ಪ್ರಶ್ನಮ್ | ವಿಷಯದಲ್ಲಿ ವಿವಾದ ಮಾಡುತ್ತಾ ತಿಳಿದಿರುವ |
| ಏಯಾತಾಮ್ | ಬ್ರಾಹ್ಮಣನ ಬಳಿಗೆ ಬಂದರೆ |
| ಬ್ರಾಹ್ಮಣಾಯ ಅಧಿ ಬ್ರೂಯಾತ್ | ಬ್ರಾಹ್ಮಣನಿಗೇ ಆಧಿಕ್ಯವನ್ನು ಹೇಳಬೇಕು. |
| ಯತ್ ಬ್ರಾಹ್ಮಣಾಯ ಅಧ್ಯಾಹ | ಬ್ರಾಹ್ಮಣನಿಗೆ ಆಧಿಕ್ಯವನ್ನು ಹೇಳುವುದು ಯಾವುದುಂಟೋ ಅದು |
| ಆತ್ಮನೇ ಅಧ್ಯಾಹ | ತನಿಗೇ ಆಧಿಕ್ಯವನ್ನು ಹೇಳಿದಂತೆ ಆಗುತ್ತದೆ. |
| ಯತ್ ಬ್ರಾಹ್ಮಣಮ್ ಪರಾಹ | ಬ್ರಾಹ್ಮಣನಿಗೆ ಹೀನತೆಯನ್ನು ಹೇಳಿದರೆ |
| ಆತ್ಮಾನಮ್ ಪರಾಹ | ತನ್ನನ್ನೇ ಹೀನನನ್ನಾಗಿ ಹೇಳಿದಂತಾಗುತ್ತದೆ. |

---

ಆಧಿಕ್ಯದ ವಿಷಯದಲ್ಲಿ ಬ್ರಾಹ್ಮಣನೂ ಬ್ರಾಹ್ಮಣೇತರನೂ ವಿವಾದ ಮಾಡುತ್ತಾ ಬಲ್ಲ ಬಾಹ್ಮಣನ ಬಳಿ ಬಂದರೆ ಬ್ರಾಹ್ಮಣನಿಗೇ ಆಧಿಕ್ಯವನ್ನು ಹೇಳಬೇಕು. ಬ್ರಾಹ್ಮಣನಿಗೇ ಆಧಿಕ್ಯವನ್ನು ಹೇಳುವುದು ತನಗೇ ಆಧಿಕ್ಯವನ್ನು ಹೇಳಿದಂತೆ.ಇದು ಪ್ರಶಾಂಸಾಪರವಾದದ್ದು.

ತಸ್ಮಾದ್ಬ್ರಾಹ್ಮಣೋ ನ ಪರೋಚ್ಯಃ ||೬೯-11||

[ವಾ ಆರಣ್ಯಾಗ್ಂಶ್ಚಾವ ರುಂಧೇಽಥೋ ಪಶುಭಿಸ್ಸೋಽಬ್ರವೀದ್ದಕ್ಷಿಣಾರ್ಧ್ಯಂ

ತ್ರಯ ಇವ ಧ್ರುವಾ ದೇವಾಶ್ಚತ್ವಾರಿಗ್ಂಶಚ್ಚ||]

---

ತಸ್ಮಾತ್ । ಬ್ರಾಹ್ಮಣಃ । ನ । ಪರೋಚ್ಯ ಇತಿ ಪರಾ-ಉಚ್ಯಃ । [(69)]

---

ತಸ್ಮಾತ್ ಬ್ರಾಹ್ಮಣಃ ನ ಪರೋಚ್ಯಃ: ಆದುದರಿಂದ ಬ್ರಾಹ್ಮಣನನ್ನು ಕೀಳು ಮಾಡಬಾರದು.

---

ಅಥವಾ ಪ್ರಾಸಂಗಿಕವಾದ ನಿಷೇಧವೆಂದೂ ಹೇಳಬಹುದು. ಇದು ಬ್ರಾಹ್ಮಣಾಗ್ನಿವರಣದ ಪ್ರಶಂಸೆ.

* * *

# ಅನುವಾಕದ ವಿಶೇಷವಿಷಯಗಳು

## ಅ) ಮೀಮಾಂಸಾ

### ೧) 'ನಿವೀತವಮ್ ಮನುಷ್ಯಾಣಾಮ್ ಎಂಬುದು ಅರ್ಥವಾದವೇ? [ಜೈ.ಸೂ.3.4]

ದರ್ಶಪೂರ್ಣಮಾಸಪ್ರಕರಣದಲ್ಲಿ **'ನಿವೀತಂ ಮನುಷ್ಯಾಣಾಂ ಪ್ರಾಚೀನಾವೀತಂ ಪಿತೃಣಾಮುಪವ್ಯಯತೇ ದೇವಲಕ್ಷ್ಮಮೇವ ತತ್ಕುರುತೇ'** [ತೈ.ಸಂ.2.5.11] ಎಂಬ ವಚನವಿದೆ.

ನಿವೀತವು ಬೇರೆ ಪ್ರಮಾಣಗಳಿಂದ ಪ್ರಾಪ್ತವಾಗದೆ ಇರುವುದರಿಂದ ಇದನ್ನು ವಿಧಿವಾಕ್ಯವೆಂದು ಹೇಳಬೇಕೆ? ಅಥವಾ ಇದು ಅರ್ಥವಾದವೇ? ಇದು ಇಲ್ಲಿನ **ಸಂಶಯ.**

ಬೇರೆ ಪ್ರಮಾಣಗಳಿಂದ ನಿವೀತವು ಪ್ರಾಪ್ತವಾಗದೆ ಇರುವುದರಿಂದ ಇದು ವಿಧಿವಾಕ್ಯವೆಂದೇ ಹೇಳಬೇಕಾಗುತ್ತದೆ. ಹೀಗಿರುವಾಗ, ಮನುಷ್ಯಸಂಬಂಧಿಯಾದ ಕಾರ್ಯಗಳಲ್ಲಿ ಇದು ಪುರುಷಾರ್ಥವಾಗಿ ನಿವೀತವಿಧಿ ಎಂಬುದು ಮೊದಲನೆಯ **ಪೂರ್ವಪಕ್ಷ.**

ಯಜ್ಞಾನುಷ್ಠಾನದಲ್ಲಿಯೇ ಮನುಷ್ಯಸಂಬಂಧಿಯಾದ ಅನ್ವಾಹಾರ್ಯ ಮೊದಲಾದವುಗಳಲ್ಲಿ ಈ ವಾಕ್ಯವು ನಿವೀತಧಾರಣವನ್ನು ಹೇಳುವ ನಿವೀತವಿಧಿ ಎಂಬುದು ಎರಡನೆಯ **ಪೂರ್ವಪಕ್ಷ.**

ಪೂರ್ವಪಕ್ಷದಲ್ಲಿ ತಿಳಿಸಿರುವಂತೆ ನಿವೀತವಿಧಿಯು ಕ್ರತ್ವಂಗವಾಗಿ ವಿಧಿಯಾದರೆ ವಾಕ್ಯಭೇದವು ಉಂಟಾಗುವುದರಿಂದ ಯಜ್ಞಾಂಗವಾಗಿ ವಿಹಿತವಾಗಿರುವ ಉಪವೀತದ ಪ್ರಶಂಸೆಯ ರೂಪವಾದ ಅರ್ಥವಾದ ಇದು. ಇದು ವ್ಯತಿರೇಕಮುಖವಾದ ಅರ್ಥವಾದ. ಅಂದರೆ **'ನಿವೀತಂ ಪ್ರಾಚೀನಾವೀತಮ್ ಉಪವ್ಯಯತೇ'** ಎಂದು ಇದ್ದರೂ ನಿವೀತ-ಪ್ರಾಚೀನಾವೀತಗಳು ಮನುಷ್ಯ-ಹಾಗೂ ಪಿತೃಕಾರ್ಯಗಳಿಗೆ ಮಾತ್ರ ಯೋಗ್ಯವಾದವುಗಳು, ದೈವಿಕ ಕರ್ಮಗಳಿಗೆ ಯೋಗ್ಯವಲ್ಲ, ಉಪವೀತವು ಯೋಗ್ಯವಾಗಿರುತ್ತದೆ ಎಂಬುದಾಗಿ ಉಪವೀತವಿಧಿಯ ಪ್ರಶಂಸಾರೂಪವಾದ ಅರ್ಥವಾದವು ಇದು ಎಂಬುದು ಇಲ್ಲಿನ **ಸಿದ್ಧಾಂತ.**

### ೨) ಉಪವೀತವು ಯಾವುದರ ಅಂಗ? [ಜೈ. ಸೂ.3.1]

ದರ್ಶಪೂರ್ಣಮಾಸಪ್ರಕರಣದಲ್ಲಿ **'ವಿಶ್ವರೂಪೋ ವೈ'** ಎಂಬ ಪ್ರಶ್ನೆಯಲ್ಲಿ ಏಳನೆಯ ಹಾಗೂ ಎಂಟನೆಯ ಅನುವಾಕದಲ್ಲಿ ಸಾಮಿಧೇನೀಬ್ರಾಹ್ಮಣವಿದೆ. ನವಮಾನುವಾಕದಲ್ಲಿ

**'ಅಗ್ನೇ ಮಹಾಗ್ಂ ಅಸಿ'** ಮೊದಲಾದ ನಿವಿನ್ಮಂತ್ರಗಳ ಬ್ರಾಹ್ಮಣವಿದೆ. ಹತ್ತನೆಯ ಅನುವಾಕದಲ್ಲಿ ಕಾಮ್ಯಸಾಮಿಧೇನೀವಿಧಿಗಳಿವೆ. ಹನ್ನೊಂದನೆಯ ಅನುವಾಕದಲ್ಲಿ ಮೊದಲು ಉಪವೀತವಿಧಿಯಿದೆ.

ಸಾಮಿಧೇನಿಗಳ ಅವಾಂತರಪ್ರಕರಣದಲ್ಲಿ ಇರುವುದರಿಂದ ಈ ಉಪವೀತವಿಧಿಯು ಸಾಮಿಧೇನ್ಯಂಗವೆಂದು ಒಂದು **ಪೂರ್ವಪಕ್ಷ.**

ಅಗ್ನಿಯನ್ನು ಸ್ತುತಿಸುವ ನಿವಿನ್ಮಂತ್ರಗಳ ಬ್ರಾಹ್ಮಣವು ಮಧ್ಯದಲ್ಲಿ ಬರುವುದರಿಂದ ಸಾಮಿಧೇನೀಪ್ರಕರಣವು ವಿಚ್ಛಿನ್ನವಾಗಿದೆ. ನಿವಿತ್ತುಗಳು ಸಾಮಿಧೇನಿಗಳ ಅಂಗವಲ್ಲ. ಆದುದರಿಂದ ಈ ಉಪವೀತವು ನಿವಿತ್ತುಗಳ ಅಂಗವಾಗಲಿ ಎಂಬುದು ಎರಡನೆಯ **ಪೂರ್ವಪಕ್ಷ.**

ಕಾಮ್ಯಸಾಮಿಧೇನೀಪ್ರಕರಣದಿಂದ ನಿವಿತ್ತುಗಳ ಬ್ರಾಹ್ಮಣವು ವಿಚ್ಛಿನ್ನವಾಗುತ್ತದೆ. ಹೀಗಾಗಿ ಅನಂತರ ಬರುವ ಉಪವೀತವು ನಿವಿದಂಗವೂ ಆಗುವುದಿಲ್ಲ. ಸನ್ನಿಧಿಗಿಂತಲೂ ಪ್ರಬಲವಾದ ಮಹಾಪ್ರಕರಣವು ಇರುವುದರಿಂದ ಉಪವೀತವು ಸಾಮಿಧೇನ್ಯಂಗವೂ ಆಗದೆ ದರ್ಶ-ಪೂರ್ಣಮಾಸಾಂಗವೆನಿಸಿದೆ. ಇದು ಇಲ್ಲಿನ **ಸಿದ್ಧಾಂತ.**

**೩) ಯಜ್ಞೋಪವೀತವಿಧಿಯು ಎಲ್ಲಿ? [ಜೈ.ಸೂ.3.4.]**

**'ಯಜ್ಞೋಪವೀತೀ ಹಿ ದೇವೇಭ್ಯೋ ದೋಹಯತಿ'** ಎಂಬುದಾಗಿ ಮೃತಾಗ್ನಿಹೋತ್ರ ಪ್ರಕರಣದಲ್ಲಿ ಹೇಳಿರುತ್ತಾರೆ. ಇದರಿಂದ ಯಜ್ಞೋಪವೀತವಿಧಿಯು ಸಿದ್ಧವಾಗಿದ್ದು ಅದನ್ನು ಇಲ್ಲಿ ಅನುವಾದ ಮಾಡಲಾಗಿದೆ ಎಂಬ ಲಿಂಗದಿಂದ ದರ್ಶಪೂರ್ಣಮಾಸಪ್ರಕರಣದಲ್ಲಿನ **'ಉಪವ್ಯಯತೇ'** ಎಂಬ ವಿಧಿಯು ಎಲ್ಲದೇವಕರ್ಮಗಳಿಗೂ ಅನ್ವಯಿಸುವ ಯಜ್ಞೋಪವೀತ ವಿಧಿಯೆಂದು ತಿಳಿಯುತ್ತದೆ. ಇದು ಇಲ್ಲಿನ **ಪೂರ್ವಪಕ್ಷ.**

**'ಯಜ್ಞೋಪವಿತೀ ದೋಹಯೇತ್'** ಎಂಬಲ್ಲಿ ಲಿಂಗಾಭಾಸವು ಇದೆ. ಪ್ರೇತಾಗ್ನಿಹೋತ್ರದಲ್ಲಿ **'ಪ್ರಾಚೀನಾವೀತೀ ದೋಹಯೇತ್'** ಎಂಬ ವಿಧಿಯು ಇದೆ. ಇದು ಅನ್ಯಕರ್ತೃಕವಾದುದು. ಅದರ ಸ್ತುತಿಯು **'ಯಜ್ಞೋಪವೀತೀ ಹಿ ದೇವೇಭ್ಯೋ ದೋಹಯತಿ'**ಎಂಬ ವಾಕ್ಯವಾಗಿದೆ. ಹೀಗಾಗಿ ಲಿಂಗಾಭಾಸವಾಗಿರುವುದರಿಂದ ಅದರಿಂದ ಪ್ರಕರಣಕ್ಕೆ ಬಾಧವಿರುವುದಿಲ್ಲ. ಮಹಾಪ್ರಕರಣದಿಂದ ಉಪವೀತವು ದರ್ಶ-ಪೂರ್ಣಮಾಸಾಂಗವೇ ಸರಿ. ಇದು ಇಲ್ಲಿನ **ಸಿದ್ಧಾಂತ.**

**೪) 'ಋಜುಮಾಘಾರಯತಿ' ಎಂಬಲ್ಲಿ ವಿಕಲ್ಪವೇ?**

**[ಜೈ.ಸೂ.12.3.4]**

ದರ್ಶಪೂರ್ಣಮಾಸಪ್ರಕರಣದಲ್ಲಿ **'ಋಜುಮಾಘಾರಯತಿ' 'ಸಂತತಮಾಘಾರಯತಿ'** ಮೊದಲಾದ ವಿಧಿಗಳು ಆಘಾರವಿಷಯದಲ್ಲಿ ಇವೆ. ಆಘಾರಕ್ರಿಯೆಯು ಒಂದೇ ಆಗಿ ಋಜುತ್ವ, ಸಾಂತತ್ಯ ಮುಂತಾದವುಗಳು ಆ ಕ್ರಿಯೆಗೆ ಉಪಕಾರಕಗಳಾಗಿರುವುದರಿಂದ ಬಗೆ ಬಗೆಯ ಆಘಾರಾನುಷ್ಠಾನಗಳು ವಿಕಲ್ಪವಾಗಿ ಪ್ರಾಪ್ತವಾಗುತ್ತವೆ. ಇದು ಇಲ್ಲಿನ **ಪೂರ್ವಪಕ್ಷ.**

ಆಘಾರವೆಂಬ ಕಾರ್ಯವು ಒಂದೇ ಆದರೂ ಈ ಗುಣದಿಂದ ಉಂಟಾಗುವ ಅಪೂರ್ವವು ಅದೃಷ್ಟವಾಗಿರುವುದರಿಂದಲೂ ಪರಸ್ಪರ ವಿರೋಧವಿಲ್ಲದೇ ಎಲ್ಲವನ್ನೂ ಅನುಷ್ಠಾನ ಮಾಡಲು ಸಾಧ್ಯವಿರುವುದರಿಂದ **'ವಿರೋಧೇ ವಿಕಲ್ಪಃ'** ಎಂದಿರುವುದರಿಂದ ಈ ಅನುಷ್ಠಾನದಲ್ಲಿ ವಿಕಲ್ಪವಿರುವುದಿಲ್ಲ ಇದು ಇಲ್ಲಿನ **ಸಿದ್ಧಾಂತ.**

**೫)'ಸಂತತಮಾಘಾರಯತಿ' ಎಂಬಲ್ಲಿ ವಿಹಿತವಾದ ಹೋಮಾರಂಭವು ಯಾವುದು?** **[ಜೈ.ಸೂ.೧೨.೩.೧೩]**

**'ಸಂತತಮಾಘಾರಯತಿ'** ಎಂಬಲ್ಲಿ ಸಂತತ ಎಬ ಶಬ್ದಕ್ಕೆ ಮಂತ್ರ ಮತ್ತು ಕರ್ಮಗಳ ಸಾಹಿತ್ಯದ ಸಾಂತತ್ಯ ಎಂದು ಅರ್ಥ. ಹೀಗಾಗಿ ಆಘಾರಮಂತ್ರದ ಆರಂಭದಲ್ಲಿಯೇ ಆಘಾರಹೋಮವನ್ನು ಅನುಷ್ಠಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಸಂತತ ಎಂಬ ಶಬ್ದಕ್ಕೆ ವಿಚ್ಛಿತ್ತಿ ಇಲ್ಲದೆ ಆಜ್ಯವನ್ನು ಸುರಿಸುವುದು ಎಂದು ಅರ್ಥ. ಆಘಾರಹೋಮಕ್ಕಾಗಿ ಎಷ್ಟು ಆಜ್ಯದಿಂದ ಹವನವನ್ನು ಅನುಷ್ಠಿಸಬೇಕೋ ಅದೆಲ್ಲವನ್ನೂ ನಿಧಾನವಾಗಿ ಮತ್ತು ಸತತವಾಗಿ ಆಹವನೀಯದಲ್ಲಿ ಹವನ ಮಾಡಬೇಕು ಎಂದು ಸಂತತ ಎಂಬುದರ ಅರ್ಥ.

ಮಂತ್ರ ಮತ್ತು ಕ್ರಿಯೆ ಎರಡನ್ನೂ ಒಟ್ಟಿಗೇ ಪ್ರಾರಂಭ ಮಾಡಿದರೆ, ಕರಣ ಮಂತ್ರವಾದು ದರಿಂದ **'ಕಾರ್ಯನಿಯತಪೂರ್ವವೃತ್ತಿ ಕಾರಣಮ್' 'ಅಸಾಧಾರಣಂ ಕಾರಣಂ ಕರಣಮ್'** ಎಂಬ ಅನುಶಾಸನವಿರುವುದರಿಂದ ಮಂತ್ರಕ್ಕೆ ಕ್ರಿಯೆಗಳಿಗಿಂತಲೂ ಪೂರ್ವವೃತ್ತಿತ್ವವು ಹೊಂದಿಕೊಳ್ಳುವುದಿಲ್ಲ. ಮಂತ್ರಕ್ಕೆ ಕರಣತ್ವವೂ ತಪ್ಪಿಹೋಗುತ್ತದೆ. ಹೀಗಾಗಿ ಮಂತ್ರಾಂತದಿಂದಲೇ ಕರ್ಮದ ಆರಂಭವನ್ನು ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

ಈ ವಿಷಯದಲ್ಲಿ ಆಪಸ್ತಂಬಪರಿಭಾಷಾ ಸೂತ್ರದಲ್ಲಿ **'ಆಘಾರೇ ಧಾರಾಯಾಂ ಚಾದಿ ಸಂಯೋಗಃ' [ಆಪ.ಪರಿ.ಸೂ]** ಎಂದು ಹೇಳಿರುತ್ತಾರೆ.

## ॥ ದ್ವಾದಶೋಽನುವಾಕಃ ॥

### ಆಯುಷ್ಟ*

ಆಯುಃ । ತೇ ।

ಹನ್ನೊಂದನೆಯ ಅನುವಾಕದಲ್ಲಿ ಹೋತೃನಿಯಮಗಳು ಮತ್ತು ಆಘಾರಹೋಮಗಳು ಹೇಳಲ್ಪಟ್ಟವು. ಈ ಹನ್ನೆರಡನೆಯ ಅನುವಾಕದಲ್ಲಿ ಕಾಮ್ಯೇಷ್ಟಿಯಾಜ್ಯಾ-ಪುರೋಽನುವಾಕ್ಯೆಗಳು ಹೇಳಲ್ಪಡುತ್ತವೆ.

ಅನುವಾಕದ ಪ್ರಾರಂಭದಲ್ಲಿ ೧೪ ಮಂತ್ರಗಳ ಪ್ರತೀಕಪಾಠವಿದೆ. ಈ ಮಂತ್ರಗಳಲ್ಲಿ ಕೆಲವು ಮಂತ್ರಗಳ ಪದಶಃ ಅರ್ಥವನ್ನು ಹಿಂದೆ ನೀಡಿರುವುದರಿಂದ ಇಲ್ಲಿ ಆಯಾ ಮಂತ್ರಗಳ ತಾತ್ಪರ್ಯವನ್ನು ಮಾತ್ರ ನೀಡಲಾಗುತ್ತದೆ. ಮಂತ್ರಪಾಠವನ್ನೂ ನೀಡಲಾಗುವುದು.

**ಪ್ರತೀಕದ ಮಂತ್ರಪಾಠ**

**ಆಯುಷ್ಟೇ ವಿಶ್ವತೋ ದಧದಯಮಗ್ನಿರ್ವರೇಣ್ಯಃ ।**

**ಪುನಸ್ತೇ ಪ್ರಾಣ ಆಯತಿ ಪರಾ ಯಕ್ಷ್ಮಗ್ಂ ಸುವಾಮಿ ತೇ ॥**

| ಮಂತ್ರ | ವಿನಿಯೋಗ |
|---|---|
| **ಆಯುಷ್ಟೇ....ತೇ ।** | ಆಗ್ನೇಯೇಷ್ಟಿಯ ಪುರೋಽನುವಾಕ್ಯೆ [ಅಷ್ಟಾಕಪಾಲ ಹವಿಸ್ಸಿನ] |

**ತಾತ್ಪರ್ಯ:-** ಈ ಶ್ರೇಷ್ಠನಾದ ಅಗ್ನಿಯು ನಿನಗೆ ಸಂಪೂರ್ಣವಾದ, ಸಮಸ್ತವಾದ ಆಯುಸ್ಸನ್ನು ಕೊಡಲಿ. ಹೊರಟುಹೋಗುವುದರಲ್ಲಿರುವ ನಿನ್ನ ಪ್ರಾಣವೂ ಹಿಂದಿರುಗಿ ಬರಲಿ. ನಿನ್ನ ರೋಗವನ್ನು ಅಗ್ನಿಯ ಅನುಗ್ರಹದಿಂದ ನಾಶಪಡಿಸುತ್ತೇನೆ.

**ತೈ.ಸಂ.1.3.14**

# ಆಯುರ್ದಾ ಅಗ್ನ. ಆ ಪ್ಯಾಯಸ್ವ*ಸಂ ತೇs*

---

ಆಯುರ್ದಾ ಇತ್ಯಾಯುಃ-ದಾಃ । ಅಗ್ನೇ । ಏತಿ । ಪ್ಯಾಯಸ್ವ । ಸಮಿತಿ । ತೇ ।

---

**ಆಯುರ್ದಾ ಅಗ್ನೇ ಹವಿಷೋ ಜುಷಾಣೋ ಘೃತಪ್ರತೀಕೋ ಘೃತಯೋನಿರೇಧಿ ।**

**ಘೃತಂ ಪೀತ್ವಾ ಮಧು ಚಾರು ಗವ್ಯಂ ಪಿತೇವ ಪುತ್ರಮಭಿರಕ್ಷತಾದಿಮಮ್ ॥**

---

**ಆಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣಿಯಮ್ ।**

**ಭವಾ ವಾಜಸ್ಯ ಸಂಗಥೇ ॥**

---

**ಸಂ ತೇ ಪಯಾಗ್ಂಸಿ ಸಮುಯಂತು ವಾಜಾಃ ಸಂವೃಷ್ಣಿಯಾನ್ಯಭಿಮಾತಿಷಾಹಃ॥**

**ಆಪ್ಯಾಯಮಾನೋ ಅಮೃತಾಯ ಸೋಮ ದಿವಿ ಶ್ರವಾಗ್ಂಸ್ಯುತ್ತಮಾನಿ ಧಿಷ್ವ॥**

| ಮಂತ್ರ | ವಿನಿಯೋಗ |
|---|---|
| ಆಯುರ್ದಾ...ಇಮಮ್ ॥ | ಅಷ್ಟಾಕಪಾಲ ಆಗ್ನೇಯೇಷ್ಟಿಯ ಯಾಜ್ಯೆ |
| ಆಪ್ಯಾಯಸ್ವ...ಸಂಗಥೇ ॥ | ಆಯುಷ್ಕಾಮನಿಗೆ ವಿಹಿತವಾದ ಇಷ್ಟಿಯ ಸೌಮ್ಯ ಚರುವಿನ ಪುರೋನುವಾಕ್ಯೆ |
| ಸಂ ತೇ...ಧಿಷ್ವ ॥ | ಮೇಲಿನ ಇಷ್ಟಿಯ ಯಾಜ್ಯೆ |

---

ಅಗ್ನಿಯೇ! ನಾವು ಕೊಡುವ ಈ ಪ್ರಯಾಜಾದಿ ಆಜ್ಯಹೋಮಗಳಿಂದ ಪ್ರಜ್ವಲಿಸುವವನಾಗು. ನಮ್ಮ ಹವಿಸ್ಸನ್ನು ಸೇವಿಸು. ತುಪ್ಪದಿಂದ ನಿನ್ನ ಅವಯವಗಳು ವೃದ್ಧಿಹೊಂದಲಿ. ನೀನು ನೀರಿಗೆ ಕಾರಣನು. ಅನೂಯಾಜಾದಿಗಳ ಆಜ್ಯಾಹುತಿಗಳೂ ನಿನ್ನ ಜ್ವಾಲೆಗೆ ಕಾರಣವಾಗಲಿ. ನೀನು ಯಜಮಾನನಿಗೆ ಆಯುಸ್ಸನ್ನು ನೀಡುವವನಾಗು.

**ತೈ.ಸಂ.1.3.14 , ತೈ.ಸಂ.4.2.7ತೈ.ಸಂ.4.2.7,**

# ಅವ ತೇ ಹೇಡ* ಉದುತ್ತಮಂ*

ಅವೇತಿ । ತೇ । ಹೇಡಃ । ಉದಿತಿ । ಉತ್ತಮಮಿತ್ಯುತ್-ತಮಮ್ ।

**ಅವ ತೇ ಹೇಡೋ ವರುಣ ನಮೋಭಿರವ ಯಜ್ಞೇಭಿರೀಮಹೇ ಹವಿರ್ಭಿಃ ।**

**ಕ್ಷಯನ್ನಸ್ಮಭ್ಯಮಸುರ ಪ್ರಚೇತೋ ರಾಜನ್ನೇನಾಗ್ಂಸಿ ಶಿಶ್ರಥಃ ಕೃತಾನಿ ॥**

**ಉದುತ್ತಮಂ ವರುಣ ಪಾಶಮಸ್ಮದವಾಧಮಂ ವಿ ಮಧ್ಯಮಗ್ಗ್ಂ ಶ್ರಥಾಯ ।**

**ಅಥಾ ವಯಮಾದಿತ್ಯ ವ್ರತೇ ತವಾನಾಗಸೋ ಅದಿತಯೇ ಸ್ಯಾಮ ॥**

| ಮಂತ್ರ | ವಿನಿಯೋಗ |
|---|---|
| ಅವ ತೇ...ಕೃತಾನಿ ॥ | ಮೇಲಿನ ಇಷ್ಟಿಯಲ್ಲಿ ವಾರುಣದಶಕಪಾಲಯಾಗದ ಪುರೋನುವಾಕ್ಯೆ. |
| ಉದುತ್ತಮಂ...ಸ್ಯಾಮ ॥ | ವಾರುಣದಶಕಪಾಲಯಾಗದ ಯಾಜ್ಯೆ. |

ಎಲೈ ! ಸೋಮನೇ ! ನೀನು ಹವಿಸ್ಸಿನಿಂದ ವೃದ್ಧಿಹೊಂದು. ನಿನ್ನ ಅನುಗ್ರಹದಿಂದ ಈ ಯಜಮಾನನಿಗೆ ಸರ್ವವಿಧವಾದ ಸಾಮರ್ಥ್ಯವೂ ಒದಗಲಿ. ಅನ್ನದ ಸಂಪತ್ತಿಗೆ ನೀನು ಕಾರಣನಾಗು. ಇದರಿಂದ ಆಯುಸ್ಸು ಹೆಚ್ಚಲಿ. ಜೇನಿನಂತೆ ರುಚಿಯಾಗಿರುವ, ಮನೋಹರವಾದ ಗೋಘೃತವನ್ನು ಸವಿದು-ತಂದೆಯು ಮಗನನ್ನು ಪಾಲಿಸುವಂತೆ-ಈ ಯಜಮಾನನನ್ನು ರೋಗಬಾಧೆಯಿಂದ ರಕ್ಷಿಸಿ, ದೀರ್ಘಾಯುಸ್ಸನ್ನು ಕೊಡು.

ಎಲೈ ! ಸೋಮನೇ ! ಪಾಪವನ್ನು ಹೋಗಲಾಡಿಸುವ ನಿನ್ನ ಅನುಗ್ರಹದಿಂದ ಈ ಯಜಮಾನನಿಗೆ ಕ್ಷೀರಾದಿಪಯಸ್ಸುಗಳೂ, ಬಲಕ್ಕೆ ಸಾಧನವಾದ ಅನ್ನಗಳೂ ಇವುಗಳ ಫಲವಾಗಿ ಇಂದ್ರಿಯಸಾಮರ್ಥ್ಯಗಳೂ ಹೇರಳವಾಗಿ ಪ್ರಾಪ್ತವಾಗಲಿ.ಈ ಹವಿಸ್ಸುಗಳಿಂದ

---

**ತೈ.ಸಂ.1.5.11ತೈ.ಸಂ.1.5.11**

# ಪ್ರ ಣೋ ದೇವ್ಯಾ*ನೋ ದಿವೋ*

ಪ್ರೇತಿ । ನಃ । ದೇವೀ । ಏತಿ । ನಃ । ದಿವಃ ।

**ಪ್ರ ಣೋ ದೇವೀ ಸರಸ್ವತೀ ವಾಜೇಭಿರ್ವಾಜಿನೀವತೀ । ಧೀನಾಮವಿತ್ರ್ಯವತು ॥**

**ಆ ನೋ ದಿವೋ ಬೃಹತಃ ಪರ್ವತಾದಾ ಸರಸ್ವತೀ ಯಜತಾ ಗಂತು ಯಜ್ಞಮ್ ।**

**ಹವಂ ದೇವೀ ಜುಜುಷಾಣಾ ಘೃತಾಚೀ ಶಗ್ಮಾಂ ನೋ ವಾಚಮುಶತೀ ಶೃಣೋತು ॥**

| **ಮಂತ್ರ** | **ವಿನಿಯೋಗ** |
|---|---|
| **ಪ್ರ ಣೋ ...ವತು** | ಮೇಲಿನ ಇಷ್ಟಿಯ ಸಾರಸ್ವತಚರುವಿನ ಪುರೋನುವಾಕ್ಯೆ |
| **ಆ ನೋ ...ಶೃಣೋತು ॥** | ಸಾರಸ್ವತಚರುವಿನ ಯಾಜ್ಯೆ |

ತೃಪ್ತನಾದ ನೀನು ಈ ಯಜಮಾನನಿಗೆ ದೇವಲೋಕದಲ್ಲಿ ಉತ್ತಮವಾದ ಅನ್ನಸಮೃದ್ಧಿಯು ಕ್ಷಯಿಸದಂತೆ ಒದಗಿಸು.

ವರುಣದೇವನೇ! ನಿನಗೆ ನಮ್ಮ ಮೇಲೆ ಬಂದಿರಬಹುದಾದ ಕೋಪವನ್ನು ನಮಸ್ಕಾರಗಳಿಂದಲೂ,ಯಜ್ಞಪೂಜಾದಿಗಳಿಂದಲೂ, ಆಜ್ಯಾದಿಹವಿಸ್ಸುಗಳಿಂದಲೂ ನಿನ್ನನ್ನು ಆರಾಧಿಸಿ ಹೋಗಲಾಡಿಸುತ್ತೇವೆ. ನೀನು ನಮ್ಮ ಹಿತಕ್ಕಾಗಿ ಯಾಗಶಾಲೆಯಲ್ಲಿ ವಾಸಿಸುವವನಾಗು. ಪ್ರಾಣಪ್ರದನಾದ, ಒಳ್ಳೆಯ ಮನಸ್ಸುಳ್ಳ, ಪ್ರಕಾಶಮಾನನಾದ ವರುಣದೇವನೇ! ನಾವು ಮಾಡಿರುವ ಆಯುರ್ನಾಶಕವಾದ ಪಾಪಗಳನ್ನು ಹೋಗಲಾಡಿಸು.

ವರುಣದೇವನೇ! ನಮ್ಮನ್ನು ಬಂಧಿಸಲು ಮೇಲ್ಭಾಗದಲ್ಲಿ ಹಾಕಿರುವ ನಿನ್ನ ಪಾಶವನ್ನು ಮೇಲಕ್ಕೆಳೆದು ದೂರಮಾಡು. ಕೆಳಭಾಗದ ಪಾಶವನ್ನು ಕೆಳಕ್ಕೇ ಎಳೆದು ಹೋಗಲಾಡಿಸು. ಮಧ್ಯಭಾಗದ ಪಾಶವನ್ನು ಅಡ್ಡಲಾಗಿ ಎಳೆದು ನಾಶಪಡಿಸು. ಅದಿತಿಪುತ್ರನೇ! ಈ ರೀತಿ ಪಾಶಮುಕ್ತರಾಗಿ ಪಾಪರಹಿತರಾದ ನಾವು ಅಖಂಡಿತವಾದ ಸುಖಕ್ಕಾಗಿ/ಆಯುಸ್ಸಿಗಾಗಿ ನಿನ್ನ

**ತೈ.ಸಂ.1.8.22**

## ಽಗ್ನಾ ವಿಷ್ಣೂ* ಅಗ್ನಾವಿಷ್ಣೂ*

ಅಗ್ನಾವಿಷ್ಣೂ ಇತ್ಯಗ್ನಾ-ವಿಷ್ಣೂ । ಅಗ್ನಾವಿಷ್ಣೂ ಇತ್ಯಗ್ನಾ-ವಿಷ್ಣೂ ।

**ಅಗ್ನಾವಿಷ್ಣೂ ಮಹಿ ತದ್ವಾಂ ಮಹಿತ್ವಂ ವೀತಂ ಘೃತಸ್ಯ ಗುಹ್ಯಾನಿ ನಾಮ । ದಮೇ ದಮೇ ಸಪ್ತರತ್ನಾ ದಧಾನಾ ಪ್ರತಿ ವಾಂ ಜಿಹ್ವಾ ಘೃತಮಾಚರಣ್ಯೇತ್ ॥**

**ಅಗ್ನಾವಿಷ್ಣೂ ಮಹಿ ಧಾಮ ಪ್ರಿಯಂ ವಾಂ ವೀಥೋ ಘೃತಸ್ಯ ಗುಹ್ಯಾ ಜುಷಾಣಾ ॥ ದಮೇದಮೇ ಸುಷ್ಟುತೀರ್ವಾವೃಧಾನಾ ಪ್ರತಿ ವಾಂ ಜಿಹ್ವಾ ಘೃತಮುಚ್ಚರಣ್ಯೇತ್ ॥**

| ಮಂತ್ರ | ವಿನಿಯೋಗ |
|---|---|
| ಅಗ್ನಾವಿಷ್ಣೂ ....ಮಾಚರಣ್ಯೇತ್ ॥ | ಮೇಲಿನ ಇಷ್ಟಿಯಲ್ಲಿ ಆಗ್ನಾವೈಷ್ಣವ ಪುರೋಡಾಶಯಾಗದ ಪುರೋನುವಾಕ್ಯೆ. |
| ಅಗ್ನಾವಿಷ್ಣೂ ...ಮುಚ್ಚರಣ್ಯೇತ್ ॥ | ಆಗ್ನಾವೈಷ್ಣವಯಾಗದ ಯಾಜ್ಯೆ. |

ಪೂಜಾ-ಯಜ್ಞಾದಿಗಳಲ್ಲಿ ತೊಡಗುವಂತೆ ಆಗಲಿ.

ಅನ್ನಪ್ರದಳಾದ, ಒಳ್ಳೆಯ ಬುದ್ಧಿಯನ್ನು ಕೊಟ್ಟು ಕಾಪಾಡುವ ಸರಸ್ವತೀದೇವಿಯು ನಮಗೆ ಅನ್ನಗಳನ್ನು ಕೊಟ್ಟು ಕಾಪಾಡಲಿ.

ಸರ್ವವ್ಯಾಪಕಳಾದ ಆ ಸರಸ್ವತೀದೇವಿಯು ದೂರದೇಶದಿಂದ/ಸ್ವರ್ಗದಿಂದಲೂ, ದುರ್ಗಮ ಪ್ರದೇಶದಿಂದಲೂ ನಮ್ಮ ಯಜ್ಞಶಾಲೆಗೆ ಬರಲಿ. ಹವಿಸ್ಸನ್ನು ಸೇವಿಸಲು ನಮ್ಮ ಕರೆಯನ್ನು ಕೇಳಲಿ.ಇಷ್ಟವನ್ನು ಕೊಡುವ ಆ ದೇವಿಯು ಒಲಿಸಲು ಶಕ್ತವಾದ ನಮ್ಮ ಮಾತುಗಳನ್ನು ಕೇಳಲಿ. ಕೇಳಿ ಬಂದು ಆಯುಸ್ಸನ್ನು ಕೊಡಲಿ.

ಅಗ್ನಾವಿಷ್ಣುಗಳೇ! ಪೂಜನೀಯರಾದ ನಿಮ್ಮ ಆ ಮಹಿಮೆಯು ದೊಡ್ಡದು. ಘೃತಸಂಬಂಧಿಯಾದ ಆಜ್ಯ, ಆಮಿಕ್ಷಾ, ಸಾನ್ನಾಯ್ಯ ಮುಂತಾದ ಹೆಸರುಳ್ಳ ಹವ್ಯಗಳನ್ನು ನೀವು ಸೇವಿಸಿರಿ.

**ತೈ.ಸಂ.1.8.22 ತೈ.ಸಂ.1.8.22**

## ಇಮಂ ಮೇ ವರುಣ* ತತ್ತ್ವಾಯಾ*ಮ್ಯುದು ತ್ಯಂ*

ಇಮಮ್ । ಮೇ । ವರುಣ । ತತ್। ತ್ವಾ । ಯಾಮಿ । ಉದಿತಿ । ಉ । ತ್ಯಮ್ ।

ಇಮಂ ಮೇ ವರುಣ ಶ್ರುಧೀ ಹವಮದ್ಯಾ ಚ ಮೃಡಯ । ತ್ವಾಮವಸ್ಯುರಾಚಕೇ ॥

ತತ್ತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ ।

ಅಹೇಡಮಾನೋ ವರುಣೇಹ ಬೋಧ್ಯುರುಶಗ್ಂಸ ಮಾ ನ ಆಯುಃ ಪ್ರಮೋಷೀಃ ॥

ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ ।

ದೃಶೇ ವಿಶ್ವಾಯ ಸೂರ್ಯಮ್ ॥

| ಮಂತ್ರ | ವಿನಿಯೋಗ |
|---|---|
| ಇಮಂ ...ರಾಚಕೇ ॥ | ಅಶ್ವಪ್ರತಿಗ್ರಹೇಷ್ಟಿಯ ಪುರೋನುವಾಕ್ಯೆ. |
| ತತ್ತ್ವಾ ...ಪ್ರಮೋಷೀಃ ॥ | ಅಶ್ವಪ್ರತಿಗ್ರಹೇಷ್ಟಿಯ ಯಾಜ್ಯೆ. |
| ಉದು ತ್ಯಂ...ಸೂರ್ಯಮ್ ॥ | ಪ್ರತಿಗ್ರಹೇಷ್ಟಿಯಲ್ಲಿನ ಸೂರ್ಯದೇವತಾಕವಾದ ಏಕಕಪಾಲಯಾಗದ ಪುರೋನುವಾಕ್ಯೆ. |

ಯಜಮಾನರ ಯಾಗಶಾಲೆಗಳಲ್ಲಿ ರತ್ನರೂಪವಾದ ಸ್ತೋತ್ರಗಳನ್ನು ಕೇಳಿರಿ. ನಿಮ್ಮ ಜಿಹ್ವೆಗಳು ಪ್ರತ್ಯೇಕವಾಗಿ ಪುರೋಡಾಶಾದಿಹವಿಸ್ಸುಗಳನ್ನು ಭಕ್ಷಿಸಲಿ.

ಅಗ್ನಾವಿಷ್ಣುಗಳೇ! ನಿಮ್ಮ ವಾಸಸ್ಥಾನವೂ ಶ್ರೇಷ್ಠವಾದುದು. ನೀವು ಪುರೋಡಾಶಾದಿಗಳನ್ನು

*ತೈ.ಸಂ.2.3.12 ತೈ.ಸಂ.1.4.43

**ಚಿತ್ರಮ್* । ಅಪಾಂ ನಪಾದಾ ಹ್ಯಸ್ಥಾದುಪಸ್ಥಂ ಜಿಹ್ಮಾನಾ ಮೂರ್ಧ್ವೋ ವಿದ್ಯುತಂ ವಸಾನಃ । ತಸ್ಯ ಜ್ಯೇಷ್ಠಂ ಮಹಿಮಾನಂ ವಹಂತೀರ್ ಹಿರಣ್ಯವರ್ಣಾಃ ಪರಿಯಂತಿ ಯಹ್ವೀಃ ॥**

---

ಚಿತ್ರಮ್ ॥ ಅಪಾಮ್ । ನಪಾತ್ । ಏತಿ । ಹಿ । ಅಸ್ಥಾತ್ । ಉಪಸ್ಥಮಿತ್ಯುಪ-ಸ್ಥಮ್। ಜಿಹ್ಮಾನಾಮ್ । ಊರ್ಧ್ವಃ । ವಿದ್ಯುತಮಿತಿ ವಿ-ದ್ಯುತಮ್ । ವಸಾನಃ ॥ ತಸ್ಯ । ಜ್ಯೇಷ್ಠಮ್ । ಮಹಿಮಾನಮ್। ವಹಂತೀಃ । ಹಿರಣ್ಯವರ್ಣಾ ಇತಿ ಹಿರಣ್ಯ-ವರ್ಣಾಃ । ಪರೀತಿ । ಯಂತಿ । ಯಹ್ವೀಃ ॥

---

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆ ಪ್ರಾ ದ್ಯಾವಾಪೃಥಿವೀ ಅಂತರಿಕ್ಷಗ್ಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥**

---

| ಮಂತ್ರ | ವಿನಿಯೋಗ |
|---|---|
| **ಚಿತ್ರಂ ...ತಸ್ಥುಷಶ್ಚ ॥** | ಮೇಲಿನ ಇಷ್ಟಿಯಲ್ಲಿನ ಯಾಜ್ಯಾನುವಾಕ್ಯೆ. |
| **ಅಪಾಂ.....ಯಹ್ವೀಃ ॥** | ಅಪೋನಪ್ತ್ರೀಯಚರುಯಾಗದ ಪುರೋನು ವಾಕ್ಯೆ. |

---

**ಪದಶಃ ಅರ್ಥ:-✦ಅಪಾಂ ನಪಾತ್**=ನೀರನ್ನು ನಾಶಪಡಿಸದಿರುವ,**'ಅಪಾಂ ನಪಾತ್'** ಎಂಬ ಹೆಸರಿನ ಅಗ್ನಿದೇವನು; **ಉಪಸ್ಥಮ್**=ತಾನು ಕುಳಿತುಕೊಳ್ಳುವ ಸ್ಥಾನವನ್ನು;**ಆ ಅಸ್ಥಾತ್ ಹಿ**=ಹೊಂದಿ ಕುಳಿತಿರುವನಷ್ಟೆ. [ಅತನು]; **ಜಿಹ್ಮಾನಾಮ್ ಊರ್ಧ್ವಃ**=ನದಿಗಳ ಸುಳಿಗಳ

---

**ತೈ.ಸಂ.1.4.43**

**ಸ[ಸಮ್(೧)ಅನ್ಯಾ] ಮನ್ಯಾ ಯನ್ತ್ಯುಪ ಯನ್ತ್ಯನ್ಯಾಸ್ಸಮಾನ ಮೂರ್ವಂ ನದ್ಯಃ ಪೃಣಂತಿ । ತಮೂ ಶುಚಿಗ್ಂ ಶುಚಯೋ ದೀದಿವಾಗ್ಂಸಮಪಾಂ ನಪಾತಂ ಪರಿ ತಸ್ಥುರಾಪಃ ॥**

---

ಸಮ್ । [(೧)] । ಅನ್ಯಾಃ । ಯಂತಿ । ಉಪೇತಿ । ಯಂತಿ । ಅನ್ಯಾಃ । ಸಮಾನಮ್ । ಊರ್ವಮ್ । ನದ್ಯಃ । ಪೃಣಂತಿ ॥ ತಮ್ । ಉ । ಶುಚಿಮ್ । ಶುಚಯಃ । ದೀದಿವಾಗ್ಂಸಮ್। ಅಪಾಮ್ । ನಪಾತಮ್ । ಪರೀತಿ । ತಸ್ಥುಃ । ಆಪಃ ॥

---

| ಮಂತ್ರ | ವಿನಿಯೋಗ |
|---|---|
| **ಸಮನ್ಯಾ...ಆಪಃ ॥** | ಮೇಲಿನ ಚರುಯಾಗದ ಯಾಜ್ಯಾನುವಾಕ್ಯೆ. |

---

ಮೇಲೆ ಇರತಕ್ಕವನು; **ವಿದ್ಯುತಮ್ ವಸಾನಃ**=ಮಿಂಚನ್ನೇ ಬಟ್ಟೆಯಂತೆ ಧರಿಸಿರುವ ವನು; **ತಸ್ಯ**=ಆ ದೇವನ; **ಜ್ಯೇಷ್ಠಮ್ ಮಹಿಮಾನಮ್ ವಹಂತೀಃ**=ಶ್ರೇಷ್ಠವಾದ ಮಹಿಮೆ ಯನ್ನು ಪ್ರಖ್ಯಾತಿಪಡಿಸುವ; **ಹಿರಣ್ಯವರ್ಣಾಃ**=ಚಿನ್ನದ ಬಣ್ಣವುಳ್ಳ; **ಯಹ್ವೀಃ**=ಮಹತ್ತಾಗಿರುವ ನದಿಗಳ ನೀರುಗಳು **ಪರಿಯಂತಿ**=ಸುತ್ತಲೂ ಹರಿಯುತ್ತವೆ; ✦**ಅನ್ಯಾಃ ಸಮ್ ಯಂತಿ**=ಕೆಲವು ನೀರಿನ ಪ್ರವಾಹಗಳು ಹರಿಯುತ್ತವೆ. **ಅನ್ಯಾಃ ಉಪಯಂತಿ**=[ಜೋರಾಗಿ ಹರಿಯದಿರುವುದರಿಂದ ನಿಂತಿರುವಂತೆಯೇ ಇರುವ] ಕೆಲವು ನೀರುಗಳು ಜೊತೆಗೆ ಸೇರುತ್ತವೆ; **ಸಮಾನಮ್ ಊರ್ವಮ್**=ಹಿಗ್ಗದೆ, ಕುಗ್ಗದೆ ಇರುವ ಬಡಬಾಗ್ನಿಗೆ ಆಶ್ರಯನಾದ ಸಮುದ್ರರಾಜನನ್ನು; **ನದ್ಯಃ**=ಹೊಳೆಗಳು; **ಪೃಣಂತಿ**=ತಮ್ಮ ಪ್ರವೇಶದಿಂದ ಪ್ರೀತಿಗೊಳಿಸುತ್ತವೆ; **ಶುಚಯಃ**= ಶುದ್ಧವಾಗಿರುವ; **ಆಪಃ**=ನೀರುಗಳು; **ಶುಚಿಮ್**=ಪರಿಶುದ್ಧನಾದ; **ದೀದಿವಾಂಸಮ್**= ಬಡಬಾಗ್ನಿಸಂಬಂಧದಿಂದ ಪ್ರಕಾಶಮಾನನಾದ; **ತಮ್ ಅಪಾಂ ನ ಪಾತಮ್**=ನೀರನ್ನು ಹಾನಿಗೀಡುಮಾಡದ ಸಮುದ್ರರೂಪನಾದ ಆ ಅಪಾಂನಪಾದ್ದೇವನನ್ನು; **ಪರಿತಸ್ಥುಃ ಉ**=ಸುತ್ತುಗಟ್ಟಿ ಸೇವಿಸುತ್ತವೆಯಷ್ಟೆ. [ಆ ದೇವನು ನಮ್ಮ ಇಷ್ಟಾರ್ಥವನ್ನು ಕರುಣಿಸಲಿ]

**ತಮಸ್ಮೇರಾ ಯುವತಯೋ ಯುವಾನಂ ಮರ್ಮೃಜ್ಯಮಾನಾಃ ಪರಿ ಯಂತ್ಯಾಪಃ । ಸ ಶುಕ್ರೇಣ ಶಿಕ್ವನಾ ರೇವದಗ್ನಿರ್ದೀದಾಯಾ ನಿಧ್ಮೋ ಘೃತನಿರ್ಣಿಗಪ್ಸು ।**

---

ತಮ್ । ಅಸ್ಮೇರಾಃ । ಯುವತಯಃ । ಯುವಾನಮ್ । ಮರ್ಮೃಜ್ಯಮಾನಾಃ । ಪರೀತಿ । ಯಂತಿ । ಆಪಃ ॥ ಸಃ । ಶುಕ್ರೇಣ । ಶಿಕ್ವನಾ । ರೇವತ್। ಅಗ್ನಿಃ । ದೀದಾಯ । ಅನಿಧ್ಮಃ। ಘೃತನಿರ್ಣಿಗಿತಿ ಘೃತ-ನಿರ್ಣಿಕ್ । ಅಪ್ಸ್ವಿತ್ಯಪ್-ಸು ॥

---

| ಮಂತ್ರ | ವಿನಿಯೋಗ |
|---|---|
| ತಮಸ್ಮೇ...ನಿರ್ಣಿಗಪ್ಸು ॥ | ಮೇಲಿನ ಯಾಗದ ಯಾಜ್ಯೆ |

---

✦ **ಅಸ್ಮೇರಾಃ**=ಕೃತಕವಲ್ಲದ ನಗೆಯಿಂದ ಕೂಡಿರುವ; **ಯುವತಯಃ**=ಯೌವನವುಳ್ಳ; **ಮರ್ಮೃಜ್ಯಮಾನಾಃ**=ಶುದ್ಧಗೊಳಿಸಲ್ಪಟ್ಟಿರುವ/**ಅಲಂಕೃತವಾದ; ಆಪಃ**=ಜಲದೇವತೆಗಳು; **ಯುವಾನಮ್**=ಯುವಕನಾದ; **ತಮ್**=ಆ ಅಪಾಂನಪಾದ್ದೇವನನ್ನು; **ಪರಿಯಂತಿ** =ಪರಿಚರಿಸುತ್ತವೆ. **ಶುಕ್ರೇಣ ಶಿಕ್ವನಾ [ಯುಕ್ತಃ]**=ಶುದ್ಧ ಪ್ರಕಾಶವುಳ್ಳ; **ರೇವತ್**= ಧನವಂತ ನಾದ; **ಘೃತನಿರ್ಣಿಕ್**=ಆಜ್ಯವನ್ನು ಶುದ್ಧಿಗೊಳಿಸುವ/**ನೀರನ್ನು ಶುದ್ಧಮಾಡುವ ಸಃ**=ಆ; **ಅಗ್ನಿಃ**=ಅಪಾಂನಪಾದಗ್ನಿಯು; **ಅನಿಧ್ಮಃ**=ಕಟ್ಟಿಗೆ ಮೊದಲಾದವುಗಳು ಇಲ್ಲದವನಾದರೂ; **ಅಪ್ಸು ದೀದಾಯ**=ನೀರಿನಲ್ಲಿ [ಬಡಬಾಗ್ನಿರೂಪದಿಂದ] ಜ್ವಲಿಸಿದನು. [ಆ ದೇವನು ಅಶ್ವಪ್ರತಿಗ್ರಹದೋಷವನ್ನು ದೂರ ಮಾಡಲಿ]

---

ಭಕ್ಷಿಸಿರಿ. ಎಲ್ಲ ಯಾಗಶಾಲೆಗಳಲ್ಲಿಯೂ ನಿಮ್ಮ ಸ್ತುತಿಗಳನ್ನು ಆಲಿಸಿರಿ. ನಿಮ್ಮ ನಾಲಿಗೆಗಳು ಪ್ರತ್ಯೇಕವಾಗಿ ಹವಿಸ್ಸುಗಳನ್ನು ಭಕ್ಷಿಸಲಿ.

ವರುಣದೇವನೇ! **ಈಗ** ನಮ್ಮ ಆಹ್ವಾನವನ್ನು ಕೇಳು. ನಮಗೆ ಸುಖವನ್ನುಂಟುಮಾಡು. ನಾನು ನಿನ್ನನ್ನು ರಕ್ಷಣಾರ್ಥವಾಗಿ ಸೇವಿಸುತ್ತೇನೆ.ನನಗೆ ರೋಗದಿಂದ ರಕ್ಷಣೆಯನ್ನು ನೀಡಿ, ಆಯುಸ್ಸನ್ನು ಕೊಡು.

**ಇಂದ್ರಾವರುಣಯೋರಹಗ್ಂ ಸಂರಾಜೋರವ ಆ ವೃಣೇ । ತಾ ನೋ ಮೃಡಾತ ಈದೃಶೇ ।**

---

ಇಂದ್ರಾವರುಣಯೋರಿತೀಂದ್ರಾ-ವರುಣಯೋಃ । ಅಹಮ್ । ಸಂರಾಜೋರಿತಿ ಸಂ-ರಾಜೋಃ । ಅವಃ । ಏತಿ । ವೃಣೇ ॥ ತಾ । ನಃ । ಮೃಡಾತಃ । ಈದೃಶೇ ॥

---

| ಮಂತ್ರ | ವಿನಿಯೋಗ |
| --- | --- |
| **ಇಂದ್ರಾವರುಣಯೋಃ....ಈದೃಶೇ** । | ಪಾಪಪರಿಹಾರಾರ್ಥವಾದ ಐಂದ್ರಾವರುಣೀ ಪಯಸ್ಯಾಯಾಗದ ಪುರೋನುವಾಕ್ಯೆ |

---

✦**ಅಹಮ್**=ನಾನು; **ಸಂರಾಜೋಃ**=ಚೆನ್ನಾಗಿ ಪ್ರಕಾಶಿಸುವ; **ಇಂದ್ರಾವರುಣಯೋಃ**=ಇಂದ್ರಾವರುಣದೇವತೆಗಳ; **ಅವಃ**=ರಕ್ಷಣೆಯನ್ನು; **ಆ ವೃಣೇ**=ಎದುರಾಗಿ ನಿಂತು ಕೇಳಿಕೊಳ್ಳುತ್ತೇನೆ. **ಈದೃಶೇ**=ಇಂತಹ ರಕ್ಷಣದಲ್ಲಿ ಪ್ರಾರ್ಥಿತರಾದ; **ತಾ**=ಅವರಿಬ್ಬರೂ; **ನಃ**=ನಮ್ಮನ್ನು; **ಮೃಡಾತಃ**=ಪಾಪಪರಿಹಾರ ಮಾಡಿ ಸುಖಪಡಿಸಲಿ.

---

ವರುಣನೇ! ನಾನು ನಿನ್ನನ್ನು ಮಂತ್ರಗಳಿಂದ ಸ್ತುತಿಸುತ್ತಾ ಸೇವಿಸುತ್ತೇನೆ. ಯಜಮಾನನು ಹವಿಸ್ಸುಗಳನ್ನು ಸಮರ್ಪಿಸಿ, ನಿನ್ನನ್ನು ಪ್ರಾರ್ಥಿಸಿಕೊಳ್ಳುತ್ತಾನೆ. ಎಲ್ಲರಿಂದಲೂ ಹೊಗಳಲ್ಪಡುವ ವರುಣದೇವನೇ! ಈ ಯಾಗದಲ್ಲಿ ನಮ್ಮ ಮೇಲೆ ಕುಪಿತನಾಗದೆ ನಮ್ಮ ಪ್ರಾರ್ಥನೆಯನ್ನು ತಿಳಿದುಕೋ. ನಮ್ಮ ಆಯುಸ್ಸನ್ನು ಹಾನಿಗೊಳಿಸಬೇಡ.

ಎಲ್ಲವನ್ನೂ ತಿಳಿದಿರುವ ಸೂರ್ಯದೇವನನ್ನು ಲೋಕವೆಲ್ಲವೂ ನೋಡುವುದಕ್ಕಾಗಿ ಸೂರ್ಯಕಿರಣಗಳು ಮೇಲಕ್ಕೆ ತರುತ್ತವೆ. ಅಂತಹ ಸೂರ್ಯನು ನಮ್ಮ ಇಷ್ಟಾರ್ಥವನ್ನುಂಟು ಮಾಡಿಕೊಡಲಿ.

ದೇವತೆಗಳ ಬಗೆಬಗೆಯಾದ ಸೇನೆಯಂತೆ ಇರುವ, ವರುಣ,ಅಗ್ನಿ ಮತ್ತು ಎಲ್ಲ ಲೋಕಗಳ ಕಣ್ಣೆನಂತಿರುವ ಸೂರ್ಯನು ಉದಯಿಸಿ ಮೇಲಕ್ಕೆ ಬರುತ್ತಾನೆ. ಸ್ಥಾವರಜಂಗಮಾತ್ಮಕವಾದ ಜಗತ್ತಿಗೆ ಆತ್ಮಸ್ವರೂಪನಾದಂತಹ ಸೂರ್ಯನು ದ್ಯಾವಾಭೂಮಿಗಳನ್ನೂ, ಅಂತರಿಕ್ಷವನ್ನೂ ತನ್ನ ತೇಜಸ್ಸಿನಿಂದ ತುಂಬಿಬಿಡುತ್ತಾನೆ. ಅಂತಹ ಮಹಾನುಭಾವನಾದ ಸೂರ್ಯನು ನಮ್ಮ ಕಾಮನೆಗಳನ್ನು

**ಇಂದ್ರಾವರುಣಾ ಯುವಮಧ್ವರಾಯ ನೋ [..ಯ ನಃ(೨)] ವಿಶೇ ಜನಾಯ ಮಹಿ ಶರ್ಮ ಯಚ್ಛತಮ್ । ದೀರ್ಘಪ್ರಯಜ್ಯುಮತಿ ಯೋ ವನುಷ್ಯತಿ ವಯಂ ಜಯೇಮ ಪೃತನಾಸು ದೂಢ್ಯಃ ।**

---

ಇಂದ್ರಾವರುಣೇತೀಂದ್ರಾ-ವರುಣಾ । ಯುವಮ್ । ಅಧ್ವರಾಯ । ನಃ । [(೨)] । ವಿಶೇ। ಜನಾಯ । ಮಹಿ । ಶರ್ಮ । ಯಚ್ಛತಮ್ ॥ ದೀರ್ಘಪ್ರಯಜ್ಯುಮಿತಿ ದೀರ್ಘ-ಪ್ರಯಜ್ಯುಮ್। ಅತೀತಿ । ಯಃ । ವನುಷ್ಯತಿ । ವಯಮ್ । ಜಯೇಮ । ಪೃತನಾಸು । ದೂಢ್ಯಃ ॥

---

| **ಮಂತ್ರ** | **ವಿನಿಯೋಗ** |
|---|---|
| **ಇಂದ್ರಾವರುಣಾ....ದೂಢ್ಯಃ॥** | ಪಯಸ್ಯಾಯಾಗದ ಯಾಜ್ಯಾನುವಾಕ್ಯೆ. |

---

✦ **ಇಂದ್ರಾವರುಣಾ**=ಇಂದ್ರಾವರುಣದೇವತೆಗಳೇ! **ಯುವಮ್**=ನೀವು ಇಬ್ಬರೂ; **ನಃ**=ನಮ್ಮ; **ಅಧ್ವರಾಯ**=ಯಾಗಕ್ಕೂ; **ವಿಶೇ**=ಪ್ರಜೆಗಳಿಗೂ; **ಜನಾಯ**=ಪರಿಜನರಿಗೂ; **ಮಹಿ ಶರ್ಮ**=ಅಧಿಕವಾದ ಸುಖವನ್ನು; **ಯಚ್ಛತಮ್**=ರಕ್ಷಣೆಯನ್ನಿತ್ತು ಸುಖವನ್ನುಂಟು ಮಾಡಿರಿ. **ಯಃ**=ಯಾವ ಪಾಪವು; **ದೀರ್ಘಪ್ರಯಜ್ಯುಮ್ ಅತಿ**=ನಮ್ಮ ದೀರ್ಘಕಾಲದ ಯಾಗಪ್ರಯೋಗವನ್ನು ಅತಿಕ್ರಮಿಸಿ/ಮೀರಿ; **ವನುಷ್ಯತಿ**=ಪೀಡಿಸುತ್ತದೆಯೋ. [ಅಂತಹ ಪಾಪವನ್ನು] **ವಯಮ್**=ನಾವು; **ಪೃತನಾಸು**=ಪಾಪಕೃತವಾದ ಪೀಡೆಗಳಲ್ಲಿ/**ಪಾಪಗಳೊಡನೆ ಹೋರಾಟದಲ್ಲಿ**; **ದೂಢ್ಯಃ**=ದೃಢವಾಗಿ ನಿಂತವರಾಗಿ; **ಜಯೇಮ**=[ಆ ಪಾಪವನ್ನು/ಆ ಪಾಪದಿಂದ ಉಂಟಾದ ಪೀಡೆಗಳನ್ನು] ಗೆಲ್ಲುತ್ತೇವೆ.

---

ಪೂರ್ಣಗೊಳಿಸಲಿ.

ಈ ಅಪೋನಪ್ತ್ರೀಯಚರುಯಾಗವು **'ಅಪೋನಪ್ತ್ರೀಯಂ ಚರುಂ ಪುನರೇತ್ಯ ನಿರ್ವಪೇತ್'** ಎಂಬುದಾಗಿ ವಾರುಣೇಷ್ಟಿಗೆ ಸಂಬಂಧಿಸಿದಂತೆ ವಿಹಿತವಾಗಿದೆ.

**'ಅಪಾಂ ನಪಾತ್'** ಎಂಬ ಹೆಸರಿನ ಅಗ್ನಿದೇವನು ನೀರನ್ನು ನಾಶಪಡಿಸತಕ್ಕವನಲ್ಲ.. ಮಳೆಯನ್ನು

# *ಆ ನೋ ಮಿತ್ರಾವರುಣಾ

ಏತಿ । ನಃ । ಮಿತ್ರಾವರುಣೇತಿ ಮಿತ್ರಾ-ವರುಣಾ ।

ಆ ನೋ ಮಿತ್ರಾವರುಣಾ ಘೃತೈರ್ಗವ್ಯೂತಿಮುಕ್ಷತಮ್ । ಮಧ್ವಾ ರಜಾಗ್ಂಸಿ ಸುಕ್ರತೂ ॥

| ಮಂತ್ರ | ವಿನಿಯೋಗ |
|---|---|
| ಆ ನೋ ....ಸುಕ್ರತೂ ॥ | ಪ್ರಾಯಶ್ಚಿತ್ತರೂಪವಾಗಿ ವಿಹಿತವಾಗಿರುವ ಮೈತ್ರಾವರುಣವಾದ ಆಮಿಕ್ಷಾಯಾಗದ ಪುರೋನುವಾಕ್ಯೆ. |

ಸುರಿಸತಕ್ಕವನು. ಆತನು ನೀರಿನ ಸುಳಿಗಳ ಮೇಲೆ ಇರತಕ್ಕವನು. ಮಿಂಚೇ ಅವನ ಬಟ್ಟೆ.ಅತನು ಸುರಿಸಿದ ಮಳೆಯ ನೀರುಗಳು ಚಿನ್ನದ ಬಣ್ಣದಿಂದ ಕೂಡಿರುತ್ತವೆ. ಅವು ಆತನ ಮಹಿಮೆಯನ್ನು ಎಲ್ಲೆಡೆ ಸಾರುತ್ತಾ ಭೂಮಿಯಲ್ಲಿ ಎಲ್ಲೆಲ್ಲಿಯೂ ಹರಿಯುತ್ತವೆ. ಆತನು ನಮ್ಮ ವಿಷಯದಲ್ಲಿ ಶಾಂತನಾಗಿರಲಿ.

ಕೆಲವು ಪ್ರವಾಹಗಳು ಒಟ್ಟುಗೂಡಿ ಹರಿಯುತ್ತವೆ. ಕೆಲವು ನಿಂತಿರುವಂತೆ ತೋರುತ್ತವೆ. ಸಮುದ್ರರಾಜನು ನದಿಗಳ ಪ್ರವಾಹಗಳ ಸೇರುವಿಕೆಯಿಂದ ವೃದ್ಧಿ ಹೊಂದದೆಯೂ ಅವುಗಳ ಪ್ರವೇಶವಿಲ್ಲದಿದ್ದರೆ ಕುಗ್ಗದೆಯೂ ಸಮಾನನಾಗಿರುವನು. ಆತನು ಬಡಬಾಗ್ನಿಗೂ ಆಶ್ರಯನು. ಇಂತಹ ಸಮುದ್ರನನ್ನು ನದಿಗಳು ಸೇರಿ ಆ ಸರಿತ್ಪತಿಯನ್ನು ಸಂತೋಷಪಡಿಸುತ್ತವೆ. ಅಪಾಂನಪಾದ್ದೇವನು ಸಮುದ್ರರೂಪನು; ಪರಿಶುದ್ಧನು; ಪ್ರಕಾಶಮಾನನು. ಇಂತಹ ದೇವನನ್ನು ಪರಿಶುದ್ಧವಾದ ನೀರಿನ ಪ್ರವಾಹಗಳು ಸುತ್ತುಗಟ್ಟಿ ಸೇವಿಸುತ್ತವೆ. ಆ ದೇವನು ನಮ್ಮ ಕಾಮನೆಗಳನ್ನು ಪೂರೈಸಲಿ.

ಇಲ್ಲಿ ಅಪಾಂನಪಾದಗ್ನಿಯನ್ನು ಬಡಬಾಗ್ನಿರೂಪನನ್ನಾಗಿ ವರ್ಣಿಸಲಾಗಿದೆ. ಆ ಅಗ್ನಿದೇವನು ನಿತ್ಯಯುವಕನು. ನಿತ್ಯಯೌವನವುಳ್ಳ ಪರಿಶುದ್ಧರಾಗಿ ಅಲಂಕೃತರಾದ ಜಲದೇವತೆಗಳು ಅಕೃತಕಪ್ರೀತಿಯಿಂದ ಆ ದೇವನನ್ನು ಸೇವಿಸುತ್ತವೆ.

ಆತನು ಪರಿಶುದ್ಧವಾದ ಪ್ರಕಾಶವುಳ್ಳವನು. ಧನಸಂಪನ್ನನು, ಅಗ್ನಿಸ್ವರೂಪನು. ಕಟ್ಟಿಗೆ

ತೈ.ಸಂ.1.8.22

***ಪ್ರ ಬಾಹವಾ । ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ದೇವಸ್ಯ ಹೇಡೋಽವಯಾಸಿಸೀಷ್ಠಾಃ । ಯಜಿಷ್ಠೋ ವಹ್ನಿತಮಶ್ಶೋಶುಚಾನೋ ವಿಶ್ವಾ ದ್ವೇಷಾಗ್ಂಸಿ ಪ್ರ ಮುಮುಗ್ಧ್ಯಸ್ಮತ್ ॥**

ಪ್ರೇತಿ । ಬಾಹವಾ ॥ ತ್ವಮ್ । ನಃ । ಅಗ್ನೇ । ವರುಣಸ್ಯ । ವಿದ್ವಾನ್ । ದೇವಸ್ಯ । ಹೇಡಃ। ಅವೇತಿ । ಯಾಸಿಸೀಷ್ಠಾಃ ॥ ಯಜಿಷ್ಠಃ । ವಹ್ನಿತಮ ಇತಿ ವಹ್ನಿ–ತಮಃ । ಶೋಶುಚಾನಃ। ವಿಶ್ವಾ । ದ್ವೇಷಾಗ್ಂಸಿ । ಪ್ರೇತಿ । ಮುಮುಗ್ಧಿ । ಅಸ್ಮತ್ ॥

**ಪ್ರ ಬಾಹವಾ ಸಿಸೃತಂ ಜೀವಸೇ ನ ಆ ನೋ ಗವ್ಯೂತಿಮುಕ್ಷತಂ ಘೃತೇನ । ಆ ನೋ ಜನೇ ಶ್ರವಯತಂ ಯುವಾನಾ ಶ್ರುತಂ ಮೇ ಮಿತ್ರಾವರುಣಾ ಹವೇಮಾ ॥**

| ಮಂತ್ರ | ವಿನಿಯೋಗ |
|---|---|
| ***ಪ್ರ ಬಾಹವಾ ...ಹವೇಮಾ ॥** | ಮೇಲಿನ ಯಾಗದ ಯಾಜ್ಯಾನುವಾಕ್ಯೆ. |
| **ತ್ವಂ ನೋ...ಮುಮುಗ್ಧ್ಯಸ್ಮತ್ ॥** | ಪುನರಾಧಾನಪ್ರಕರಣದಲ್ಲಿ ವಿಹಿತವಾದ ಅಗ್ನಿವಾರುಣ ಏಕಾದಶಕಪಾಲಯಾಗದ ಪುರೋನುವಾಕ್ಯೆ |

✦**ಅಗ್ನೇ**=ಅಗ್ನಿ ದೇವನೇ! **ತ್ವಮ್**=ನೀನು; **ನಃ ವಿದ್ವಾನ್**=ನಮ್ಮನ್ನು[ಆಹ್ವಾನವನ್ನು] ತಿಳಿದವನು; **ವರುಣಸ್ಯ ದೇವಸ್ಯ ಹೇಡಃ**= [ನಮ್ಮವಿಷಯದಲ್ಲಿ ಉಂಟಾಗಿರಬಹುದಾದ] ವರುಣದೇವನ ಕೋಪವನ್ನು; **ಅವ ಯಾಸಿಸೀಷ್ಠಾಃ**=ಹೋಗಲಾಡಿಸು.[ನೀನು]**ಯಜಿಷ್ಠಃ**=ಅತಿಶಯವಾಗಿ ಯಾಗನಿರ್ವಾಹಕನು. **ವಹ್ನಿತಮಃ**=ದೇವತೆಗಳಿಗೆ ಅತಿಶಯವಾಗಿ ಹವಿಸ್ಸುಗಳನ್ನು ಒಯ್ಯುವವನು. **ಶೋಶುಚಾನಃ**=ಅತಿಶಯಪ್ರಕಾಶವುಳ್ಳವನು; [ನೀನು] **ವಿಶ್ವಾ ದ್ವೇಷಾಗ್ಂಸಿ**=ಹಗೆಗಳು ಮಾಡುವ ಎಲ್ಲವಿರೋಧಿಕೃತ್ಯಗಳನ್ನೂ; **ಅಸ್ಮತ್ ಪ್ರಮುಮುಗ್ಧಿ**=ನಮ್ಮಿಂದ ದೂರ ಮಾಡು;

**ತೈ.ಸಂ.1.8.22 *ಈ ಚಿಹ್ನೆಯು ಇರುವ ಮಂತ್ರಗಳ ಪದಶಃ ಅರ್ಥವನ್ನು ಹಿಂದಿನ ಸಂಪುಟಗಳಲ್ಲಿ ನೀಡಲಾಗಿದೆ.**

**ಸ ತ್ವಂ ನೋ ಅಗ್ನೇಽವಮೋ ಭವೋತೀ ನೇದಿಷ್ಠೋ ಅಸ್ಯಾ ಉಷಸೋ ವ್ಯುಷ್ಟೌ । ಅವ ಯಕ್ಷ್ವ ನೋ ವರುಣಗ್ಂ[..ಣಮ್ (೩)]ರರಾಣೋ ವೀಹಿ ಮೃಡೀಕಗ್ಂ ಸುಹವೋ ನ ಏಧಿ ॥**

---

ಸಃ । ತ್ವಮ್ । ನಃ । ಅಗ್ನೇ । ಅವಮಃ । ಭವ । ಊತೀ । ನೇದಿಷ್ಠಃ । ಅಸ್ಯಾಃ । ಉಷಸಃ। ವ್ಯುಷ್ಟಾವಿತಿ ವಿ-ಉಷ್ಟೌ । ಅವೇತಿ । ಯಕ್ಷ್ವ । ನಃ । ವರುಣಮ್ । ರರಾಣಃ । ವೀಹಿ । ಮೃಡೀಕಮ್ । ಸುಹವ ಇತಿ ಸು-ಹವಃ । ನಃ । ಏಧಿ ॥

---

| ಮಂತ್ರ | ವಿನಿಯೋಗ |
| --- | --- |
| ಸ ತ್ವಂ ನೋ.....ಏಧಿ ॥ | ಮೇಲಿನ ಯಾಗದ ಯಾಜ್ಯಾನುವಾಕ್ಯೆ. |

---

✦ **ಅಗ್ನೇ**=ಅಗ್ನಿದೇವನೇ! **ಸಃ ತ್ವಮ್**=ಆ ಪ್ರಸಿದ್ಧನಾದ ನೀನು; **ನಃ ಊತೀ**=ನಮ್ಮ ರಕ್ಷಣೆಯಿಂದ; **ಅವಮಃ ಭವ**=ರಕ್ಷಕನಾಗು. **ಅಸ್ಯಾಃ ಉಷಸಃ ವ್ಯುಷ್ಟೌ**=ಈ ಉಷಃಕಾಲವು ಕಳೆದು ಪ್ರಾತಃಕಾಲದಲ್ಲಿ; **ನೇದಿಷ್ಠಃ**=ಅತ್ಯಂತ ಸಮೀಪದಲ್ಲಿ ಇರುವವನಾಗು. **ನಃ**=ನಮ್ಮ **ವರುಣಮ್**=ಇಷ್ಟಪ್ರಾಪ್ತಿಗೆ ತಡೆಯಾಗಿರುವ ಪಾಪವನ್ನು/ವರುಣಕೋಪವನ್ನು; **ಅವ ಯಕ್ಷ್ವ**=ಹೊಗಲಾಡಿಸು. **ರರಾಣಃ**=ಕ್ರೀಡಿಸುವವನಂತೆ/ ಸಂತೋಷಚಿತ್ತನಾಗಿ; **ಮೃಡೀಕಮ್**=ಸುಖಕರವಾದ ಹವಿಸ್ಸನ್ನು; **ವೀಹಿ**=ಭಕ್ಷಿಸು; **ನಃ ಸುಹವಃ ಏಧಿ**=ನಮ್ಮಿಂದ ನೀನು ಸುಲಭವಾಗಿ ಕರೆಯಲ್ಪಡತಕ್ಕವನಾಗಿ ಆಗು.

---

ಮೊದಲಾದ ಉರಿಯುವ ವಸ್ತುಗಳು ಇಲ್ಲದಿದ್ದರೂ ಬಡಬಾಗ್ನಿರೂಪವಾದ ನೀರಿನಲ್ಲಿ ಪ್ರಕಾಶಿಸತಕ್ಕವನು. ಸರ್ವಶೋಧಕನು. ಆತನು ನಮ್ಮನ್ನೂ ಶುದ್ಧಿಗೊಳಿಸಲಿ.

ಪಾಪದಿಂದ ರಕ್ಷಿಸುವುದಕ್ಕಾಗಿ ನಾನು ಚೆನ್ನಾಗಿ ಪ್ರಕಾಶಿಸುವ ಇಂದ್ರಾವರುಣದೇವತೆಗಳನ್ನು ಪ್ರಾರ್ಥಿಸಿಕೊಳ್ಳುತ್ತೇನೆ.ಆ ಇಬ್ಬರು ದೇವತೆಗಳೂ ನಮ್ಮ ಪಾಪಗಳನ್ನು ಪರಿಹರಿಸಿ, ನಮಗೆ ಸುಖವನ್ನುಂಟುಮಾಡಲಿ.

ಇಂದ್ರಾವರುಣದೇವತೆಗಳೇ! ನೀವು ನಮ್ಮ ಯಾಗಕ್ಕೂ, ಪ್ರಜೆಗಳಿಗೂ,ಪರಿಜನರಿಗೂ

**ಪ್ರಪ್ರಾಯಮಗ್ನಿರ್ಭರತಸ್ಯ ಶೃಣ್ವೇ ವಿ ಯತ್ಸೂರ್ಯೋ ನ ರೋಚತೇ ಬೃಹದ್ಭಾಃ । ಅಭಿ ಯಃ ಪೂರುಂ ಪೃತನಾಸು ತಸ್ಥೌ ದೀದಾಯ ದೈವ್ಯೋ ಅತಿಥಿಶ್ಶಿವೋ ನಃ ॥**

---

ಪ್ರಪ್ರೇತಿ ಪ್ರ-ಪ್ರ । ಅಯಮ್ । ಅಗ್ನಿಃ । ಭರತಸ್ಯ । ಶೃಣ್ವೇ । ವೀತಿ । ಯತ್ । ಸೂರ್ಯಃ । ನ । ರೋಚತೇ । ಬೃಹತ್ । ಭಾಃ ॥ ಅಭೀತಿ । ಯಃ । ಪೂರುಮ್ । ಪೃತನಾಸು । ತಸ್ಥೌ । ದೀದಾಯ । ದೈವ್ಯಃ । ಅತಿಥಿಃ । ಶಿವಃ । ನಃ ॥

---

| ಮಂತ್ರ | ವಿನಿಯೋಗ |
|---|---|
| **ಪ್ರಪ್ರಾಯಮಗ್ನಿಃ...ನಃ ॥** | ಪ್ರವದಗ್ನಿಹವಿರ್ಯಾಗದ ಪುರೋನುವಾಕ್ಯೆ. |

---

✦**ಅಯಮ್ ಅಗ್ನಿಃ**=ಈ ಅಗ್ನಿದೇವನು; **ಭರತಸ್ಯ**=ಹವಿಸ್ಸನ್ನು ಸಮರ್ಪಿಸುವ ಯಜಮಾನನ [ಆಹ್ವಾನವನ್ನು] **ಪ್ರ ಪ್ರ ಶೃಣ್ವೇ**=ಚೆನ್ನಾಗಿ ಕೇಳಲಿ/ಕೇಳಿ ಇಷ್ಟಾರ್ಥವನ್ನು ಕೊಡಲಿ. **ಯತ್**=ಯಾವ ಅಗ್ನಿಯು; **ಸೂರ್ಯಃ ನ**=ಸೂರ್ಯನಂತೆ; **ಬೃಹತ್ ಭಾಃ**=ಹೆಚ್ಚಾಗಿ ಪ್ರಕಾಶಿಸುವವನಾಗಿ; **ವಿ ರೋಚತೇ**=ಬೆಳಗುತ್ತಾನೆಯೋ;[ಮತ್ತು] **ಯಃ**=ಯಾವ ಅಗ್ನಿಯು; **ಪೃತನಾಸು**=ಹೋರಾಟಗಳಲ್ಲಿ; **ಪೂರುಮ್**=ಜಯಪ್ರಾರ್ತಿಯನ್ನು; **ಅಭಿ ತಸ್ಥೌ**=ಎಲ್ಲ ಕಡೆಗಳಲ್ಲಿಯೂ ಉಂಟುಮಾಡುತ್ತಾನೆಯೋ/ಬಲಪೂರ್ಣನಾದ ಶತ್ರುವನ್ನೂ ಸೋಲುವಂತೆ ಮಾಡುತ್ತಾನೆಯೋ; [ಆ ಅಗ್ನಿದೇವನು] **ದೈವ್ಯಃ**=ದೇವಹಿತಕಾರಕನಾದ/ದೇವಲೋಕದವನಾದ **ಶಿವಃ**=ಮಂಗಳಕರನಾದ; **ನಃ**=ನಮ್ಮ; **ಅತಿಥಿಃ ದೀದಾಯ**=ನಮ್ಮ ಅತಿಥಿಯಾಗಲಿ/ ಆತಿಥ್ಯವನ್ನು ಸ್ವೀಕರಿಸಲಿ/ಪ್ರಕಾಶಿಸಲಿ.

---

ರಕ್ಷಣೆಯನ್ನು ಕೊಟ್ಟು, ನಮಗೆ ಹೆಚ್ಚಾದ ಸುಖವನ್ನು ನೀಡಿರಿ. ನಿಮ್ಮ ಅನುಗ್ರಹಬಲದಿಂದ ದೀರ್ಘಕಾಲ ಯಾಗಗಳನ್ನು ಮಾಡಿ ನಿಮ್ಮನ್ನು ತೃಪ್ತಿಪಡಿಸುವ ನಮ್ಮನ್ನು ಅತಿಕ್ರಮಿಸಿ ಹಿಂಸಿಸುವ ಪಾಪವನ್ನು ದೃಢವಾಗಿ ನಿಂತು ಜಯಿಸುತ್ತೇವೆ. ಸುಖವನ್ನು ಪಡೆಯುತ್ತೇವೆ.

ಪ್ರಾಯಶ್ಚಿತ್ತರೂಪವಾಗಿ **'ಯೋಽಗ್ನಿಂ ಚಿತ್ವಾ ಸ್ತ್ರಿಯಮುಪೈತಿ ಮೈತ್ರಾವರುಣ್ಯಾಽಽಮಿಕ್ಷಯಾ ಯಜೇತ'** ಎಂದು ವಿಹಿತವಾಗಿದೆ.

**ಪ್ರ ತೇ ಯಕ್ಷಿ ಪ್ರ ತ ಇಯರ್ಮಿ ಮನ್ಮ ಭುವೋ ಯಥಾ ವಂದ್ಯೋ ನೋ ಹವೇಷು । ಧನ್ವನ್ನಿವ ಪ್ರಪಾ ಅಸಿ ತ್ವಮಗ್ನ ಇಯಕ್ಷವೇ ಪೂರವೇ ಪ್ರತ್ನ ರಾಜನ್ ॥ [(೪)]**

---

ಪ್ರೇತಿ । ತೇ । ಯಕ್ಷಿ । ಪ್ರೇತಿ । ತೇ । ಇಯರ್ಮಿ । ಮನ್ಮ । ಭುವಃ । ಯಥಾ । ವಂದ್ಯಃ। ನಃ । ಹವೇಷು ॥ ಧನ್ವನ್ । ಇವ । ಪ್ರಪೇತಿ ಪ್ರ-ಪಾ । ಅಸಿ । ತ್ವಮ್ । ಅಗ್ನೇ । ಇಯಕ್ಷವೇ। ಪೂರವೇ । ಪ್ರತ್ನ । ರಾಜನ್ ॥

---

| ಮಂತ್ರ | ವಿನಿಯೋಗ |
|---|---|
| **ಪ್ರ ತೇ ಯಕ್ಷಿ...ರಾಜನ್ ॥** | ಪ್ರವದಗ್ನಿಹವಿರ್ಯಾಗದ ಯಾಜ್ಯೆ. |

---

✦ **ಅಗ್ನೇ**=ಪ್ರವದಗ್ನಿದೇವನೇ! **ತೇ**=ನಿನಗಾಗಿ **ಪ್ರ ಯಕ್ಷಿ**=ಹೆಚ್ಚಾಗಿ ಯಾಗ ಮಾಡುತ್ತೇನೆ. **ಯಥಾ**=ಹೇಗೆ; **ನಃ ಹವೇಷು**=ನಮ್ಮ ಯಾಗಗಳಲ್ಲಿ; **ವಂದ್ಯಃ ಭುವಃ**=ವಂದ್ಯನಾಗುತ್ತೀಯೋ/ಸ್ತುತ್ಯನಾಗುವೆಯೋ/ನಮಸ್ಕಾರ್ಯನಾಗುತ್ತೀಯೋ;[ಹಾಗೆ] **ತೇ ಮನ್ಮ**=ಮನನೀಯವಾದ ನಿನ್ನ ಅನುಗ್ರಹವಿಶೇಷವನ್ನು; **ಪ್ರ ಇಯರ್ಮಿ**=ಹೆಚ್ಚಾಗಿ ಪಡೆಯುತ್ತೇನೆ; **ಪ್ರತ್ನ**=ಪುರಾತನನಾದವನೇ! **ರಾಜನ್**=ಪ್ರಕಾಶಮಾನನಾದವನೇ! **ತ್ವಮ್**= ನೀನು; **ಇಯಕ್ಷವೇ**=ಯಾಗಮಾಡಲಿಚ್ಛಿಸುವ **ಪೂರವೇ**=ದೇವತೆಗಳಿಗೆ ಹವಿಸ್ಸನ್ನು ಪೂರೈಸುವ[ಯಜಮಾನನಿಗೆ] **ಧನ್ವನ್**=ಮರುಭೂಮಿಯಲ್ಲಿ; **ಪ್ರಪಾ ಇವ ಅಸಿ**=ಪಾನೀಯಶಾಲೆಯಂತೆ/ ಅರವಟ್ಟಿಗೆಯಂತೆ ಇರುವೆ.

---

ಒಳ್ಳೆಯ ಕಾರ್ಯಗಳನ್ನು ಮಾಡುವ ಮಿತ್ರಾವರುಣರೇ! ನೀವು ಮಳೆಯ ನೀರಿನಿಂದ ಹಸುಗಳು ಮೇಯುವ ಹುಲ್ಲುಗಾವಲುಗಳನ್ನೂ, ಹೊಲಗದ್ದೆ ಮೊದಲಾದವುಗಳನ್ನೂ ತೋಯಿಸಿರಿ.ನಮ್ಮ ಹಸುಗಳ ಸಮೂಹವು ಕ್ಷೀರ-ಘೃತಾದಿಗ ಳಿಂದ ತುಂಬಿರುವಂತೆ ಮಾಡಿರಿ. ಮಧುವಿನಂತೆ ರುಚಿಯಾದ ನೀರಿನಿಂದ ಲೋಕವನ್ನು ತೋಯಿಸಿರಿ.

ನಿತ್ಯಯುವಕರಾದ ಮಿತ್ರಾವರುಣರೇ! ಬಾಹುಬಲಯುಕ್ತರಾದ ನೀವು ನಮ್ಮ ಜೀವನಕ್ಕಾಗಿ ಯಾಗಶಾಲೆಗೆ ಬನ್ನಿರಿ. ನಮ್ಮ ಕೊಟ್ಟಿಗೆಯು ಹಾಲು ಕರೆಯುವ ಹಸುಗಳಿಂದ ತುಂಬಿರುವಂತೆ

***ವಿ ಪಾಜಸಾ *ವಿ ಜ್ಯೋತಿಷಾ ।**

ವೀತಿ । ಪಾಜಸಾ ॥ ವೀತಿ । ಜ್ಯೋತಿಷಾ ॥

**ವಿ ಪಾಜಸಾ ಪೃಥುನಾ ಶೋಶುಚಾನೋ ಬಾಧಸ್ವ ದ್ವಿಷೋ ರಕ್ಷಸೋ ಅಮೀವಾಃ ।**

**ಸುಶರ್ಮಣೋ ಬೃಹತಃ ಶರ್ಮಣಿ ಸ್ಯಾಮಗ್ನೇರಹಗ್ಂ ಸುಹವಸ್ಯ ಪ್ರಣೀತೌ ॥**

**ವಿ ಜ್ಯೋತಿಷಾ ಬೃಹತಾ ಭಾತ್ಯಗ್ನಿರಾವಿರ್ವಿಶ್ವಾನಿ ಕೃಣುತೇ ಮಹಿತ್ವಾ ।**

**ಪ್ರಾದೇವೀರ್ಮಾಯಾಃ ಸಹತೇ ದುರೇವಾಃ ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ ॥**

| ಮಂತ್ರ | ವಿನಿಯೋಗ |
|---|---|
| **ವಿ ಪಾಜಸಾ ...ಪ್ರಣೀತೌ ॥** | ವಿಬಾಧವದಗ್ನಿಹವಿರ್ಯಾಗದ ಪುರೋನುವಾಕ್ಯೆ. |
| **ವಿ ಜ್ಯೋತಿಷಾ ....ವಿನಿಕ್ಷೇ ॥** | ಮೇಲಿನ ಯಾಗದ ಯಾಜ್ಯಾನುವಾಕ್ಯೆ. |

ಮಾಡಿರಿ. ನಮ್ಮ ಹೆಸರು ದೇಶದಲ್ಲೆಲ್ಲಾ ಪ್ರಸಿದ್ಧವಾಗುವಂತೆ ಮಾಡಿರಿ. ನಮ್ಮ ಆಹ್ವಾನವನ್ನು ಕೇಳಿರಿ. ನಮ್ಮ ಇಷ್ಟಾರ್ಥಗಳನ್ನು ಕರುಣಿಸಿರಿ.

ಅಗ್ನಿದೇವನೇ! ನೀನು ಎಲ್ಲವನ್ನೂ ತಿಳಿದವನು.ನಮ್ಮ ಆಹ್ವಾನವನ್ನು ತಿಳಿದುಕೋ. ನಮ್ಮ ಮೇಲೆ ಇರುವ ವರುಣದೇವನ ಕೋಪವನ್ನು ಹೋಗಲಾಡಿಸು.ಯಾಗಕಾರ್ಯನಿರ್ವಾಹಕರಲ್ಲಿ ನೀನು ಶ್ರೇಷ್ಠನು. ದೇವತೆಗಳಿಗೆ ಹೆಚ್ಚಾಗಿ ಹವಿಸ್ಸುಗಳನ್ನು ಒಯ್ಯುವವನೂ ನೀನೇ. ಅತಿಶಯಪ್ರಕಾಶವುಳ್ಳವನೂ ನೀನೇ. ನಮ್ಮ ಶತ್ರುಗಳಿಂದ ಉಂಟಾಗುವ ಹಿಂಸೆಯನ್ನು ನಿವಾರಿಸು. ಅಗ್ನ್ಯುದ್ವಾಸನದೋಷವನ್ನು ಪರಿಹರಿಸು. ಶತ್ರುಗಳ ದ್ವೇಷಕಾರ್ಯಗಳು ನಮ್ಮನ್ನು ಪೀಡಿಸದಂತೆ ಮಾಡು.

ಓ! ಅಗ್ನಿದೇವನೇ!ನೀನು ನಮ್ಮ ಕಷ್ಟಗಳನ್ನು ತಿಳಿದವನಾಗಿ ನಮ್ಮನ್ನು ರಕ್ಷಿಸು. ಬೆಳಗಾದ ಒಡನೆಯೇ ನೀನು ಅತಿಸಮೀಪದಲ್ಲಿ ಇದ್ದುಕೊಂಡು ನಮ್ಮನ್ನು ಕಾಪಾಡು.ವರುಣಕೋಪವನ್ನು/ಇಷ್ಟಪ್ರತಿಬಂಧಕವಾದ ಪಾಪವನ್ನು ಹೋಗಲಾಡಿಸು. ಸುಖವಾಗಿ ನಮ್ಮಹವಿಸ್ಸುಗಳನ್ನು ಸ್ವೀಕರಿಸು. ನಾವು

**ತೈ.ಸಂ.4.1.5, 1.2.14**

**ಸ ತ್ವಮಗ್ನೇ ಪ್ರತೀಕೇನ ಪ್ರತ್ಯೋಷ ಯಾತುಧಾನ್ಯಃ । ಉರುಕ್ಷಯೇಷು ದೀದ್ಯತ್ ॥ ತಗ್ಂ ಸುಪ್ರತೀಕಗ್ಂ ಸುದೃಶಗ್ಗ್ಂ ಸ್ವಂಚಮವಿದ್ವಾಗ್ಂಸೋ ವಿದುಷ್ಟರಗ್ಂ ಸಪೇಮ ॥**

---

ಸಃ । ತ್ವಮ್ । ಅಗ್ನೇ । ಪ್ರತೀಕೇನ । ಪ್ರತೀತಿ । ಓಷ । ಯಾತುಧಾನ್ಯ ಇತಿ ಯಾತು-ಧಾನ್ಯಃ ॥ ಉರುಕ್ಷಯೇಷ್ವಿತ್ಯುರು-ಕ್ಷಯೇಷು । ದೀದ್ಯತ್ ॥ ತಮ್ । ಸುಪ್ರತೀಕಮಿತಿ ಸು-ಪ್ರತೀಕಮ್ । ಸುದೃಶಮಿತಿ ಸು-ದೃಶಮ್ । ಸ್ವಂಚಮ್ । ಅವಿದ್ವಾಗ್ಂಸಃ । ವಿದುಷ್ಟರಮಿತಿ ವಿದುಃ-ತರಮ್ । ಸಪೇಮ ॥

---

| ಮಂತ್ರ | ವಿನಿಯೋಗ |
|---|---|
| **ಸ ತ್ವಮಗ್ನೇ...ದೀದ್ಯತ್ ॥** | ಪ್ರತೀಕವದಗ್ನಿಯ ಹವಿರ್ಯಾಗದ ಪುರೋನುವಾಕ್ಯೆ. |
| **ತಗ್ಂ ಸುಪ್ರತೀಕಗ್ಂ...ವೌಷಟ್ ॥** | ಪ್ರತೀಕವದಗ್ನಿಯ ಹವಿರ್ಯಾಗದ ಯಾಜ್ಯೆ. |

---

✦**ಅಗ್ನೇ**=ಅಗ್ನಿದೇವನೇ! **ಸ ತ್ವಮ್**=ಅಂತಹ ಪ್ರಸಿದ್ಧನಾದ ನೀನು; **ಉರುಕ್ಷಯೇಷು**= ವಿಶಾಲವಾದ ಯಾಗಶಾಲೆಗಳಲ್ಲಿ; **ದೀದ್ಯತ್**=ಜ್ವಲಿಸುವವನಾಗಿ; **ಪ್ರತೀಕೇನ**= ಯಜ್ಞಾರಂಭಕಾಲ ದಿಂದಲೇ; **ಯಾತುಧಾನ್ಯಃ**=ರಕ್ಷೋಜಾತಿಗಳೆಲ್ಲವನ್ನೂ; **ಪ್ರತ್ಯೋಷ**=ಸುಟ್ಟುಹಾಕು/ ನಾಶಪಡಿಸು.✦**ಅವಿದ್ವಾಂಸಃ**=ಅಜ್ಞಾನಿಗಳಾದ ನಾವು; **ಸುಪ್ರತೀಕಮ್**=ನಮ್ಮಲ್ಲಿ ಅನುಗ್ರಹ ಬುದ್ಧಿಯಿಂದ ಒಳ್ಳೆಯ ಉಪಕ್ರಮವುಳ್ಳ/ ಶೋಭನ ಜ್ವಾಲೆಯುಳ್ಳ; **ಸುದೃಶಮ್**=ನಮ್ಮಲ್ಲಿ ಒಳ್ಳೆಯ ಕೃಪಾದೃಷ್ಟಿಯುಳ್ಳ; **ಸ್ವಂಚಮ್**=ಶೋಭನಗತಿಯುಳ್ಳ; **ವಿದುಷ್ಟರಮ್**=ಅತಿಶಯವಾಗಿ ಎಲ್ಲವನ್ನೂ ತಿಳಿದಿರುವ; **ತಮ್**=ಆ ಅಗ್ನಿದೇವನನ್ನು; **ಸಪೇಮ**=ಸೇರಿದವರಾಗಿರುತ್ತೇವೆ.

---

ಸುಲಭವಾಗಿ ನಿನ್ನನ್ನು ಆಹ್ವಾನಿಸಿ,ನಮ್ಮ ಕಾಮನೆಗಳನ್ನು ಕೇಳಿ ಪಡೆದುಕೊಳ್ಳುವಂತೆ ಮಾಡು.

ಶತ್ರುಗಳ ಮೇಲೆ ಸ್ಪರ್ಧಿಸುವವನಿಗೆ ಮೂರು ಹವಿಸ್ಸುಗಳ ಇಷ್ಟಿಯು ವಿಹಿತವಾಗಿದೆ. ಅದರಲ್ಲಿ ಪ್ರವದಗ್ನಿಯ ಹವಿರ್ಯಾಗದ ಪುರೋನುವಾಕ್ಯೆ ಮಂತ್ರವಿದಾಗಿದೆ.

ಈ ಅಗ್ನಿದೇವನು ಹವಿಸ್ಸುಗಳನ್ನು ಅರ್ಪಿಸುವ ಯಜಮಾನನ ಆಹ್ವಾನವನ್ನು ಕೇಳಲಿ. ಈತನು

**ಸ ಯಕ್ಷದ್ವಿಶ್ವಾ ವಯುನಾನಿ ವಿದ್ವಾನ್ಪ್ರಹವ್ಯಮಗ್ನಿರಮೃತೇಷು ವೋಚತ್ । *ಅಗ್ಂಹೋಮುಚೇ**

---

ಸಃ । ಯಕ್ಷತ್ । ವಿಶ್ವಾ । ವಯುನಾನಿ । ವಿದ್ವಾನ್ । ಪ್ರೇತಿ । ಹವ್ಯಮ್ । ಅಗ್ನಿಃ । ಅಮೃತೇಷು । ವೋಚತ್ ⁞ ಅಗ್ಂಹೋಮುಚ ಇತ್ಯಗ್ಂಹಃ-ಮುಚೇ ।

---

**ಅಗ್ಂಹೋಮುಚೇ ಪ್ರಭರೇಮಾ ಮನೀಷಾಮೋಷಿಷ್ಠದಾವ್ನ್ನೇ ಸುಮತಿಂ ಗೃಣಾನಾಃ। ಇದಮಿಂದ್ರ ಪ್ರತಿ ಹವ್ಯಂ ಗೃಭಾಯ ಸತ್ಯಾಃ ಸಂತು ಯಜಮಾನಸ್ಯ ಕಾಮಾಃ ॥**

---

| ಮಂತ್ರ | ವಿನಿಯೋಗ |
|---|---|
| **ಅಗ್ಂಹೋ ...ಕಾಮಾಃ ॥** | ಶತ್ರುಬಾಧಾಪರಿಹಾರಕ್ಕಾಗಿ ವಿಹಿತವಾದ ಮೊದಲನೆಯ ಹವಿರ್ಯಾಗದ ಪುರೋನುವಾಕ್ಯೆ. |

---

**ಸಃ**=ಆತನು; **ಯಕ್ಷತ್**=ಯಾಗ ಮಾಡುವವರ **ವಿಶ್ವಾ ವಯುನಾನಿ**=ಅಭಿಪ್ರಾಯವಿಷಯಗಳೆಲ್ಲವನ್ನೂ; **ವಿದ್ವಾನ್**=ತಿಳಿದಿರುವವನಾಗಿರುತ್ತಾನೆ;[ಸಃ] **ಅಗ್ನಿ**=ಆ ಅಗ್ನಿದೇವನು; **ಹವ್ಯಮ್**=ಯಜಮಾನನು ಕೊಡುವ ಹವಿಸ್ಸುಗಳನ್ನು; **ಅಮೃತೇಷು**=ದೇವತೆಗಳಲ್ಲಿ **ಪ್ರ ವೋಚತ್**=ಚೆನ್ನಾಗಿ ತಿಳಿಸಲಿ.

---

ಸೂರ್ಯನಂತೆ ಅತಿ ತೇಜಸ್ವಿಯು.ಯುದ್ಧದಲ್ಲಿ ಶತ್ರುಗಳನ್ನು ಸೋಲಿಸುವವನು.ಆತನು ನಮಗೆ ದೇವಲೋಕಸಂಬಂಧಿಯಾದ ಅತಿಥಿಯಾಗಲಿ. ನಮಗೆ ಶತ್ರುಜಯವನ್ನು ಕರುಣಿಸಲಿ. ನಮ್ಮ ಆತಿಥ್ಯವನ್ನು ಸ್ವೀಕರಿಸಿ ನಮಗೆ ಮಂಗಳಕರನಾಗಲಿ.

ಅಗ್ನಿದೇವನೇ! ನಿನಗಾಗಿ ಅತಿಶಯವಾಗಿ ಯಾಗವನ್ನು ಅನುಷ್ಠಿಸುತ್ತೇನೆ. ಮತ್ತೆಮತ್ತೆ ನಮ್ಮ ಯಾಗಗಳಲ್ಲಿ ಪೂಜ್ಯನಾದ ನಿನ್ನನ್ನು ನಾನು ವಂದಿಸುವಂತೆ ಮಾಡುವ ಅನುಗ್ರಹ ವಿಶೇಷವನ್ನು ಪಡೆಯುತ್ತೇನೆ. ನೀನು ಪುರಾತನನು. ಸದಾ ಪ್ರಕಾಶಮಾನನಾದವನು.

**ತೈ.ಸಂ.1.6.12**

## *ವಿವೇಷ ಯನ್ಮಾ *ವಿ ನ ಇಂದ್ರೇಂದ್ರ

ವಿವೇಷ । ಯತ್ । ಮಾ ॥ ವೀತಿ । ನಃ । ಇಂದ್ರ ॥ ಇಂದ್ರ ॥

**ವಿವೇಷ ಯನ್ಮಾ ಧಿಷಣಾ ಜಜಾನ ಸ್ತವೈ ಪುರಾ ಪಾರ್ಯಾದಿಂದ್ರಮಹ್ನಃ ।**

**ಅಗ್ಂಹಸೋ ಯತ್ರ ಪೀಪರದ್ಯಥಾ ನೋ ನಾವೇವ ಯಾಂತಮುಭಯೇ ಹವಂತೇ॥**

**ವಿ ನ ಇಂದ್ರ ಮೃಧೋ ಜಹಿ ನೀಚಾ ಯಚ್ಛ ಪೃತನ್ಯತಃ ।**

**ಅಧಸ್ಪದಂ ತಮೀಂ ಕೃಧಿ ಯೋ ಅಸ್ಮಾಗ್ಂ ಅಭಿದಾಸತಿ ॥**

| **ಮಂತ್ರ** | **ವಿನಿಯೋಗ** |
|---|---|
| **ವಿವೇಷ ...ಹವಂತೇ ॥** | ಮೇಲಿನ ಯಾಗದ ಯಾಜ್ಯಾನುವಾಕ್ಯೆ. |
| **ವಿ ನ...ದಾಸತಿ ॥.** | ವೈಮೃಧೇಂದ್ರೇಷ್ಟಿಯ ಪುರೋನುವಾಕ್ಯೆ. |

ನೀನು ಮತ್ತೆ ಮತ್ತೆ ಯಾಗವನ್ನು ಮಾಡಬೇಕೆಂದಿರುವ ದೇವತೆಗಳಿಗೆ ಹವಿಸ್ಸುಗಳನ್ನು ಸಮರ್ಪಿಸುವ ಯಜಮಾನನಿಗೆ-ಅರವಟ್ಟಿಗೆಯು ಮರುಭೂಮಿಯಲ್ಲಿದಾಹದಿಂದ ಬಳಲುವವರಿಗೆ ದಾಹಶಾಂತಿಯನ್ನುಂಟುಮಾಡುವಂತೆ-ಸಮಾಧಾನವನ್ನು ನೀಡು.ಯಜಮಾನನ ಕಾಮನೆಗಳನ್ನು ಪೂರ್ಣಗೊಳಿಸು.

ಅಗ್ನಿದೇವನು ಹೆಚ್ಚಾದ ಬಲದಿಂದ ಕೂಡಿ ಯಾವಾಗಲೂ ಪ್ರಕಾಶಿಸತಕ್ಕವನು. ಆ ದೇವನು ನಮ್ಮ ವೈರಿಗಳನ್ನೂ, ರಕ್ಷೋಗಣಗಳನ್ನೂ, ರೋಗಗಳನ್ನೂ ಹೋಗಲಾಡಿಸಲಿ, ಆತನು ಒಳ್ಳೆಯ ಸುಖವನ್ನು ಕೊಡತಕ್ಕವನು. ಮಹಾತ್ಮನು.ಸುಲಭವಾಗಿ ನಮ್ಮ ಆಹ್ವಾನವನ್ನು ಕೇಳತಕ್ಕವನು.ಇಂತಹ ದೇವನ ಪರಿಚರ್ಯೆಯಲ್ಲಿ ನಾವು ಇರೋಣ. ಆತನ ಅನುಗ್ರಹದಿಂದ ನಮಗೆ ಸುಖವಾಗಲಿ.

ಅಗ್ನಿದೇವನು ಮಹಾಪ್ರಕಾಶದಿಂದ ಕೂಡಿ ಜ್ವಲಿಸುತ್ತಾನೆ. ಆತನು ತನ್ನ ಮಹಿಮೆಯನ್ನು ಪ್ರಸಿದ್ಧಪಡಿಸಲಿ. ಕಷ್ಟದಿಂದ ಸಹಿಸಬೇಕಾದ ತಮೋರೂಪವಾದ ರಾಕ್ಷಸಮಾಯೆಗಳನ್ನು

**ತೈ.ಸಂ.1.6.12, 1.6.12**

# ಕ್ಷತ್ರ*ಮಿಂದ್ರಿಯಾಣಿ ಶತಕ್ರತೋಽ*

---

ಕ್ಷತ್ರಮ್ ॥ ಇಂದ್ರಿಯಾಣಿ । ಶತಕ್ರತೋ ಇತಿ ಶತ-ಕ್ರತೋ ॥

---

ಇಂದ್ರ ಕ್ಷತ್ರಮಭಿ ವಾಮಮೋಜೋಽಜಾಯಥಾ ವೃಷಭ ಚರ್‌ಷಣೀನಾಮ್ ।

ಅಪಾನುದೋ ಜನಮಮಿತ್ರಯಂತಮುರುಂ ದೇವೇಭ್ಯೋ ಅಕೃಣೋರು ಲೋಕಮ್॥

---

ಇಂದ್ರಿಯಾಣಿ ಶತಕ್ರತೋ ಯಾ ತೇ ಜನೇಷು ಪಂಚಸು ।

ಇಂದ್ರ ತಾನಿ ತ ಆವೃಣೇ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರ... ಲೋಕಮ್॥ | ಮೇಲಿನ ಇಷ್ಟಿಯ ಯಾಜ್ಯೆ. |
| ಇಂದ್ರಿಯಾಣಿ ...ಆ ವೃಣೇ ॥ | ಇಂದ್ರಿಯಾವದಿಂದ್ರೇಷ್ಟಿಯ ಪುರೋನುವಾಕ್ಯೆ. |

---

ಸಹಿಸಿಕೊಳ್ಳಲಿ. ಸಹಿಸುವ ಶಕ್ತಿಯನ್ನು ನಮಗೆ ಕೊಡಲಿ. ಆತನು ಹೋರಿಯು ಎದುರಾಳಿಯನ್ನು ತಿವಿದು ಹಾಕಲು ಶೃಂಗಗಳನ್ನು ಸಜ್ಜುಗೊಳಿಸುವಂತೆ ರಾಕ್ಷಸರನ್ನು ನಾಶಪಡಿಸಲು ತನ್ನ ಜ್ವಾಲೆಗಳನ್ನು ಅಧಿಕಗೊಳಿಸಲಿ.ಆತನು ನಮ್ಮ ಶತ್ರುಗಳನ್ನು ನಾಶಪಡಿಸಲಿ.

ಅಗ್ನಿಯೇ! ನೀನು ವಿಶಾಲವಾದ ಯಜ್ಞಶಾಲೆಗಳಲ್ಲಿ ಜ್ವಲಿಸುತ್ತಾ ಯಾಗಾರಂಭಕಾಲದಿಂದಲೇ ರಾಕ್ಷಸಸಮೂಹಗಳನ್ನು ನಾಶಪಡಿಸು. ನಮ್ಮ ಹಗೆಗಳನ್ನು ನಿವಾರಿಸು.

---

ತೈ.ಸಂ.1.6.12, 1.6.12

# ನು ತೇ ದಾಯಿ* ॥೭೪-12॥

[ಯಸ್ಮಿನ್ಸ್ಸಮಧ್ವರಾಯ ನೋ ವರುಣಗ್ಂ ರಾಜಗ್ಗ್ಂಶ್ಚತುಶ್ಚತ್ವಾರಿಗ್ಂಶಚ್ಚ ॥]

---

ಅನ್ವಿತಿ । ತೇ । ದಾಯಿ ॥

---

**ಅನು ತೇ ದಾಯಿ ಮಹ ಇಂದ್ರಿಯಾಯ ಸತ್ರಾ ತೇ ವಿಶ್ವಮನು ವೃತ್ರಹತ್ಯೇ ।**

**ಅನು ಕ್ಷತ್ರಮನು ಸಹೋ ಯಜತ್ರೇಂದ್ರ ದೇವೇಭಿರನು ತೇ ನೃಷಹ್ಯೇ ॥**

---

| ಮಂತ್ರ | ವಿನಿಯೋಗ |
|---|---|
| ಅನು ...ನೃಷಹ್ಯೇ ॥ | ಮೇಲಿನ ಇಷ್ಟಿಯ ಯಾಜ್ಯಾನುವಾಕ್ಯೆ. |

---

ಆ ಅಗ್ನಿದೇವನು ಆರಂಭದಿಂದಲೇ ನಮಗೆ ಒಳ್ಳೆಯದನ್ನೇ ಮಾಡುವವನು. ನಮ್ಮನ್ನು ಕೃಪಾಕಟಾಕ್ಷದಿಂದ ನೋಡುವವನು. ಒಳ್ಳೆಯ ಗತಿಯುಳ್ಳವನು. ಜ್ಞಾನಿಗಳಲ್ಲಿ ಶ್ರೇಷ್ಠನು. ಇಂತಹ ಅಗ್ನಿಯನ್ನು ನಾವು ರಕ್ಷಕನನ್ನಾಗಿ ಹೊಂದಿದ್ದೇವೆ. ನಾವು ಅಜ್ಞಾನಿಗಳಾದರೂ ಭಕ್ತರ ಅಭಿಪ್ರಾಯಗಳೆಲ್ಲವನ್ನೂ ಆತನು ಬಲ್ಲನು. ಅಂತಹ ಅಗ್ನಿದೇವನು ಯಜಮಾನನು ಕೊಡುವ ಹವಿಸ್ಸುಗಳನ್ನು ಕುರಿತು ದೇವತೆಗಳಿಗೆ ಚೆನ್ನಾಗಿ ತಿಳಿಸಲಿ. ಅವರೆಲ್ಲರನ್ನೂ ಪ್ರಸನ್ನರಾಗುವಂತೆ ಮಾಡಲಿ.

ಶತ್ರುಬಾಧಾಪರಿಹಾರಕ್ಕಾಗಿ **'ಇಂದ್ರಾಯಾಗ್ಂಹೋಮುಚೇ ಪುರೋಡಾಶಮೇಕಾದಶಕಪಾಲಂ ನಿರ್ವಪೇದಿಂದ್ರಾಯ ವೈಮೃಧಾಯೇಂದ್ರಾಯೇಂದ್ರಿಯಾವತೇ [ತೈ.ಸಂ.2.4.2]** ಎಂದು ವಿಹಿತವಾಗಿರುವ ಮೂರು ಹವಿರ್ಯಾಗಗಳಲ್ಲಿ ಮೊದಲನೆಯ ಯಾಗದ ಯಾಜ್ಯಾ-ಪುರೋನುವಾಕ್ಯೆಗಳು. ಮೂರೂ ಹವಿರ್ಯಾಗಗಳ ಯಾಜ್ಯಾ-ಪುರೋನುವಾಕ್ಯೆಗಳು ಇಲ್ಲಿ ಪ್ರತೀಕವಾಗಿ ಪಠಿತವಾಗಿವೆ.

ಎಲ್ಲವನ್ನೂ ಸುಟ್ಟು ಹಾಕುವ ಸೂರ್ಯನಿಗೆ ವೃಷ್ಟಿಗಾಗಿ ಮಳೆಯ ನೀರನ್ನು ಒದಗಿಸುವ, ಪಾಪಗಳನ್ನು ಹೋಗಲಾಡಿಸುವ ಅಂಹೋಮುಗಿಂದ್ರದೇವನನ್ನು ನಾವು ಸ್ತುತಿಸುತ್ತೇವೆ. ಆತನ ಅನುಗ್ರಹದಿಂದ ಒಳ್ಳೆಯ ಬುದ್ಧಿಯನ್ನು ಪಡೆಯುತ್ತೇವೆ. ಎಲೈ! ಇಂದ್ರನೇ! ಯಜಮಾನನು ಸಮರ್ಪಿಸುವ ಈ ಹವ್ಯವನ್ನು ಸ್ವೀಕರಿಸು. ನಿನ್ನ ಅನುಗ್ರಹದಿಂದ ಯಜಮಾನನ ಕಾಮನೆಗಳು ಪೂರ್ಣವಾಗಲಿ.

---

ತೈ.ಸಂ.1.6.12

ವಿಶ್ವರೂಪಸ್ತ್ವಷ್ಟೇಂದ್ರಂ ವೃತ್ರಂ ಬ್ರಹ್ಮವಾದಿನಸ್ಸತ್ವೈ ನಾಸೋಮಯಾ

ಜ್ಯೇಷ ವೈ ದೇವರಥೋ ದೇವಾ ವೈ ನರ್ಚಿ ನಾಯಜ್ಞೋಽಗ್ನೇ

ಮಹಾನ್ತ್ರೀನ್ನಿವೀತಮಾಯುಷ್ಟೇ ದ್ವಾದಶ ॥12॥

ವಿಶ್ವರೂಪೋ ನೈನಗ್ಂ ಶೀತರೂರಾವದ್ಯ ವಸು ಪೂರ್ವೇದ್ಯುರ್ವಾಜಾ

ಇತ್ಯಗ್ನೇ ಮಹಾನ್ನಿವೀತಮನ್ವಾ ಯಂತಿ ಚತುಸ್ಸಪ್ತತಿಃ ॥74॥

॥ ವಿಶ್ವರೂಪೋಽನು ತೇ ದಾಯಿ ॥

---

ಜೀವನದ ಕೊನೆಯ ದಿನದವರೆಗೂ ಇಂದ್ರನನ್ನು ಸ್ತುತಿಸಬೇಕೆಂಬ ಬುದ್ಧಿಯು ಉಂಟಾದುದರಿಂದ ನನ್ನ ಜನ್ಮವು ಸಾರ್ಥಕವಾಯಿತು. ಈ ಸ್ತುತಿಯಿಂದ ಪ್ರಸನ್ನನಾದ ಇಂದ್ರನು ಪಾಪಗಳನ್ನು ಪರಿಹರಿಸಲಿ. ಎರಡು ಕುಲದವರೂ–ಎರಡು ದಡಗಳಲ್ಲಿರುವ ಜನರು ದೋಣಿಯ ಅಂಬಿಗನನ್ನು ದಾಟಿಸಲು ಪ್ರಾರ್ಥಿಸುವಂತೆ–ಪಾಪಗಳಿಂದ ದಾಟಿಸಲು ಯಜಮಾನನನ್ನು ಪ್ರಾರ್ಥಿಸುವಂತಾಗಲಿ.

ಇಂದ್ರನೇ! ನಮ್ಮ ಮೇಲೆ ಯುದ್ಧ ಮಾಡುವ ಶತ್ರುಗಳನ್ನು ನಾಶಪಡಿಸು.ಯುದ್ಧಮಾಡಲಿ ಚ್ಛಿಸುವವರನ್ನು ಯುದ್ಧವಿಮುಖರನ್ನಾಗಿ ಮಾಡು. ಬಲಿಷ್ಠಶತ್ರುಗಳನ್ನೂ ನಮ್ಮ ಕಾಲಿಗೆ ಬೀಳುವಂತೆ ಮಾಡು.

ಇಂದ್ರದೇವನೇ! ನೀನು ಪ್ರಶಂಸನೀಯವಾದ ಕ್ಷತ್ರಿಯತೇಜಸ್ಸನ್ನು ಹೊಂದಿ,ಜನಿಸಿರುವೆ. ನೀನು ಭಕ್ತರ ಕಾಮನೆಗಳನ್ನು ಪೂರ್ಣಗೊಳಿಸುವವನು. ನಮ್ಮ ಹಗೆಗಳನ್ನು ನಾಶಗೊಳಿಸು. ದೇವತೆಗಳಿಗೆ ಹವಿಸ್ಸನ್ನು ಕೊಡುವ ಯಜಮಾನರಿಗೆ ಉತ್ತಮವಾದ ಸ್ಥಾನಗಳನ್ನು ಕರುಣಿಸು.

ನೂರು ಅಶ್ವಮೇಧಯಾಗಗಳನ್ನು ಮಾಡಿ ಶತಕ್ರತುವೆಂದು ಪ್ರಸಿದ್ಧನಾಗಿರುವ ಇಂದ್ರನೇ! ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರ–ನಿಷಾದರಲ್ಲಿ ಅಥವಾ ದೇವ–ಮನುಷ್ಯ–ಪಿತೃ–ರಕ್ಷೋ–ಗಂಧರ್ವರಲ್ಲಿ ನೀನು ಕೊಟ್ಟಿರುವ ಶಕ್ತಿಗಳನ್ನು ಪಡೆಯಲು ಅವುಗಳನ್ನು ನಿನ್ನಿಂದ ನಾನು ಕೇಳಿಕೊಳ್ಳುತ್ತೇನೆ. ನೀನು ಅವುಗಳನ್ನು ಕರುಣಿಸು.

ಯಾಗಗಳಲ್ಲಿ ಪ್ರಧಾನವಾಗಿ ಪೂಜಿಸಲ್ಪಡಬೇಕಾಗಿರುವ ಇಂದ್ರನೇ! ಋತ್ವಿಜರಿಂದ ಹವಿಸ್ಸೆಲ್ಲವೂ ನಿನಗೆ ಕೊಡಲ್ಪಡುತ್ತದೆ. ಇದಕ್ಕೆ ಕಾರಣವೇನೆಂದರೆ ನೀನು ಮಹಾಸಾಮರ್ಥ್ಯವುಳ್ಳವನು. ವೃತ್ರನನ್ನು ಸಂಹರಿಸಿದವನು. ಧನವಂತನು, ಬಲಶಾಲಿಯು. ಎಲ್ಲವನ್ನೂ ಮೀರಿಸುವವನಾಗಿ ನೀನು ದೇವೇಂದ್ರನೇ ಆಗಿರುತ್ತೀಯೆ. ನೀನು ಶತ್ರುಜಯವನ್ನು ನಮಗೆ ಅನುಗ್ರಹಿಸು.

* * *

## ವಿನಿಯೋಗಸಂಗ್ರಹ

ಜ್ಯೋಗಾಮಯಾವಿನೋ ಹ್ಯಾ[1]ಯುರಾಯುರ್ದಾ[2]ಗ್ನೇಯಕೇ ತಥಾ ।
ಆಪ್ಯಾ[3] ಸಂತೇ[4] ಚ ಸೌಮ್ಯೇ ಸ್ಯಾದವ್ರೋ[5]ದುತ್ತೇ[6]ತಿ ವಾರುಣೇ ॥
ಸಾರಸ್ವತೇ ಪ್ರ ಣೋ[7] ಹ್ಯಾನೋ[8]ಽಗ್ನಾಽ[9-10]ಗ್ನಾವೈಷ್ಣವೇ ತಥಾ ।
ಇಮಂ[11] ತತ್ತ್ವಾ[12]ಶ್ವದಾನೇಷ್ವಾವ್ರುದು[13] ಚಿತ್ರೇತಿ[14] ಸೌರ್ಯಕೇ ।
ಅಪಾಂ[15-17]ತ್ರಯಮಪ್ಸೋನಪ್ತ್ರ [18-19]ಇಂದ್ರಾವತ್ಯೈಂದ್ರವಾರುಣೇ ॥
ಮೈತ್ರಾವರುಣ ಆಮಿಕ್ಷಾಯಾಗೇ ತ್ವಾ ನಃ[20] ಪ್ರಬೇತಿ[21] ಚ ।
ಪುನರಾಧೇಯಕೇ ತ್ವಾಗ್ನಿವಾರುಣೇ ತ್ವಂ ನ[22-23] ಇತ್ಯುಭೇ ॥
[24-25]ಪ್ರಪ್ರೇತಿ ಪ್ರವದಾಗ್ನೇಯೇ [26-27]ವಿದ್ವಯಂ ಬಾಧಸಂಯುತೇ ।
[28]ಸ ತ್ವಂ [29]ಪ್ರತೀಕಸಂಯುಕ್ತೇ [30-31]ಅಗ್ಂಹವಿತ್ಯೈವಲಂದ್ರಯಾಗಕೇ ॥
[32-33]ವೀಂದ್ರೇತಿ ವೈಮೃಧೇ ಹೀಂದ್ರಿಯಾಽ[34-35]ನು ತೇ ತ್ವಿಂದ್ರಿಯಾವತೇ ।
ಪಂಚಮಾಂತ್ಯಾನುವಾಕೇಽಸ್ಮಿನ್ ಪಂಚತ್ರಿಂಶದುದೀರಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–35**

---

## ಅನುವಾಕದ ವಿಶೇಷ ವಿಷಯಗಳು

### ಅ) ಛಂದಸ್ಸು

| ಮಂತ್ರ | ಛಂದಸ್ಸಿನ ಹೆಸರು |
|---|---|
| ೧) ಆಯುಷ್ಟೇ....ತೇ ॥ | ಅನುಷ್ಟುಪ್ |
| ೨) ಆಯುರ್ದಾ...ಇಮಮ್ ॥ | ತ್ರಿಷ್ಟುಪ್ |
| ೩) ಆಪ್ಯಾಯಸ್ವ...ಸಂಗಥೇ ॥ | ಗಾಯತ್ರೀ |
| ೪) ಸಂ ತೇ...ಧಿಷ್ವ ॥ | ತ್ರಿಷ್ಟುಪ್ |

| | |
|---|---|
| ೫) ಅವ ತೇ...ಕೃತಾನಿ ॥ | ತ್ರಿಷ್ಟುಪ್ |
| ೬) ಉದುತ್ತಮಂ...ಸ್ಯಾಮ ॥ | ತ್ರಿಷ್ಟುಪ್ |
| ೭) ಪ್ರ ಣೋ...ಅವತು ॥ | ಗಾಯತ್ರೀ |
| ೮) ಆ ನೋ...ಶೃಣೋತು ॥ | ತ್ರಿಷ್ಟುಪ್ |
| ೯) ಅಗ್ನಾವಿಷ್ಣೂ....ಮಾಚರಣ್ಯೇತ್ ॥ | ತ್ರಿಷ್ಟುಪ್ |
| ೧೦) ಅಗ್ನಾವಿಷ್ಣೂ...ಮುಚ್ಚರಣ್ಯೇತ್ ॥ | ತ್ರಿಷ್ಟುಪ್ |
| ೧೧) ಇಮಂ...ಆಚಕೇ ॥ | ಗಾಯತ್ರೀ |
| ೧೨) ತತ್ತ್ವಾ ...ಪ್ರ ಮೋಷೀಃ ॥ | ತ್ರಿಷ್ಟುಪ್ |
| ೧೩) ಉದು ತ್ಯಂ...ಸೂರ್ಯಮ್ ॥ | ಗಾಯತ್ರೀ |
| ೧೪) ಚಿತ್ರಂ ...ತಸ್ಥುಷಶ್ಚ ॥ | ತ್ರಿಷ್ಟುಪ್ |
| ೧೫) ಆಪಾಂ...ಯಹ್ವೀಃ ॥ | ತ್ರಿಷ್ಟುಪ್ |
| ೧೬) ಸಮನ್ಯಾ...ಆಪಃ ॥ | ತ್ರಿಷ್ಟುಪ್ |
| ೧೭) ತಮಸ್ಮೇ...ಅಪ್ಸು ॥ | ತ್ರಿಷ್ಟುಪ್ |
| ೧೮) ಇಂದ್ರಾ...ಈದೃಶೇ ॥ | ಗಾಯತ್ರೀ |
| ೧೯) ಇಂದ್ರಾ...ದೂಢ್ಯಃ ॥ | ಜಗತೀ |
| ೨೦) ಆ ನೋ ....ಸುಕ್ರತೂ ॥ | ಗಾಯತ್ರೀ |
| ೨೧) ಪ್ರ ಬಾಹವಾ ...ಹವೇಮ ॥ | ತ್ರಿಷ್ಟುಪ್ |

೨೨) ತ್ವಂ ನೋ... ಅಸ್ಮತ್ ॥ ತ್ರಿಷ್ಟುಪ್

೨೩) ಸ ತ್ವಂ...ಏಧಿ ॥ ತ್ರಿಷ್ಟುಪ್

೨೪) ಪ್ರ ಪ್ರಾ...ನಃ ॥ ತ್ರಿಷ್ಟುಪ್

೨೫) ಪ್ರ ತೇ ಯಕ್ಷಿ...ರಾಜನ್ನ್ ॥ ತ್ರಿಷ್ಟುಪ್

೨೬) ವಿ ಪಾಜಸಾ...ಪ್ರಣೇತೌ ॥ ತ್ರಿಷ್ಟುಪ್

೨೭) ವಿ ಜ್ಯೋತಿಷಾ ....ವಿನಿಕ್ಷ್ವೇ ॥ ತ್ರಿಷ್ಟುಪ್

೨೮) ಸ ತ್ವಮಗ್ನೇ...ದೀದ್ಯತ್ ॥ ಗಾಯತ್ರೀ

೨೯) ತಗ್ಂ ಸುಪ್ರತೀಕಂ...ವೋಚತ್ ॥ ತ್ರಿಷ್ಟುಪ್

೩೦) ಅಗ್ಂಹೋಮುಚೇ...ಕಾಮಾಃ ॥ ತ್ರಿಷ್ಟುಪ್

೩೧) ವಿವೇಷ ...ಹವಂತೇ ॥ ತ್ರಿಷ್ಟುಪ್

೩೨) ವಿ ನ...ದಾಸತಿ ॥ ಅನುಷ್ಟುಪ್

೩೩) ಇಂದ್ರ ಕ್ಷತ್ರಂ... ಲೋಕಮ್ ॥ ತ್ರಿಷ್ಟುಪ್

೩೪) ಇಂದ್ರಿಯಾಣಿ...ಆವೃಣೇ ॥ ಗಾಯತ್ರೀ

೩೫) ಅನು ತೇ ದಾಯಿ ...ನೃಷಹ್ಯೇ ॥ ತ್ರಿಷ್ಟುಪ್

**ಇತಿ ದ್ವಿತೀಯಕಾಂಡೇ ಪಂಚಮಃ ಪ್ರಶ್ನಃ**

**ಹರಿಃ ಓಮ್**

**ಶ್ರೀ ಕೃಷ್ಣಾರ್ಪಣಮಸ್ತು**

ಶ್ರೀ ಶಾರದಾಗುರುಗಣಪತಿಭ್ಯೋ ನಮಃ

ವೇದಪರಬ್ರಹ್ಮಣೇ ನಮಃ

## ದ್ವಿತೀಯಕಾಂಡಃ ಷಷ್ಠಃ ಪ್ರಶ್ನಃ

ಸಮಿಧೋ ಯಜತಿ ವಸನ್ತಮೇವರ್ತೂನಾಮವರುನ್ಧೇ

---

ಸಮಿಧ ಇತಿ ಸಂ-ಇಧಃ । ಯಜತಿ । ವಸಂತಮ್ । ಏವ । ಋತೂನಾಮ್ । ಅವೇತಿ । ರುಂಧೇ ।

---

ಐದನೆಯ ಪ್ರಶ್ನದಲ್ಲಿ ಆಘಾರಾಂತವಾದ ಹೌತ್ರ-ಆಧ್ವರ್ಯವವಿಷಯಗಳು ಹೇಳಲ್ಪಟ್ಟವು. ಈ ಆರನೆಯ ಪ್ರಪಾಠಕದಲ್ಲಿ ಪ್ರಯಾಜಾದಿವಿಧಿಗಳು ಹೇಳಲ್ಪಡುತ್ತವೆ.

ಸಮಿದಾದಿಗಳು ವಸಂತಾದಿಯಾದ ಋತುಗಳ ಅಭಿಮಾನಿದೇವತೆಗಳಾದ ಅಗ್ನಿಮೂರ್ತಿಗಳು.

ಈ ಪ್ರಯಾಜಗಳ ಮಂತ್ರಗಳು ಬ್ರಾಹ್ಮಣದ ಮೂರನೆಯ ಅಷ್ಟಕದ **'ಸತ್ಯಂ ಪ್ರಪದ್ಯೇ'** ಎಂಬ ಪ್ರಶ್ನದಲ್ಲಿ ಹೇಳಲ್ಪಟ್ಟಿವೆ. ಇಲ್ಲಿ ಅವುಗಳ ವಿಧಿಗಳೂ ಪ್ರಶಂಸಾತ್ಮಕವಾದ ಅರ್ಥವಾದಗಳೂ ಹೇಳಲ್ಪಟ್ಟಿವೆ.

---

| **ಬ್ರಾಹ್ಮಣಭಾಗ** | **ವಿವರಣೆ** |
|---|---|
| ಸಮಿಧಃ ಯಜತಿ | **'ಸಮಿತ್'** ಎಂಬ ಹೆಸರಿನ ಯಾಗವನ್ನು ಅನುಷ್ಠಿಸಬೇಕು. [ವಿಧಿ] |
| ಋತೂನಾಮ್ ವಸಂತಮ್ ಏವ ಅವರುಂಧೇ | ಋತುಗಳಲ್ಲಿ ವಸಂತಋತುವನ್ನು ಯಜಮಾನನು ಹೊಂದುತ್ತಾನೆ/ವಶದಲ್ಲಿ ಇಟ್ಟುಕೊಳ್ಳುತ್ತಾನೆ. |

ತನೂನಪಾತಂ ಯಜತಿ ಗ್ರೀಷ್ಮಮೇವಾವರುನ್ಧ ಇಡೋ

ಯಜತಿ ವರ್‌ಷಾ ಏವಾವರುನ್ಧೇ ಬರ್‌ಹಿರ್ಯಜತಿ

---

ತನೂನಪಾತಮಿತಿ ತನೂ-ನಪಾತಮ್ । ಯಜತಿ । ಗ್ರೀಷ್ಮಮ್ । ಏವ । ಅವೇತಿ ।

ರುಂಧೇ । ಇಡಃ । ಯಜತಿ । ವರ್‌ಷಾಃ । ಏವ । ಅವೇತಿ । ರುಂಧೇ । ಬರ್‌ಹಿಃ ।

ಯಜತಿ ।

---

| | |
|---|---|
| ತನೂನಪಾತಮ್ ಯಜತಿ | **'ತನೂನಪಾತ್'** ಎಂಬ ಹೆಸರಿನ ಪ್ರಯಾಜ ಯಾಗವನ್ನು ಅನುಷ್ಠಿಸಬೇಕು. **[ವಿಧಿ]** |
| ಗ್ರೀಷ್ಮಮ್ ಏವ ಅವರುಂಧೇ | ಇದರಿಂದ ಯಜಮಾನನು ಗ್ರೀಷ್ಮರ್ತುವನ್ನು ಪಡೆಯುತ್ತಾನೆ/ಅಧೀನ ಮಾಡಿಕೊಳ್ಳುತ್ತಾನೆ. |
| ಇಡಃ ಯಜತಿ | **'ಇಟ್'**ಎಂಬ ಹೆಸರಿನ ಪ್ರಯಾಜಯಾಗವನ್ನು ಅನುಷ್ಠಿಸಬೇಕು. **[ವಿಧಿ]** |
| ವರ್‌ಷಾಃ ಏವ ಅವರುಂಧೇ | ವರ್ಷಋತುವನ್ನು ಯಜಮಾನನು ಪಡೆಯುತ್ತಾನೆ / ವರ್ಷಋತುವು ಯಜಮಾನನ ಅಧೀನವಾಗುತ್ತದೆ. |
| ಬರ್‌ಹಿಃ ಯಜತಿ | ಬರ್ಹಿರ್ನಾಮಕವಾದ ಪ್ರಯಾಜಯಾಗವನ್ನು ಅನುಷ್ಠಿಸಬೇಕು. **[ವಿಧಿ]** |

---

**ತಾತ್ಪರ್ಯ:-**ಸಮಿದಾದಿಗಳು ಪ್ರಯಾಜದೇವತೆಗಳಾದ ಅಗ್ನಿಮೂರ್ತಿ ವಿಶೇಷಗಳು. **'ಸಮಿಧೋ ಅಗ್ನ ಆಜ್ಯಸ್ಯ ವಿಯಂತು'** ಮೊದಲಾದ ಮಂತ್ರಗಳು ಪ್ರಯಾಜಹೋಮ ಮಂತ್ರಗಳು. ಈ ಹೋಮಗಳಿಂದ ಋತುವಿಶೇಷಗಳಿಗೆ ಕಾರಣಗಳಾದ ಅಗ್ನಿಮೂರ್ತಿಗಳು ಪ್ರಸನ್ನರಾಗುವುದರಿಂದ ಅವರು ಆ ಋತುಗಳನ್ನು ಯಜಮಾನನ ಅಧೀನರನ್ನಾಗಿ ಮಾಡುತ್ತಾರೆ. ಇದು ಪ್ರಶಂಸೆ.

**'ಸಮಿತ್'** ಮುಂತಾದ ಪದಗಳ ನಿಷ್ಪತ್ತಿಯು ಭಟ್ಟಭಾಸ್ಕರಭಾಷ್ಯದಲ್ಲಿ ಈ ರೀತಿಯಾಗಿ ಹೇಳಲ್ಪಟ್ಟಿದೆ.

ಎಲ್ಲ ಚರಾಚರಗಳನ್ನೂ ಪ್ರಕಾಶಿಸುವಂತೆ ಮಾಡುವುದರಿಂದ **'ಸಮಿತ್'** ಇದು ವಸಂತದೇವತೆ.

ಶರದಮೇವಾವರುನ್ಧೇ ಸ್ವಾಹಾಕಾರಂ ಯಜತಿ

ಹೇಮಂತಮೇವಾವರುಂಧೇ ತಸ್ಮಾಥ್ಸ್ವಾಹಾಕೃತಾ

ಹೇಮನ್ಪಶವೋಽವ ಸೀದಂತಿ

---

ಶರದಮ್ । ಏವ । ಅವೇತಿ । ರುಂಧೇ । ಸ್ವಾಹಾಕಾರಮಿತಿ ಸ್ವಾಹಾ-ಕಾರಮ್ । ಯಜತಿ । ಹೇಮಂತಮ್ । ಏವ । ಅವೇತಿ । ರುಂಧೇ । ತಸ್ಮಾತ್ । ಸ್ವಾಹಾಕೃತಾ ಇತಿ ಸ್ವಾಹಾ-ಕೃತಾಃ । ಹೇಮನ್ನ್ । ಪಶವಃ । ಅವೇತಿ । ಸೀದಂತಿ ।

---

| | |
|---|---|
| ಶರದಮ್ ಏವ ಅವರುಂಧೇ | ಶರದೃತುವನ್ನು ಯಜಮಾನನು ಪಡೆಯುತ್ತಾನೆ/ಶರದೃತುವನ್ನು ಯಜಮಾನನು ಸ್ವಾಧೀನಕ್ಕೆ ತಂದುಕೊಳ್ಳುತ್ತಾನೆ. |
| ಸ್ವಾಹಾಕಾರಮ್ ಯಜತಿ | ಸ್ವಾಹಾಕಾರಪ್ರಯಾಜಯಾಗವನ್ನು ಮಾಡಬೇಕು. **[ವಿಧಿ]** |
| ಹೇಮಂತಮ್ ಏವ ಅವರುಂಧೇ | ಇದರಿಂದ ಯಜಮಾನನು ಹೇಮಂತಋತುವನ್ನು ಹೊಂದುತ್ತಾನೆ/ ಹೇಮಂತ ಋತುವು ಯಜಮಾನನ ಅಧೀನವಾಗುತ್ತದೆ. |
| ತಸ್ಮಾತ್ ಸ್ವಾಹಾಕೃತಾಃ | ಆದುದರಿಂದ [ಅದರಿಂದ] ಅಗ್ನಿಯಲ್ಲಿ ಹೋಮಮಾಡಲ್ಪಟ್ಟ ಸಮಿತ್ತುಗಳಂತೆ |
| ಪಶವಃ ಹೇಮನ್ ಅವಸೀದಂತಿ | ಪ್ರಾಣಿಗಳು ಹೇಮಂತಋತುವಿನಲ್ಲಿ ಹಿಮದಿಂದ ಪೀಡಿಸಲ್ಪಟ್ಟು ಕೃಶವಾಗುತ್ತವೆ/ನಾಶಹೊಂದುತ್ತವೆ. |

---

ಗ್ರೀಷ್ಮಋತುವಿನಲ್ಲಿ ಎಲ್ಲವೂ ಬಿಸಿಲಿನಿಂದ ಒಣಗುತ್ತದೆ. ಆದರೆ ನಶಿಸುವುದಿಲ್ಲ. ಆದುದರಿಂದ **'ತನೂನಪಾತ್'** ಇದು ಗ್ರೀಷ್ಮದೇವತೆ.

ಸಮಿಧೋ ಯಜತ್ಯುಷಸ ಏವ ದೇವತಾನಾಮವರುಂಧೇ

ತನೂನಪಾತಂ ಯಜತಿ ಯಜ್ಞಮೇವಾವರುಂಧ

---

ಸಮಿಧ ಇತಿ ಸಂ-ಇಧಃ । ಯಜತಿ । ಉಷಸಃ । ಏವ । ದೇವತಾನಾಮ್ । ಅವೇತಿ। ರುಂಧೇ । ತನೂನಪಾತಮಿತಿ ತನೂ-ನಪಾತಮ್ । ಯಜತಿ । ಯಜ್ಞಮ್ । ಏವ। ಅವೇತಿ । ರುಂಧೇ ।(೧)।

---

**ಮತ್ತೊಂದು ವಿಧದಲ್ಲಿ ಪ್ರಯಾಜಸ್ತುತಿ; ವಿಶೇಷವಿಧಿ; ಪ್ರಶಂಸೆ**

| | |
|---|---|
| ಸಮಿಧಃ ಯಜತಿ ದೇವತಾನಾಮ್ ಉಷಸಃ ಏವ ಅವರುಂಧೇ | ಪ್ರಕಾಶಸೂಚಕವಾದ ಸಮಿತ್ಪ್ರಯಾಜ ಯಾಗದಿಂದ ದೇವತೆಗಳಿಗೆ ಯೋಗ್ಯ ವಾದ ಉಷಃಕಾಲವನ್ನು ಯಜಮಾನನು ಪಡೆಯುತ್ತಾನೆ. |
| ತನೂನಪಾತಮ್ ಯಜತಿ ಯಜ್ಞಮ್ ಏವ ಅವರುಂಧೇ | ಅವಿನಾಶಸೂಚಕವಾದ ತನೂನಪಾತ್ಪ್ರ ಯಾಜಯಾಗದಿಂದ ಯಜ್ಞವನ್ನು ಯಜ ಮಾನನು ಪಡೆಯುತ್ತಾನೆ. |

---

ಸಸ್ಯಾಭಿವೃದ್ಧಿಗೆ ಕಾರಣವಾದ ಮಳೆಯನ್ನು ಸುರಿಸುವುದರಿಂದ **'ಇಟ್'** ಅನ್ನಕ್ಕೆ ಕಾರಣ. ವರ್ಷರ್ತುದೇವತೆ.

ಎಲ್ಲ ಸಸ್ಯಗಳೂ ಬೆಳೆದು ಫಲವನ್ನು ಕೊಡಲು ಕಾರಣವಾಗುವುದರಿಂದ **'ಬರ್ಹಿಃ'** ಇದು ಶರದೃತುದೇವತೆ.

ಅಗ್ನಿಯಿಂದ ಎಲ್ಲ ಸಮಿತ್ತುಗಳೂ ಪೀಡಿಸಲ್ಪಡುವಂತೆ ಎಲೆಗಳು ಉದುರಿ ಕ್ಷೀಣ ವಾಗುವುದರಿಂದಲೂ, ಹಿಮದಿಂದ ಪೀಡಿಸಲ್ಪಡುವ ಪಶುಗಳು ಕ್ಷೀಣಿಸುವುದರಿಂದಲೂ ಐದನೆಯ ಪ್ರಯಾಜದೇವತೆಯು **'ಸ್ವಾಹಾಕಾರ.'** ಇದು ಹೇಮಂತರ್ತುದೇವತೆ.

ಸಮಿದಾದಿಶಬ್ದಗಳನ್ನು ಸಾಯಣಾಚಾರ್ಯರು ಈ ರೀತಿಯಾಗಿ ವಿವರಿಸಿರುತ್ತಾರೆ. ೧) ಪ್ರಕಾಶಮಾನವಾದ ಅಗ್ನಿಮೂರ್ತಿಗಳು **'ಸಮಿತ್'** ೨) ಯಜಮಾನನ ಶರೀರವನ್ನು

[ರುಂಧೇ(೧)ಇಡೋ]ಇಡೋ ಯಜತಿ ಪಶೂನೇವಾವರುಂಧೇ ಬರ್ಹಿರ್ಯಜತಿ ಪ್ರಜಾಮೇವಾವರುಂಧೇ ಸಮಾನಯತ ಉಪಭೃತ -

---

ಇಡಃ । ಯಜತಿ । ಪಶೂನ್ । ಏವ । ಅವೇತಿ । ರುಂಧೇ । ಬರ್ಹಿಃ । ಯಜತಿ । ಪ್ರಜಾಮಿತಿ ಪ್ರ-ಜಾಮ್ । ಏವ । ಅವೇತಿ । ರುಂಧೇ । ಸಮಾನಯತ ಇತಿ ಸಂ-ಆನಯತೇ । ಉಪಭೃತ ಇತ್ಯುಪ-ಭೃತಃ ।

---

| | |
|---|---|
| ಇಡಃ ಯಜತಿ ಪಶೂನ್ ಏವ ಅವರುಂಧೇ | ಕ್ಷೀರಾದ್ಯನ್ನಸೂಚಕವಾದ ಇಟ್ಪ್ರಯಾಜ ಯಾಗದಿಂದ ಯಜಮಾನನು ಕ್ಷೀರಾದಿ ಸಾಧಕವಾದ ಪಶುಗಳನ್ನು ಪಡೆಯುತ್ತಾನೆ. |
| ಬರ್ಹಿಃ ಯಜತಿ ಪ್ರಜಾಮ್ ಏವ ಅವರುಂಧೇ | ಪ್ರಜಾಸೂಚಕವಾದ ಬರ್ಹಿಃಪ್ರಯಾಜ ಯಾಗದಿಂದ ಯಜಮಾನನು ಸಂತತಿಯನ್ನು ಪಡೆಯುತ್ತಾನೆ. |
| *ಸ್ವಾಹಾಕಾರಮ್ ಯಜತಿ ವಾಚಮ್ ಏವ ಅವರುಂಧೇ | ಅನೇಕ ಸ್ವಾಹಾಕಾರಶಬ್ದಗಳುಳ್ಳ, ಅನೇಕ ದೇವತಾವಾಚಕಶಬ್ದಗಳಿರುವ ಸ್ವಾಹಾಕಾರ ಪ್ರಯಾಜಯಾಗದಿಂದ ಒಳ್ಳೆಯ ವಾಕ್ ಅನ್ನು ಯಜಮಾನನು ಹೊಂದುವನು. |
| ಉಪಭೃತಃ ಸಮಾನಯತೇ | [ತೃತೀಯಪ್ರಯಾಜದ ಅನಂತರ ಚತುರ್ಥ, ಪಂಚಮಪ್ರಯಾಜಗಳಿಗಾಗಿ] ಉಪಭೃತ್ತಿನಿಂದ ಅರ್ಧಭಾಗ ಆಜ್ಯವನ್ನು ಜುಹೂವಿನಲ್ಲಿ ಚೆನ್ನಾಗಿ ಹಾಕಬೇಕು. **[ವಿಧಿ]** |

---

ನಾಶಪಡಿಸದೆ ರಕ್ಷಿಸುವುದರಿಂದ **'ತನೂನಪಾತ್'** ೩) ಸ್ತುತ್ಯವಾದ ಅಗ್ನಿಮೂರ್ತಿಗಳು **'ಇಟ್'** ೪)ಫಲವನ್ನು ವಿಸ್ತರಿಸುವುದರಿಂದ **'ಬರ್ಹಿ'**೫) ಆಜ್ಯಭಾಗದೇವತೆಗಳನ್ನು ಮೊದಲು ಮಾಡಿ.

---

*ಶ್ರುತಿಯಲ್ಲಿ ಇದು ಅನಂತರ ಪಠಿತವಾಗಿದೆ. ಅರ್ಥಕ್ಕೆ ಅನುಗುಣವಾಗಿ ಇಲ್ಲಿ ವಿವರಿಸಲಾಗಿದೆ.

ಸ್ತೇಜೋ ವಾ ಆಜ್ಯಂ ಪ್ರಜಾ ಬರ್ಹಿಃ ಪ್ರಜಾಸ್ವೇವ ತೇಜೋ ದಧಾತಿ ಸ್ವಾಹಾಕಾರಂ ಯಜತಿ ವಾಚಮೇವಾವರುಂಧೇ ದಶ ಸಂಪದ್ಯಂತೇ

---

ತೇಜಃ । ವೈ । ಆಜ್ಯಮ್ । ಪ್ರಜಾ ಇತಿ ಪ್ರ-ಜಾಃ । ಬರ್ಹಿಃ । ಪ್ರಜಾಸ್ವಿತಿ ಪ್ರ-ಜಾಸು । ತೇಜಃ । ಏವ । ದಧಾತಿ । ಸ್ವಾಹಾಕಾರಮಿತಿ ಸ್ವಾಹಾ-ಕಾರಮ್ । ಯಜತಿ । ವಾಚಮ್ । ಏವ । ಅವೇತಿ । ರುಂಧೇ । ದಶ । ಸಮಿತಿ । ಪದ್ಯಂತೇ ।

---

| | |
|---|---|
| ಆಜ್ಯಮ್ ತೇಜಃ ವೈ | ಆಜ್ಯವು ತೇಜಸ್ಸೇ ಆಗಿದೆಯಷ್ಟೆ. |
| ಪ್ರಜಾ ಬರ್ಹಿಃ | [ಚತುರ್ಥ] ಬರ್ಹಿಃಪ್ರಯಾಜವು ಪ್ರಜಾ ರೂಪವಾಗಿದೆ. |
| ಪ್ರಜಾಸು ಏವ ತೇಜಃ ದಧಾತಿ | [ಈ ಹೋಮದಿಂದ] ಯಜಮಾನನು ಪ್ರಜೆಗಳಲ್ಲಿ ತೇಜಸ್ಸನ್ನು ನೆಲೆಗೊಳಿಸುತ್ತಾನೆ. |

**ದಶಸಂಖ್ಯೆಯ ಪ್ರಶಂಸೆ**

| | |
|---|---|
| ದಶ ಸಂಪದ್ಯಂತೇ | [ವಸಂತಾದಿಪ್ರಾಪ್ತಿಯಿಂದ ಐದು, ಉಷಃ ಕಾಲಾದಿಪ್ರಾಪ್ತಿಯಿಂದ ಐದು, ಹೀಗೆ ಫಲ ಭೇದದಿಂದ] ಪ್ರಯಾಜಗಳ ಸಂಖ್ಯೆಯು ಹತ್ತಾಯಿತು. |

---

ಯಾಗದೇವತೆಗಳೆಲ್ಲರಿಗೂ ಆಜ್ಯವನ್ನು ಕೊಡುವುದರಿಂದ **'ಸ್ವಾಹಾಕಾರ'**. ಇವು ಅಗ್ನಿಮೂರ್ತಿಗಳು. ಇವುಗಳನ್ನು ಉದ್ದೇಶಿಸಿ ಮಾಡುವ ಐದು ಹೋಮಗಳು ಪ್ರಯಾಜಗಳು.

**'ಸ್ವಾಹಾಕಾರ'** ಎಂಬುದು ಐದನೆಯ ಪ್ರಯಾಜವಾಗಿದೆ. ಈ ಪ್ರಯಾಜದಲ್ಲಿ ಸ್ವಾಹಾ ಎಂಬುದಾಗಿ ಅನೇಕ ಬಾರಿ ಹೇಳುವುದರಿಂದ, ಅಗ್ನಿ ಮುಂತಾದ ಅನೇಕ ಶಬ್ದಗಳನ್ನು ಹೇಳುವುದರಿಂದ ಈ ಪ್ರಯಾಜದ **'ಸ್ವಾಹಾಕಾರ'** ಎಂಬ ಹೆಸರು ಅನ್ವರ್ಥವಾಗಿದೆ. **ಸು+ಆಹ**=ಚೆನ್ನಾಗಿ/ಹೆಚ್ಚಾಗಿ ಹೇಳುವುದು ಎಂದು **ಸ್ವಾಹಾ** ಶಬ್ದದ ಅರ್ಥವಿದೆ.

ದಶಾಕ್ಷರಾ ವಿರಾಡನ್ನಂ ವಿರಾಡ್ವಿರಾಜೈವಾನ್ನಾದ್ಯಮವರುಂಧೇ

ಸಮಿಧೋ ಯಜತ್ಯಸ್ಮಿನ್ನೇವ ಲೋಕೇ ಪ್ರತಿತಿಷ್ಠತಿ

ತನೂನಪಾತಂ ಯಜತಿ [೨]

---

ದಶಾಕ್ಷರೇತಿ ದಶ-ಅಕ್ಷರಾ । ವಿರಾಡಿತಿ ವಿ-ರಾಟ್ । ಅನ್ನಮ್ । ವಿರಾಡಿತಿ ವಿ-ರಾಟ್ । ವಿರಾಜೇತಿ ವಿ-ರಾಜಾ । ಏವ । ಅನ್ನಾದ್ಯಮಿತ್ಯನ್ನ-ಅದ್ಯಮ್ । ಅವೇತಿ । ರುಂಧೇ । ಸಮಿಧ ಇತಿ ಸಂ-ಇಧಃ । ಯಜತಿ । ಅಸ್ಮಿನ್ । ಏವ । ಲೋಕೇ । ಪ್ರತೀತಿ । ತಿಷ್ಠತಿ । ತನೂನಪಾತಮಿತಿ ತನೂ-ನಪಾತಮ್ । ಯಜತಿ । [೨]

---

| | |
|---|---|
| ದಶಾಕ್ಷರಾ ವಿರಾಟ್ ಅನ್ನಮ್ | ವಿರಾಟ್ ಛಂದಸ್ಸು ಹತ್ತು ಅಕ್ಷರಗಳಿಂದ ಕೂಡಿದೆ. |
| ವಿರಾಟ್ | ಅನ್ನವೂ ವಿರಾಡ್ರೂಪವಾಗಿದೆ/ವ್ಯಾಪಕವಾಗಿದೆ. |
| ವಿರಾಜಾ ಏವ ಅನ್ನಾದ್ಯಮ್ ಅವರುಂಧೇ | ಅನ್ನರೂಪವಾದ ದಶಸಂಖ್ಯೆಯಿಂದ ಯಜಮಾನನು ರಾಜಾರ್ಹವಾದ ಉತ್ತಮವಾದ ಅನ್ನದ ಭೋಗವನ್ನು ಹೊಂದುತ್ತಾನೆ. |

**ಪ್ರಕಾರಾಂತರದಿಂದ ಪ್ರಯಾಜಪ್ರಶಂಸೆ**

| | |
|---|---|
| ಸಮಿಧಃ ಯಜತಿ | ಯಜಮಾನನು ಸಮಿತ್ಪ್ರಯಾಜಯಾಗವನ್ನು ಅನುಷ್ಠಿಸುತ್ತಾನೆ. |
| ಅಸ್ಮಿನ್ ಏವ ಲೋಕೇ ಪ್ರತಿತಿಷ್ಠತಿ | ಇದರಿಂದ ಯಜಮಾನನು [ಲೋಕಗಳಲ್ಲಿ ಪ್ರಥಮವಾದ] ಭೂಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ. |
| ತನೂನಪಾತಮ್ ಯಜತಿ | ಯಜಮಾನನು ತನೂನಪಾತ್ಪ್ರಯಾಜಯಾಗವನ್ನು ಮಾಡುತ್ತಾನೆ. |

---

ಇಲ್ಲಿ ಈ ಪ್ರಯಾಜಗಳ ಪ್ರಶಂಸೆಯು ಇದೆ, ಶ್ರುತಿಯಲ್ಲಿ ಪ್ರಶಂಸೆಯು ಅನೇಕ ರೀತಿಯಲ್ಲಿ ಇರುತ್ತದೆ. ಅನೇಕ ಕಡೆಗಳಲ್ಲಿ ಸಂಖ್ಯಾಪ್ರಶಂಸೆಯೂ ಬರುತ್ತದೆ.ಇದು ದಶಸಂಖ್ಯೆಯ ಪ್ರಶಂಸೆ.

ಯಜ್ಞ ಏವಾಂತರಿಕ್ಷೇ ಪ್ರತಿತಿಷ್ಠತೀಡೋ ಯಜತಿ ಪಶುಷ್ವೇವ ಪ್ರತಿತಿಷ್ಠತಿ ಬರ್‌ಹಿರ್ಯಜತಿ ಯ ಏವ ದೇವಯಾನಾಃ ಪಂಥಾನಸ್ತೇಷ್ವೇವ ಪ್ರತಿತಿಷ್ಠತಿ

---

ಯಜ್ಞೇ । ಏವ । ಅಂತರಿಕ್ಷೇ । ಪ್ರತೀತಿ । ತಿಷ್ಠತಿ । ಇಡಃ । ಯಜತಿ । ಪಶುಷು । ಏವ । ಪ್ರತೀತಿ । ತಿಷ್ಠತಿ । ಬರ್‌ಹಿಃ । ಯಜತಿ । ಯೇ । ಏವ । ದೇವಯಾನಾ ಇತಿ ದೇವ-ಯಾನಾಃ । ಪಂಥಾನಃ । ತೇಷು । ಏವ । ಪ್ರತೀತಿ । ತಿಷ್ಠತಿ ।

---

| | |
|---|---|
| ಅಂತರಿಕ್ಷೇ ಯಜ್ಞೇ ಏವ ಪ್ರತಿತಿಷ್ಠತಿ | [ಭೂಲೋಕ-ಸ್ವರ್ಗಲೋಕಗಳ ಮಧ್ಯದಲ್ಲಿ ಸ್ವರ್ಗಸಾಧನರೂಪವಾದ] ಅಂತರಿಕ್ಷರೂಪವಾದ ಯಜ್ಞದಲ್ಲಿ ಯಜಮಾನನು ಪ್ರಕೃಷ್ಟಸ್ಥಿತಿಯನ್ನು ಹೊಂದುತ್ತಾನೆ. |
| ಇಡಃ ಯಜತಿ ಪಶುಷು ಏವ ಪ್ರತಿತಿಷ್ಠತಿ | ಯಜಮಾನನು ಇಟ್ಟ್ರಯಾಜಯಾಗವನ್ನು ಮಾಡುತ್ತಾನೆ. ಈ ಪಶುಸಂಬಂಧಿಯಾದ ಇಟ್ಟ್ರಯಾಜಯಾಗದಿಂದ ಪಶುಗಳಲ್ಲಿ ಪ್ರತಿಷ್ಠಿತನಾಗುವನು/ಪಶುಸಂಪತ್ತಿಯನ್ನು ಪಡೆಯುವನು. |
| ಬರ್‌ಹಿಃ ಯಜತಿ | ಬರ್ಹಿಃಪ್ರಯಾಜಯಾಗವನ್ನು ಅನುಷ್ಠಿಸುತ್ತಾನೆ. |
| ಯೇ ದೇವಯಾನಾಃ ಪಂಥಾನಃ ಏವ ತೇಷು ಏವ ಪ್ರತಿತಿಷ್ಠತಿ | [ಬರ್ಹಿಃಶಬ್ದದಿಂದ] ದೇವಮಾರ್ಗಪ್ರಾಪಕವಾದ ಯಜ್ಞಸೂಚನೆಯಿರುವುದರಿಂದ ದೇವಮಾರ್ಗದಲ್ಲಿ ಪ್ರತಿಷ್ಠಿತನಾಗುತ್ತಾನೆ. |

---

ಫಲಭೇದದಿಂದ ಪ್ರಯಾಜಗಳ ದಶಂಖ್ಯಾಸಂಪತ್ತಿಯು ಆಗಿರುವಂತೆ, ಜುಹೂವಿನಲ್ಲಿ ಪಂಚಗೃಹೀತದಲ್ಲಿ [ಐದು ಬಾರಿ ತುಂಬಿಕೊಳ್ಳಲ್ಪಟ್ಟಿದ್ದು] ಔಪಭೃತದ ಪಂಚಗೃಹೀತಾಜ್ಯವನ್ನು ಹಾಕುವುದರಿಂದ ದಶಸಂಖ್ಯಾಸಂಪತ್ತಿಯು ಆಗುತ್ತದೆ ಎಂದೂ ಹೇಳಬಹುದು.

ಸ್ವಾಹಾಕಾರಂ ಯಜತಿ ಸುವರ್ಗ ಏವ ಲೋಕೇ ಪ್ರತಿತಿಷ್ಠತ್ಯೇ

ತಾವನ್ತೋ ವೈ ದೇವಲೋಕಾಸ್ತೇಷ್ವೇವ ಯಥಾಪೂರ್ವಂ

ಪ್ರತಿತಿಷ್ಠತಿ ದೇವಾಸುರಾ ಏಷು ಲೋಕೇಷ್ವಸ್ಪರ್ಧಂತ

---

ಸ್ವಾಹಾಕಾರಮಿತಿ ಸ್ವಾಹಾ-ಕಾರಮ್ । ಯಜತಿ । ಸುವರ್ಗ ಇತಿ ಸುವಃ-ಗೇ । ಏವ । ಲೋಕೇ । ಪ್ರತೀತಿ । ತಿಷ್ಠತಿ । ಏತಾವಂತಃ । ವೈ । ದೇವಲೋಕಾ ಇತಿ ದೇವ-ಲೋಕಾಃ। ತೇಷು । ಏವ । ಯಥಾಪೂರ್ವಮಿತಿ ಯಥಾ-ಪೂರ್ವಮ್ । ಪ್ರತೀತಿ । ತಿಷ್ಠತಿ । ದೇವಾಸುರಾ ಇತಿ ದೇವ-ಅಸುರಾಃ । ಏಷು । ಲೋಕೇಷು । ಅಸ್ಪರ್ಧಂತ ।

---

| | |
|---|---|
| ಸ್ವಾಹಾಕಾರಂ ಯಜತಿ | ಸ್ವಾಹಾಕಾರಪ್ರಯಾಜಯಾಗವನ್ನು ಮಾಡುತ್ತಾನೆ. |
| ಸುವರ್ಗೇ ಏವ ಲೋಕೇ ಪ್ರತಿತಿಷ್ಠತಿ | [ಕೊನೆಯದಾದ ಈ ಪ್ರಯಾಜದಿಂದ] ಲೋಕಗಳಲ್ಲಿ ಕೊನೆಯದಾದ ಸ್ವರ್ಗಲೋಕದಲ್ಲಿ ಸ್ಥಿರಸ್ಥಿತಿಯನ್ನು ಪಡೆಯುವನು. |
| ಏತಾವಂತಃ ವೈ ದೇವಲೋಕಾಃ | ಮಾನವರು ಅಪೇಕ್ಷಿಸುವ ಸುಖಸಾಧನವಾದ ದೇವಲೋಕಗಳು ಇಷ್ಟೇ ಆಗಿವೆಯಷ್ಟೆ. |
| ತೇಷು ಏವ ಯಥಾಪೂರ್ವಂ ಪ್ರತಿತಿಷ್ಠತಿ | ಭೂಲೋಕಾದಿಕ್ರಮವನ್ನು ಅನುಸರಿಸಿ,ಅವುಗಳಲ್ಲಿಯೇ ಉತ್ತಮಸ್ಥಿತಿಯನ್ನು ಯಜಮಾನನು ಪಡೆಯುವನು. |

**ಪ್ರಯಾಜನಾಮನಿರ್ವಚನದಿಂದ ಪ್ರಶಂಸೆ**

| | |
|---|---|
| ದೇವಾಸುರಾಃ ಏಷು ಲೋಕೇಷು ಅಸ್ಪರ್ಧಂತ | ದೇವತೆಗಳು ಮತ್ತು ಅಸುರರು ತಾವೇ ಈ ಲೋಕಗಳ ಅಧಿಪತಿಗಳಾಗಬೇಕೆಂದು ಈ ಲೋಕಗಳ ವಿಷಯದಲ್ಲಿ ಸ್ಪರ್ಧಿಸಿದರು. |

---

ಇದೂ ಸಹ ದಶಸಂಖ್ಯೆಯ ಪ್ರಶಂಸೆ. ಪ್ರಯಾಜಗಳು ಐದಾದರೂ ಫಲಭೇದದಿಂದ ಹತ್ತಾಗುತ್ತವೆ. ಜುಹೂ ಮತ್ತು ಉಪಭೃತ್ತಿನ ಪಂಚಗೃಹೀತಗಳ ಸೇರುವಿಕೆಯಿಂದಲೂ ಸಂಖ್ಯಾ

ತೇ ದೇವಾಃ ಪ್ರಯಾಜೈರೇಭ್ಯೋ ಲೋಕೇಭ್ಯೋಽಸುರಾನ್ಪ್ರ

ಣುದಂತ ತತ್ಪ್ರಯಾಜಾನಾಂ [ಪ್ರಯಾಜಾನಾಮ್(೩)

ಪ್ರಯಾಜತ್ವಂ] ಪ್ರಯಾಜತ್ವಂ

---

ತೇ । ದೇವಾಃ । ಪ್ರಯಾಜೈರಿತಿ ಪ್ರ-ಯಾಜೈಃ । ಏಭ್ಯಃ । ಲೋಕೇಭ್ಯಃ । ಅಸುರಾನ್।

ಪ್ರೇತಿ । ಅನುದಂತ । ತತ್ । ಪ್ರಯಾಜಾನಾಮಿತಿ ಪ್ರ-ಯಾಜಾನಾಮ್ । (೩) ।

ಪ್ರಯಾಜತ್ವಮಿತಿ ಪ್ರಯಾಜ-ತ್ವಮ್ ।

---

| | |
|---|---|
| ತೇ ದೇವಾಃ ಪ್ರಯಾಜೈಃ | ಆ ದೇವತೆಗಳು [ಶತ್ರುಗಳು ಈ ಯಾಗಗಳಿಂದ ನಾಶಪಡಿಸಲ್ಪಡುಸುತ್ತಾರೆ. ಎಂದು ಅರ್ಥವುಳ್ಳ] ಪ್ರಯಾಜಗಳಿಂದ |
| ಏಭ್ಯಃ ಲೋಕೇಭ್ಯಃ ಅಸುರಾನ್ ಪ್ರಾಣುದಂತ | ಈ ಲೋಕಗಳಿಂದ ಅಸುರರನ್ನು ಸೋಲಿಸಿದರು/ನಾಶಪಡಿಸಿದರು.. |
| ತತ್ ಪ್ರಯಾಜಾನಾಮ್ ಪ್ರಯಾಜತ್ವಮ್ | ಇದೇ ಪ್ರಯಾಜಗಳ ಪ್ರಯಾಜತ್ವ. [ಹೀಗೆ ಶತ್ರುಗಳನ್ನು ದೂರ ಮಾಡಲು ಸಾಧನವಾದುದರಿಂದ **'ಪ್ರಯಾಜ'** ಎಂಬ ಹೆಸರು ಸಾರ್ಥಕವಾಯಿತು.] |

---

ಸಂಪತ್ತಿಯಾಗುತ್ತದೆ. ಇದರಿಂದ ಅನ್ನಾದ್ಯಪ್ರಾಪ್ತಿಯಾಗುತ್ತದೆ ಎಂದು ಸಂಖ್ಯಾಪ್ರಶಂಸೆ.
**ಪ್ರಯಾಜ ಎಂಬ ಹೆಸರಿನ ಪ್ರಶಂಸೆ.** ಪ್ರಯಾಜ ಎಂಬ ಹೆಸರಿನ ನಿರ್ವಚನ ಹೀಗಿದೆ:-
**೧) ಪ್ರಣುದ್ಯಂತೇ ವಿರೋಧಿನಃ ಏಭಿಃ ಯಾಗೈಃ ಇತಿ ತೇ ಪ್ರಯಾಜಾಃ**=ಈ ಯಾಗಗಳಿಂದ ಶತ್ರುಗಳು ದೂರಮಾಡಲ್ಪಡುತ್ತಾರೆ.
**೨) ವಿರೋಧಿನಃ ಪ್ರೇಷ್ಯಂತೇ, ಬಾಧ್ಯಂತೇ ವಾ ಇತಿ ತೇ ಪ್ರಯಾಜಾಃ**= ವಿರೋಧಿಗಳು ಯಾವ ಯಾಗದಿಂದ ದೂರಮಾಡಲ್ಪಡುತ್ತಾರೆಯೋ ಬಾಧಿಸಲ್ಪಡುತ್ತಾರೆಯೋ, ಅವು

ಯಸ್ಯೈವಂ ವಿದುಷಃ ಪ್ರಯಾಜಾ ಇಜ್ಯಂತೇ ಪ್ರೈಭ್ಯೋ
ಲೋಕೇಭ್ಯೋ ಭ್ರಾತೃವ್ಯಾನ್ನುದತೇಽಭಿಕ್ರಾಮಂ
ಜುಹೋತ್ಯಭಿಜಿತ್ಯೈ

---

ಯಸ್ಯ । ಏವಮ್ । ವಿದುಷಃ । ಪ್ರಯಾಜಾ ಇತಿ ಪ್ರ-ಯಾಜಾಃ । ಇಜ್ಯಂತೇ । ಪ್ರೇತಿ।
ಏಭ್ಯಃ । ಲೋಕೇಭ್ಯಃ । ಭ್ರಾತೃವ್ಯಾನ್ । ನುದತೇ । ಅಭಿಕ್ರಾಮಮಿತ್ಯಭಿ-ಕ್ರಾಮಮ್ ।
ಜುಹೋತಿ । ಅಭಿಜಿತ್ಯಾ ಇತ್ಯಭಿ-ಜಿತ್ಯೈ ।

---

| | |
|---|---|
| ಏವಮ್ ವಿದುಷಃ ಯಸ್ಯ | ಹೀಗೆ ತಿಳಿದಿರುವ ಯಾವ ಯಜಮಾನನಿಗಾಗಿ |
| ಪ್ರಯಾಜಾಃ ಇಜ್ಯಂತೇ | ಈ ಪ್ರಯಾಜಗಳು ಮಾಡಲ್ಪಡುತ್ತವೆಯೋ |
| ಏಭ್ಯಃ ಲೋಕೇಭ್ಯಃ | ಆ ಯಜಮಾನನು ಈ ಲೋಕದಿಂದ ಶತ್ರು |
| ಭ್ರಾತೃವ್ಯಾನ್ ಪ್ರ ನುದತೇ | ಗಳನ್ನು ಓಡಿಸುತ್ತಾನೆ. |

**ಹೋಮದಲ್ಲಿ ವಿಶೇಷವಿಧಿ; ಪ್ರಶಂಸೆ**

| | |
|---|---|
| ಅಭಿಕ್ರಾಮಂ ಜುಹೋತಿ | ಅಗ್ನಿಗೆ ಎದುರಾಗಿ ಬರುತ್ತಾ [ಮೊದಲು ಸ್ವಲ್ಪ ದೂರದಲ್ಲಿ, ಅನಂತರ ಅದಕ್ಕಿಂತ ಹತ್ತಿರದಲ್ಲಿ ಹೀಗೆ] ಹೋಮವನ್ನು ಮಾಡಬೇಕು. |
| ಅಭಿಜಿತ್ಯೈ | ಇದು ಬೇರೆಯವರನ್ನು ಗೆಲ್ಲಲು ಸಾಧನವಾಗುತ್ತದೆ. |

---

ಈ ಪ್ರಯಾಜಹೋಮವನ್ನು ಅಗ್ನಿಗೆ ಎದುರಾಗಿ ಬರುತ್ತಾ ಅನುಷ್ಠಿಸಬೇಕು. ಮೊದಲು ಸ್ವಲ್ಪ ದೂರದಲ್ಲಿ, ಬಳಿಕ ಕ್ರಮವಾಗಿ ಹತ್ತಿರ ಬರುತ್ತಾ ಹೋಮವನ್ನು ಮಾಡಬೇಕು. ಈ ರೀತಿ ಅನುಷ್ಠಾನವು ನಿತ್ಯವೆಂದು ಶ್ರುತಿಯು ತಿಳಿಸುತ್ತದೆ. ಆಪಸ್ತಂಬರು ಇದನ್ನೇ ಅತಿಶ್ರೇಷ್ಠನಾಗಬೇಕೆಂದು ಬಯಸುವವನಿಗೆ ಕಾಮ್ಯವಾಗಿ ಹೇಳಿರುತ್ತಾರೆ.

ಯೋ ವೈ ಪ್ರಯಾಜಾನಾಂ ಮಿಥುನಂ ವೇದ ಪ್ರ ಪ್ರಜಯಾ ಪಶುಭಿರ್ಮಿಥುನೈರ್ಜಾಯತೇ ಸಮಿಧೋ ಬಹ್ವೀರಿವ ಯಜತಿ ತನೂನಪಾತಮೇಕಮಿವ ಮಿಥುನಂ ತದಿಡೋ ಬಹ್ವೀರಿವ ಯಜತಿ

---

ಯಃ । ವೈ । ಪ್ರಯಾಜಾನಾಮಿತಿ ಪ್ರ-ಯಾಜಾನಾಮ್ । ಮಿಥುನಮ್ । ವೇದ । ಪ್ರೇತಿ। ಪ್ರಜಯೇತಿ ಪ್ರ-ಜಯಾ । ಪಶುಭಿರಿತಿ ಪಶು-ಭಿಃ । ಮಿಥುನೈಃ । ಜಾಯತೇ । ಸಮಿಧ ಇತಿ ಸಂ-ಇಧಃ । ಬಹ್ವೀಃ । ಇವ । ಯಜತಿ । ತನೂನಪಾತಮಿತಿ ತನೂ-ನಪಾತಮ್ । ಏಕಮ್ । ಇವ । ಮಿಥುನಮ್ । ತತ್ । ಇಡಃ । ಬಹ್ವೀಃ । ಇವ । ಯಜತಿ ।

---

### ಲಿಂಗ-ವಚನ ಪ್ರಶಂಸೆ

| | |
|---|---|
| ಯಃ ಪ್ರಯಾಜಾನಾಂ ಮಿಥುನಂ ವೇದ ವೈ | ಯಾವನು ಪ್ರಯಾಜಗಳ ಜೋಡಿಯನ್ನು ತಿಳಿದಿರುತ್ತಾನೆಯೋ [ಅವನು] |
| ಪ್ರಜಯಾ ಪಶುಭಿಃ ಮಿಥುನೈಃ ಪ್ರ ಜಾಯತೇ | ಜೊತೆ ಜೊತೆಯಾದ ಪ್ರಜೆಗಳ ಮತ್ತು ಪಶುಗಳ ಅಧಿಕ ವೃದ್ಧಿಯನ್ನು ಹೊಂದುತ್ತಾನೆ. |
| ಸಮಿಧಃ ಬಹ್ವೀಃ ಇವ ಯಜತಿ | ಸಮಿತ್ಪ್ರಯಾಜವನ್ನು ಹಲವು ಸ್ತ್ರೀಯರನ್ನು ಹೇಳುವಂತಿರುವ ಬಹುವಚನಾಂತವಾಗಿ ಹೋಮವನ್ನು ಮಾಡಬೇಕು. |
| ತನೂನಪಾತಮ್ ಏಕಮ್ ಇವ **ಯಜತಿ** | ತನೂನಪಾತ್ಪ್ರಯಾಜವನ್ನು ಪುರುಷನೊಬ್ಬನನ್ನು ತಿಳಿಸುವಂತೆ ಏಕವಚನಾಂತವಾಗಿ ಹೋಮವನ್ನು ಮಾಡಬೇಕು. |
| ತತ್ ಮಿಥುನಮ್ | ಅದು ಸ್ತ್ರೀಪುರುಷಯುಗ್ಮವಾಯಿತು. |
| ಇಡಃ ಬಹ್ವೀರಿವ ಯಜತಿ | ಇಟ್ಪ್ರಯಾಜವನ್ನು ಸ್ತ್ರೀ ಬಹುವಚನಾಂತವಾಗಿರುವಂತೆ ಹೋಮ ಮಾಡಬೇಕು. |

ಬರ್ಹಿರೇಕಮಿವ ಮಿಥುನಂ ತದೇತದ್ವೈ ಪ್ರಯಾಜಾನಾಂ

ಮಿಥುನಂ ಯ ಏವಂ ವೇದ ಪ್ರ [೪] ಪ್ರಜಯಾ

ಪಶುಭಿರ್ಮಿಥುನ್ಯೈರ್ಜಾಯತೇ

---

ಬರ್ಹಿಃ । ಏಕಮ್ । ಇವ । ಮಿಥುನಮ್ । ತತ್ । ಏತತ್ । ವೈ । ಪ್ರಯಾಜಾನಾಮಿತಿ

ಪ್ರ-ಯಾಜಾನಾಮ್ । ಮಿಥುನಮ್ । ಯಃ । ಏವಮ್ । ವೇದ । ಪ್ರೇತಿ । [೪] ।

ಪ್ರಜಯೇತಿ ಪ್ರ-ಜಯಾ । ಪಶುಭಿರಿತಿ ಪಶು-ಭಿಃ । ಮಿಥುನ್ಯೈಃ । ಜಾಯತೇ ।

---

| | |
|---|---|
| ಬರ್ಹಿಃ ಏಕಮ್ ಇವ **ಯಜತಿ** | ಬರ್ಹಿಃಪ್ರಯಾಜವನ್ನು ಪುಲ್ಲಿಂಗ ಏಕವಚನಾಂತವಾಗಿರುವಂತೆ ಯಾಗ ಮಾಡಬೇಕು. |
| ತತ್ ಮಿಥುನಮ್ | ಇದೂ ಸ್ತ್ರೀಪುರುಷಯುಗ್ಮವಾಗಿದೆ. |
| ಏತತ್ ವೈ ಪ್ರಯಾಜಾನಾಮ್ ಮಿಥುನಮ್ | ಇದೇ ಪ್ರಯಾಜಗಳ ಜೋಡಿಯಾಗಿದೆ. |
| ಯಃ ಏವಮ್ ವೇದ | ಯಾವನು ಹಿಗೆ ತಿಳಿದಿರುತ್ತಾನೆಯೋ [ಅವನು] |
| ಪ್ರಜಯಾ ಪಶುಭಿಃ ಮಿಥುನ್ಯೈಃ ಪ್ರ ಜಾಯತೇ | ಪ್ರಜಾಪಶುಯುಗ್ಮಸಮೃದ್ಧಿಯಿಂದ ಅಭಿವೃದ್ಧಿ ಹೊಂದುತ್ತಾನೆ. |

---

ಪ್ರಯಾಜಗಳಲ್ಲಿ ಲಿಂಗ-ವಚನಗಳ ವಿವಕ್ಷೆಯನ್ನು ಕುರಿತು ಹೇಳಲಾಗಿದೆ. ಲಿಂಗ ವ್ಯವಸ್ಥೆಯನ್ನೂ, ಲಿಂಗಗಳ ವಿವಕ್ಷೆ, ವಚನಗಳ ವಿವಕ್ಷೆಯನ್ನು ಕುರಿತೂ ಈ ಕೆಳಗಿನ ಸಂಗತಿಯನ್ನು ಗಮನಿಸಬೇಕು.

ಸಂಸ್ಕೃತಭಾಷೆಯಲ್ಲಿ ಲಿಂಗಗಳು ಶಬ್ದನಿಷ್ಠವಾದವುಗಳು. ಒಂದೇ ಅರ್ಥವನ್ನು ಹೇಳುವ ಶಬ್ದಗಳು ಬೇರೆಬೇರೆ ಲಿಂಗಗಳಲ್ಲಿ ಇರಬಹುದು. **'ದಾರಾಃ ಪುಂಭೂಮ್ನಿ'** ಎಂಬ ವಚನದಂತೆ ಹೆಂಡತಿ ಎಂಬ ಅರ್ಥದಲ್ಲಿ ಇರುವ ದಾರಶಬ್ದವು ಪುಲ್ಲಿಂಗ ಬಹುವಚನಾಂತವಾಗಿದೆ.

ದೇವಾನಾಂ ವಾ ಅನಿಷ್ಟಾ ದೇವತಾ ಆಸನ್ನಥಾಸುರಾ ಯಜ್ಞ

ಮಜಿಘಾಗ್ಂಸನ್ತೇ ದೇವಾ ಗಾಯತ್ರೀಂ ವ್ಯೌಹನ್ಪಂಚಾಕ್ಷರಾಣಿ

ಪ್ರಾಚೀನಾನಿ ತ್ರೀಣಿ ಪ್ರತೀಚೀನಾನಿ

---

ದೇವಾನಾಮ್ । ವೈ । ಅನಿಷ್ಟಾಃ । ದೇವತಾಃ । ಆಸನ್ । ಅಥ । ಅಸುರಾಃ । ಯಜ್ಞಮ್।

ಅಜಿಘಾಗ್ಂಸನ್ । ತೇ । ದೇವಾಃ । ಗಾಯತ್ರೀಮ್ । ವೀತಿ । ಔಹನ್ । ಪಂಚ ।

ಅಕ್ಷರಾಣಿ । ಪ್ರಾಚೀನಾನಿ । ತ್ರೀಣಿ । ಪ್ರತೀಚೀನಾನಿ ।

---

**ಕವಚರೂಪವಾಗಿ ಪ್ರಯಾಜಾನೂಯಾಜಗಳ ಪ್ರಶಂಸೆ; ಉಪಾಖ್ಯಾನ**

| | |
|---|---|
| ದೇವಾನಾಮ್ ವೈ ದೇವತಾಃ ಅನಿಷ್ಟಾಃ ಆಸನ್ | ದೇವತೆಗಳು ಮಾಡುತ್ತಿದ್ದ ಯಾಗದಲ್ಲಿ ಆಜ್ಯ ಭಾಗಾದಿದೇವತೆಗಳಿಗೆ ಇನ್ನೂ ಯಾಗವು ಆಗಿರಲಿಲ್ಲ./ಆ ದೇವತೆಗಳನ್ನು ಯಜ್ಞದಿಂದ ಇನ್ನೂ ಆರಾಧಿಸಿರಲಿಲ್ಲ. |
| ಅಥ ಅಸುರಾಃ ಯಜ್ಞಮ್ ಅಜಿಘಾಗ್ಂಸನ್ | ಅನಂತರ ಆ ಸಮಯದಲ್ಲಿಯೇ ಅಸುರರು ಯಾಗವನ್ನು ಕೆಡಿಸಲು ಬಯಸಿದರು. |
| ತೇ ದೇವಾಃ ಗಾಯತ್ರೀಮ್ ವ್ಯೌಹನ್ | ಆ ದೇವತೆಗಳು ಗಾಯತ್ರಿಯ ಪಾದದ ಎಂಟು ಅಕ್ಷರಗಳನ್ನು ಎರಡು ಗುಂಪುಗಳನ್ನಾಗಿ ಮಾಡಿದರು. |
| ಪಂಚ ಅಕ್ಷರಾಣಿ ಪ್ರಾಚೀನಾನಿ | [ಎಂಟು ಅಕ್ಷರಗಳಿಂದ ಮಾಡಿರುವ ಎರಡು ಗುಂಪಿನಲ್ಲಿ] ಐದು ಅಕ್ಷರಗಳಿಂದ ಕೂಡಿದ ಒಂದು ಗುಂಪನ್ನು ಮುಂಭಾಗದ ಗುಂಪನ್ನಾಗಿ ಮಾಡಿದರು. |
| ತ್ರೀಣಿ ಪ್ರತೀಚೀನಾನಿ | ಮೂರು ಅಕ್ಷರಗಳಿಂದ ಕೂಡಿದ ಎರಡನೆಯ ಗುಂಪನ್ನು ಹಿಂಭಾಗದ ಗುಂಪನ್ನಾಗಿ ಮಾಡಿದರು. |

---

**'ದೈವತಾನಿ ಪುಂಸಿವಾ'** ಎಂಬ ವಚನದಂತೆ ದೇವತೆ ಎಂಬ ಅರ್ಥವನ್ನು ಕೊಡುವ

ತತೋ ವರ್ಮ ಯಜ್ಞಾಯಾಭವದ್ವರ್ಮ ಯಜಮಾನಾಯ ಯತ್ಪ್ರಯಾಜಾನೂಯಾಜಾ ಇಜ್ಯಂತೇ ವರ್ಮೈವ ತದ್ಯಜ್ಞಾಯ ಕ್ರಿಯತೇ ವರ್ಮ ಯಜಮಾನಾಯ ಭ್ರಾತೃವ್ಯಾಭಿಭೂತ್ಯೈ

---

ತತಃ । ವರ್ಮ । ಯಜ್ಞಾಯ । ಅಭವತ್ । ವರ್ಮ । ಯಜಮಾನಾಯ । ಯತ್ । ಪ್ರಯಾಜಾನೂಯಾಜಾ ಇತಿ ಪ್ರಯಾಜಾ-ಅನೂಯಾಜಾಃ । ಇಜ್ಯಂತೇ । ವರ್ಮ । ಏವ । ತತ್ । ಯಜ್ಞಾಯ। ಕ್ರಿಯತೇ । ವರ್ಮ । ಯಜಮಾನಾಯ । ಭ್ರಾತೃವ್ಯಾಭಿಭೂತ್ಯಾ ಇತಿ ಭ್ರಾತೃವ್ಯ-ಅಭಿಭೂತ್ಯೈ ।

---

| | |
|---|---|
| ತತಃ | ಹೀಗೆ ರಕ್ಷಣೆಗಾಗಿ ಗುಂಪುಗಳನ್ನಾಗಿ ಮಾಡಿದ ಮೇಲೆ, |
| ಯಜ್ಞಾಯ ವರ್ಮ ಅಭವತ್ | ಎರಡು ಕಡೆಗಳಲ್ಲಿಯೂ ಯಜ್ಞಕ್ಕೆ ರಕ್ಷಣೆಯ ಕವಚ |
| ಯಜಮಾನಾಯ ವರ್ಮ **ಅಭವತ್** | ವಾಯಿತು.ಯಜಮಾನನಿಗೂ ರಕ್ಷಣೆಯ ಕವಚವಾಯಿತು. |
| ಪ್ರಯಾಜಾನೂಯಾಜಾಃ ಇಜ್ಯಂತೇ [**ಇತಿ**] ಯತ್ | ಐದು ಪ್ರಯಾಜಗಳು ಮತ್ತು ಮೂರು ಅನೂಯಾಜಗಳು ಮಾಡಲ್ಪಡುತ್ತವೆ ಎಂಬುದು ಯಾವುದುಂಟೋ |
| ತತ್ ಯಜ್ಞಾಯ ವರ್ಮ ಏವ ಕ್ರಿಯತೇ | ಅದು ಯಜ್ಞಕ್ಕೂ ರಕ್ಷಣೆಯ ಕವಚವಾಗಿ ಮಾಡಲ್ಪಡುತ್ತದೆ. |
| ಯಜಮಾನಾಯ ವರ್ಮ [**ಕ್ರಿಯತೇ**] | ಯಜಮಾನನಿಗೂ ರಕ್ಷಣೆಯ ಕವಚವಾಗಿ ಮಾಡಲ್ಪಡುತ್ತದೆ. |
| ಭ್ರಾತೃವ್ಯಾಭಿಭೂತ್ಯೈ | ಇದು ವೈರಿಗಳನ್ನು ಸೋಲಿಸುವುದಕ್ಕೆ ಕಾರಣವಾಗುತ್ತದೆ. |

---

ದೈವತಶಬ್ದವು ಪುಲ್ಲಿಂಗ-ನಪುಂಸಕಲಿಂಗಗಳಲ್ಲಿ ಇದೆ. **'ಪಾಕಃ' 'ಪಕ್ತಿಃ' 'ಪಚನಮ್'** ಎಂಬ ಮೂರು ಶಬ್ದಗಳೂ ಅಡಿಗೆ ಎಂಬ ಒಂದೇ ಅರ್ಥವನ್ನು ಕೊಡುತ್ತವೆ. ಮೂರು ಲಿಂಗಗಳಲ್ಲಿಯೂ ಇವೆ.ಹಾಗೆಯೇ ಒಬ್ಬನೇ ಪುರುಷನು

ತಸ್ಮಾದ್ವರೂಥಂ ಪುರಸ್ತಾದ್ವರ್ಷೀಯಃ ಪಶ್ಚಾದ್ಧ್ರಸೀಯೋ

ದೇವಾ ವೈ ಪುರಾ ರಕ್ಷೋಭ್ಯ ಇತಿ [ರಕ್ಷೋಭ್ಯಃ(೫)ಇತಿ]

---

ತಸ್ಮಾತ್ । ವರೂಥಮ್ । ಪುರಸ್ತಾತ್ । ವರ್ಷೀಯಃ । ಪಶ್ಚಾತ್ । ಹ್ರಸೀಯಃ ।

ದೇವಾಃ । ವೈ । ಪುರಾ । ರಕ್ಷೋಭ್ಯ ಇತಿ ರಕ್ಷಃ-ಭ್ಯಃ । (೫)। ಇತಿ ।

---

| | |
|---|---|
| ತಸ್ಮಾತ್ ವರೂಥಮ್ | ಆದುದರಿಂದ ರಕ್ಷಣಾಸ್ಯೈನ್ಯವು/ ರಥದ ರಕ್ಷಣಾಸಾಮಗ್ರಿಯು |
| ಪುರಸ್ತಾತ್ ವರ್ಷೀಯಃ | ಮುಂದುಗಡೆ ದೊಡ್ಡದಾಗಿರುತ್ತದೆ. |
| ಪಶ್ಚಾತ್ ಹ್ರಸೀಯಃ | ಹಿಂದುಗಡೆ ಚಿಕ್ಕದಾಗಿರುತ್ತದೆ. |

**ಹವಿರಭಿಘಾರಣ; ವಿಧಿಯ ಉಪಾಖ್ಯಾನ; ಪ್ರಶಂಸೆ**

| | |
|---|---|
| ದೇವಾಃ ವೈ ಪುರಾ ರಕ್ಷೋಭ್ಯಃ ಇತಿ | [ಪೂರ್ವಕಾಲದಲ್ಲಿ] ದೇವತೆಗಳು ರಾಕ್ಷಸರು ಬರುವುದಕ್ಕೆ ಮೊದಲೇ [ಯಾಗವನ್ನು ಮುಗಿಸಬೇಕೆಂದು] |

---

ಹಲವರು ಸ್ತ್ರೀಯರನ್ನು ಹೊಂದಿರಬಹುದು ಇಲ್ಲಿ **'ಸಮಿಧಃ'** **'ಇಡಃ'** ಇವು ಸ್ತ್ರೀಲಿಂಗ ಬಹುವಚನಾಂತಗಳು. ಇಲ್ಲಿ ಬಹುವಚನಕ್ಕೆ ವಿವಕ್ಷೆ ಇಲ್ಲ. ಶ್ರುತಿಯು ಅದನ್ನೇ **'ಬಹ್ವೀ ಇವ'** ಎಂದು **ಇವ** ಶಬ್ದದಿಂದ ತಿಳಿಸುತ್ತಿದೆ.

ಪ್ರಯಾಜಗಳನ್ನು ಹೀಗೆ ಮಿಥುನದಂತೆ ತಿಳಿಸಿ ಪ್ರಶಂಸೆ ಮಾಡುವುದೂ, ಫಲವನ್ನು ಹೇಳುವುದೂ ಕೇವಲ ಪ್ರಶಂಸಾರ್ಥ. ಪ್ರಧಾನಯಾಗಕ್ಕೆ ಇರುವ ಫಲವೇ ಅಂಗಗಳಿಗೂ ಫಲ. ಅಂಗಗಳು ಅಪೂರ್ವದ ಮೂಲಕ ಫಲಸಾಧನೆಗೆ ನೆರವಾಗುತ್ತವೆ.

ಈ ಉಪಾಖ್ಯಾನದ ಮೂಲಕವಾಗಿ ಪ್ರಯಾಜ-ಅನೂಯಾಜಗಳನ್ನು ಯಜ್ಞದ ಮತ್ತು ಯಜಮಾನನ ಕವಚರೂಪವಾಗಿರುವುದನ್ನು ವರ್ಣಿಸಿ, ಪ್ರಶಂಸೆ ಮಾಡಲಾಗಿದೆ. ಯಾಗದಲ್ಲಿ ಮೊದಲು ಐದು ಪ್ರಯಾಜಗಳು, ಆಜ್ಯಭಾಗಾದಿಯಾಗಗಳು ಪ್ರಧಾನಯಾಗದ ಅನಂತರ ಮೂರು ಅನೂಯಾಜಯಾಗಗಳು ಅನುಷ್ಠಿಸಲ್ಪಡುತ್ತವೆ.

ರಕ್ಷಣಾಸ್ಯೈನ್ಯದಲ್ಲಿಯೂ ಮುಂಭಾಗವು ದೊಡ್ಡದಾಗಿರುತ್ತದೆ. ಹಿಂಭಾಗವು ಚಿಕ್ಕದಾಗಿರುತ್ತದೆ. ಹೀಗೆ ಸಾಮ್ಯವನ್ನು ಶ್ರುತಿಯು ತಿಳಿಸುತ್ತಿದೆ.

ಸ್ವಾಹಾಕಾರೇಣ ಪ್ರಯಾಜೇಷು ಯಜ್ಞಗ್ಂ ಸಗ್ಂಸ್ಥಾಪ್ಯಮ ಪಶ್ಯನ್ತಗ್ಂ ಸ್ವಾಹಾಕಾರೇಣ ಪ್ರಯಾಜೇಷು ಸಮಸ್ಥಾಪಯನ್ವಿ ವಾ ಏತದ್ಯಜ್ಞಂ ಛಿಂದಂತಿ ಯಥ್ಸ್ವಾಹಾಕಾರೇಣ ಪ್ರಯಾಜೇಷು ಸಗ್ಂಸ್ಥಾಪಯಂತಿ

---

ಸ್ವಾಹಾಕಾರೇಣೇತಿ ಸ್ವಾಹಾ-ಕಾರೇಣ । ಪ್ರಯಾಜೇಷ್ವಿತಿ ಪ್ರ-ಯಾಜೇಷು । ಯಜ್ಞಮ್। ಸಗ್ಂಸ್ಥಾಪ್ಯಮಿತಿ ಸಂ-ಸ್ಥಾಪ್ಯಮ್ । ಅಪಶ್ಯನ್ । ತಮ್ । ಸ್ವಾಹಾಕಾರೇಣೇತಿ ಸ್ವಾಹಾ-ಕಾರೇಣ । ಪ್ರಯಾಜೇಷ್ವಿತಿ ಪ್ರ-ಯಾಜೇಷು । ಸಮಿತಿ । ಅಸ್ಥಾಪಯನ್ । ವೀತಿ । ವೈ। ಏತತ್ । ಯಜ್ಞಮ್ । ಛಿಂದಂತಿ । ಯತ್ । ಸ್ವಾಹಾಕಾರೇಣೇತಿ ಸ್ವಾಹಾ-ಕಾರೇಣ । ಪ್ರಯಾಜೇಷ್ವಿತಿ ಪ್ರ-ಯಾಜೇಷು । ಸಗ್ಂಸ್ಥಾಪಯಂತೀತಿ ಸಂ-ಸ್ಥಾಪಯಂತಿ ।

---

| | |
|---|---|
| ಪ್ರಯಾಜೇಷು ಸ್ವಾಹಾಕಾರೇಣ ಯಜ್ಞಮ್ ಸಗ್ಂಸ್ಥಾಪ್ಯಮ್ ಅಪಶ್ಯನ್ | ಪ್ರಯಾಜಗಳಲ್ಲಿ ಸ್ವಾಹಾಕಾರಪ್ರಯಾಜದಿಂದ ಯಜ್ಞವನ್ನು ಮುಗಿಸಬೇಕೆಂದು ತಿಳಿದರು. |
| ತಮ್ ಸ್ವಾಹಾಕಾರೇಣ ಪ್ರಯಾಜೇಷು ಸಮಸ್ಥಾಪಯನ್ | ಆ ಯಜ್ಞವನ್ನು ಪ್ರಯಾಜಗಳ ಪೈಕಿ ಸ್ವಾಹಾಕಾರ ಪ್ರಯಾಜದಿಂದಲೇ ಮುಗಿಸಿದರು. |
| ಪ್ರಯಾಜೇಷು ಸ್ವಾಹಾಕಾರೇಣ ಸಗ್ಂಸ್ಥಾಪಯಂತಿ [ಇತಿ] ಯತ್ ಏತತ್ ಯಜ್ಞಮ್ ವಿ ಛಿಂದಂತಿ ವೈ | ಪ್ರಯಾಜಗಳ ಪೈಕಿ ಸ್ವಾಹಾಕಾರಪ್ರಯಾಜ ದಿಂದ ಯಾಗವನ್ನು ಮುಗಿಸುವುದೆಂದರೆ[ಅದು] ಯಜ್ಞನ್ನು ಛೇದಿಸಿದಂತೆಯೇ ಆಗುತ್ತದೆ. |

---

ಇದು ಹವಿರಭಿಘಾರಣದ ಪ್ರಶಂಸೆ. ಹವಿಸ್ಸುಗಳಿಗೆ ಸಂಬಂಧವಿರುವುದರಿಂದ ಸ್ವಾಹಾಕಾರ

ಪ್ರಯಾಜಾನಿಷ್ಟ್ವಾ ಹವೀಗ್ಂಷ್ಯಭಿಘಾರಯತಿ ಯಜ್ಞಸ್ಯ ಸಂತತ್ಯಾ ಅಥೋ ಹವಿರೇವಾಕರಥೋ ಯಥಾಪೂರ್ವಮುಪೈತಿ

---

ಪ್ರಯಾಜಾನಿತಿ ಪ್ರ-ಯಾಜಾನ್ । ಇಷ್ಟ್ವಾ । ಹವೀಗ್ಂಷಿ । ಅಭೀತಿ । ಘಾರಯತಿ । ಯಜ್ಞಸ್ಯ । ಸಂತತ್ಯಾ ಇತಿ ಸಂ-ತತ್ಯೈ । ಅಥೋ ಇತಿ । ಹವಿಃ । ಏವ । ಅಕಃ । ಅಥೋ ಇತಿ । ಯಥಾಪೂರ್ವಮಿತಿ ಯಥಾ-ಪೂರ್ವಮ್ । ಉಪೇತಿ । ಏತಿ ।

---

| | |
|---|---|
| ಪ್ರಯಾಜಾನ್ ಇಷ್ಟ್ವಾ ಹವೀಗ್ಂಷಿ ಅಭಿಘಾರಯತಿ | ಪ್ರಯಾಜಹೋಮಗಳನ್ನು ಮಾಡಿ, ಅದರ ಶೇಷದಿಂದ ಉಳಿದ ಅನೂಯಾಜ-ಆಜ್ಯಭಾಗ-ಪ್ರಧಾನಾದಿಹವಿಸ್ಸುಗಳನ್ನು ಅಭಿಘಾರಣ ಮಾಡಬೇಕು. |
| ಯಜ್ಞಸ್ಯ ಸಂತತ್ಯೈ | ಇದು ಯಜ್ಞದ ವಿಚ್ಛಿತ್ತಿ ಇಲ್ಲದಿರುವಿಕೆಗೆ ಸಾಧನವಾಗುತ್ತದೆ. |
| ಅಥೋ ಹವಿಃ ಏವ ಅಕಃ | ಮತ್ತು ಇತರದ್ರವ್ಯಗಳನ್ನು ಹವಿಸ್ಸನ್ನಾಗಿ ಮಾಡಿದವನಾಗುತ್ತಾನೆ. |
| ಅಥೋ ಯಥಾಪೂರ್ವಮ್ ಉಪೈತಿ | ಮತ್ತು ಹವಿಸ್ಸುಗಳ ಕ್ರಮವನ್ನು ಮೀರದೆ ಮಾಡಿದವನಾಗುತ್ತಾನೆ. |

---

ಪ್ರಯಾಜಕ್ಕೆ ಯಾಗವನ್ನು ನಿಲ್ಲಿಸದೆ ಎಲ್ಲ ಪ್ರಯಾಜಗಳನ್ನೂ ಅನುಷ್ಠಿಸಬೇಕು.

ಎಲ್ಲ ಪ್ರಯಾಜಗಳನ್ನೂ ಅನುಷ್ಠಿಸಿ, ಉಳಿದ ಹವಿಸ್ಸುಗಳನ್ನು ಅಭಿಘಾರಣ ಮಾಡುವುದರಿಂದ, ಅವುಗಳನ್ನೂ ಹವಿಸ್ಸನ್ನಾಗಿ ಮಾಡಿದಂತಾಗುವುದಲ್ಲದೆ, ಕ್ರಮವನ್ನು ಅನುಸರಿಸಿದಂತಾಗಿ ಯಾಗವು ನಡುವೆ ತಡೆಯಿಲ್ಲದೆ ನೆರವೇರಿದಂತಾಗುತ್ತದೆ ಎಂಬ ಪ್ರಶಂಸೆ.

ಪಿತಾ ವೈ ಪ್ರಯಾಜಾಃ ಪ್ರಜಾಽನೂಯಾಜಾ ಯತ್ಪ್ರಯಾಜಾ

ನಿಷ್ಟ್ವಾ ಹವೀಗ್ಂಷ್ಯಭಿಘಾರಯತಿ ಪಿತೈವ ತತ್ಪುತ್ರೇಣ

ಸಾಧಾರಣಂ ಕುರುತೇ[ಸಾಧಾರಣಮ್(೬)ಕುರುತೇ]

---

ಪಿತಾ । ವೈ । ಪ್ರಯಾಜಾ ಇತಿ ಪ್ರ-ಯಾಜಾಃ । ಪ್ರಜೇತಿ ಪ್ರ-ಜಾ । ಅನೂಯಾಜಾ ಇತ್ಯನು-ಯಾಜಾಃ । ಯತ್ । ಪ್ರಯಾಜಾನಿತಿ ಪ್ರ-ಯಾಜಾನ್ । ಇಷ್ಟ್ವಾ । ಹವೀಗ್ಂಷಿ। ಅಭಿಘಾರಯತೀತ್ಯಭಿ-ಘಾರಯತಿ । ಪಿತಾ । ಏವ । ತತ್ । ಪುತ್ರೇಣ । ಸಾಧಾರಣಮ್ ।(೬)। ಕುರುತೇ ।

---

**ಮತ್ತೊಂದು ಬಗೆಯಲ್ಲಿ ಅಭಿಘಾರಣದ ಪ್ರಶಂಸೆ**

| | |
|---|---|
| ಪ್ರಯಾಜಾಃ ಪಿತಾ ವೈ<br>ಪ್ರಜಾ ಅನೂಯಾಜಾಃ | ಮೊದಲು ಅನುಷ್ಠಿಸುವ ಪ್ರಯಾಜಗಳು ಪಿತೃ ಸ್ಥಾನೀಯವಾದವುಗಳು. ಅನಂತರ ಅನುಷ್ಠಿಸಲ್ಪಡುವ ಅನೂಯಾಜಗಳು ಪುತ್ರಸ್ಥಾನೀಯವಾಗಿದೆ. |
| ಪ್ರಯಾಜಾನ್ ಇಷ್ಟ್ವಾ<br>ಹವೀಗ್ಂಷಿ ಅಭಿಘಾರಯತಿ<br>**[ಇತಿ]** ಯತ್ | ಪ್ರಯಾಜಗಳನ್ನು ಅನುಷ್ಠಿಸಿ, ಅದರ ಶೇಷದಿಂದ ಹವಿಸ್ಸುಗಳನ್ನು ಅಭಿಘಾರಣ ಮಾಡುವುದೆಂಬುದು ಯಾವುದೋ |
| ತತ್ ಪಿತಾ ಏವ ಪುತ್ರೇಣ<br>ಸಾಧಾರಣಮ್ ಕುರುತೇ | ಅದು ಪ್ರಯಾಜರೂಪನಾದ ತಂದೆಯನ್ನು ಪುತ್ರರೂಪನಾದ ಅನೂಯಾಜಗಳೊಡನೆ ಸಾಧಾರಣದ್ರವ್ಯವುಳ್ಳವನನ್ನಾಗಿ ಮಾಡುತ್ತದೆ. |

---

ಅಭಿಘಾರಣದ ಪ್ರಶಂಸೆಯನ್ನು ಶ್ರುತಿಯು ಇನ್ನೊಂದು ರೀತಿಯಲ್ಲಿ ಮಾಡುತ್ತದೆ. ಲೋಕದಲ್ಲಿ ತಂದೆಯ ಸ್ವತ್ತು ತಂದೆ ಮತ್ತು ಮಕ್ಕಳಿಬ್ಬರಿಗೂ ಸಮಾನವಾಗಿ ಸೇರುತ್ತದೆಯಷ್ಟೆ.

ತಸ್ಮಾದಾಹುರ್ಯಶ್ಚೈವಂ ವೇದ ಯಶ್ಚ ನ ಕಥಾ ಪುತ್ರಸ್ಯ

ಕೇವಲಂ ಕಥಾ ಸಾಧಾರಣಂ

---

ತಸ್ಮಾತ್ । ಆಹುಃ । ಯಃ । ಚ । ಏವಮ್ । ವೇದ । ಯಃ । ಚ । ನ । ಕಥಾ । ಪುತ್ರಸ್ಯ ।

ಕೇವಲಮ್ । ಕಥಾ । ಸಾಧಾರಣಮ್ ।

---

**ಮತ್ತೊಂದು ರೀತಿಯಲ್ಲಿ ಅಭಿಘಾರಣದ ಪ್ರಶಂಸೆ**

| | |
|---|---|
| ತಸ್ಮಾತ್ | ಆದುದರಿಂದ [ತಿಳಿದವರು] |
| ಯಃ ಚ ಏವಮ್ ವೇದ | ಯಾವನು ಈ ಅಭಿಘಾರಣದ ವಿಷಯವನ್ನು ತಿಳಿದಿರುತ್ತಾನೆಯೋ |
| ಯಃ ಚ ನ **[ವೇದ]** | ಯಾವನು ತಿಳಿದಿಲ್ಲವೋ [ಅವರಿಬ್ಬರಿಗೂ ಸಭೆಯಲ್ಲಿರುವ ಬಲ್ಲವರು ಹಿಗೆ ಸಮಾಧಾನ ವನ್ನು ಹೇಳುತ್ತಾರೆ.] |
| ಕಥಾ ಪುತ್ರಸ್ಯ ಕೇವಲಮ್ | ಹೇಗೆ ಮಗನ ದ್ರವ್ಯವು ಅವನದು ಮಾತ್ರವೇ ಆಗಿದೆಯೋ |
| ಪಿತುಃ ಕಥಾ ಸಾಧಾರಣಮ್ ಇತಿ ಆಹುಃ | ತಂದೆಯ ದ್ರವ್ಯವು ಹೇಗೆ ತಂದೆಗೂ ಮಕ್ಕಳಿಗೂ ಸಾಧಾರಣವಾಗಿದೆಯೋ ಹಾಗೆಯೇ ಹವಿಸ್ಸು ಗಳಲ್ಲಿಯೂ ಎನ್ನುತ್ತಾರೆ. |

---

ಹಾಗೆಯೇ ಮೊದಲು ಅನುಷ್ಠಿಸಲ್ಪಡುವುದರಿಂದ ಪಿತೃರೂಪವಾದ ಪ್ರಯಾಜಗಳ ಆಜ್ಯಶೇಷರೂಪವಾದ ದ್ರವ್ಯವು ಅಭಿಘಾರಣದಿಂದ ಪುತ್ರರೂಪವಾದ ಅನೂಯಾಜಾ ದಿಗಳಿಗೂ ಸೇರಿದಂತಾಗುತ್ತದೆ. ಹೀಗಾಗಿ ಹವಿರಭಿಘಾರಣವು ಪ್ರಶಸ್ತವಾಗಿದೆ.

ಈ ಅಭಿಘಾರಣದ ವಿಷಯದಲ್ಲಿ ಬಲ್ಲವರು ಹೀಗೆ ಸಮಾಧಾನವನ್ನು ಹೇಳುತ್ತಾರೆ. ಮಗನ ದ್ರವ್ಯವು ಮಗನಿಗೆ ಮಾತ್ರ ಸೇರಿದುದಾಗಿರುತ್ತದೆ. ತಂದೆಯ ದ್ರವ್ಯವು ತಂದೆ ಮತ್ತು ಮಕ್ಕಳಿಗೆ ಇಬ್ಬರಿಗೂ ಸಾಧಾರಣವಾದದ್ದಾಗಿರುತ್ತದೆ. ಹೀಗೆ ಇಷ್ಟಿಯಲ್ಲಿಯೂ ಸಹ ಪ್ರಯಾಜದ್ರವ್ಯವು ಅನೂಯಾಜಗಳಿಗೂ ಸಾಧಾರಣವಾಗಿದೆ. ಅನೂಯಾಜದ್ರವ್ಯವು ಅನೂಯಾಜಗಳಿಗೆ ಮಾತ್ರವೇ ಅಸಾಧಾರಣವಾಗಿದೆ.

ಪಿತುರಿತ್ಯಸ್ಕನ್ನಮೇವ ತದ್ಯತ್ಪ್ರಯಾಜೇಷ್ವಿಷ್ಟೇಷು ಸ್ಕಂದತಿ

ಗಾಯತ್ರ್ಯೇವ ತೇನ ಗರ್ಭಂ ಧತ್ತೇ

---

ಪಿತುಃ । ಇತಿ । ಅಸ್ಕನ್ನಮ್ । ಏವ । ತತ್ । ಯತ್ । ಪ್ರಯಾಜೇಷ್ವಿತಿ ಪ್ರ-ಯಾಜೇಷು।

ಇಷ್ಟೇಷು । ಸ್ಕಂದತಿ । ಗಾಯತ್ರೀ । ಏವ । ತೇನ । ಗರ್ಭಮ್ । ಧತ್ತೇ ।

---

| | |
|---|---|
| ಯತ್ ಪ್ರಯಾಜೇಷು ಇಷ್ಟೇಷು ಸ್ಕಂದತಿ | ಪ್ರಯಾಜಯಾಗಗಳು ಅನುಷ್ಠಿಸಿದ ನಂತರ ಮಾಡುವ ಹವಿರಭಿಘಾರಣವು ಯಾವುದುಂಟೋ |
| ತತ್ ಅಸ್ಕನ್ನಮ್ ಏವ | ಆ ಯಾಗದ್ರವ್ಯವು ಚೆಲ್ಲಿದ ಹಾಗೆ ಆಗುವುದಿಲ್ಲ. |

**ಪ್ರಯಾಜಾನೂಯಾಜಗಳ ಫಲದ ಪ್ರಶಂಸೆ**

| | |
|---|---|
| ತೇನ ಗಾಯತ್ರೀ ಏವ ಗರ್ಭಮ್ ಧತ್ತೇ | [ಐದು ಪ್ರಯಾಜಗಳು, ಅಭಿಘಾರಣ, ಮೂರು ಅನೂಯಾಜಗಳು- ಈರೀತಿಯ ಅನುಷ್ಠಾನದಿಂದ] ಅಷ್ಟಾಕ್ಷರಗಳುಳ್ಳ ಗಾಯತ್ರಿಯೇ ಗರ್ಭವನ್ನು ಧರಿಸಿದಂತೆ ಆಗುತ್ತದೆ/**ಪ್ರಜಾ-ಪಶುಗಳು ಗರ್ಭವನ್ನು ಧರಿಸುವಂತೆ ಮಾಡುತ್ತಾಳೆ.** |

---

ಪ್ರಯಾಜಯಾಗಗಳು ಆದ ನಂತರ ಅಭಿಘಾರಣವನ್ನು ಮಾಡುವುದರಿಂದ ಸ್ಕನ್ನ ದೋಷವೂ ಇರುವುದಿಲ್ಲ ಎಂಬುದಾಗಿ ಅಭಿಘಾರಣದ ಪ್ರಶಂಸೆ ಇದು.

ಐದು ಪ್ರಯಾಜಗಳನ್ನು ಅನುಷ್ಠಿಸಿ ಬಳಿಕ ಮೂರು ಅನೂಯಾಜಗಳನ್ನು ಅನುಷ್ಠಿಸುವುದರಿಂದ ಅಷ್ಟಾಕ್ಷರಗಳುಳ್ಳ ಗಾಯತ್ರಿಯೇ ಗರ್ಭವನ್ನು ಧರಿಸಿದಂತೆ ಆಗುತ್ತದೆ. ಆ ಗಾಯತ್ರಿಯೇ ಪ್ರಜಾ-ಪಶುಗಳು ಗರ್ಭವನ್ನು ಧರಿಸುವಂತೆ ಮಾಡುತ್ತಾಳೆ. ಪ್ರಜಾ-ಪಶುಗಳು ಪ್ರಯಾಜ-ಅನೂಯಾಜಗಳ ಫಲಗಳು.

ಸಾ ಪ್ರಜಾಂ ಪಶೂ ಯಜಮಾನಾಯ ಪ್ರಜನಯತಿ [೭-1]

**[ಯಜತಿ ಯಜ್ಞಮೇವಾವರುಂಧೇ ತನೂನಪಾತಂ ಯಜತಿ ಪ್ರಯಾಜಾನಾಮೇವಂ**

**ವೇದ ಪ್ರ ರಕ್ಷೋಭ್ಯಸ್ಸಾಧಾರಣಂ ಪಂಚತ್ರಿಗ್ಂಶಚ್ಚ ||]**

---

ಸಾ । ಪ್ರಜಾಮಿತಿ ಪ್ರ–ಜಾಮ್ । ಪಶೂ । ಯಜಮಾನಾಯ । ಪ್ರೇತಿ । ಜನಯತಿ ।[೭]।

---

| | |
|---|---|
| ಸಾ ಪ್ರಜಾಮ್ ಪಶೂ<br>ಯಜಮಾನಾಯ<br>ಪ್ರಜನಯತಿ | ಆ ಗಾಯತ್ರಿಯೇ ಯಜಮಾನನಿಗಾಗಿ ಪ್ರಜಾ–ಪಶುಗಳು ವೃದ್ಧಿಗೊಳ್ಳುವಂತೆ ಮಾಡುತ್ತಾಳೆ. |

---

ಹೀಗೆ ಫಲಪ್ರಶಂಸೆಯ ಮೂಲಕವಾಗಿ ಪ್ರಯಾಜ–ಅನೂಯಾಜಗಳ ಪ್ರಶಂಸೆಯನ್ನು ಶ್ರುತಿಯು ತಿಳಿಸುತ್ತಿದೆ.

# ಅನುವಾಕದ ವಿಶೇಷವಿಷಯಗಳು

## ಅ) ಮೀಮಾಂಸಾ

### ೧) 'ಸಮಿಧೋ ಯಜತಿ' ಮುಂತಾದ ವಾಕ್ಯಗಳು ಯಾವ ರೀತಿಯವು?

**[ಜೈ.ಸೂ.2.2.4.5]**

**'ಸಮಿಧೋ ಯಜತಿ' 'ತನೂನಪಾತಂ ಯಜತಿ' 'ಇಡೋ ಯಜತಿ' 'ಬರ್ಹಿರ್ಯಜತಿ' 'ಸ್ವಾಹಾಕಾರಂ ಯಜತಿ'** ಎಂಬ ವಾಕ್ಯಗಳು ಪ್ರಯಾಜದ ಬಗ್ಗೆ ಇವೆ. ಈ ವಾಕ್ಯಗಳು ಗುಣವಿಧಾಯಕಗಳೇ? ಅನುವಾದಕಗಳೇ? ಅಥವಾ ಅಭ್ಯಾಸ (ಅವೃತ್ತಿ)ದಿಂದ ಕರ್ಮವಿಧಾಯಕಗಳೇ ಎಂಬುದು ಇಲ್ಲಿನ **ಸಂಶಯ.**

ಈ ವಾಕ್ಯಗಳು ಸಮಿದಾದಿಗುಣವಿಧಾಯಕಗಳು ಅಥವಾ **'ಸಮಿಧೋ ಯಜತಿ'** ಎಂಬ ಪ್ರಥಮವಾಕ್ಯದಿಂದ ಯಾಗವಿಧಾನ. ಉಳಿದ ವಾಕ್ಯಗಳಿಂದ ದ್ರವ್ಯ-ದೇವತಾದಿಗುಣವಿಧಾನ. ಇದು ವೈಕಲ್ಪಿಕ ಎಂಬುದು ಇಲ್ಲಿನ **ಪೂರ್ವಪಕ್ಷ.**

**'ಯಜತಿ'** ಎಂಬ ಪದದ ಅಭ್ಯಾಸ(ಆವೃತ್ತಿ)ದಿಂದ ಕೂಡಿರುವ ಈ ಐದು ವಾಕ್ಯಗಳಿಂದಲೂ ಸಮಿನ್ನಾಮಕವಾದ ಐದು ಯಾಗಗಳು ವಿಹಿತವಾಗಿದೆ ಇವುಗಳಿಗೆ **ಸಮಿತ್, ತನೂನಪಾತ್, ಇಟ್, ಬರ್ಹಿ, ಸ್ವಾಹಾಕಾರ**-ಎಂಬುದು ಪ್ರತ್ಯೇಕ ಹೆಸರುಗಳು. ಪ್ರಯಾಜಗಳೆನ್ನುವುದು ಈ ಐದು ಯಾಗಗಳಿಗೂ ಹೆಸರಾಗಿದೆ. ಇದು ಅರ್ಥವಾದದಿಂದ ತಿಳಿಯುತ್ತದೆ.ಇದು ಇಲ್ಲಿನ **ಸಿದ್ಧಾಂತ.**

### ೨) ಪ್ರಯಾಜಗಳು ಸನ್ನಿಪತ್ಯೋಪಕಾರಕಗಳೇ? ಆರಾದುಪಕಾರಕಗಳೇ?

**[ಜೈ.ಸೂ.9.2]**

**'ಸಮಿಧೋ ಯಜತಿ'** ಮುಂತಾದ ಐದು ವಾಕ್ಯಗಳಿಂದ ಐದು ಪ್ರಯಾಜಯಾಗಗಳು ವಿಹಿತವಾಗಿವೆ. ಇವು ಸಂಸ್ಕಾರರೂಪವಾದ **'ವ್ರೀಹೀನ್ ಅವಹಂತಿ'** ಮೊದಲಾದವುಗಳಂತೆ ಸನ್ನಿಪತ್ಯೋಪಕಾರಕಗಳೇ? ಅಥವಾ ಅಪೂರ್ವವನ್ನು ಉಂಟುಮಾಡಿಕೊಡುವ ಅಂಗವಾಗಿರುವಂತಹ ಆರಾದುಪಕಾರಕಗಳೇ? ಎಂದು **ಸಂಶಯ.**

ಇಲ್ಲಿ ಕೇವಲ ಅಗ್ನಿಗೆ ದೇವತಾತ್ವವು ಇಲ್ಲವಾದ ಕಾರಣ ದೇವತಾಸಂಸ್ಕಾರಕವಾದ ಸನ್ನಿಪತ್ಯೋಪಕಾರಕವಾಗಲಾರದು.ಶಬ್ದವೇ ದೇವತೆಯಾದುದರಿಂದ **'ಸಮಿಧೋ ಯಜತಿ'**

ಎಂಬ ಮಂತ್ರವಾಕ್ಯಗಳಲ್ಲಿ ಇರುವಂತೆ ಗುಣವಿಶಿಷ್ಟವಾದ ಅಗ್ನ್ಯಾದಿಗಳೇ ದೇವತಾ. ಹೀಗಾಗಿ ನಾಲ್ಕೂ ಪ್ರಯಾಜಗಳಲ್ಲಿ ದೇವತಾವಾಚಕ ಶಬ್ದವಿರುವುದರಿಂದ ಪ್ರಯಾಜಗಳು ಆರಾದುಪಕಾರಕಗಳು. ಹೀಗಾಗಿ ವಿಕೃತಿಯಾಗಗಳಲ್ಲಿ **'ಸಮಿತ್'** ಮುಂತಾದ ಶಬ್ದಗಳ ಸ್ಥಾನದಲ್ಲಿ ಬೇರೆ ಶಬ್ದವನ್ನು ಊಹ ಮಾಡಬೇಕಾಗಿಲ್ಲ. ಇದು **ಸಿದ್ಧಾಂತ.**

## ೩) ಕೊನೆಯ ಸ್ವಾಹಾಕಾರಪ್ರಯಾಜದ ಸ್ವರೂಪವೇನು?

**[ಜೈ.ಸೂ.10.1.13.14]**

ಪ್ರಯಾಜಗಳಲ್ಲಿ **'ಸ್ವಾಹಾಕಾರಂ ಯಜತಿ'** ಎಂಬ ವಾಕ್ಯದಿಂದ ವಿಧಾನ ಮಾಡಿರುವ ಪ್ರಯಾಜವು ಕೊನೆಯ ಪ್ರಯಾಜವಾಗಿದೆ. ಇಲ್ಲಿ **ಸ್ವಾಹಾಕಾರ** ಎಂಬ ಶಬ್ದವಿರುವುದರಿಂದ ಅದು ದೇವತಾವಾಚಕವಾಗಿ ಉಳಿದ ನಾಲ್ಕು ಪ್ರಯಾಜಗಳಂತೆಯೇ ಅದೂ ಆರಾದುಪ ಕಾರಕವೇ? ಅಥವಾ **ಸ್ವಾಹಾಕಾರ** ಶಬ್ದವು ದೇವತಾವಾಚಕವಲ್ಲವಾದ ಕಾರಣ ಪ್ರಯಾಜ ಕ್ಕಿಂತಲೂ ಮುಂದಿನ ಆಜ್ಯಭಾಗದೇವತಾವಾಚಕವಾಗಿ, ದೇವತಾಸಂಸ್ಕಾರರೂಪವಾದ ಸನ್ನಿಪತ್ಯೋಪಕಾರಕವೇ? ಎಂಬುದು ಇಲ್ಲಿನ **ಸಂಶಯ**ವಿದೆ. ಅಲ್ಲದೆ **'ಸ್ವಾಹಾಕಾರ'** ಶಬ್ದವು ದೇವತಾವಾಚಕವಲ್ಲವಾದುದರಿಂದ ವಿಕೃತಿಯಾಗಗಳಲ್ಲಿ ಪ್ರಯಾಜಗಳನ್ನು ಅನುಷ್ಠಿಸುವಾಗ ಅಂತಿಮಪ್ರಯಾಜದಲ್ಲಿ **'ಪ್ರಕೃತಿವತ್ ವಿಕೃತಿಃ ಕರ್ತವ್ಯಾ'** ಎಂಬ ಅತಿದೇಶವಚನದಂತೆ ಪ್ರಾಪ್ತವಾದ ಪ್ರಾಕೃತಪ್ರಧಾನದೇವತೆಯನ್ನು ಬಿಟ್ಟು ಅದರ ಸ್ಥಾನದಲ್ಲಿ ವೈಕೃತಯಾಗದ ದೇವತೆಯನ್ನು ಊಹ ಮಾಡಬೇಕೇ? ಎಂಬುದು ಇಲ್ಲಿನ **ಸಂಶಯ.**

ಇಲ್ಲಿನ **ಪೂರ್ವಪಕ್ಷ**ವು ಹೀಗಿದೆ; ಸ್ವಾಹಾಕಾರಶಬ್ದವು ದೇವತಾವಾಚಕವೂ ಆಗಬಹುದು. ಹೇಗೆ ಮಾತಾ ಎಂಬ ಶಬ್ದವು ಅಳತೆಮಾಡುವವನನ್ನೂ ತಾಯಿಯನ್ನೂ ಹೇಳುತ್ತದೆಯೋ, ಹಾಗೆಯೇ **'ಸ್ವಾಹಾಽಗ್ನಿಮ್'** ಮೊದಲಾಗಿ ಹೇಳಿರುವ ಅಗ್ನ್ಯಾದಿಶಬ್ದಗಳು ಸ್ವಾಹಾಕಾರ ಎಂಬ ದೇವತೆಯನ್ನು ಬೋಧಿಸಬಹುದು. ಹೀಗಾಗಿ ಈ ಐದನೆಯ ಪ್ರಯಾಜವೂ ಸಹ ಉಳಿದ ಪ್ರಯಾಜಗಳಂತೆಯೇ ಆರಾದುಪಕಾರಕವಾಗಿದೆ. ಆದುದರಿಂದ ವಿಕೃತಿಯಾಗದಲ್ಲಿ ಸ್ವಾಹಾಕಾರಶಬ್ದದ ಸ್ಥಾನದಲ್ಲಿ ಬೇರೆ ದೇವತಾವಾಚಕದ ಊಹೆ ಇರುವುದಿಲ್ಲ.

**ತದ್ಧಿತೇನ ಚತುರ್ಥ್ಯಾ ವಾ ಮಂತ್ರವರ್ಣೇನ ವಾ ಪುನಃ ।**
**ದೇವತಾಯಾ ವಿಧಿಸ್ತತ್ರ, ಪೂರ್ವಂ ಪೂರ್ವಂ ತು ದುರ್ಬಲಮ್ ॥**

ಎಂದು ಹೇಳಿರುವಂತೆ ದೇವತಾನಿರ್ಣಯವು ತದ್ಧಿತಪ್ರತ್ಯಯ, ಚತುರ್ಥೀವಿಭಕ್ತಿ, ಮಂತ್ರಾಕ್ಷರಗಳು–ಇವುಗಳಿಂದ ಆಗುವುದರಿಂದ **'ಸ್ವಾಹಾಕಾರಂ ಯಜತಿ'** ಎಂಬಲ್ಲಿ ತದ್ಧಿತ

ಪ್ರತ್ಯಯ,ಚತುರ್ಥೀವಿಭಕ್ತಿಗಳು ಇಲ್ಲದಿರುವುದರಿಂದ ಮಾಂತ್ರವರ್ಣಿಕವಾದ ಅಗ್ನ್ಯಾದಿ ದೇವತೆಗಳನ್ನೇ ಅಂಗೀಕರಿಸಬೇಕು. ಹೀಗಿರುವುದರಿಂದಲೇ ಆ ದೇವತಾಸ್ಮಾರಕವಾದ ಅಗ್ನ್ಯಾದಿದೇವತಾಸ್ಮಾರಕವಾಗಿ ಪ್ರಕೃತಿಯಲ್ಲಿ **'ಸ್ವಾಹಾಽಗ್ನಿಮ್'** ಮೊದಲಾದ ಮಂತ್ರಗಳು ಇವೆ.**'ಸ್ವಾಹಾಕಾರಂ ಯಜತಿ'**ಎಂಬುದು ಕರ್ಮನಾಮಧೇಯವಾಗುತ್ತದೆ. ಸೌರ್ಯಾದಿ ವಿಕೃತಿಯಾಗದಲ್ಲಿ ವೈಕೃತದೇವತಾಸ್ಮರಣಾರ್ಥವಾಗಿ **'ಸ್ವಾಹಾ ಸೂರ್ಯಮ್'** ಎಂದು ಊಹವನ್ನು ಮಾಡಬೇಕು. ಹೀಗಾಗಿ ಐದನೆಯ ಪ್ರಯಾಜವು ಮುಂದಿನ ಆಜ್ಯಭಾಗ ದೇವತಾಸಂಸ್ಕಾರಕವಾದ, ಯಜ್ಞದೇವತಾಸ್ಮಾರಕವಾಗಿ ಸನ್ನಿಪತ್ಯೋಪಕಾರಕವಾಗಿದೆ. ಇದು ಇಲ್ಲಿನ **ಸಿದ್ಧಾಂತ.**

### ೪) ಪ್ರಯಾಜಾದಿಗಳು ಕ್ರತ್ವಂಗವೇ? [ಜೈ.ಸೂ.3.3]

ಪ್ರಯಾಜಾದಿಗಳು ಕ್ರತ್ವಂಗವೇ? ಅಲ್ಲವೇ? ಇದು ಇಲ್ಲಿನ **ಸಂಶಯ.**

ದರ್ಶಪೂರ್ಣಮಾಸವನ್ನು ವಿಧಾನ ಮಾಡುವ ವಾಕ್ಯಕ್ಕೂ ಪ್ರಯಾಜಾದಿಗಳನ್ನು ವಿಧಾನ ಮಾಡುವ ವಾಕ್ಯಗಳಿಗೂ ಏಕವಾಕ್ಯತೆಯು ಇರುವುದರಿಂದ ಈ ವಾಕ್ಯಸಮೂಹಾತ್ಮಕವಾದ ಪ್ರಕರಣವೇ ಇವುಗಳಿಗೆ ಕ್ರತ್ವಂಗತ್ವವನ್ನು ಬೋಧಿಸುತ್ತದೆ ಎಂದು ಹೇಳುವುದಾದರೆ ವಾಕ್ಯೈಕ ವಾಕ್ಯರೂಪವಾದ ಪ್ರಕರಣವೆಂಬುದೇ ಇಲ್ಲ. ಏಕೆಂದರೆ ಎಲ್ಲ ಕಡೆಗಳಲ್ಲಿಯೂ ವಾಕ್ಯಗಳು ಮತ್ತೊಂದರ ಅಪೇಕ್ಷೆ ಇಲ್ಲದ ಅರ್ಥವನ್ನೇ ಕೊಡುತ್ತವೆ. ಎಲ್ಲ ವಾಕ್ಯಗಳೂ ಸಮಾನಗಳೇ. ಆದುದರಿಂದ ಪ್ರಕರಣವೆಂಬುದು ಈ ಪ್ರಯಾಜಾದಿಗಳು ಕ್ರತ್ವಂಗವೆಂಬುದನ್ನು ತಿಳಿಸಿ ಕೊಡುತ್ತದೆ ಎನ್ನುವಂತಿಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

**'ದರ್ಶ-ಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ'** ಎಂಬ ವಾಕ್ಯದಲ್ಲಿ ಸ್ವರ್ಗಕ್ಕೆ ಯಾಗವು ಕರಣವಾಗಿದೆಯೆಂದು ತೃತೀಯಾವಿಭಕ್ತಿಯಿಂದ ತಿಳಿಯುತ್ತದೆ. ಆ ಯಾಗವು ಕರಣವಾಗುವುದು ಹೇಗೆ? ಎಂಬುದಾಗಿ ಆ ವಾಕ್ಯಕ್ಕೆ ಇತಿಕರ್ತವ್ಯತಾಕಾಂಕ್ಷೆಯು ಇದೆ. ಹೀಗೆಯೇ ಪ್ರಯಾಜಯಾಗವನ್ನು ವಿಧಾನ ಮಾಡುವ **'ಸಮಿಧೋ ಯಜತಿ'** ಮುಂತಾದ ವಾಕ್ಯಗಳಲ್ಲಿ ಫಲವನ್ನು ತಿಳಿಸುವ ಶಬ್ದವಿಲ್ಲದಿರುವುದರಿಂದ ಏತಕ್ಕಾಗಿ ಈ ಪ್ರಯಾಜ ಯಾಗಗಳು? ಎಂಬ ಪ್ರಯೋಜನಾಕಾಂಕ್ಷೆಯು ಆ ವಾಕ್ಯಕ್ಕೆ ಇದೆ.**'ಉಭಯಾಕಾಂಕ್ಷಾ ಪ್ರಕರಣಮ್'**ಎಂಬಂತೆ ಪರಸ್ಪರ ಆಕಾಂಕ್ಷೆಯು ಇರುವುದರಿಂದ ವಾಕ್ಯೈಕವಾಕ್ಯತಾರೂಪ ವಾದ ಪ್ರಕರಣವು ಇದೆಯೆಂದು ಅಂಗೀಕಾರ ಮಾಡಬೇಕು. ಹೀಗಾಗಿ **'ಫಲವತ್ಸನ್ನಿಧೌ ಅಫಲಂ ಶ್ರೂಯಮಾಣಂ ತದಂಗಮ್'** ಎಂಬಂತೆ [ಫಲವನ್ನು ಹೇಳುತ್ತಿರುವ ವಾಕ್ಯದಿಂದ ವಿಧಾನ ಮಾಡಿರುವ ಕರ್ಮದ ಸನ್ನಿಧಿಯಲ್ಲಿರುವ ಫಲರಹಿತವಾಗಿ ವಿಹಿತವಾಗಿರುವ ಕರ್ಮವು ಅಂಗವಾಗುತ್ತದೆ.] ಸ್ವರ್ಗರೂಪಫಲಕ್ಕಾಗಿ ವಿಹಿತವಾದ ದರ್ಶಪೂರ್ಣಮಾಸಗಳಿಗೆ ಫಲಶ್ರವಣವಿಲ್ಲದ ಪ್ರಯಾಜಾದಿಗಳು ಅಂಗವಾಗುತ್ತವೆ.

**೫) ಅಗ್ನಿಮುಖಾಭಿಕ್ರಮಣವು ಎಲ್ಲಿಗೆ ಅನ್ವಯಿಸುತ್ತದೆ? [ಜೈ.ಸೂ.3.1.20.22]**

**'ಅಭಿಕ್ರಾಮಂ ಜುಹೋತಿ'** ಎಂಬುದಾಗಿ ಪ್ರಯಾಜಸನ್ನಿಧಿಯಲ್ಲಿ ಹೇಳಿರುವ ಅಗ್ನಿಮುಖಾಭಿಕ್ರಮಣವು ಸನ್ನಿಧಿ ಇರುವುದರಿಂದ ಪ್ರಯಾಜಮಾತ್ರದ ಅಂಗವೇ? ಅಥವಾ ದರ್ಶ-ಪೂರ್ಣಮಾಸದ ಎಲ್ಲ ಹೋಮಗಳಿಗೂ ಈ ಅಗ್ನಿಮುಖಾಭಿಕ್ರಮಣವು ಸಂಬಂಧಿಸುತ್ತದೆಯೋ? ಎಂಬುದು ಇಲ್ಲಿನ **ಸಂಶಯ.**

ಈ **'ಅಭಿಕ್ರಾಮಂ ಜುಹೋತಿ'** ಎಂಬ ಶ್ರುತಿವಾಕ್ಯದಲ್ಲಿ ಕರ್ತೃವಾಚಕವಾದ ಕಾರಕವಿಭಕ್ತಿಯಾದ ತೃತೀಯಾವಿಭಕ್ತಿಯು ಇಲ್ಲದಿರುವುದರಿಂದ ಕರ್ತೃವಿನ ಮೂಲಕವಾಗಿ ಕ್ರಿಯಾಸಂಬಂಧವನ್ನು ಹೇಳಬೇಕು. ಕರ್ತೃವು ಇಡೀ ದರ್ಶ-ಪೂರ್ಣಮಾಸಯಾಗವನ್ನು ಅನುಷ್ಠಿಸುತ್ತಾನಾದುದರಿಂದ, ಕರ್ತೃವಿನ ಸಂಬಂಧವನ್ನು ಅನುಸರಿಸಿ, ಈ ಅಗ್ನಿಮುಖಾಭಿಕ್ರಮಣಕ್ಕೂ ದರ್ಶಪೂರ್ಣಮಾಸದೊಡನೆಯೇ ಸಂಬಂಧವು ಯುಕ್ತ. ಹೀಗಾಗಿ ಅಗ್ನಿಮುಖಾಭಿಕ್ರಮಣಹವನವು ದರ್ಶ-ಪೂರ್ಣಮಾಸದ ಎಲ್ಲ ಹೋಮಗಳಿಗೂ ಹೇಳಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಕರ್ತೃವಿನ ಮೂಲಕವಾಗಿ ಸಂಬಂಧವನ್ನು ಹೇಳುವುದಾದರೆ ಈ ರೀತಿ ಹೋಮ ಸಂಬಂಧವು ಪ್ರಯಾಜಗಳಿಗೂ ಸಮಾನವಾಗಿಯೇ ಇದೆ. ಹೀಗಾಗಿ ಪ್ರಯಾಜವನ್ನು ವಿಧಾನ ಮಾಡುವ ವಾಕ್ಯದ ಸನ್ನಿಧಿಯಿರುವುದರಿಂದ ಈ ಅಭಿಕ್ರಮಣವು ಪ್ರಯಾಜಾಂಗವೇ ಆಗುತ್ತದೆ. ದರ್ಶ-ಪೂರ್ಣಮಾಸದ ಉಳಿದ ಹೋಮಗಳಿಗೆ ಈ ಅಭಿಕ್ರಮಣವು ಸಂಬಂಧಿಸುವುದಿಲ್ಲ. ಇದು ಇಲ್ಲಿನ **ಸಿದ್ಧಾಂತ.**

**೬) ಔಪಭೃತ ಆಜ್ಯಗ್ರಹಣವು/ಆಜ್ಯಾನಯನವು ಯಾವುದಕ್ಕೆ ಪ್ರಯೋಜಕ? [ಜೈ.ಸೂ. 4.1.30.32]**

ದರ್ಶ-ಪೂರ್ಣಮಾಸಪ್ರಕರಣದಲ್ಲಿ **'ಅತಿಹಾಯೇಡೋ ಬರ್ಹಿಃ ಸಮಾನಯತೇ ಜುಹ್ವಾಮೌಪಭೃತಂ'** ಎಂಬ ವಾಕ್ಯವಿದೆ. ಈ ವಾಕ್ಯಕ್ಕೆ ಮೂರನೆಯ ಪ್ರಯಾಜದ ಅನಂತರದಲ್ಲಿ **'ಉಪಭೃತ್'** ಎಂಬ ಸ್ರುಕ್‌ನಲ್ಲಿ ಇರುವ ಆಜ್ಯವನ್ನು ಬರ್ಹಿಃ ಪ್ರಯಾಜಯಾಗಕ್ಕಾಗಿ ಜುಹುವಿನಲ್ಲಿ ಹಾಕಬೇಕು ಎಂದು ಅರ್ಥ. ಈ ಆಜ್ಯಾನಯನವು ಉಪಭೃತ್ತಿನಲ್ಲಿ ಮಾಡಿರುವ ಆಜ್ಯಗ್ರಹಣಕ್ಕೆ ಪ್ರಯೋಜಕವೇ? ಎಂಬುದು ಇಲ್ಲಿನ **ಸಂಶಯ.**

ಇಲ್ಲಿನ **ಪೂರ್ವಪಕ್ಷವು** ಹೀಗಿದೆ; ಬರ್ಹಿಃಪ್ರಯಾಜಕ್ಕಾಗಿ ಜುಹೂವಿನಲ್ಲಿ ಮಾಡುವ

ಉಪಭೃತ್ತಿನ ಆಜ್ಯಾನಯನವು ಔಪಭೃತಆಜ್ಯಗ್ರಹಣಕ್ಕೆ ಪ್ರಯೋಜಕವಾಗುವುದಿಲ್ಲ.

ಜುಹೂ, ಉಪಭೃತ್,ಹಾಗೂ ಧ್ರುವಾ ಎಂಬ ಪಾತ್ರೆಗಳಲ್ಲಿ ಆಜ್ಯಗ್ರಹಣಪ್ರಕಾರವೂ, ಅದರ ವಿನಿಯೋಗಪ್ರಕಾರವೂ ಶ್ರುತಿಯಲ್ಲಿ ಹೀಗೆ ಹೇಳಲ್ಪಟ್ಟಿದೆ. **'ಚತುರ್ಜುಹ್ವಾಂ ಗೃಹ್ಣಾತಿ।** [ಜುಹೂವಿನಲ್ಲಿ ನಾಲ್ಕು ಬಾರಿ ಆಜ್ಯವನ್ನು ತುಂಬಿಕೊಳ್ಳುತ್ತಾನೆ] **'ಅಷ್ಟಾವುಪಭೃತಿ ।** [ಉಪಭೃತ್ತಿನಲ್ಲಿ ಎಂಟು ಬಾರಿ ತುಂಬಿಕೊಳ್ಳುವನು] **'ಚತುರ್ಧ್ರುವಾಯಾಮ್** [ಧ್ರುವಾದಲ್ಲಿ ನಾಲ್ಕು ಬಾರಿ ತುಂಬಿಕೊಳ್ಳುವನು]ಇದು ಗ್ರಹಣಪ್ರಕಾರವಾಗಿದೆ.ಗ್ರಹಿಸಲ್ಪಟ್ಟ ಆಜ್ಯದ ವಿನಿಯೋಗಪ್ರಕಾರವು ಹೀಗಿದೆ:-**ಯಜ್ಜುಹ್ವಾಂ ಗೃಹ್ಣಾತಿ । ಪ್ರಯಾಜೇಭ್ಯಸ್ತತ್ ।** [ಜುಹೂವಿನಲ್ಲಿ ಗ್ರಹಿಸಿರುವ ಆಜ್ಯವು ಪ್ರಯಾಜಗಳಿಗಾಗಿ] **ಯದುಪಭೃತಿ । ಪ್ರಯಾಜಾ ನೂಯಾಜೇಭ್ಯಸ್ತತ್ ।** [ಉಪಭೃತ್ತಿನ ಆಜ್ಯಕ್ಕೆ ಪ್ರಯಾಜಾನೂಯಾಜಗಳಲ್ಲಿ ವಿನಿಯೋಗ] **ಸರ್ವಸ್ಮೈ ವಾ ಏತದ್ಯಜ್ಞಾಯ ಗೃಹ್ಯತೇ। ಯದ್ಧ್ರುವಾಯಾಮಾಜ್ಯಮ್ ।** [ಧ್ರೌವಾ ಜ್ಯವು ಇಡೀ ಯಜ್ಞದ ಕಲಾಪಕ್ಕಾಗಿ]

ಹೀಗಿರುವಾಗ ಮೊದಲನೆಯದಾದ ಜೌಹವ ಚತುರ್ಗೃಹೀತವು ಪ್ರಯಾಜಗಳಿಗೆ, ಔಪಭೃತ ಆಜ್ಯವು ಪ್ರಯಾಜ-ಅನೂಯಾಜಗಳಿಗೆ ಎಂದು ತಿಳಿಯುತ್ತದೆ. ಹೀಗಾಗಿ ಪ್ರಯಾಜಗಳಿಗೆ ಔಹವ ಆಜ್ಯವಾದರೂ ಆಗಬಹುದು, ಔಪಭೃತ ಆಜ್ಯವಾದರೂ ಆಗಬಹುದು ಎಂದು ವಿಕಲ್ಪವಾಗುತ್ತದೆ.

ಈ ರೀತಿ ವಿಕಲ್ಪವನ್ನು ಅಂಗೀಕರಿಸುವುದರಿಂದ ದೋಷವು ಉಂಟಾಗುತ್ತದೆ. ಶ್ರುತಿಯ ಎರಡು ವಾಕ್ಯಗಳಾದ **'ಯಜ್ಜುಹ್ವಾಂ ಗೃಹ್ಣಾತಿ । ಪ್ರಯಾಜೇಭ್ಯಸ್ತತ್ ।** ಹಾಗೂ **ಯದುಪಭೃತಿ। ಪ್ರಯಾಜಾನೂಯಾಜೇಭ್ಯಸ್ತತ್'**- ಎಂಬ ಇವುಗಳಿಗೆ ಸಮಪ್ರಾಮಾಣ್ಯವಿರುವುದರಿಂದ ವಿಕಲ್ಪ ವನ್ನು ಅಂಗೀಕರಿಸಿದರೆ, ಪ್ರಥಮವಾಕ್ಯದ ಅರ್ಥವನ್ನು ಮಾತ್ರ ಒಮ್ಮೆ ಗ್ರಹಿಸಿ ಅನುಷ್ಠಿಸಬೇಕು. ಆಗ ದ್ವಿತೀಯವಾಕ್ಯಕ್ಕೆ ಶ್ರುತಿಯಾದುದರಿಂದ ಪ್ರಾಪ್ತವಾದ ಪ್ರಾಮಾಣ್ಯವನ್ನು ಬಿಡಬೇಕು.ಮತ್ತು ಅಪ್ರಾಪ್ತವಾದ ಅಪ್ರಾಮಾಣ್ಯವನ್ನು ಅಂಗೀಕರಿಸಬೇಕಾಗುತ್ತದೆ. ದ್ವಿತೀಯವಾಕ್ಯದ ಅರ್ಥವನ್ನು ಒಮ್ಮೆ ಗ್ರಹಿಸಿ, ಅನುಷ್ಠಿಸಿದರೆ ಆಗ ಪ್ರಥಮವಾಕ್ಯಕ್ಕೆ ಶ್ರುತಿಯಾದುದರಿಂದ ಪ್ರಾಪ್ತವಾದ ಪ್ರಾಮಾಣ್ಯವನ್ನು ಬಿಡಬೇಕು. ಮತ್ತುಅಪ್ರಾಪ್ತವಾದ ಅಪ್ರಾಮಾಣ್ಯವನ್ನು ಅಂಗೀಕರಿಸಬೇಕಾ ಗುತ್ತದೆ. ಹೀಗೆ ಎರಡು ವಾಕ್ಯಗಳಲ್ಲಿಯೂ ಎರಡೆರಡು ದೋಷಗಳು ಬರುತ್ತವೆ. ಅಲ್ಲದೆ ಪ್ರಥಮವಾಕ್ಯದಂತೆ ಅನುಷ್ಠಿಸುವ ಸಮಯದಲ್ಲಿ ದ್ವಿತೀಯ ವಾಕ್ಯವನ್ನು ಆಶ್ರಯಿಸುವಾಗ ಬಂದಿದ್ದ ಪ್ರಾಮಾಣ್ಯತ್ಯಾಗವನ್ನು

ಬಿಟ್ಟು ಪ್ರಾಮಾಣ್ಯವನ್ನು ಅಂಗೀಕರಿಸಬೇಕಾಗುವುದು ಅಲ್ಲದೆ ಅಪ್ರಾಮಾಣ್ಯದ ಅಂಗೀಕಾರವನ್ನು ಬಿಡಬೇಕಾಗುವುದು. ದ್ವಿತೀಯವಾಕ್ಯದಂತೆ ಅನುಷ್ಠಿಸುವ ಸಮಯದಲ್ಲಿ ಪ್ರಥಮ ವಾಕ್ಯವನ್ನು ಆಶ್ರಯಿಸುವಾಗ ಬಂದಿದ್ದ ಪ್ರಾಮಾಣ್ಯತ್ಯಾಗವನ್ನು ಬಿಟ್ಟು ಪ್ರಾಮಾಣ್ಯವನ್ನು ಅಂಗೀಕರಿಸಬೇಕಾಗುವುದು. ಅಲ್ಲದೆ ಅಪ್ರಾಮಾಣ್ಯದ ಅಂಗೀಕಾರವನ್ನು ಬಿಡಬೇಕಾಗುವುದು. ಹೀಗೆ ಎರಡು ವಾಕ್ಯಗಳಲ್ಲಿಯೂ ಮತ್ತೆ ಎರಡೆರಡು ದೋಷಗಳು ಸಂಭವಿಸಿ, ಎಂಟು ದೋಷಗಳು ಉಂಟಾಗುವವು. ಈ ರೀತಿ ಅಷ್ಟದೋಷದುಷ್ಟವಿಕಲ್ಪವು ಯೋಗ್ಯವಲ್ಲ. ಹೀಗಾಗಿ ಜೌಹವ ಆಜ್ಯಗ್ರಹಣವು ಮೊದಲ ಮೂರು ಪ್ರಯಾಜಗಳಿಗಾಗಿ, ಔಪಭೃತ ಆಜ್ಯವು ಉಳಿದ ಎರಡು ಪ್ರಯಾಜಗಳು ಮತ್ತು ಅನೂಯಾಜಗಳಿಗಾಗಿ ಎಂದು ವ್ಯವಸ್ಥೆಯನ್ನು ಅಂಗೀಕರಿಸಬೇಕು. ಹಿಗೆ ಮಾಡುವುದರಿಂದ ವಿಕಲ್ಪಕ್ಕೆ ಅವಕಾಶವಿಲ್ಲದೆ, ಉಪಭೃತ್ತಿನಲ್ಲಿ ಆಜ್ಯಗ್ರಹಣವು/ಆಜ್ಯಾನಯನವು ಚತುರ್ಥ-ಪಂಚಮಪ್ರಯಾಜಗಳಿಗೂ ಪ್ರಯೋಜಕವಾಗುವುದು. ಇದು ಇಲ್ಲಿನ **ಸಿದ್ಧಾಂತ**ವಾಗಿದೆ.

**೭) ಅಗ್ನೀಷೋಮೀಯಪಶುಯಾಗದಲ್ಲಿ ಆಜ್ಯ-ಪೃಷದಾಜ್ಯಗಳಿಗೆ ಪಾತ್ರವ್ಯವಸ್ಥೆಯು ಹೇಗೆ?** **[ಜೈ.ಸೂ.5.2.13.14]**

ಅಗ್ನೀಷೋಮೀಯಪಶುಯಾಗದಲ್ಲಿ ಪ್ರಯಾಜ-ಅನೂಯಾಜಗಳಿಗೆ ಕ್ರಮವಾಗಿ ಆಜ್ಯವೂ, ಪೃಷದಾಜ್ಯವೂ [ದಧಿ ಮತ್ತು ಆಜ್ಯದ ಮಿಶ್ರಣ] ದ್ರವ್ಯವಾಗಿರುತ್ತದೆ. ಅವುಗಳಿಗೆ ಪಾತ್ರವ್ಯವಸ್ಥೆ ಹೇಗೆ? ಇದು ಇಲ್ಲಿನ **ಸಂಶಯ.**

ಪ್ರಕೃತಿಯಾದ ದರ್ಶ-ಪೂರ್ಣಮಾಸದಲ್ಲಿ ಪ್ರಯಾಜ-ಅನೂಯಾಜಗಳಿಗೆ ಅಗತ್ಯವಾದ ಆಜ್ಯವನ್ನು ಒಂದೇ ಉಪಭೃತ್ತಿನಲ್ಲಿ ಇಡುವುದರಿಂದ ವಿಕೃತಿಯಾದ ಈ ಅಗ್ನೀಷೋಮೀಯಪಶುಯಾಗದಲ್ಲಿಯೂ **'ಪ್ರಕೃತಿವತ್ ವಿಕೃತಿಃ ಕರ್ತವ್ಯಾ'** ಎಂಬಂತೆ ಆಜ್ಯ-ಪೃಷದಾಜ್ಯಗಳನ್ನು ಒಂದೇ ಪಾತ್ರದಲ್ಲಿ ಗ್ರಹಣ ಮಾಡುವುದು ಯುಕ್ತ.ಇದು ಇಲ್ಲಿನ **ಪೂರ್ವಪಕ್ಷ.**

ಪ್ರಕೃತಿಯಲ್ಲಿ ಪ್ರಯಾಜ-ಅನೂಯಾಜಗಳಿಗೆ ಎರಡಕ್ಕೂ ಆಜ್ಯವೆಂಬ ದ್ರವ್ಯವು ಒಂದೇ ಆಗಿದೆ. ಇಲ್ಲಿಯಾದರೋ **'ಪೃಷದಾಜ್ಯೇನಾನೂಯಾಜಾನ್ ಯಜತಿ'** ಎಂಬಂತೆ ಅನೂಯಾಜಯಾಗವನ್ನು ಪೃಷದಾಜ್ಯದಿಂದ ಅನುಷ್ಠಿಸಬೇಕು. ಪೃಷದಾಜ್ಯವು ಮಿಶ್ರಿತದ್ರವ್ಯ. ಶುದ್ಧ-ಮಿಶ್ರದ್ರವ್ಯಗಳನ್ನು ಒಂದೇ ಪಾತ್ರೆಯಲ್ಲಿ ಗ್ರಹಿಸುವುದು ಅಯುಕ್ತ. ಹೀಗಾಗಿ ಆಜ್ಯ-ಪೃಷದಾಜ್ಯಗಳಿಗೆ ಬೇರೆ ಬೇರೆ ಪಾತ್ರೆಗಳೇ ಇರಬೇಕು. ಇದು ಇಲ್ಲಿನ **ಸಿದ್ಧಾಂತ.**



## ॥ ದ್ವಿತೀಯೋಽನುವಾಕಃ ॥

### ಚಕ್ಷುಷೀ ವಾ ಏತೇ ಯಜ್ಞಸ್ಯ ಯದಾಜ್ಯಭಾಗೌ

---

ಚಕ್ಷುಷೀ ಇತಿ । ವೈ । ಏತೇ ಇತಿ । ಯಜ್ಞಸ್ಯ । ಯತ್ । ಆಜ್ಯಭಾಗಾವಿತ್ಯಾಜ್ಯ-
ಭಾಗೌ ।

---

ಮೊದಲನೆಯ ಅನುವಾಕದಲ್ಲಿ ಪ್ರಯಾಜಗಳನ್ನು ಹೇಳಿಯಾಯಿತು. ಈ ಎರಡನೆಯ ಅನುವಾಕದಲ್ಲಿ ಆಜ್ಯಭಾಗಗಳು ಹೇಳಲ್ಪಡುತ್ತವೆ. ಆಜ್ಯಭಾಗಕ್ಕೆ ಅಗ್ನಿ ಹಾಗೂ ಸೋಮರು ದೇವತೆಗಳು. ಪೂರ್ಣಮಾಸದ ಆಜ್ಯಭಾಗಹೋಮದಲ್ಲಿ ಅಗ್ನಿಗೆ **'ಅಗ್ನಿರ್ವೃತ್ರಾಣಿ .....ಆಹುತಃ'** ಎಂಬುದು ಪುರೋನುವಾಕ್ಯೆ.

ಅಮಾವಾಸ್ಯೇಷ್ಟಿಯ ಆಜ್ಯಭಾಗಹೋಮದಲ್ಲಿ ಅಗ್ನಿಗೆ **'ಅಗ್ನಿ: ಪ್ರತ್ನೇನ....ವಾವೃಧೇ'** ಎಂಬುದು ಪುರೋನುವಾಕ್ಯೆ.

ಪೂರ್ಣಮಾಸದ ಆಜ್ಯಭಾಗಹೋಮದಲ್ಲಿ ಸೋಮದೇವತೆಗೆ **'ತ್ವಗ್ಂ ಸೋಮಾಸಿ.. ..ಕ್ರತು:'** ಎಂಬುದು ಪುರೋನುವಾಕ್ಯೆ.

ಅಮಾವಾಸ್ಯೇಷ್ಟಿಯ ಆಜ್ಯಭಾಗಹೋಮದಲ್ಲಿ ಸೋಮದೇವತೆಗೆ **'ಸೋಮ ಗೀರ್ಭಿಷ್ಟ್ವಾ ....ಆವಿಶ'** ಎಂಬುದು ಪುರೋನುವಾಕ್ಯೆ.

ಅಗ್ನಿದೇವತೆಗೆ ದರ್ಶಪೂರ್ಣಮಾಸಗಳೆರಡರಲ್ಲಿಯೂ **'ಜುಷಾಣೋ ಅಗ್ನಿರಾಜ್ಯಸ್ಯ ವೇತು'** ಎಂಬುದು ಯಾಜ್ಯಾನುವಾಕ್ಯೆ.

ಸೋಮದೇವತೆಗೆ ಎರಡು ಇಷ್ಟಿಗಳಲ್ಲಿಯೂ ಸಹ **'ಜುಷಾಣ: ಸೋಮ ಆಜ್ಯಸ್ಯ ಹವಿಷೋ ವೇತು'** ಎಂಬುದು ಯಾಜ್ಯೆ.

---

**ಆಜ್ಯಭಾಗವಿಧಿ; ಪ್ರಶಂಸೆ**

| | |
|---|---|
| ಯತ್ ಆಜ್ಯಭಾಗೌ ಏತೇ ಯಜ್ಞಸ್ಯ ಚಕ್ಷುಷೀ ವೈ | ಈ ಆಜ್ಯಭಾಗಗಳೆಂಬುವುಗಳು ಯಜ್ಞ ಪುರುಷನ ಎರಡು ಕಣ್ಣುಗಳಷ್ಟೆ. |

---

**'ಅಗ್ನೀಷೋಮಾಭ್ಯಾಂ ವೈ ಯಜ್ಞಶ್ಚಕ್ಷುಷ್ಮಾನ್'** ಎಂಬ ಶ್ರುತಿವಾಕ್ಯದಂತೆ

ಯದಾಜ್ಯಭಾಗೌ ಯಜತಿ ಚಕ್ಷುಷೀ ಏವ ತದ್ಯಜ್ಞಸ್ಯ ಪ್ರತಿ

ದಧಾತಿ ಪೂರ್ವಾರ್ಧೇ ಜುಹೋತಿ ತಸ್ಮಾತ್ಪೂರ್ವಾರ್ಧೇ

ಚಕ್ಷುಷೀ ಪ್ರಬಾಹುಗ್ಜುಹೋತಿ

---

ಯತ್ । ಆಜ್ಯಭಾಗಾವಿತ್ಯಾಜ್ಯ-ಭಾಗೌ । ಯಜತಿ । ಚಕ್ಷುಷೀ ಇತಿ । ಏವ । ತತ್ । ಯಜ್ಞಸ್ಯ । ಪ್ರತೀತಿ । ದಧಾತಿ । ಪೂರ್ವಾರ್ಧ ಇತಿ ಪೂರ್ವ-ಅರ್ಧೇ । ಜುಹೋತಿ। ತಸ್ಮಾತ್ । ಪೂರ್ವಾರ್ಧ ಇತಿ ಪೂರ್ವ-ಅರ್ಧೇ । ಚಕ್ಷುಷೀ ಇತಿ । ಪ್ರಬಾಹುಗಿತಿ ಪ್ರ-ಬಾಹುಕ್ । ಜುಹೋತಿ ।

---

| | |
|---|---|
| ಯತ್ ಆಜ್ಯಭಾಗೌ ಯಜತಿ | ಆಜ್ಯಭಾಗಹೋಮಗಳನ್ನು ಅನುಷ್ಠಿಸಬೇಕು. **[ವಿಧಿ]** |
| ಯಜ್ಞಸ್ಯ ಚಕ್ಷುಷೀ ಏವ ತತ್ ಪ್ರತಿದಧಾತಿ | ಅದರಿಂದ ಯಜ್ಞಪುರುಷನ ಎರಡು ಕಣ್ಣುಗಳನ್ನು ಸ್ಥಾಪಿಸಿದಂತೆ ಆಗುತ್ತದೆ. |

**ದೇಶಸಾಮ್ಯವಿಧಿ; ಪ್ರಮಾಣಸಾಮ್ಯವಿಧಿ; ಪ್ರಶಂಸೆ**

| | |
|---|---|
| ಪೂರ್ವಾರ್ಧೇ ಜುಹೋತಿ | [ಆಹವನೀಯಾಗ್ನಿಯ] ಪೂರ್ವಾರ್ಧಭಾಗದಲ್ಲಿ ಆಜ್ಯಭಾಗಹೋಮವನ್ನು ಅನುಷ್ಠಿಸಬೇಕು. **[ವಿಧಿ]** |
| ತಸ್ಮಾತ್ ಪೂರ್ವಾರ್ಧೇ ಚಕ್ಷುಷೀ | ಆದುದರಿಂದ ಶಿರಸ್ಸಿನ ಮುಂಭಾಗದಲ್ಲಿ ಕಣ್ಣುಗಳು ಇವೆ. |
| ಪ್ರಬಾಹುಕ್ ಜುಹೋತಿ | [ಒಂದೇ ಸಾಲಿನಲ್ಲಿ] ಸಮಾನವಾಗಿರುವಂತೆ ಹೋಮ ಮಾಡಬೇಕು. |

---

ಅಗ್ನಿ ಹಾಗೂ ಸೋಮದೇವತೆಗಳನ್ನು ಉದ್ದೇಶಿಸಿ ಮಾಡುವ ಆಜ್ಯಭಾಗಗಳು ಯಜ್ಞಪುರುಷನ

ತಸ್ಮಾತ್ಪ್ರಬಾಹುಕ್ಚಕ್ಷುಷೀ ದೇವಲೋಕಂ ವಾ ಅಗ್ನಿನಾ ಯಜಮಾನೋಽನು ಪಶ್ಯತಿ ಪಿತೃಲೋಕಗ್ಂ ಸೋಮೇನೋ-ತ್ತರಾರ್ಧೇಽಗ್ನಯೇ ಜುಹೋತಿ

---

ತಸ್ಮಾತ್ । ಪ್ರಬಾಹುಗಿತಿ ಪ್ರ-ಬಾಹುಕ್ । ಚಕ್ಷುಷೀ ಇತಿ । ದೇವಲೋಕಮಿತಿ ದೇವ-ಲೋಕಮ್ । ವೈ । ಅಗ್ನಿನಾ । ಯಜಮಾನಃ । ಅನ್ವಿತಿ । ಪಶ್ಯತಿ । ಪಿತೃಲೋಕಮಿತಿ ಪಿತೃ-ಲೋಕಮ್ । ಸೋಮೇನ । ಉತ್ತರಾರ್ಧ ಇತ್ಯುತ್ತರ-ಅರ್ಧೇ । ಅಗ್ನಯೇ । ಜುಹೋತಿ ।

---

ತಸ್ಮಾತ್ ಚಕ್ಷುಷೀ ಪ್ರಬಾಹುಕ್ — ಆದುದರಿಂದ ಕಣ್ಣುಗಳು ಒಂದೇ ಸಾಲಿನಲ್ಲಿ ಸಮಾನವಾಗಿಯೇ ಇವೆ.

**ಹೋಮದೇಶವಿಧಿ; ಪ್ರಶಂಸೆ**

ಯಜಮಾನಃ ದೇವಲೋಕಮ್ ಅಗ್ನಿನಾ ಅನುಪಶ್ಯತಿ ವೈ — ಯಜಮಾನನು ದೇವಲೋಕವನ್ನು ಅಗ್ನಿದೇವನಿಂದ ಅನುಸರಿಸಿ ನೋಡುತ್ತಾನಷ್ಟೆ.

ಪಿತೃಲೋಕವಮ್ ಸೋಮೇನ **[ಅನುಪಶ್ಯತಿ]** — ಸೋಮದೇವನಿಂದ ಪಿತೃಲೋಕವನ್ನು ಅನುಸರಿಸಿ ನೋಡುತ್ತಾನೆ.

ಉತ್ತರಾರ್ಧೇ ಅಗ್ನಯೇ ಜುಹೋತಿ — ಆಹವನೀಯಾಗ್ನಿಯ ಉತ್ತರಭಾಗದಲ್ಲಿ ಅಗ್ನಿಗಾಗಿ ಆಜ್ಯಭಾಗಹೋಮವನ್ನು ಮಾಡಬೇಕು. **[ದೇಶವಿಧಿ]**

---

ಕಣ್ಣುಗಳಂತೆಯೇ ಸರಿ.

ಕಣ್ಣುಗಳು ತಲೆಯ ಮುಂಭಾಗದಲ್ಲಿ ಸಮಾನವಾಗಿ ಇರುವಂತೆ ಯಜ್ಞಪುರುಷನ

ದಕ್ಷಿಣಾರ್ಧೇ ಸೋಮಾಯೈವಮಿವ ಹೀಮೌ ಲೋಕಾವನಯೋ

ರ್ಲೋಕಯೋರನುಖ್ಯಾತ್ಯೈ ರಾಜಾನೌ ವಾ ಏತೌ ದೇವತಾನಾಂ

[..ವತಾನಾಮ್(೧)ಯದಗ್ನೀ..] ಯದಗ್ನೀಷೋಮಾ-

---

ದಕ್ಷಿಣಾರ್ಧ ಇತಿ ದಕ್ಷಿಣ-ಅರ್ಧೇ । ಸೋಮಾಯ । ಏವಮ್ । ಇವ । ಹಿ । ಇಮೌ ।

ಲೋಕೌ । ಅನಯೋಃ । ಲೋಕಯೋಃ । ಅನುಖ್ಯಾತ್ಯಾ ಇತ್ಯನು-ಖ್ಯಾತ್ಯೈ । ರಾಜಾನೌ।

ವೈ । ಏತೌ । ದೇವತಾನಾಮ್ । (೧) । ಯತ್ । ಅಗ್ನೀಷೋಮಾವಿತ್ಯಗ್ನೀ-ಸೋಮೌ ।

---

| | |
|---|---|
| ದಕ್ಷಿಣಾರ್ಧೇ ಸೋಮಾಯ **[ಜುಹೋತಿ]** | ದಕ್ಷಿಣಾರ್ಧದಲ್ಲಿ ಸೋಮನಿಗಾಗಿ ಆಜ್ಯಭಾಗ ಹೋಮವನ್ನು ಅನುಷ್ಠಿಸಬೇಕು. **[ದೇಶವಿಧಿ]** |
| ಏವಮ್ ಇವ ಹಿ ಇಮೌ ಲೋಕೌ | ಈ ದೇವಲೋಕ-ಪಿತೃಲೋಕಗಳು ಹೀಗೆಯೇ ಇರುವಂತೆ ಇವೆಯಷ್ಟೆ. |
| ಅನಯೋಃ ಲೋಕಯೋಃ ಅನುಖ್ಯಾತ್ಯೈ | [ಹೀಗೆ ಹೋಮಮಾಡುವುದು] ಈ ಲೋಕಗಳನ್ನು ಗುರುತಿಸಿ ತಿಳಿಯಲು ಸಾಧನವಾಗುತ್ತದೆ. |

**ಪ್ರಧಾನಹೋಮಗಳನ್ನು ಅನುಷ್ಠಿಸಲು ಸ್ಥಳವಿಧಿ; ಪ್ರಶಂಸೆ**

| | |
|---|---|
| ಯತ್ ಅಗ್ನೀಷೋಮೌ ಏತೌ ದೇವತಾನಾಮ್ ರಾಜಾನೌ ವೈ | ಯಾವ ಅಗ್ನೀಷೋಮದೇವತೆಗಳುಂಟೋ ಇವರಿಬ್ಬರು ದೇವತೆಗಳಿಗೆ ಪ್ರಕಾಶಮಾನರಾದ ರಾಜರಷ್ಟೆ. |

---

ಕಣ್ಣುಗಳಂತಿರುವ ಈ ಆಜ್ಯಭಾಗಹೋಮವನ್ನು ಆಹವನೀಯದ ಪೂರ್ವಾರ್ಧದಲ್ಲಿ ಸಾಲಿಗೆ ಸಮಾನವಾಗಿರುವಂತೆ ಮಾಡಬೇಕು.

ಆಹವನೀಯಾಗ್ನಿಯ ಉತ್ತರಾರ್ಧದಲ್ಲಿ ಅಗ್ನಿಗಾಗಿಯೂ, ದಕ್ಷಿಣಾರ್ಧದಲ್ಲಿ ಸೋಮನಿಗಾಗಿಯೂ ಆಜ್ಯಭಾಗಹೋಮವನ್ನು ಅನುಷ್ಠಿಸಬೇಕು. ಹೀಗೆ ಮಾಡುವುದರಿಂದ ಆಯಾ

ವಂತರಾ ದೇವತಾ ಇಜ್ಯೇತೇ ದೇವತಾನಾಂ ವಿಧೃತ್ಯೈ

ತಸ್ಮಾದ್ರಾಜ್ಞಾ ಮನುಷ್ಯಾ ವಿಧೃತಾ

---

ಅಂತರಾ । ದೇವತಾಃ । ಇಜ್ಯೇತೇ ಇತಿ । ದೇವತಾನಾಮ್ । ವಿಧೃತ್ಯಾ ಇತಿ ವಿ-ಧೃತ್ಯೈ । ತಸ್ಮಾತ್ । ರಾಜ್ಞಾ । ಮನುಷ್ಯಾಃ । ವಿಧೃತಾ ಇತಿ ವಿ-ಧೃತಾಃ ।

---

| | |
|---|---|
| ಅಂತರಾ ದೇವತಾಃ ಇಜ್ಯೇತೇ* | ಆಜ್ಯಭಾಗಹೋಮಗಳ ಮಧ್ಯದಲ್ಲಿ ಇತರ ಪ್ರಧಾನದೇವತೆಗಳು ಹವಿಸ್ಸಿನ ಪ್ರದಾನದಿಂದ ಪೂಜಿಸಲ್ಪಡುತ್ತಾರೆ. |
| ದೇವತಾನಾಮ್ ವಿಧೃತ್ಯೈ | ಹೀಗೆ ಹೋಮವನ್ನು ಮಾಡುವುದು ದೇವತೆಗಳನ್ನು ಧರಿಸಲು ಸಾಧನವಾಗುತ್ತದೆ. |
| ತಸ್ಮಾತ್ ರಾಜ್ಞಾ ಮನುಷ್ಯಾಃ ವಿಧೃತಾಃ | ಆದುದರಿಂದ ರಾಜನಿಂದ ಪ್ರಜೆಗಳು ರಕ್ಷಣ-ಪೋಷಣಾದಿಗಳಿಂದ ಧರಿಸಲ್ಪಡುತ್ತಾರೆ. [ಆದುದರಿಂದ ಹೀಗೆ ಹೋಮ ಮಾಡಬೇಕು] |

---

ದಿಕ್ಕಿನಲ್ಲಿರುವ ದೇವಲೋಕ-ಪಿತೃಲೋಕಗಳನ್ನು ಗುರುತಿಸಲು ಸಾಧನವಾಗುತ್ತದೆ.

ಅಥರ್ವಣಶ್ರುತಿಯಲ್ಲಿ **ಯದಾ ಲೇಲಾಯತೇ ಹ್ಯರ್ಚಿಃ ಸಮಿದ್ಧೇ ಹವ್ಯವಾಹನೇ । ತದಾಽಽಜ್ಯಭಾಗಾವಂತರೇಣಾಽಹುತೀಃ ಪ್ರತಿಪಾದಯೇತ್** । ಎಂದಿದೆ. ಆದುದರಿಂದ ಇಲ್ಲಿ **'ಇಜ್ಯೇತೇ'** ಎಂಬ ದ್ವಿವಚನವು **'ಇಜ್ಯಂತೇ'** ಎಂಬ ಬಹುವಚನದ ಅರ್ಥವನ್ನು ಕೊಡುತ್ತದೆ. ಈ ರೀತಿಯಾಗಿ ಸಾಯಣಾಚಾರ್ಯರು ವಿವರಣೆಯನ್ನು ನೀಡಿರುತ್ತಾರೆ.

ಮಿಶ್ರರು ತಮ್ಮ ಭಾಷ್ಯದಲ್ಲಿ ಪ್ರಯಾಜಹೋಮ ಮತ್ತು ಪ್ರಧಾನಹೋಮಗಳ ಮಧ್ಯದಲ್ಲಿ ಈ ಎರಡು ಆಜ್ಯಭಾಗಹೋಮಗಳು ಅನುಷ್ಠಿಸಲ್ಪಡುತ್ತವೆ ಎಂದು ವಿವರಿಸಿ, ದ್ವಿವಚನವು ತನ್ನ ಅರ್ಥದಲ್ಲಿಯೇ ಇದೆ ಅಭಿಪ್ರಾಯಪಟ್ಟಿರುತ್ತಾರೆ.

---

***ಇಲ್ಲಿ 'ಇಜ್ಯೇತೇ' ಎಂಬ ದ್ವಿವಚನವು ಬಹುವಚನಾರ್ಥದಲ್ಲಿದೆ.**

ಬ್ರಹ್ಮವಾದಿನೋ ವದಂತಿ ಕಿಂ ತದ್ಯಜ್ಞೇ ಯಜಮಾನಃ ಕುರುತೇ

ಯೇನಾನ್ಯತೋದತಶ್ಚ ಪಶೂನ್ದಾಧಾರೋಭಯತೋದತ

ಶ್ಚೇತ್ಯೃಚಮನೂಚ್ಯಾಜ್ಯಭಾಗಸ್ಯ

---

ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ । ಕಿಂ । ತತ್ । ಯಜ್ಞೇ । ಯಜಮಾನಃ। ಕುರುತೇ । ಯೇನ । ಅನ್ಯತೋದತ ಇತ್ಯನ್ಯತಃ-ದತಃ । ಚ । ಪಶೂನ್ । ದಾಧಾರ । ಉಭಯತೋದತ ಇತ್ಯುಭಯತಃ-ದತಃ । ಚ । ಇತಿ । ಋಚಮ್ । ಅನೂಚ್ಯೇತ್ಯನು-ಉಚ್ಯ । ಆಜ್ಯಭಾಗಸ್ಯೇತ್ಯಾಜ್ಯ-ಭಾಗಸ್ಯ ।

---

**ಪುರೋನುವಾಕ್ಯೆ-ಯಾಜ್ಯೆಗಳ ಪ್ರಕಾರ; ಪ್ರಶಂಸೆ**

ಬ್ರಹ್ಮವಾದಿನಃ ಯೇನ ಅನ್ಯತೋದತಃ ಚ ಪಶೂನ್ ದಾಧಾರ ಉಭಯತೋದತಃ ಚ **[ಪಶೂನ್ ದಾಧಾರ]** ಯಜಮಾನಃ ಕಿಂ ತತ್ ಯಜ್ಞೇ ಕುರುತೇ ಇತಿ ವದಂತಿ

ವೇದಜ್ಞರಲ್ಲಿ ಕೆಲವರು ಯಾವುದರಿಂದ ಬಾಯಲ್ಲಿ ಕೆಳಭಾಗದಲ್ಲಿ ಮಾತ್ರ ಹಲ್ಲುಗಳಿರುವ ಗವಾದಿ ಪಶುಗಳನ್ನು ಹೊಂದುತ್ತಾನೆಯೋ, ಮೇಲ್ಭಾಗ ಮತ್ತು ಕೆಳಭಾಗಗಳೆರಡರಲ್ಲಿಯೂ ಹಲ್ಲುಗಳಿರುವ ಅಶ್ವಾದಿಗಳನ್ನು ಹೊಂದುವನೋ ಯಜಮಾನನು ಅಂತಹ ಯಾವ ಕ್ರಮವನ್ನು ಯಜ್ಞದಲ್ಲಿ ಕೈಗೊಳ್ಳುವನು? ಎಂದು ಪ್ರಶ್ನಿಸುತ್ತಾರೆ.

ಆಜ್ಯಭಾಗಸ್ಯ ಋಚಮ್ ಅನೂಚ್ಯ

[ಅದಕ್ಕೆ ತಿಳಿದಿರುವವರು ಹೀಗೆ ಉತ್ತರಿಸುತ್ತಾರೆ] ಆಜ್ಯಭಾಗಗಳ ಹೋಮದಲ್ಲಿ **'ಅಗ್ನಿರ್ವೃತ್ರಾಣಿ' 'ತ್ವಗ್ಂ ಸೋಮಾಸಿ' 'ಅಗ್ನಿಃ ಪ್ರತ್ನೇನ' 'ಸೋಮ ಗೀರ್ಭಿಷ್ಟ್ವಾ'** ಎಂಬ ಋಗ್ರೂಪವಾದ ಪುರೋನುವಾಕ್ಯೆಗಳನ್ನು ಹೇಳಿ,

ಜುಷಾಣೇನ ಯಜತಿ ತೇನಾನ್ಯತೋದತೋ ದಾಧಾರರ್ಚಮನೂಚ್ಯ

ಹವಿಷ ಋಚಾ ಯಜತಿ ತೇನೋಭಯತೋದತೋ ದಾಧಾರ

---

ಜುಷಾಣೇನ । ಯಜತಿ । ತೇನ । ಅನ್ಯತೋದತ ಇತ್ಯನ್ಯತಃ-ದತಃ । ದಾಧಾರ । ಋಚಮ್ । ಅನೂಚ್ಯೇತ್ಯನು-ಉಚ್ಯ । ಹವಿಷಃ । ಋಚಾ । ಯಜತಿ । ತೇನ । ಉಭಯತೋದತ ಇತ್ಯುಭಯತಃ-ದತಃ । ದಾಧಾರ ।

---

| | |
|---|---|
| ಜುಷಾಣೇನ ಯಜತಿ | **'ಜುಷಾಣೋ ಅಗ್ನಿರಾಜ್ಯಸ್ಯ ವೇತು' 'ಜುಷಾಣಃ ಸೋಮ ಆಜ್ಯಸ್ಯ ಹವಿಷೋ ವೇತು'** ಎಂಬ ಯಜೂರೂಪವಾದ ಯಾಜ್ಯೆಗಳಿಂದ ಹೋಮ ಮಾಡಬೇಕು. |
| ತೇನ ಅನ್ಯತೋದತಃ ದಾಧಾರ | ಆದರಿಂದ ಒಂದೇ ಕಡೆ ಹಲ್ಲುಗಳುಳ್ಳ ಪಶುಗಳನ್ನು ಯಜಮಾನನು ಪಡೆಯುತ್ತಾನೆ. |
| ಹವಿಷಃ ಋಚಮ್ ಅನೂಚ್ಯ | [ಪ್ರಧಾನವಾದ ಆಗ್ನೇಯಯಾಗದ] ಹವಿಸ್ಸಿನಲ್ಲಿ **'ಅಗ್ನಿರ್ಮೂರ್ಧಾ'** ಎಂಬ ಪುರೋನುವಾಕ್ಯೆಯ ಋಕ್ಕನ್ನು ಹೇಳಿ, |
| ಋಚಾ ಯಜತಿ | **'ಭುವೋ ಯಜ್ಞಸ್ಯ'** ಎಂಬ ಯಾಜ್ಯೆಯಿಂದ ಯಾಗವನ್ನು ಮಾಡಬೇಕು. |
| ತೇನ ಉಭಯುತೋದತಃ ದಾಧಾರ | ಇದರಿಂದ ಎರಡು ಕಡೆಯಲ್ಲಿಯೂ ಹಲ್ಲುಗಳುಳ್ಳ ಅಶ್ವಾದಿಗಳನ್ನು ಯಜಮಾನನು ಪಡೆಯುವನು. [ಎಂದರು. ಅದರಂತೆ ಅನುಷ್ಠಿಸಬೇಕು.] **[ವಿಧಿ]** |

---

ವೇದಜ್ಞರು ಯಜ್ಞದಲ್ಲಿ ಯಾವ ಪ್ರಕಾರದಿಂದ ಆಜ್ಯಭಾಗಹೋಮವನ್ನು ಮಾಡಿ ಮತ್ತು ಪ್ರಧಾನಹೋಮವನ್ನು ಅನುಷ್ಠಿಸಿ, ಅಶ್ವಾದಿಪಶುಗಳನ್ನೂ, ಗವಾದಿಪಶುಗಳನ್ನೂ

ಮೂರ್ಧನ್ವತೀ ಪುರೋನುವಾಕ್ಯಾ ಭವತಿ ಮೂರ್ಧಾನಮೇ

ವೈನಗ್ಂ ಸಮಾನಾನಾಂ ಕರೋತಿ [೨] ನಿಯುತ್ವತ್ಯಾ ಯಜತಿ

ಭ್ರಾತೃವ್ಯಸ್ಯೈವ ಪಶೂನ್ನಿಯುವತೇ

---

ಮೂರ್ಧನ್ವತೀತಿ ಮೂರ್ಧನ್–ವತೀ । ಪುರೋನುವಾಕ್ಯೇತಿ ಪುರಃ–ಅನುವಾಕ್ಯಾ । ಭವತಿ।

ಮೂರ್ಧಾನಮ್ । ಏವ । ಏನಮ್ । ಸಮಾನಾನಾಮ್ । ಕರೋತಿ । [೨] । ನಿಯುತ್ವತ್ಯೇತಿ

ನಿ–ಯುತ್ವತ್ಯಾ । ಯಜತಿ । ಭ್ರಾತೃವ್ಯಸ್ಯ । ಏವ । ಪಶೂನ್ । ನೀತಿ । ಯುವತೇ ।

---

**ಆಗ್ನೇಯಯಾಗದ ಯಾಜ್ಯಾ–ಪುರೋನುವಾಕ್ಯೆಗಳ ವಿಧಾನ; ಪ್ರಶಂಸೆ**

| | |
|---|---|
| ಮೂರ್ಧನ್ವತೀ ಪುರೋನುವಾಕ್ಯಾ ಭವತಿ | ಆಗ್ನೇಯಯಾಗಕ್ಕೆ **'ಅಗ್ನಿರ್ಮೂರ್ಧಾ'** ಎಂಬ **'ಮೂರ್ಧನ್'** ಶಬ್ದವುಳ್ಳ ಋಕ್ ಪುರೋನುವಾಕ್ಯೆಯಾಗುತ್ತದೆ. |
| ಏನಮ್ ಸಮಾನಾನಾಮ್ ಮೂರ್ಧಾನಮ್ ಏವ ಕರೋತಿ | ಇದರಿಂದ ಅಧ್ವರ್ಯುವು ಈ ಯಜಮಾನನನ್ನು ಲೋಕದಲ್ಲಿ ತಲೆಯಂತೆ ಶ್ರೇಷ್ಠನನ್ನಾಗಿಸುತ್ತಾನೆ. |
| ನಿಯುತ್ವತ್ಯಾ ಯಜತಿ | **'ಭುವೋ ಯಜ್ಞಸ್ಯ'** ಎಂಬ **'ನಿಯುದ್ಭಿಃ'** ಎಂಬ ಶಬ್ದವುಳ್ಳ ಋಕ್ ಯಾಜ್ಯಾನುವಾಕ್ಯೆಯಾಗುತ್ತದೆ. |
| ಭ್ರಾತೃವ್ಯಸ್ಯ ಪಶೂನ್ ಏವ ನಿಯುವತೇ | ಇದರಿಂದ ಅಧ್ವರ್ಯುವು ಶತ್ರುವನ್ನು ಪಶುಗಳಿಂದ ವಿಯುಕ್ತನನ್ನಾಗಿ/ಪಶುರಹಿತನನ್ನಾಗಿ ಮಾಡುತ್ತಾನೆ. |

---

ಪಡೆಯುವವನು ಎಂದು ವಿಚಾರ ಮಾಡಿ ಆಜ್ಯಭಾಗದ ಯಾಜ್ಯಾನುವಾಕ್ಯೆ–ಪುರೋನುವಾಕ್ಯೆ

ಕೇಶಿನಗ್ಂ ಹ ದಾರ್ಭ್ಯಂ ಕೇಶೀ ಸಾತ್ಯಕಾಮಿರುವಾಚ ಸಪ್ತಪದಾಂ ತೇ ಶಕ್ವರೀಗ್ಂ ಶ್ವೋ ಯಜ್ಞೇ ಪ್ರಯೋಕ್ತಾಸೇ ಯಸ್ಯೈ ವೀರ್ಯೇಣ ಪ್ರಜಾತಾನ್ಭ್ರಾತೃವ್ಯಾನ್ನುದತೇ ಪ್ರತಿಜನಿಷ್ಯಮಾಣಾನ್

---

ಕೇಶಿನಮ್ । ಹ । ದಾರ್ಭ್ಯಮ್ । ಕೇಶೀ । ಸಾತ್ಯಕಾಮಿರಿತಿ ಸಾತ್ಯ-ಕಾಮಿಃ । ಉವಾಚ । ಸಪ್ತಪದಾಮಿತಿ ಸಪ್ತ-ಪದಾಮ್ । ತೇ । ಶಕ್ವರಿಮ್ । ಶ್ವಃ । ಯಜ್ಞೇ । ಪ್ರಯೋಕ್ತಾಸ ಇತಿ ಪ್ರ-ಯೋಕ್ತಾಸೇ । ಯಸ್ಯೈ । ವೀರ್ಯೇಣ । ಪ್ರೇತಿ । ಜಾತಾನ್ । ಭ್ರಾತೃವ್ಯಾನ್। ನುದತೇ । ಪ್ರತೀತಿ । ಜನಿಷ್ಯಮಾಣಾನ್ ।

---

## ಶಕ್ವರೀಛಂದಸ್ಸಿನ ಪ್ರಶಂಸೆಯ ಉಪಾಖ್ಯಾನ

| | |
|---|---|
| ಕೇಶಿನಮ್ ಹ ದಾರ್ಭ್ಯಮ್ | ದರ್ಭಮುನಿಯ ಪುತ್ರನಾದ ಕೇಶಿಯೆಂಬ ಮಹರ್ಷಿಯನ್ನು ಕುರಿತು |
| ಕೇಶೀ ಸಾತ್ಯಕಾಮಿಃ | ಸತ್ಯಕಾಮನ ಮಗನಾದ ಕೇಶಿಯೆಂಬ ಮುನಿಯು |
| ಶ್ವಃ ತೇ ಯಜ್ಞೇ ಸಪ್ತಪದಾಮ್ ಶಕ್ವರೀಮ್ ಪ್ರಯೋಕ್ತಾಸೇ | 'ನಾಳೆಯ ದಿನ ನಿನ್ನ ಯಜ್ಞದಲ್ಲಿ ಏಳು ಪಾದಗಳುಳ್ಳ ಶಕ್ವರೀಯನ್ನು ಪ್ರಯೋಗಿಸುವೆಯಷ್ಟೆ. [ಅದರ ಮಹತ್ತ್ವವು ಹೇಗಿದೆಯೆಂದರೆ] |
| ಯಸ್ಯೈ ವೀರ್ಯೇಣ ಪ್ರಜಾತಾನ್ ಭ್ರಾತೃವ್ಯಾನ್ ನುದತೇ ಜನಿಷ್ಯಮಾಣಾನ್ ಪ್ರತಿ **ನುದತೇ** | ಯಾವುದರ ಶಕ್ತಿಯಿಂದ ಹುಟ್ಟಿರುವ ಶತ್ರುಗಳನ್ನು ಯಜಮಾನನು ನಾಶಪಡಿಸುವನೋ ಹುಟ್ಟಲಿರುವ ಶತ್ರುಗಳನ್ನು ಹುಟ್ಟದಂತೆಯೇ ಪ್ರತಿಬಂಧಿಸುವನೋ |

ಯಸ್ಯೈ ವೀರ್ಯೇಣೋಭಯೋರ್ಲೋಕಯೋರ್ಜ್ಯೋತಿ

ರ್ಧತ್ತೇ ಯಸ್ಯೈ ವೀರ್ಯೇಣ ಪೂರ್ವಾರ್ಧೇನಾನಡ್ವಾನ್ಭುನಕ್ತಿ

ಜಘನಾರ್ಧೇನ ಧೇನುರಿತಿ

---

ಯಸ್ಯೈ । ವೀರ್ಯೇಣ । ಉಭಯೋಃ । ಲೋಕಯೋಃ । ಜ್ಯೋತಿಃ । ಧತ್ತೇ । ಯಸ್ಯೈ । ವೀರ್ಯೇಣ । ಪೂರ್ವಾರ್ಧೇನೇತಿ ಪೂರ್ವ-ಅರ್ಧೇನ । ಅನಡ್ವಾನ್ । ಭುನಕ್ತಿ । ಜಘನಾರ್ಧೇನೇತಿ ಜಘನ-ಅರ್ಧೇನ । ಧೇನುಃ । ಇತಿ ।

---

| | |
|---|---|
| ಯಸ್ಯೈ ವೀರ್ಯೇಣ ಉಭಯೋಃ ಲೋಕಯೋಃ ಜ್ಯೋತಿಃ ಧತ್ತೇ | ಯಾವುದರ ಶಕ್ತಿಯಿಂದ ಭೂಲೋಕ-ಸ್ವರ್ಗ ಲೋಕಗಳೆರಡರಲ್ಲಿಯೂ ಪ್ರಕಾಶಿಸುತ್ತಾನೆಯೋ/ಬೆಳಕಾಗುತ್ತಾನೆಯೋ |
| ಯಸ್ಯೈ ವೀರ್ಯೇಣ ಪೂರ್ವಾರ್ಧೇನ ಅನಡ್ವಾನ್ ಭುನಕ್ತಿ | ಯಾವುದರ ಸಾಮರ್ಥ್ಯದಿಂದ ಮುಂಭಾಗದಲ್ಲಿ [ಹೆಗಲಿನಲ್ಲಿ] ಭಾರ ಹೊರುವುದು ಮುಂತಾದ ಕಾರ್ಯಗಳಿಂದ ಎತ್ತು ಯಜಮಾನನನ್ನು ಪೋಷಿಸುವುದೋ |
| ಜಘನಾರ್ಧೇನ ಧೇನುಃ **[ಭುನಕ್ತಿ]** | ಹಿಂಭಾಗದಿಂದ ಹಾಲು ಮೊದಲಾದವನ್ನು ಕೊಟ್ಟು ಹಸುವು ಯಜಮಾನನನ್ನು ಪೋಷಿಸುವುದೋ |
| ಇತಿ **[ಉವಾಚ]** | ಆ ಶಕ್ವರಿಯು ಇಂತಹ ಶಕ್ತಿಯುಳ್ಳದ್ದೆಂದು ಹೇಳಿದನು. |

---

ಗಳಿಂದಲೂ, ಪ್ರಧಾನಹವಿಸ್ಸಿನ ಯಾಜ್ಯೆ-ಪುರೋನುವಾಕ್ಯೆಗಳಿಂದಲೂ ಅವುಗಳನ್ನು ಪಡೆಯುವನು ಎಂಬುದಾಗಿ ಪುರೋನುವಾಕ್ಯೆ-ಯಾಜ್ಯೆಗಳ ಪ್ರಶಂಸೆಯನ್ನು ಶ್ರುತಿಯು ತಿಳಿಸುತ್ತಾ ಇದೆ.

ಆಗ್ನೇಯಯಾಗದಲ್ಲಿ **ಮೂರ್ಧನ್** ಶಬ್ದದಿಂದ ಕೂಡಿರುವ ಪುರೋನುವಾಕ್ಯೆಯೂ **'ನಿಯುತ್'**

ಪುರಸ್ತಾಲ್ಲಕ್ಷ್ಮಾ ಪುರೋನುವಾಕ್ಯಾ ಭವತಿ ಜಾತಾನೇವ ಭ್ರಾತೃವ್ಯಾ

ನ್ಪ್ರಣುದತ ಉಪರಿಷ್ಟಾಲ್ಲಕ್ಷ್ಮಾ [೩] ಯಾಜ್ಯಾ ಜನಿಷ್ಯಮಾಣಾನೇವ

ಪ್ರತಿನುದತೇ ಪುರಸ್ತಾಲ್ಲಕ್ಷ್ಮಾ ಪುರೋನುವಾಕ್ಯಾ ಭವ-

---

ಪುರಸ್ತಾಲ್ಲಕ್ಷ್ಮೇತಿ ಪುರಸ್ತಾತ್-ಲಕ್ಷ್ಮಾ । ಪುರೋನುವಾಕ್ಯೇತಿ ಪುರಃ-ಅನುವಾಕ್ಯಾ । ಭವತಿ। ಜಾತಾನ್ । ಏವ । ಭ್ರಾತೃವ್ಯಾನ್ । ಪ್ರೇತಿ । ನುದತೇ । ಉಪರಿಷ್ಟಾಲ್ಲಕ್ಷ್ಮೇತ್ಯುಪರಿಷ್ಟಾತ್-ಲಕ್ಷ್ಮಾ। [೩]। ಯಾಜ್ಯಾ । ಜನಿಷ್ಯಮಾಣಾನ್ । ಏವ । ಪ್ರತೀತಿ । ನುದತೇ । ಪುರಸ್ತಾಲ್ಲಕ್ಷ್ಮೇತಿ ಪುರಸ್ತಾತ್-ಲಕ್ಷ್ಮಾ । ಪುರೋನುವಾಕ್ಯೇತಿ ಪುರಃ-ಅನುವಾಕ್ಯಾ । ಭವತಿ ।

---

**ಯಾಜ್ಯಾ-ಪುರೋನುವಾಕ್ಯೆಗಳ ಪ್ರಶಂಸೆ**

ಪುರಸ್ತಾಲ್ಲಕ್ಷ್ಮಾ ಪುರೋನುವಾಕ್ಯಾ ಭವತಿ — **'ಅಗ್ನಿರ್ಮೂರ್ಧಾ'** ಎಂಬುದಾಗಿ ಮಂತ್ರದ ಪೂರ್ವಭಾಗದಲ್ಲಿ ದೇವತಾವಾಚಕಚಿಹ್ನೆ ಇರುವ ಋಕ್ಕು ಪುರೋನುವಾಕ್ಯೆಯಾಗುತ್ತದೆ.

ಜಾತಾನ್ ಭ್ರಾತೃವ್ಯಾನ್ ಏವ ಪ್ರಣುದತೇ — ಇದರಿಂದ ಯಜಮಾನನು ಹುಟ್ಟಿರುವ ಶತ್ರುಗಳನ್ನು ನಾಶ ಪಡಿಸುತ್ತಾನೆ.

ಉಪರಿಷ್ಟಾಲ್ಲಕ್ಷ್ಮಾ ಯಾಜ್ಯಾ **[ಭವತಿ]** — **'ಜಿಹ್ವಾಮಗ್ನೇ'** ಎಂಬುದಾಗಿ ಮಂತ್ರದ ಉತ್ತರಭಾಗದಲ್ಲಿ ದೇವತಾವಾಚಕಚಿಹ್ನೆ ಇರುವ **'ಭುವೋ ಯಜ್ಞಸ್ಯ'** ಎಂಬ ಋಕ್ಕು ಯಾಜ್ಯಾನುವಾಕ್ಯೆಯಾಗುತ್ತದೆ.

ಜನಿಷ್ಯಮಾಣಾನ್ ಏವ **[ಭ್ರಾತೃವ್ಯಾನ್]** ಪ್ರತಿನುದತೇ — [ಇದು] ಮುಂದೆ ಹುಟ್ಟಲಿರುವ ಶತ್ರುಗಳನ್ನು ಹುಟ್ಟದಂತೆ ಪ್ರತಿಬಂಧಿಸುತ್ತದೆ.

ಪುರೋನುವಾಕ್ಯಾ ಪುರಸ್ತಾಲ್ಲಕ್ಷ್ಮಾ ಭವತಿ — ಮೊದಲಭಾಗದಲ್ಲಿ ದೇವತಾವಾಚಕಶಬ್ದವು ಇರುವ ಋಕ್ಕು ಪುರೋನುವಾಕ್ಯೆಯೆನಿಸುವುದು.

ತ್ಯಸ್ಮಿನ್ನೇವ ಲೋಕೇ ಜ್ಯೋತಿರ್ಧತ್ತ ಉಪರಿಷ್ಟಾಲ್ಲಕ್ಷ್ಮಾ

ಯಾಜ್ಯಾಽಮುಷ್ಮಿನ್ನೇವ ಲೋಕೇ ಜ್ಯೋತಿರ್ಧತ್ತೇ ಜ್ಯೋತಿಷ್ಮನ್ತಾ

ವಸ್ಮಾ ಇಮೌ ಲೋಕೌ ಭವತೋ ಯ ಏವಂ ವೇದ

---

ಅಸ್ಮಿನ್ನ್ । ಏವ । ಲೋಕೇ । ಜ್ಯೋತಿಃ । ಧತ್ತೇ । ಉಪರಿಷ್ಟಾಲ್ಲಕ್ಷ್ಮೇತ್ಯುಪರಿಷ್ಟಾತ್-

ಲಕ್ಷ್ಮಾ । ಯಾಜ್ಯಾ । ಅಮುಷ್ಮಿನ್ನ್ । ಏವ । ಲೋಕೇ । ಜ್ಯೋತಿಃ । ಧತ್ತೇ । ಜ್ಯೋತಿಷ್ಮನ್ತಾ ।

ಅಸ್ಮೈ । ಇಮೌ । ಲೋಕೌ । ಭವತಃ । ಯಃ । ಏವಮ್ । ವೇದ ।

---

| | |
|---|---|
| ಅಸ್ಮಿನ್ ಏವ ಲೋಕೇ ಜ್ಯೋತಿಃ ಧತ್ತೇ | ಇದರಿಂದ ಯಜಮಾನನು ಈ ಲೋಕದಲ್ಲಿ ಪ್ರಕಾಶವನ್ನು/ಪ್ರಸಿದ್ಧಿಯನ್ನು ಪಡೆಯುವನು. |
| ಉಪರಿಷ್ಟಾಲ್ಲಕ್ಷ್ಮಾ ಯಾಜ್ಯಾ **[ಭವತಿ]** | ಕೊನೆಯ ಭಾಗದಲ್ಲಿ ದೇವತಾವಾಚಕಶಬ್ದವು ಇರುವ ಋಕ್ಕು ಯಾಜ್ಯಾನುವಾಕ್ಯೆಯಾಗುವುದು. |
| ಅಮುಷ್ಮಿನ್ ಏವ ಲೋಕೇ ಜ್ಯೋತಿಃ ಧತ್ತೇ | ಇದರಿಂದ ಯಜಮಾನನು ಸ್ವರ್ಗಲೋಕದಲ್ಲಿ ಬೆಳಕನ್ನು ಹೊಂದುತ್ತಾನೆ. |
| ಅಸ್ಮೈ ಇಮೌ ಲೋಕೌ ಜ್ಯೋತಿಷ್ಮಂತೌ ಭವತಃ | ಹೀಗೆ ಈ ಯಜಮಾನನಿಗೆ ಈ ಭೂಲೋಕ-ಸ್ವರ್ಗಲೋಕಗಳೆರಡೂ ಬೆಳಕನ್ನೀಯುತ್ತವೆ. |
| ಯಃ ಏವಮ್ ವೇದ | ಯಾವನು ಈ ವಿಷಯವನ್ನು ತಿಳಿದಿರುತ್ತಾನೆಯೋ ಅವನೂ ಇಂತಹ ಫಲವನ್ನು ಹೊಂದುತ್ತಾನೆ. |

---

ಶಬ್ದದಿಂದ ಕೂಡಿರುವ ಯಾಜ್ಯಾನುವಾಕ್ಯೆಯೂ ಇದೆ.ಇದರಿಂದ ಯಜಮಾನನು ಶ್ರೇಷ್ಠನಾಗುವನು ಮತ್ತು ಶತ್ರುವನ್ನು ಪಶುರಹಿತನನ್ನಾಗಿ ಮಾಡುವನು ಎಂಬುದಾಗಿ ಪುರೋನುವಾಕ್ಯೆ-ಯಾಜ್ಯೆಗಳ ಪ್ರಶಂಸೆಯು ಇಲ್ಲಿದೆ.

**'ಅಗ್ನಿರ್ಮೂರ್ಧಾ'** ಎಂಬ ಮಂತ್ರದ ಮೂರು ಪಾದಗಳು, **'ಭುವೋ ಯಜ್ಞಸ್ಯ'** ಎಂಬ ಮಂತ್ರದ ನಾಲ್ಕು ಪಾದಗಳು ಹೀಗೆ ಏಳು ಪಾದಗಳಿಂದ ಸಪ್ತಪದಾ ಶಕ್ವರೀ

ಪುರಸ್ತಾಲ್ಲಕ್ಷ್ಮಾ ಪುರೋಽನುವಾಕ್ಯಾ ಭವತಿ ತಸ್ಮಾತ್ಪೂರ್ವಾರ್ಧೇನಾ
ನಡ್ವಾನ್ಭುನಕ್ತ್ಯುಪರಿಷ್ಟಾಲ್ಲಕ್ಷ್ಮಾ ಯಾಜ್ಯಾ ತಸ್ಮಾಜ್ಜಘನಾರ್ಧೇನ
ಧೇನುರ್ಯ ಏವಂ ವೇದ ಭುಙ್ಕ್ತ ಏನಮೇತೌ

---

ಪುರಸ್ತಾಲ್ಲಕ್ಷ್ಮೇತಿ ಪುರಸ್ತಾತ್–ಲಕ್ಷ್ಮಾ । ಪುರೋಽನುವಾಕ್ಯೇತಿ ಪುರಃ–ಅನುವಾಕ್ಯಾ । ಭವತಿ। ತಸ್ಮಾತ್ । ಪೂರ್ವಾರ್ಧೇನೇತಿ ಪೂರ್ವ–ಅರ್ಧೇನ । ಅನಡ್ವಾನ್ । ಭುನಕ್ತಿ । ಉಪರಿಷ್ಟಾಲ್ಲಕ್ಷ್ಮೇತ್ಯುಪರಿಷ್ಟಾತ್–ಲಕ್ಷ್ಮಾ । ಯಾಜ್ಯಾ । ತಸ್ಮಾತ್ । ಜಘನಾರ್ಧೇನೇತಿ ಜಘನ–ಅರ್ಧೇನ । ಧೇನುಃ । ಯಃ । ಏವಮ್ । ವೇದ । ಭುಙ್ಕ್ತಃ । ಏನಮ್ । ಏತೌ ।

---

| | |
|---|---|
| ಪುರಸ್ತಾಲ್ಲಕ್ಷ್ಮಾ ಪುರೋಽನುವಾಕ್ಯಾ ಭವತಿ | ಮೊದಲ ಭಾಗದಲ್ಲಿ ದೇವತಾವಾಚಕವಿರುವ ಋಕ್ಕು ಪುರೋಽನುವಾಕ್ಯೆಯಾಗುತ್ತದೆ. |
| ತಸ್ಮಾತ್ ಪೂರ್ವಾರ್ಧೇನ ಅನಡ್ವಾನ್ ಭುನಕ್ತಿ | ಆದರಿಂದ ಎತ್ತು ಹೆಗಲಿನಲ್ಲಿ ಭಾರವನ್ನು ಹೊರುವುದೇ ಮೊದಲಾದ ಕಾರ್ಯಗಳನ್ನು ಮಾಡಿ ಯಜಮಾನನನ್ನು ಪೋಷಿಸುತ್ತದೆ. |
| ಉಪರಿಷ್ಟಾಲ್ಲಕ್ಷ್ಮಾ ಯಾಜ್ಯಾ [ಭವತಿ] | ಕೊನೆಯ ಭಾಗದಲ್ಲಿ ದೇವತಾವಾಚಕಪದವು ಇರುವ ಋಕ್ಕು ಯಾಜ್ಯಾನುವಾಕ್ಯೆಯಾಗುತ್ತದೆ. |
| ತಸ್ಮಾತ್ ಜಘನಾರ್ಧೇನ ಧೇನುಃ [ಭುನಕ್ತಿ] | ಆದುದರಿಂದ ಧೇನುವು ಹಿಂಭಾಗದಿಂದ ಹಾಲು ಮುಂತಾದವುಗಳನ್ನು ಒದಗಿಸಿ ಯಜಮಾನನನ್ನು ಪೋಷಿಸುತ್ತದೆ. |
| ಯಃ ಏವಮ್ ವೇದ | ಹೀಗೆ ತಿಳಿದವನೂ ಈ ಫಲವನ್ನು ಪಡೆಯುವನು. |
| ಏತೌ ಏನಮ್ ಭುಂಕ್ತಃ | ಎತ್ತು ಹಸುಗಳೆರಡೂ ಸಹ ಈ ಯಜಮಾನನನ್ನು ಪೋಷಿಸುತ್ತವೆ. |

---

ಯಾಗುತ್ತದೆ.ಶಕ್ತಿ ಇರುವುದರಿಂದ ಶಕ್ವರೀ ಎಂಬ ಅನ್ವರ್ಥ ಹೆಸರೇ ಈ ಛಂದಸ್ಸಿಗಿದೆ. ಇದು ಆಯಾ ಯಾಜ್ಯಾ–ಪುರೋಽನುವಾಕ್ಯೆಗಳ ಪ್ರಶಂಸೆಯಾಗಿದೆ.

ವಜ್ರ ಆಜ್ಯಂ ವಜ್ರ ಆಜ್ಯಭಾಗೌ [..ಜ್ಯಭಾಗೌ (ಳ) ವಜ್ರೋ..]

ವಜ್ರೋ ವಷಟ್ಕಾರಸ್ತ್ರಿವೃತಮೇವ ವಜ್ರಗ್ಂ ಸಂಭೃತ್ಯ ಭ್ರಾತೃವ್ಯಾಯ

ಪ್ರಹರತ್ಯಛಂಬಟ್ಕಾರಮಪಗೂರ್ಯ ವಷಟ್ಕರೋತಿ ಸ್ತೃತ್ಯೈ

---

ವಜ್ರಃ । ಆಜ್ಯಮ್ । ವಜ್ರಃ । ಆಜ್ಯಭಾಗಾವಿತ್ಯಾಜ್ಯ-ಭಾಗೌ । (ಳ) । ವಜ್ರಃ । ವಷಟ್ಕಾರ ಇತಿ ವಷಟ್-ಕಾರಃ । ತ್ರಿವೃತಮಿತಿ ತ್ರಿ-ವೃತಮ್ । ಏವ । ವಜ್ರಮ್ । ಸಂಭೃತ್ಯೇತಿ ಸಮ್-ಭೃತ್ಯ । ಭ್ರಾತೃವ್ಯಾಯ । ಪ್ರೇತಿ । ಹರತಿ । ಅಛಂಬಟ್ಕಾರಮಿತ್ಯಛಂಬಟ್-ಕಾರಮ್ । ಅಪಗೂರ್ಯೇತ್ಯಪ-ಗೂರ್ಯ । ವಷಟ್। ಕರೋತಿ । ಸ್ತೃತ್ಯೈ ।

---

### ವಷಟ್ಕಾರವಿಧಿ; ಅದರ ಪ್ರಶಂಸೆ

| | |
|---|---|
| ವಜ್ರಃ ಆಜ್ಯಮ್ | ಆಜ್ಯವು ಶತ್ರುನಾಶಕವಾದ ವಜ್ರವಾಗಿದೆ. |
| ಆಜ್ಯಭಾಗೌ ವಜ್ರಮ್ | ಆಜ್ಯಭಾಗಗಳೂ ವಜ್ರರೂಪವಾದವುಗಳೇ. |
| ವಷಟ್ಕಾರಃ ವಜ್ರಃ | ವಷಟ್ಕಾರವೂ ವಜ್ರರೂಪವೇ ಆಗಿದೆ. |
| ತ್ರಿವೃತಮ್ ಏವ ವಜ್ರಮ್ ಸಂಭೃತ್ಯ ಭ್ರಾತೃವ್ಯಾಯ ಪ್ರಹರತಿ | [ಹೀಗೆ] ಮೂರು ವಿಧವಾದ ವಜ್ರಾಯುಧವನ್ನು ಸಂಪಾದಿಸಿ ಶತ್ರುಗಳ ಮೇಲೆ ಪ್ರಯೋಗಿಸುತ್ತಾನೆ. |
| ಅಛಂಬಟ್ಕಾರಮ್ | ವ್ಯರ್ಥವಾಗದಂತೆ ಪ್ರಯೋಗಿಸುತ್ತಾನೆ. |
| ಅಪಗೂರ್ಯ ವಷಟ್ ಕರೋತಿ ಸ್ತೃತ್ಯೈ | ಉಚ್ಚಧ್ವನಿಯಿಂದ* ವಷಟ್ಕಾರವನ್ನು ಮಾಡಬೇಕು. ಇದು ಶತ್ರುನಾಶಕ್ಕೆ ಕಾರಣವಾಗುತ್ತದೆ. |

ಯಾಜ್ಯಾ-ಪುರೋನುವಾಕ್ಯೆಗಳ ಪ್ರಶಂಸೆಯ ಇನ್ನೊಂದು ಪ್ರಕಾರವು ಇದಾಗಿದೆ. ಈ ರೀತಿಯ ಯಾಜ್ಯಾ-ಪುರೋನುವಾಕ್ಯೆಗಳ ಪಾಠದಿಂದ ಶತ್ರುಜಯವೂ ಉಂಟಾಗುತ್ತದೆ.

* **ವೌಷಟ್**=ಇದೂ ವಷಟ್ ಎಂಬ ಅರ್ಥದಲ್ಲಿಯೇ ಇದೆ.

ಗಾಯತ್ರೀ ಪುರೋನುವಾಕ್ಯಾ ಭವತಿ ತ್ರಿಷ್ಟುಗ್ಯಾಜ್ಯಾ
ಬ್ರಹ್ಮನ್ನೇವ ಕ್ಷತ್ರಮನ್ವಾರಂಭಯತಿ ತಸ್ಮಾದ್ಬ್ರಾಹ್ಮಣೋ
ಮುಖ್ಯೋ ಮುಖ್ಯೋ ಭವತಿ ಯ ಏವಂ ವೇದ

---

ಗಾಯತ್ರೀ । ಪುರೋನುವಾಕ್ಯೇತಿ ಪುರಃ-ಅನುವಾಕ್ಯಾ । ಭವತಿ । ತ್ರಿಷ್ಟುಕ್ । ಯಾಜ್ಯಾ। ಬ್ರಹ್ಮನ್ನ್ । ಏವ । ಕ್ಷತ್ರಮ್ । ಅನ್ವಾರಂಭಯತೀತ್ಯನು-ಆರಂಭಯತಿ । ತಸ್ಮಾತ್ । ಬ್ರಾಹ್ಮಣಃ । ಮುಖ್ಯಃ । ಮುಖ್ಯಃ । ಭವತಿ । ಯಃ । ಏವಮ್ । ವೇದ ।

---

**ಪುರೋನುವಾಕ್ಯೆ-ಯಾಜ್ಯೆಗಳಲ್ಲಿ ಛಂದಸ್ಸಿನ ವಿಧಿ; ಪ್ರಶಂಸೆ;**

| | |
|---|---|
| ಗಾಯತ್ರೀ ಪುರೋನುವಾಕ್ಯಾ ಭವತಿ | ಪುರೋನುವಾಕ್ಯೆಯು ಸಾಮಾನ್ಯವಾಗಿ ಗಾಯತ್ರೀ ಛಂದಸ್ಸಿನಲ್ಲಿ ಇರಬೇಕು. |
| ತ್ರಿಷ್ಟುಕ್ ಯಾಜ್ಯಾ | ಯಾಜ್ಯಾನುವಾಕ್ಯೆಯು ತ್ರಿಷ್ಟುಪ್ ಛಂದಸ್ಸಿನಲ್ಲಿ ಇರಬೇಕು. |
| ಬ್ರಹ್ಮನ್ ಏವ ಕ್ಷತ್ರಮ್ ಅನ್ವಾರಂಭಯತಿ | ಅದರಿಂದ ಕ್ಷತ್ರವು ಬ್ರಾಹ್ಮಣ್ಯವನ್ನು ಅನುಸರಿಸಿ ನಡೆದಂತಾಗುತ್ತದೆ. |
| ತಸ್ಮಾತ್ ಬ್ರಾಹ್ಮಣಃ ಮುಖ್ಯಃ | ಆದುದರಿಂದ ಬ್ರಾಹ್ಮಣನು ಮುಖ್ಯನಾಗಿದ್ದಾನೆ. |
| ಯಃ ಏವಮ್ ವೇದ ಮುಖ್ಯಃ ಭವತಿ | ಯಾವನು ಹೀಗೆ ತಿಳಿದಿರುತ್ತಾನೆಯೋ ಅವನು ಮುಖ್ಯನಾಗುತ್ತಾನೆ. |

---

ಅಲ್ಲದೆ ಇದರಿಂದ ಜ್ಞಾನವೂ, ಪ್ರಸಿದ್ಧಿಯೂ, ಪಶುಸಮೃದ್ಧಿಯೂ ಉಂಟಾಗುತ್ತದೆ ಎಂಬುದಾಗಿ ಇದು ಯಾಜ್ಯಾ-ಪುರೋನುವಾಕ್ಯೆಗಳ ಪ್ರಶಂಸೆ.

**'ಘೃತಂ ಖಲು ವೈ ವಜ್ರಂ ಕೃತ್ವಾ'** ಎಂಬುದಾಗಿ ಆಜ್ಯಕ್ಕೆ ವಜ್ರರೂಪವನ್ನು ಶ್ರುತಿಯು ಹೇಳುತ್ತದೆ. **'ವೃತ್ರಾಣಿ ಜಂಘನತ್'** ಎಂಬ ಆಜ್ಯಭಾಗಪುರೋನುವಾಕ್ಯಾಮಂತ್ರವು ಆಜ್ಯಭಾಗಗಳು ವೃತ್ರನಾಶಕಗಳೆಂದು ಹೇಳುವುದರಿಂದ ಅವು ವಜ್ರಗಳೆನಿಸಿಕೊಳ್ಳುತ್ತವೆ.

ಪ್ರೈವೈನಂ ಪುರೋಽನುವಾಕ್ಯಯಾಽಽಹ ಪ್ರಣಯತಿ

ಯಾಜ್ಯಯಾ ಗಮಯತಿ ವಷಟ್ಕಾರೇಣೈವೈನಂ

ಪುರೋಽನುವಾಕ್ಯಯಾ ದತ್ತೇ ಪ್ರಯಚ್ಛತಿ ಯಾಜ್ಯಯಾ

---

ಪ್ರೇತಿ । ಏವ । ಏನಮ್ । ಪುರೋನುವಾಕ್ಯಯೇತಿ ಪುರಃ-ಅನುವಾಕ್ಯಯಾ । ಆಹ ।

ಪ್ರೇತಿ । ನಯತಿ । ಯಾಜ್ಯಯಾ । ಗಮಯತಿ । ವಷಟ್ಕಾರೇಣೇತಿ ವಷಟ್-ಕಾರೇಣ ।

ಏತಿ । ಏವ । ಏನಮ್ । ಪುರೋನುವಾಕ್ಯಯೇತಿ ಪುರಃ-ಅನುವಾಕ್ಯಯಾ । ದತ್ತೇ ।

ಪ್ರೇತಿ । ಯಚ್ಛತಿ । ಯಾಜ್ಯಯಾ ।

---

**ಪುರೋನುವಾಕ್ಯೆ-ಯಾಜ್ಯೆ-ವಷಟ್ಕಾರಗಳ ಪ್ರಶಂಸೆ;**

| | |
|---|---|
| ಏನಮ್ ಪುರೋನುವಾಕ್ಯಯಾ ಪ್ರ ಏವ ಆಹ | [ಹೋತೃವು] ಈ ಯಜಮಾನನನ್ನು ಪುರೋನುವಾಕ್ಯದಿಂದ [ದೇವತೆಗಳಿಗೆ ಯಾಗಕರ್ತನೆಂದು] ಚೆನ್ನಾಗಿ ತಿಳಿಸಿ ಕೊಡುತ್ತಾನೆ. |
| ಪ್ರಣಯತಿ ಯಾಜ್ಯಯಾ | ಯಾಜ್ಯೆಯಿಂದ ದೇವತೆಗಳ ಬಳಿಗೆ ಒಳ್ಳೆಯ ಮಾರ್ಗದಿಂದ ಒಯ್ಯುತ್ತಾನೆ. |
| ವಷಟ್ಕಾರೇಣ ಗಮಯತಿ | ವಷಟ್ಕಾರದಿಂದ ದೇವತೆಗಳನ್ನು ಹೊಂದಿಸುತ್ತಾನೆ. |
| ಏನಮ್ ಪುರೋನುವಾಕ್ಯಯಾ ಆ ದತ್ತೇ ಏವ | ಪುರೋನುವಾಕ್ಯೆಯಿಂದ ಕೈಯಲ್ಲಿ ಹಿಡಿದುಕೊಳ್ಳುತ್ತಾನೆ. |
| ಯಾಜ್ಯಯಾ ಪ್ರಯಚ್ಛತಿ | ಯಾಜ್ಯೆಯಿಂದ ದೇವತೆಗಳಿಗೆ ಕೊಡುತ್ತಾನೆ. |

---

**'ವಷಟ್ಕಾರೋ ವೈ ಗಾಯತ್ರಿಯೈ ಶಿರೋಽಚ್ಛಿನತ್'** ಎಂದು ವಷಟ್ಕಾರವನ್ನು

ಪ್ರತಿ [..ಪ್ರತಿ(೫)ವಷಟ್ಕಾರೇಣ..] ವಷಟ್ಕಾರೇಣ ಸ್ಥಾಪಯತಿ

ತ್ರಿಪದಾ ಪುರೋನುವಾಕ್ಯಾ ಭವತಿ ತ್ರಯ ಇಮೇ ಲೋಕಾ

ಏಷ್ವೇವ ಲೋಕೇಷು ಪ್ರತಿತಿಷ್ಠತಿ ಚತುಷ್ಪದಾ ಯಾಜ್ಯಾ

---

ಪ್ರತೀತಿ ।(೫)। ವಷಟ್ಕಾರೇಣೇತಿ ವಷಟ್-ಕಾರೇಣ । ಸ್ಥಾಪಯತಿ । ತ್ರಿಪದೇತಿ ತ್ರಿ-ಪದಾ । ಪುರೋನುವಾಕ್ಯೇತಿ ಪುರಃ-ಅನುವಾಕ್ಯಾ । ಭವತಿ । ತ್ರಯಃ । ಇಮೇ । ಲೋಕಾಃ । ಏಷು । ಏವ । ಲೋಕೇಷು । ಪ್ರತೀತಿ । ತಿಷ್ಠತಿ । ಚತುಷ್ಪದೇತಿ ಚತುಃ-ಪದಾ । ಯಾಜ್ಯಾ ।

---

| | |
|---|---|
| ವಷಟ್ಕಾರೇಣ ಪ್ರತಿ ಸ್ಥಾಪಯತಿ | ವಷಟ್ಕಾರದಿಂದ ದೇವತೆಗಳ ಮಧ್ಯದಲ್ಲಿ ಸ್ಥಿರನಾಗಿರುವಂತೆ ಮಾಡುತ್ತಾನೆ. |

**ಪಾದಗಳನ್ನೂ, ಅಕ್ಷರಗಳನ್ನೂ ಪ್ರಶಂಸಿಸುವ ಇನ್ನೊಂದು ಬಗೆ**

| | |
|---|---|
| ತ್ರಿಪದಾ ಪುರೋನುವಾಕ್ಯಾ ಭವತಿ | **'ಅಗ್ನಿರ್ಮೂರ್ಧಾ'** ಎಂಬ ಪುರೋನುವಾಕ್ಯೆಯು ಮೂರು ಪಾದಗಳಿಂದ ಕೂಡಿದೆ. |
| ಇಮೇ ಲೋಕಾಃ ತ್ರಯಃ | ಈ ಲೋಕಗಳು ಭೂಃ, ಭುವಃ, ಸುವಃ, ಎಂದು ಮೂರಾಗಿವೆ./ಭೂಮಿ, ಅಂತರಿಕ್ಷ ಮತ್ತು ಸ್ವರ್ಗಗಳೆಂದು ಮೂರಾಗಿವೆ. |
| ಏಷು ಲೋಕೇಷು ಪ್ರತಿ ತಿಷ್ಠತಿ ಏವ | ಯಜಮಾನನು ಈ ಮೂರು ಲೋಕಗಳಲ್ಲಿಯೂ ಪ್ರತಿಷ್ಠಿತನಾಗುತ್ತಾನೆ. |
| ಚತುಷ್ಪದಾ ಯಾಜ್ಯಾ | **'ಭುವೋ ಯಜ್ಞಸ್ಯ'** ಎಂಬ ನಾಲ್ಕು ಪಾದಗಳುಳ್ಳ ಯಾಜ್ಯೆಯಾಗುತ್ತದೆ. |

---

ಭೇದನಸಮರ್ಥವೆಂದು ಹೇಳಿರುವುದರಿಂದ ವಷಟ್ಕಾರವು ವಜ್ರವಾಗಿದೆ. ಹೀಗೆ ಉಚ್ಚ

ಚತುಷ್ಪದ ಏವ ಪಶೂನವರುಂಧೇ ದ್ವ್ಯಕ್ಷರೋ ವಷಟ್ಕಾರೋ

ದ್ವಿಪಾದ್ಯಜಮಾನಃ ಪಶುಷ್ವೇವೋಪರಿಷ್ಟಾತ್ಪ್ರತಿತಿಷ್ಠತಿ

ಗಾಯತ್ರೀ ಪುರೋನುವಾಕ್ಯಾ ಭವತಿ

---

ಚತುಷ್ಪದ ಇತಿ ಚತುಃ-ಪದಃ । ಏವ । ಪಶೂನ್ । ಅವೇತಿ । ರುಂಧೇ । ದ್ವ್ಯಕ್ಷರ ಇತಿ ದ್ವಿ-ಅಕ್ಷರಃ । ವಷಟ್ಕಾರ ಇತಿ ವಷಟ್-ಕಾರಃ । ದ್ವಿಪಾದಿತಿ ದ್ವಿ-ಪಾತ್ । ಯಜಮಾನಃ। ಪಶುಷು । ಏವ । ಉಪರಿಷ್ಟಾತ್ । ಪ್ರತೀತಿ । ತಿಷ್ಠತಿ । ಗಾಯತ್ರೀ । ಪುರೋನುವಾಕ್ಯೇತಿ ಪುರಃ-ಅನುವಾಕ್ಯಾ । ಭವತಿ ।

---

| | |
|---|---|
| ಚತುಷ್ಪದಃ ಪಶೂನ್ ಅವ ರುಂಧೇ ಏವ | ಯಜಮಾನನು ನಾಲ್ಕು ಪಾದಗಳುಳ್ಳ ಪಶುಗಳನ್ನು ಹೊಂದುತ್ತಾನೆ. |
| ದ್ವ್ಯಕ್ಷರಃ ವಷಟ್ಕಾರಃ | ಎರಡು ಅಕ್ಷರಗಳುಳ್ಳ **'ವೌಷಟ್'** ಎಂಬುದು ವಷಟ್ಕಾರವಾಗುತ್ತದೆ. |
| ದ್ವಿಪಾತ್ ಯಜಮಾನಃ ಪಶುಷು ಏವ ಉಪರಿಷ್ಟಾತ್ ಪ್ರತಿತಿಷ್ಠತಿ | ಎರಡು ಪಾದಗಳುಳ್ಳ ಯಜಮಾನನು ಹಾಲು ಮೊದಲಾದವುಗಳನ್ನು ಅತಿಥಿಗಳಿಗೂ,ಯಾಗಕ್ಕೂ ಒದಗಿಸಿಕೊಡುವ ಹಸುಗಳು ಒದಗಲು ಸ್ಥಿರನಾಗುತ್ತಾನೆ. |

### ಶಕ್ವರೀಛಂದಸ್ಸಿಗೆ ಇನ್ನೊಂದು ರೀತಿಯ ಪ್ರಶಂಸೆ

| | |
|---|---|
| ಗಾಯತ್ರೀ ಪುರೋನುವಾಕ್ಯಾ ಭವತಿ | **'ಅಗ್ನಿರ್ಮೂರ್ಧಾ'** ಎಂಬ ಗಾಯತ್ರೀಛಂದಸ್ಸಿನ ಮಂತ್ರವು ಪುರೋನುವಾಕ್ಯೆಯಾಗಿದೆ. |

---

ಧ್ವನಿಯಿಂದ **'ವೌಷಟ್'** ಎಂದು ಹೇಳಿ ಹವಿಸ್ಸನ್ನು ಸಮರ್ಪಿಸುವುದು ಶತ್ರುನಾಶಕವಾಗುತ್ತದೆ.

ತೈತ್ತಿರೀಯಸಂಹಿತೆಯ ಏಳನೆಯ ಕಾಂಡದಲ್ಲಿ **'ಸ ಮುಖತಸ್ತ್ರಿವೃತಂ ನಿರಮಿಮೀತ ತಮಗ್ನಿರ್ದೇವತಾಽನ್ವಸೃಜ್ಯತ ಗಾಯತ್ರೀ ಛಂದೋ ರಥಂತರಗ್ಂ ಸಾಮ ಬ್ರಾಹ್ಮಣೋ ಮನುಷ್ಯಾಣಾಮ್'** ಎಂದೂ **'ತಸ್ಮಾತ್ತೇ ಮುಖ್ಯಾ ಮುಖತೋ ಹ್ಯಸೃಜ್ಯಂತ'** ಎಂದೂ

ತ್ರಿಷ್ಟುಗ್ಯಾಜ್ಯೈಷಾ ವೈ ಸಪ್ತಪದಾ ಶಕ್ವರೀ ಯದ್ವಾ ಏತಯಾ
ದೇವಾ ಅಶಿಕ್ಷನ್ತದಶಕ್ನುವನ್ ಯ ಏವಂ ವೇದ

---

ತ್ರಿಷ್ಟುಕ್ । ಯಾಜ್ಯಾ । ಏಷಾ । ವೈ । ಸಪ್ತಪದೇತಿ ಸಪ್ತ-ಪದಾ । ಶಕ್ವರೀ । ಯತ್ ।
ವೈ । ಏತಯಾ । ದೇವಾಃ । ಅಶಿಕ್ಷನ್ನ್ । ತತ್ । ಅಶಕ್ನುವನ್ನ್ । ಯಃ । ಏವಮ್ ।
ವೇದ ।

---

| | |
|---|---|
| ತ್ರಿಷ್ಟುಕ್ ಯಾಜ್ಯಾ | ತ್ರಿಷ್ಟುಪ್ ಛಂದಸ್ಸಿನ **'ಭುವ್ಯೋ ಯಜ್ಞಸ್ಯ'** ಎಂಬ ಮಂತ್ರವು ಯಾಜ್ಯಾನುವಾಕ್ಯೆಯಾಗಿದೆ. |
| ಏಷಾ ವೈ ಸಪ್ತಪದಾ ಶಕ್ವರೀ | [ಹೀಗೆ ಎರಡು ಛಂದಸ್ಸುಗಳ ಪಾದಗಳು ಒಟ್ಟು ಗೂಡಿ] ಏಳು ಪಾದಗಳುಳ್ಳ ಶಕ್ತಿಯುಕ್ತವಾದ ಶಕ್ವರೀಛಂದಸ್ಸಾಗಿದೆ. |
| ಏತಯಾ ದೇವಾಃ ಯತ್ ಅಶಿಕ್ಷನ್ | ಈ ಶಕ್ವರಿಯಿಂದ ದೇವತೆಗಳು ಏನನ್ನು ಸಾಧಿಸ ಬೇಕೆಂದು ತಿಳಿದುಕೊಂಡರೋ |
| ತತ್ ಅಶಕ್ನುವನ್ | ಅದನ್ನು ಸಾಧಿಸಲು ಸಮರ್ಥರಾದರು. |
| ಯಃ ಏವಮ್ ವೇದ | ಯಾವನು ಹೀಗೆ ತಿಳಿಯುತ್ತಾನೆಯೋ |

---

ಇದೆ. ಹೀಗೆಯೇ **'ಉರಸೋ ಬಾಹುಭ್ಯಾಂ ಪಂಚದಶಂ ನಿರಮಿಮೀತ ತಮಿಂದ್ರೋ ದೇವತಾಽನ್ವಸೃಜ್ಯತ ತ್ರಿಷ್ಟುಪ್ಛಂದೋ ಬೃಹತ್ಸಾಮ ರಾಜನ್ಯೋ ಮನುಷ್ಯಾಣಾಮ್'** ಎಂದೂ ಇದೆ.

ಇದರಿಂದ ಬ್ರಾಹ್ಮಣನ ಮುಖ್ಯತ್ವವೂ, ಕ್ಷತ್ರಿಯನ ಬಾಹುಜನ್ಯತ್ವವೂ ಗಾಯತ್ರೀ-ತ್ರಿಷ್ಟುಪ್ಛಂದಸ್ಸುಗಳ ಪೌರ್ವಾಪರ್ಯವೂ ಹೇಳಲ್ಪಟ್ಟಿದೆ. ಇದು ಅವುಗಳ ಪ್ರಶಂಸೆ. ಹಾಗೆಯೇ ಜ್ಞಾನದ ಪ್ರಶಂಸೆಯೂ ಹೌದು.

ಹೋತೃವು ಪುರೋನುವಾಕ್ಯೆ-ಯಾಜ್ಯೆ ವಷಟ್ಕಾರಗಳನ್ನು ಹೇಳುವುದನ್ನು-ಶ್ರೇಷ್ಠರನ್ನು ಕೈಯಿಂದ ಹಿಡಿದುಕೊಂಡು ಕರೆದುಕೊಂಡು ಹೋಗಿ ಪೀಠದಲ್ಲಿ ಕೂಡಿಸಿ ಗೌರವಿಸುವಂತೆ

## ಶಕ್ನೋತ್ಯೇವ ಯಚ್ಛಿಕ್ಷತಿ ॥೧೩-13॥

[ದೇವತಾನಾಂ ಕರೋತ್ಯುಪರಿಷ್ಟಾಲ್ಲಕ್ಷ್ಮಾಽಽಜ್ಯಭಾಗೌ ಪ್ರತಿ ಶಕ್ನೋತ್ಯೇವ ದ್ವೇ ಚ ॥]

---

ಶಕ್ನೋತಿ । ಏವ । ಯತ್ । ಶಿಕ್ಷತಿ ॥ 13 ॥

---

| | |
|---|---|
| ಯತ್ ಶಿಕ್ಷತಿ | [ಅವನು] ಯಾವ ಕಾರ್ಯವನ್ನು ಮಾಡಬೇಕೆಂದು ತಿಳಿಯುತ್ತಾನೆಯೋ |
| ಶಕ್ನೋತಿ ಏವ | [ಅದನ್ನು ಮಾಡಲು] ಸಮರ್ಥನೇ ಆಗುತ್ತಾನೆ. |

---

ಯಜಮಾನನಿಗೆ ಗೌರವವಿತ್ತಂತಾಗುವುದೆಂದು-ವರ್ಣಿಸಲಾಗಿದೆ. ಇದು ಪುರೋನುವಾಕ್ಯೆ-ಯಾಜ್ಯೆ-ವಷಟ್ಕಾರಗಳ ಮತ್ತೊಂದು ಬಗೆಯ ಪ್ರಶಂಸೆಯಾಗಿದೆ.

ಪುರೋನುವಾಕ್ಯೆ-ಯಾಜ್ಯೆಗಳ ಪಾದಗಳ ಪ್ರಶಂಸೆ ಹಾಗೂ ವಷಟ್ಕಾರಗಳಲ್ಲಿನ ಅಕ್ಷರಪ್ರಶಂಸೆಯನ್ನು ಮಾಡಲಾಗಿದೆ. ಈರೀತಿಯ ಪ್ರಶಂಸೆಯು ಹಲವೆಡೆಗಳಲ್ಲಿ ಕಂಡು ಬರುತ್ತದೆ.

ಇದು ಶಕ್ವರೀಛಂದಸ್ಸಿನ ಶಕ್ತಿಯ ಪ್ರಶಂಸೆ. ಇದು ಜ್ಞಾನದ ಪ್ರಶಂಸೆಯೂ ಆಗಿದೆ.

**ಇಲ್ಲಿ ಸಾಯಣಾಚಾರ್ಯರು ಬ್ರಾಹ್ಮಣಗ್ರಂಥದಲ್ಲಿ ಬರುವ ಉಪಾಂಶುಯಾಜ ಯಾಗಗಳ ಯಾಜ್ಯಾ-ಪುರೋನುವಾಕ್ಯೆಗಳ ವ್ಯಾಖ್ಯಾನವನ್ನು ಮಾಡಿರುತ್ತಾರೆ.**

**ತೈತ್ತಿರೀಯ ಬ್ರಾಹ್ಮಣಗ್ರಂಥದ ವ್ಯಾಖ್ಯಾನದ ಅನುವಾದದಲ್ಲಿ ಅವನ್ನು ಸೇರಿಸಬಹುದಾಗಿದೆಯೆಂದು ಆ ಮಂತ್ರಗಳ ವ್ಯಾಖ್ಯಾನವನ್ನು ಇಲ್ಲಿ ಕೈ ಬಿಡಲಾಗಿದೆ.**

* * *

# ಅನುವಾಕದ ವಿಶೇಷವಿಷಯಗಳು

## ೧)ಮೀಮಾಂಸಾ

### ೧) ಪ್ರಥಮ ಆಜ್ಯಭಾಗವು ಸಂಸ್ಕಾರಕರ್ಮವೇ? ಆರಾದುಪಕಾರಕವೇ?

**[ಜೈ. ಸೂ. 10-1-15-16]**

ದರ್ಶಪೂರ್ಣಮಾಸಪ್ರಕರಣದಲ್ಲಿ **'ಆಜ್ಯಭಾಗಾವಗ್ನೀಷೋಮಾಭ್ಯಾಂ ಯಜತಿ'**ಎಂಬ ವಾಕ್ಯವಿದೆ. ಮೊದಲನೆಯ ಆಜ್ಯಭಾಗದ ದೇವತೆಯು ಅಗ್ನಿಯಾಗಿದ್ದಾನೆ. ದ್ವಿತೀಯ ಆಜ್ಯಭಾಗದ ದೇವತೆಯು ಸೋಮನು. ಪ್ರಧಾನವಾದ ಹವಿಸ್ಸಾದ ಆಗ್ನೇಯ ಅಷ್ಟಾಕಪಾಲದ ದೇವತೆಯೂ ಅಗ್ನಿಯೇ ಆಗಿದ್ದಾನೆ. ಹೀಗಿರುವಾಗ ಪ್ರಥಮ ಆಜ್ಯಭಾಗವು ಐದನೆಯ ಪ್ರಯಾಜದಂತೆ ಪ್ರಧಾನಯಾಗದ ಅಗ್ನಿದೇವತೆಯ ಸ್ಮಾರಕವಾಗಿ ಸಂಸ್ಕಾರಕರ್ಮವೇ? ಅಥವಾ ಅದೃಷ್ಟರೂಪಫಲವನ್ನು ನೀಡುವ ಆರಾದುಪಕಾರಕವೇ? ಇದು ಇಲ್ಲಿನ **ಸಂಶಯ.**

ದರ್ಶಪೂರ್ಣಮಾಸದಲ್ಲಿ ಪ್ರಧಾನದೇವತೆ ಅಗ್ನಿಯಾಗಿದ್ದಾನೆ. ಪ್ರಥಮ ಆಜ್ಯಭಾಗ ದೇವತೆಯೂ ಅಗ್ನಿಯೇ ಆಗಿದ್ದಾನೆ. ಹೀಗಾಗಿ ಪ್ರಥಮ ಆಜ್ಯಭಾಗವು ಪಂಚಮಪ್ರಯಾಜ ದಂತೆ ದೇವತಾಸಂಸ್ಕಾರಕವಾಗುತ್ತದೆ. ಇದು ಇಲ್ಲಿನ **ಪೂರ್ವಪಕ್ಷ.**

ಆಹ್ವಾನನಿಗದದಲ್ಲಿ **'ಅಗ್ನಿಮಗ್ನ ಆವಹ' 'ಸೋಮಮಾವಹ' 'ಅಗ್ನಿಮಾವಹ'** ಎಂದಿದೆ. ಆಜ್ಯಭಾಗದ ದೇವತೆಯಾದ ಅಗ್ನಿಯೂ, ಪ್ರಧಾನದೇವತೆಯಾದ ಅಗ್ನಿಯೂ ಒಬ್ಬನೇ ಆಗಿದ್ದರೆ ಎರಡು ಬಾರಿ ಆಹ್ವಾನವು ವ್ಯರ್ಥವಾಗುತ್ತದೆ. ಅಲ್ಲದೆ ವಿಧಿವಾಕ್ಯವಾದ **'ಅಗ್ನೀಷೋಮಾಭ್ಯಾಂ ಯಜತಿ'**ಎಂಬಲ್ಲಿ ಒಂದೇ ಪದದಿಂದಲೇ ಅಗ್ನಿ-ಸೋಮರಿಬ್ಬರನ್ನೂ ಹೇಳಿದೆ. ಆದುದರಿಂದ ಆಜ್ಯಭಾಗದೇವತೆಯಾದ ಅಗ್ನಿದೇವತೆಯು ಬೇರೆ. ಪ್ರಧಾನಯಾಗ ದೇವತೆಯಾದ ಅಗ್ನಿಯು ಬೇರೆ. ಹೀಗಾಗಿ ಪ್ರಥಮ ಆಜ್ಯಭಾಗವೂ ಆರಾದುಪ ಕಾರಕವೇ.ವಿಕೃತಿಯಾಗಗಳಲ್ಲಿಯೂ ಇದಕ್ಕೆ ಬಾಧವಿಲ್ಲ. ಇದು ಇಲ್ಲಿನ **ಸಿದ್ಧಾಂತ.**

### ೨) ತಿಷ್ಠನ್...ಅನ್ವಾಹ ಎಂಬುದು ಆರಾದುಪಕಾರಕವೇ? [ಜೈ.ಸೂ.10.4]

ದರ್ಶ-ಪೂರ್ಣಮಾಸಪ್ರಕರಣದಲ್ಲಿ **'ತಿಷ್ಠನ್ ಯಾಜ್ಯಾಮನ್ವಾಹಾಸೀನಃ ಪುರೋಽನು ವಾಕ್ಯಾಮ್' [ಆಪ.ಶ್ರೌ.ಸೂ.24.13.10]** ಎಂಬ ವಾಕ್ಯವಿದೆ. ಯಾಜ್ಯಾನುವಾಕ್ಯೆಯನ್ನು

ನಿಂತುಕೊಂಡೂ ಪುರೋನುವಾಕ್ಯೆಯನ್ನು ಕುಳಿತುಕೊಂಡೂ ಪಾಠಮಾಡುತ್ತಾನೆ ಎಂದು ಇದರ ಅರ್ಥ. ಇದು ಸ್ತೋತ್ರಶಸ್ತ್ರಗಳಂತೆ ಆರಾದುಪಕಾರಕವೇ.ಇದು ಇಲ್ಲಿನ **ಪೂರ್ವಪಕ್ಷ.**

ದೇವತಾನಮಸ್ಕಾರರೂಪವಾದ ದೃಷ್ಟಪ್ರಯೋಜನವಿರುವುದರಿಂದ ಇದು ಸಂಸ್ಕಾರ ಕರ್ಮ. ಅಥವಾ ಮಂತ್ರಪ್ರಾಪ್ತವಾದ ಅನುವಚನದಲ್ಲಿ ಸ್ಥಾನ-ಆಸನಗಳ ವಿಧಾಯಕ ವಾಗುತ್ತದೆ ಇದು ಇಲ್ಲಿನ **ಸಿದ್ಧಾಂತ.**



## ॥ ತೃತೀಯೋಽನುವಾಕಃ ॥

ಪ್ರಜಾಪತಿರ್ದೇವೇಭ್ಯೋ ಯಜ್ಞಾನ್ವ್ಯಾದಿಶತ್ಸ ಆತ್ಮನ್ನಾಜ್ಯಮಧತ್ತ

ತಂ ದೇವಾ ಅಬ್ರುವನ್ನೇಷ ವಾವ ಯಜ್ಞೋ ಯದಾಜ್ಯ-

---

ಪ್ರಜಾಪತಿರಿತಿ ಪ್ರಜಾ-ಪತಿಃ । ದೇವೇಭ್ಯಃ । ಯಜ್ಞಾನ್ । ವ್ಯಾದಿಶದಿತಿ ವಿ-ಆದಿಶತ್ । ಸಃ । ಆತ್ಮನ್ನ್ । ಆಜ್ಯಮ್ । ಅಧತ್ತ । ತಮ್ । ದೇವಾಃ । ಅಬ್ರುವನ್ನ್ । ಏಷಃ । ವಾವ। ಯಜ್ಞಃ । ಯತ್ । ಆಜ್ಯಮ್ ।

---

ಎರಡನೆಯ ಅನುವಾಕದಲ್ಲಿ ಆಜ್ಯಭಾಗಗಳೂ, ಅವುಗಳ ಯಾಜ್ಯಾ-ಪುರೋನುವಾಕ್ಯೆಗಳೂ ಹೇಳಲ್ಪಟ್ಟವು.ಈಗ ಈ ಮೂರನೆಯ ಅನುವಾಕದಲ್ಲಿ ಪ್ರಧಾನವಾದ ಆಗ್ನೇಯಪುರೋಡಾಶಯಾಗವು ಹೇಳಲ್ಪಡುತ್ತದೆ.

### ಉಪಸ್ತರಣ-ಅಬಿಘಾರಣಗಳ ವಿಧಿ; ಉಪಾಖ್ಯಾನ

| | |
|---|---|
| ಪ್ರಜಾಪತಿಃ ದೇವೇಭ್ಯಃ | ಪ್ರಜಾಪತಿದೇವನು ದೇವತೆಗಳಿಗೆ ಯಜ್ಞಭಾಗ |
| ಯಜ್ಞಾನ್ ವ್ಯಾದಿಶತ್ | ಗಳನ್ನು ವಿಭಾಗಿಸಿಕೊಟ್ಟನು. |
| ಸಃ ಆತ್ಮನ್ ಆಜ್ಯಮ್ ಅಧತ್ತ | ಆತನು ತನಗಾಗಿ ಆಜ್ಯವನ್ನು ಇರಿಸಿಕೊಂಡನು. |
| ತಂ ದೇವಾಃ | ಆ ದೇವತೆಗಳು ಪ್ರಜಾಪತಿಯನ್ನು ಕುರಿತು |
| ಯತ್ ಆಜ್ಯಮ್ | ಈ ಅಜ್ಯವೆಂಬುದು ಯಾವುದುಂಟೋ |
| ಏಷಃ ವಾವ ಯಜ್ಞಃ | ಇದೇ ಸಾರಭೂತವಾದ ಯಜ್ಞಭಾಗವಾಗಿದೆ. |

---

ಯಾಗದಲ್ಲಿ ಆಜ್ಯದ ಪ್ರಾಮುಖ್ಯವನ್ನು ತಿಳಿಸುವ ಈ ಉಪಾಖ್ಯಾನವು ಹೀಗಿದೆ.

ಮಪ್ಯೇವ ನೋಽತ್ರಾಸ್ತ್ವಿತಿ ಸೋಽಬ್ರವೀದ್ಯಜಾನ್ ವ

ಆಜ್ಯಭಾಗಾವುಪ ಸ್ತೃಣಾನಭಿ ಘಾರಯಾನಿತಿ

ತಸ್ಮಾದ್ಯಜನ್ತ್ಯಾಜ್ಯಭಾಗಾವುಪಸ್ತೃಣಂತ್ಯಭಿ ಘಾರಯಂತಿ

---

ಅಪೀತಿ । ಏವ । ನಃ । ಅತ್ರ । ಅಸ್ತು । ಇತಿ । ಸಃ । ಅಬ್ರವೀತ್ । ಯಜಾನ್ । ವಃ ।

ಆಜ್ಯಭಾಗಾವಿತ್ಯಾಜ್ಯ-ಭಾಗೌ । ಉಪೇತಿ । ಸ್ತೃಣಾನ್ । ಅಭೀತಿ । ಘಾರಯಾನ್ । ಇತಿ ।

ತಸ್ಮಾತ್ । ಯಜನ್ತಿ । ಆಜ್ಯಭಾಗಾವಿತ್ಯಾಜ್ಯ-ಭಾಗೌ । ಉಪೇತಿ । ಸ್ತೃಣಂತಿ । ಅಭೀತಿ ।

ಘಾರಯಂತಿ ।

---

| | |
|---|---|
| ನಃ ಅಪಿ ಅತ್ರ ಅಸ್ತು ಏವ ಇತಿ ಅಬ್ರುವನ್ | 'ನಮಗೂ ಈ ತುಪ್ಪದಲ್ಲಿ ಭಾಗವಿರಲಿ' ಎಂದು ಹೇಳಿದರು. |
| ಸಃ ಯಜಾನ್ ವಃ ಆಜ್ಯಭಾಗೌ ಉಪಸ್ತೃಣಾನ್ | ಆ ಪ್ರಜಾಪತಿಯು [ದೇವತೆಗಳಿಗೆ] ನಿಮಗಾಗಿ ಆಜ್ಯದಿಂದ ಆಜ್ಯಭಾಗಹೋಮವನ್ನು ಮಾಡಲಿ. [ಪ್ರಧಾನಯಾಗವನ್ನು ಮಾಡುವ ಜುಹೂವಿನಲ್ಲಿ ಆಜ್ಯದಿಂದ] ಉಪಸ್ತರಣವನ್ನು ಮಾಡಲಿ. |
| ಅಭಿ ಘಾರಯಾನ್ ಇತಿ ಅಬ್ರವೀತ್ | [ಹವಿರವದಾನ ಮಾಡಿದ ಮೇಲೆ ತುಪ್ಪದಿಂದ] ಅಭಿಘಾರಣವನ್ನು ಮಾಡಲಿ. [ಇದು ನಿಮ್ಮ ಭಾಗ] ಎಂದು ಹೇಳಿದನು. |
| ತಸ್ಮಾತ್ ಆಜ್ಯಭಾಗೌ ಯಜನ್ತಿ | ಆದುದರಿಂದ ತುಪ್ಪದಿಂದ ಆಜ್ಯಭಾಗಹೋಮವನ್ನು ಮಾಡುತ್ತಾರೆ. |
| ಉಪಸ್ತೃಣಂತಿ | ಅವದಾನಕ್ಕೆ ಮೊದಲು ಉಪಸ್ತರಣವನ್ನು ಮಾಡುತ್ತಾರೆ. |
| ಅಭಿಘಾರಯಂತಿ | ಅವದಾನವನ್ನು ಮಾಡಿದ ಮೇಲೆ ಅಭಿಘಾರಣವನ್ನು ಮಾಡುತ್ತಾರೆ. |

ಬ್ರಹ್ಮವಾದಿನೋ ವದಂತಿ ಕಸ್ಮಾಥ್ಸತ್ಯಾದ್ಯಾತಯಾಮಾ

ನ್ಯನ್ಯಾನಿ ಹವೀಗ್ಂಷ್ಯಯಾತಯಾಮಮಾಜ್ಯಮಿತಿ ಪ್ರಾಜಾಪತ್ಯ

[..ಪತ್ಯಮ್(೧) ಇತಿ..] ಮಿತಿ ಬ್ರೂಯಾ-

---

ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ । ಕಸ್ಮಾತ್ । ಸತ್ಯಾತ್ । ಯಾತಯಾಮಾನೀತಿ

ಯಾತ-ಯಾಮಾನಿ । ಅನ್ಯಾನಿ । ಹವೀಗ್ಂಷಿ । ಅಯಾತಯಾಮಮಿತ್ಯಯಾತ-ಯಾಮಮ್।

ಆಜ್ಯಮ್ । ಇತಿ । ಪ್ರಾಜಾಪತ್ಯಮಿತಿ ಪ್ರಾಜಾ-ಪತ್ಯಮ್ । (೧) । ಇತಿ । ಬ್ರೂಯಾತ್ ।

---

**ಉಪಸ್ತರಣಾದಿಗಳ ದ್ರವ್ಯವಾದ ಆಜ್ಯದ ಪ್ರಶಂಸೆ**

| | |
|---|---|
| ಬ್ರಹ್ಮವಾದಿನಃ ಕಸ್ಮಾತ್ ಸತ್ಯಾತ್ ಅನ್ಯಾನಿ ಹವೀಗ್ಂಷಿ ಯಾತಯಾಮಾನಿ | ಕೆಲವರು ವೇದವಿದರು ಯಾವ ಸತ್ಯವಾದ ಕಾರಣ ದಿಂದ ಪುರೋಡಾಶವೇ ಮೊದಲಾದ ಹವಿಸ್ಸು ಗಳು [ಕಾಲವು ಕಳದಂತೆ ಹಳಸಿ ಹೋಗಿ] ತಮ್ಮ ಸಾರವನ್ನು ಕಳೆದುಕೊಳ್ಳುತ್ತವೆ. |
| ಆಜ್ಯಮ್ ಅಯಾತಯಾಮಮ್ ಇತಿ ವದಂತಿ | ಆದರೆ ತುಪ್ಪವು ಕಾಲವು ಕಳೆದಂತೆ ಸಾರಹೀನ ವಾಗುವುದಿಲ್ಲವೆಂಬುದಾಗಿ ಪ್ರಶ್ನಿಸುತ್ತಾರೆ. |
| ಪ್ರಾಜಾಪತ್ಯಮ್ ಇತಿ ಬ್ರೂಯಾತ್ | ತುಪ್ಪವು ಪ್ರಜಾಪತಿಸಂಬಂಧಿಯಾದುದರಿಂದ ಅದು ಸಾರಹೀನವಾಗುವುದಿಲ್ಲ. [ಎಂದು ವೇದ ವಿದರು ಕಾರಣವನ್ನು ತಿಳಿಸುತ್ತಾರೆ] |

---

ಪ್ರಜಾಪತಿಯು ಯಜ್ಞಭಾಗಗಳನ್ನು ದೇವತೆಗಳಿಗಾಗಿ ವಿಭಾಗಿಸಿ ಕೊಟ್ಟ ನಂತರ ದೇವತೆಗಳು ಪ್ರಜಾಪತಿಯು ತನಗಾಗಿ ಇರಿಸಿಕೊಂಡ ಆಜ್ಯದಲ್ಲಿಯೂ ಭಾಗವನ್ನು ಕೇಳಿದರು.ಪ್ರಜಾಪತಿಯು ಅದನ್ನು ಅಂಗೀಕರಿಸಿ ಉಪಸ್ತರಣವನ್ನೂ ಅಭಿಘಾರಣವನ್ನು ವಿಧಿಸಿದನು. ಇದರಿಂದ ಉಪಸ್ತರಣ ಅಭಿಘಾರಣಗಳ ವಿಧಿಯನ್ನು ಕಲ್ಪಿಸಬೇಕು.

ದಯಾತಯಾಮಾ ಹಿ ದೇವಾನಾಂ ಪ್ರಜಾಪತಿರಿತಿ ಛಂದಾಗ್ಂಸಿ ದೇವೇಭ್ಯೋಽಪಾಕ್ರಾಮನ್ನ ವೋಽಭಾಗಾನಿ ಹವ್ಯಂ ವಕ್ಷ್ಯಾಮ ಇತಿ

---

ಅಯಾತಯಾಮೇತ್ಯಯಾತ-ಯಾಮಾ । ಹಿ । ದೇವಾನಾಮ್ । ಪ್ರಜಾಪತಿರಿತಿ ಪ್ರಜಾ-ಪತಿಃ । ಇತಿ । ಛಂದಾಗ್ಂಸಿ । ದೇವೇಭ್ಯಃ । ಅಪೇತಿ । ಅಕ್ರಾಮನ್ನ್ । ನ । ವಃ । ಅಭಾಗಾನಿ । ಹವ್ಯಮ್ । ವಕ್ಷ್ಯಾಮಃ । ಇತಿ ।

---

ದೇವಾನಾಮ್ ಪ್ರಜಾಪತಿಃ ಅಯಾತಯಾಮಾ ಹಿ ಇತಿ — ದೇವತೆಗಳಲ್ಲಿ ಪ್ರಜಾಪತಿದೇವನು ಸೃಷ್ಟಿ, ಲಯಗಳಿಗೆ ಕಾರಣನಾಗಿ ಹಾಗೆಯೇ ಪ್ರಕಾಶಮಾನನಾಗಿ ಇರುತ್ತಾನಷ್ಟೆ*

**ಚತುರವತ್ತವಿಧಿ; ಆದರ ಪ್ರಶಂಸೆಗಾಗಿ ಉಪಾಖ್ಯಾನ**

ಛಂದಾಗ್ಂಸಿ ದೇವೇಭ್ಯಃ — ಛಂದೋದೇವತೆಗಳು/**ಗಾಯತ್ರೀ,ತ್ರಿಷ್ಟುಪ್, ಜಗತೀ, ಅನುಷ್ಟುಪ್ ಈ ಮುಖ್ಯಛಂದಸ್ಸುಗಳು [ಛ,ಛಾ,ಛಾ]** ಹವಿಸ್ಸನ್ನು ಪಡೆಯುವ ದೇವತೆಗಳಿಂದ

ಅಭಾಗಾನಿ ವಃ ಹವ್ಯಮ್ ನ ವಕ್ಷ್ಯಾಮಃ ಇತಿ — 'ನಮಗೆ ಹವ್ಯವನ್ನು ಕೊಡದಿದ್ದರೆ ಭಾಗಹೀನರಾದ ನಾವು [ಛಂದೋದೇವತೆಗಳು] ನಿಮಗೆ ಹವ್ಯವನ್ನು ತಂದುಕೊಡುವುದಿಲ್ಲ' ಎಂದು ಹೇಳುತ್ತಾ

ಅಪಾಕ್ರಾಮನ್ — ಹವಿರ್ಭಾಗ್ದೇವತೆಗಳನ್ನು ಬಿಟ್ಟು ಹೊರಟುಹೋದರು.

---

ಆಜ್ಯವು ಕೆಡದೆ ಇರುತ್ತದೆ. ಹಾಲು, ಮೊಸರು ಮೊದಲಾದವುಗಳು ಹೆಚ್ಚು ಕಾಲ ಇರುವುದಿಲ್ಲ. ಕೆಡುತ್ತವೆ. ದೇವತೆಗಳಲ್ಲಿ ಪ್ರಜಾಪತಿಯು ಒಂದೇ ರೀತಿಯಾಗಿ ಇರುವಂತೆ

---

*ಪ್ರಜಾಪತಿಯನ್ನುಳಿದು ಇತರ ದೇವತೆಗಳು ಕಲ್ಪಕಲ್ಪದಲ್ಲಿಯೂ ವಿಭಿನ್ನರಾಗಿರುತ್ತಾರೆ.

ತೇಭ್ಯ ಏತಚ್ಚತುರವತ್ತಮಧಾರಯನ್ಪುರೋನುವಾಕ್ಯಾಯೈ

ಯಾಜ್ಯಾಯೈ ದೇವತಾಯೈ ವಷಟ್ಕಾರಾಯ ಯಚ್ಚತುರವತ್ತಂ

ಜುಹೋತಿ ಛಂದಾಗ್ಂಸ್ಯೇವ ತತ್ಪ್ರೀಣಾತಿ

---

ತೇಭ್ಯಃ । ಏತತ್ । ಚತುರವತ್ತಮಿತಿ ಚತುಃ-ಅವತ್ತಮ್ । ಅಧಾರಯನ್ನ್ । ಪುರೋನುವಾಕ್ಯಾಯಾ ಇತಿ ಪುರಃ-ಅನುವಾಕ್ಯಾಯೈ । ಯಾಜ್ಯಾಯೈ । ದೇವತಾಯೈ । ವಷಟ್ಕಾರಾಯೇತಿ ವಷಟ್-ಕಾರಾಯ । ಯತ್ । ಚತುರವತ್ತಮಿತಿ ಚತುಃ-ಅವತ್ತಮ್। ಜುಹೋತಿ । ಛಂದಾಗ್ಂಸಿ । ಏವ । ತತ್ । ಪ್ರೀಣಾತಿ ।

---

| | |
|---|---|
| ತೇಭ್ಯಃ ಏತತ್ ಚತುರವತ್ತಮ್ ಅಧಾರಯನ್ | ಆ ಛಂದೋದೇವತೆಗಳಿಗಾಗಿ ಈ*ಚತುರವತ್ತವನ್ನು ಭಾಗವನ್ನಾಗಿ ಕೊಟ್ಟರು. |
| ಪುರೋನುವಾಕ್ಯಾಯೈ ಯಾಜ್ಯಾಯೈ ದೇವತಾಯೈ ವಷಟ್ಕಾರಾಯ | ಪುರೋನುವಾಕ್ಯೆ, ಯಾಜ್ಯೆ ವಷಟ್ಕಾರಾಭಿಮಾನಿಗಳಾದ ದೇವತೆಗಳಿಗೂ, ಹವಿರಾಧಾರಭೂತ ದೇವತೆಯಾದ ಅಗ್ನಿದೇವನಿಗೂ [ಚತುರವತ್ತವನ್ನು ಭಾಗವನ್ನಾಗಿ ಕೊಟ್ಟರು] |
| ಯತ್ ಚತುರವತ್ತಮ್ ಜುಹೋತಿ | ಚತುರವತ್ತವನ್ನು ಮಾಡಿ ಹೋಮವನ್ನು ಮಾಡುವುದು ಯಾವುದುಂಟೋ |
| ತತ್ ಛಂದಾಂಸಿ ಏವ ಪ್ರೀಣಾತಿ | ಅದು ಛಂದೋದೇವತೆಗಳನ್ನು ಸಂತೋಷಪಡಿಸುತ್ತದೆ. |

---

ಆಜ್ಯವು ಇರುತ್ತದೆ. ಆಜ್ಯವು ಪ್ರಜಾಪತಿದೇವತಾಕವಾಗಿಯೂ ಇದೆ.ಹೀಗಾಗಿ ಅದು ಅಯಾತಯಾಮವಾಗಿದೆ. ಇದು ಆಜ್ಯದ ಪ್ರಶಂಸೆ.

---

ಚತುರವತ್ತವೆಂದರೆ ***ಸಕೃದುಪಸ್ತರಣ**=ಒಂದು ಬಾರಿ ಉಪಸ್ತರಣ. **ದ್ವಿರವದಾನ**=ಎರಡು ಬಾರಿ ಹವಿಸ್ಸಿನ ವಿಭಾಗ **ಸಕೃದಭಿಘಾರಣ**=ಒಮ್ಮೆ ಆಜ್ಯದಿಂದ ಅಭಿಘಾರಣ

ತಾನ್ಯಸ್ಯ ಪ್ರೀತಾನಿ ದೇವೇಭ್ಯೋ ಹವ್ಯಂ ವಹಂತ್ಯಂಗಿರಸೋ ವಾ

ಇತ ಉತ್ತಮಾಸ್ಸುವರ್ಗಂ ಲೋಕಮಾಯನ್ತದೃಷಯೋ

ಯಜ್ಞವಾಸ್ತ್ವಭ್ಯವಾಯನ್ತೇಽಪಶ್ಯತೇ[(೨)ಅಪಶ್ಯನ್..]

ನ್ಪುರೋಡಾಶಂ ಕೂರ್ಮಂ ಭೂತಗ್ಂ ಸರ್ಪಂತಂ

---

ತಾನಿ । ಅಸ್ಯ । ಪ್ರೀತಾನಿ । ದೇವೇಭ್ಯಃ । ಹವ್ಯಮ್ । ವಹಂತಿ । ಅಂಗಿರಸಃ । ವೈ । ಇತಃ। ಉತ್ತಮಾ ಇತ್ಯುತ್-ತಮಾಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಆಯನ್ನ್ । ತತ್ । ಋಷಯಃ । ಯಜ್ಞವಾಸ್ತ್ವಿತಿ ಯಜ್ಞ-ವಾಸ್ತು । ಅಭ್ಯವಾಯನ್ನಿತ್ಯಭಿ-ಅವಾಯನ್ನ್ । ತೇ । (೨) । ಅಪಶ್ಯನ್ನ್ । ಪುರೋಡಾಶಮ್ । ಕೂರ್ಮಮ್ । ಭೂತಮ್ । ಸರ್ಪಂತಮ್।

---

| | |
|---|---|
| ತಾನಿ ಪ್ರೀತಾನಿ ಅಸ್ಯ ಹವ್ಯಮ್ ದೇವೇಭ್ಯಃ ವಹಂತಿ | ತೃಪ್ತಿಹೊಂದಿದ ಛಂದೋದೇವತೆಗಳು ಯಜ್ಞದಲ್ಲಿ ಹವಿರ್ಭಾಗವನ್ನು ಹೊಂದುವ ದೇವತೆಗಳಿಗೆ ಈ ಯಜಮಾನನು ನೀಡುವ ಹವಿಸ್ಸನ್ನು ಒಯ್ಯುತ್ತವೆ. |

**ಆಗ್ನೇಯ ಅಷ್ಟಾಕಪಾಲದ ವಿಧಿ; ಪ್ರಶಂಸೆಯ ಉಪಾಖ್ಯಾನ**

| | |
|---|---|
| ಅಂಗಿರಸಃ ವೈ | ಅಂಗಿರೋನಾಮಕರಾದ ಋಷಿಗಳು |
| ಇತಃ ಉತ್ತಮಾಃ | ಈ ಭೂಲೋಕದಿಂದ ಉತ್ತಮವೇಗವುಳ್ಳವರಾಗಿ |
| ಸುವರ್ಗಮ್ ಲೋಕಮ್ ಆಯನ್ | ಸ್ವರ್ಗಲೋಕಕ್ಕೆ ಹೋದರು. |
| ತತ್ ಋಷಯಃ ಯಜ್ಞವಾಸ್ತು ಅಭ್ಯವಾಯನ್ | ಅಲ್ಲಿ ಆ ಮುನಿಗಳು/ಅವರನ್ನು ಹಿಂಬಾಲಿಸಿದ ಬೇರೆಯ ಮುನಿಗಳು ಯಜ್ಞಶಾಲೆಗೆ ಅಭಿಮುಖವಾಗಿ ಹೋದರು. |
| ತೇ ಕೂರ್ಮಮ್ ಭೂತಮ್ ಸರ್ಪಂತಮ್‌ತಮ್‌ಪುರೋಡಾಶಮ್ ಅಪಶ್ಯನ್ | ಅವರು ಪುರೋಡಾಶಾಭಿಮಾನಿದೇವತೆಯು ಆಮೆಯ ರೂಪವನ್ನು ಧರಿಸಿ ಹೊರಟುಹೋಗುತ್ತಿರುವುದನ್ನು ಕಂಡರು. |

ತಮಬ್ರುವನ್ನಿಂದ್ರಾಯ ಧ್ರಿಯಸ್ವ ಬೃಹಸ್ಪತಯೇ ಧ್ರಿಯಸ್ವ ವಿಶ್ವೇಭ್ಯೋ ದೇವೇಭ್ಯೋ ಧ್ರಿಯಸ್ವೇತಿ ಸ ನಾಧ್ರಿಯತ ತಮಬ್ರುವನ್ನಗ್ನಯೇ ಧ್ರಿಯಸ್ವೇತಿ ಸೋಽಗ್ನಯೇಽಧ್ರಿಯತ ಯದಾಗ್ನೇಯೋಽಷ್ಟಾಕಪಾಲೋ

---

ತಮ್ । ಅಬ್ರುವನ್ । ಇಂದ್ರಾಯ । ಧ್ರಿಯಸ್ವ । ಬೃಹಸ್ಪತಯೇ । ಧ್ರಿಯಸ್ವ । ವಿಶ್ವೇಭ್ಯಃ । ದೇವೇಭ್ಯಃ । ಧ್ರಿಯಸ್ವ । ಇತಿ । ಸಃ । ನ । ಅಧ್ರಿಯತ । ತಮ್ । ಅಬ್ರುವನ್ । ಅಗ್ನಯೇ । ಧ್ರಿಯಸ್ವ । ಇತಿ । ಸಃ । ಅಗ್ನಯೇ । ಅಧ್ರಿಯತ । ಯತ್ । ಆಗ್ನೇಯಃ । ಅಷ್ಟಾಕಪಾಲ ಇತ್ಯಷ್ಟಾ-ಕಪಾಲಃ ।

---

| | |
|---|---|
| ತಮ್ 'ಇಂದ್ರಾಯ ಧ್ರಿಯಸ್ವ, ಬೃಹಸ್ಪತಯೇ ಧ್ರಿಯಸ್ವ, ವಿಶ್ವೇಭ್ಯಃ ದೇವೇಭ್ಯಃ ಧ್ರಿಯಸ್ವ' ಇತಿ ಅಬ್ರುವನ್ | ಆ ಕೂರ್ಮವನ್ನು ಕುರಿತು ಋಷಿಗಳು 'ನೀನು ನಿಲ್ಲು, ನಿನ್ನನ್ನು ಇಂದ್ರನಿಗಾಗಿ ಕೊಡುತ್ತೇವೆ. ನೀನು ನಿಲ್ಲು' 'ಬೃಹಸ್ಪತಿಗಾಗಿ ಕೊಡುತ್ತೇವೆ. ನೀನು ನಿಲ್ಲು' 'ವಿಶ್ವೇದೇವರಿಗಾಗಿ ಸಮರ್ಪಿಸುತ್ತೇವೆ' ಎಂದು ಬಗೆಬಗೆಯಾಗಿ ನುಡಿದರು. |
| ಸಃ ನ ಅಧ್ರಿಯತ ತಮ್ 'ಅಗ್ನಯೇ ಧ್ರಿಯಸ್ವ' ಇತಿ ಅಬ್ರುವನ್ | ಆ ಕೂರ್ಮವು ನಿಲ್ಲಲಿಲ್ಲ.ಆ ಕೂರ್ಮರೂಪದ ಪುರೋಡಾಶದೇವತೆಯನ್ನು ಕುರಿತು 'ನಿನ್ನನ್ನು ಅಗ್ನಿಗೆ ಸಮರ್ಪಿಸುತ್ತೇವೆ. ನೀನು ನಿಲ್ಲು' ಎಂದರು. |
| ಸಃ ಅಗ್ನಯೇ ಅಧ್ರಿಯತ | ಆ ಕೂರ್ಮರೂಪಪುರೋಡಾಶವು ಅಗ್ನಿದೇವನಿಗಾಗಿ ನಿಂತಿತು. |
| ಯತ್ ಆಗ್ನೇಯಃ ಅಷ್ಟಾಕಪಾಲಃ | ಯಾವ ಕಾರಣದಿಂದ ಅಗ್ನಿದೇವತಾಕವಾದ ಅಷ್ಟಾಕಪಾಲಸಂಸ್ಕೃತವಾದ ಪುರೋಡಾಶವು |

---

ಗಾಯತ್ರೀ ಮುಂತಾದ ಛಂದೋದೇವತೆಗಳು ಹವಿರ್ಭಾಗ್ದೇವತೆಗಳಿಗೆ ಹವ್ಯವನ್ನು ಒಯ್ಯುವುದಕ್ಕಾಗಿ ಭಾಗವನ್ನು ಕೇಳಿದವು. ಅದರಂತೆ ಚತುರವತ್ತದ ಭಾಗವನ್ನು ಪಡೆದವು.

-ಽಮಾವಾಸ್ಯಾಯಾಂ ಚ ಪೌರ್ಣಮಾಸ್ಯಾಂ ಚಾಚ್ಯುತೋ ಭವತಿ

ಸುವರ್ಗಸ್ಯ ಲೋಕಸ್ಯಾಭಿಜಿತ್ಯೈ ತಮಬ್ರುವನ್ಕಥಾಽಹಾಸ್ಥಾ

ಇತ್ಯನುಪಾಕ್ತೋಽಭೂವಮಿತ್ಯಬ್ರವೀ-

---

ಅಮಾವಾಸ್ಯಾಯಾಮಿತ್ಯಮಾ-ವಾಸ್ಯಾಯಾಮ್ । ಚ । ಪೌರ್ಣಮಾಸ್ಯಾಮಿತಿ ಪೌರ್ಣ-ಮಾಸ್ಯಾಮ್ । ಚ । ಅಚ್ಯುತಃ । ಭವತಿ । ಸುವರ್ಗಸ್ಯೇತಿ ಸುವಃ-ಗಸ್ಯ । ಲೋಕಸ್ಯ । ಅಭಿಜಿತ್ಯಾ ಇತ್ಯಭಿ-ಜಿತ್ಯೈ । ತಮ್ । ಅಬ್ರುವನ್ನ್ । ಕಥಾ । ಅಹಾಸ್ಥಾಃ । ಇತಿ । ಅನುಪಾಕ್ತ ಇತ್ಯನುಪ-ಅಕ್ತಃ । ಅಭೂವಮ್ । ಇತಿ । ಅಬ್ರವೀತ್ ।

---

| | |
|---|---|
| ಅಮಾವಾಸ್ಯಾಯಾಮ್ ಚ | ಅಮಾವಾಸ್ಯಾಯಾಗದಲ್ಲಿಯೂ [ಅಮಾವಾಸ್ಯೆಯಲ್ಲಿಯೂ] |
| ಪೌರ್ಣಮಾಸ್ಯಾಮ್ ಚ | ಪೌರ್ಣಮಾಸೇಷ್ಟಿಯಲ್ಲಿಯೂ[ಪೂರ್ಣಮಾಸದಲ್ಲಿಯೂ] |
| ಅಚ್ಯುತಃ ಭವತಿ | ನಾಶರಹಿತವಾಗಿ, ಸಂಪೂರ್ಣವಾಗಿ ಸಮರ್ಪಿಸಲ್ಪಡುತ್ತದೆಯೋ [ಅಂತಹ ಅಷ್ಟಾಕಪಾಲವು] |
| ಸುವರ್ಗಸ್ಯ ಲೋಕಸ್ಯ ಅಭಿಜಿತ್ಯೈ | ಸ್ವರ್ಗಲೋಕದ ಜಯಕ್ಕೆ ಸಾಧಕವಾಗುತ್ತದೆ. **[ವಿಧಿ]** |

## ಅಭ್ಯಂಜನ-ಅಂಜನಗಳ ವಿಧಿ; ಪ್ರಶಂಸೆ

| | |
|---|---|
| ತಮ್ ಕಥಾಽಹಾಸ್ಥಾಃ ಇತಿ ಅಬ್ರುವನ್ | ಆ ಪುರೋಡಾಶದೇವತೆಯನ್ನು ಕುರಿತು 'ಏತಕ್ಕಾಗಿ ಯಾಗಶಾಲೆಯನ್ನು ಬಿಟ್ಟು ಬಂದೆ?' ಎಂದು ಪ್ರಶ್ನಿಸಿದರು. |
| **[ಸಃ]** ಅನುಪಾಕ್ತಃ ಅಭೂವಮ್ ಇತಿ ಅಬ್ರವೀತ್ | ನಾನು ಅಂಜನಾಭ್ಯಂಜನರಹಿತನಾದೆನು. [ಆದುದರಿಂದ ಹೊರಬರಬೇಕಾಯಿತು] ಎಂದು ಪುರೋಡಾಶವು ಹೇಳಿತು. |

ದ್ಯಥಾಽಕ್ಷೋಽನುಪಾಕ್ತೋಽವಾ [..ನುಪಾಕ್ತಃ(೩)ಅವಾರ್ಛ..] ರ್ಛತ್ಯೇವಮವಾರಮಿತ್ಯುಪರಿಷ್ಟಾದಭ್ಯಜ್ಯಾಧಸ್ತಾದುಪಾನಕ್ತಿ ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ ೪೮

---

ಯಥಾ । ಅಕ್ಷಃ । ಅನುಪಾಕ್ತ ಇತ್ಯನುಪ-ಅಕ್ತಃ । (೩) । ಅವಾರ್ಛತೀತ್ಯವ-ಋಚ್ಛತಿ । ಏವಮ್ । ಅವೇತಿ । ಆರಮ್ । ಇತಿ । ಉಪರಿಷ್ಟಾತ್ । ಅಭ್ಯಜ್ಯೇತ್ಯಭಿ-ಅಜ್ಯ । ಅಧಸ್ತಾತ್ । ಉಪೇತಿ । ಅನಕ್ತಿ । ಸುವರ್ಗಸ್ಯೇತಿ ಸುವಃ-ಗಸ್ಯ । ಲೋಕಸ್ಯ । ಸಮಷ್ಟ್ಯಾ ಇತಿ ಸಂ-ಅಷ್ಟ್ಯೈ ೪೮ ।

---

| | |
|---|---|
| ಯಥಾ ಅನುಪಾಕ್ತಃ ಅಕ್ಷಃ ಅವಾರ್ಛತಿ | ಹೇಗೆ ಎಣ್ಣೆಯನ್ನು ಹಾಕದಿರುವ ಗಾಡಿಯ ಗುಂಬವು ನಶಿಸುವುದೋ |
| ಏವಮ್ ಅವಾರಮ್ | ಹಾಗೆ ನಾನೂ [ಅಂಜನಾಭ್ಯಂಜನರಹಿತ ನಾಗಿ] ಸಹ ನಾಶ ಹೊಂದುವಂತಾದೆನು. |
| ಉಪರಿಷ್ಟಾತ್ ಅಭ್ಯಜ್ಯ ಅಧಸ್ತಾತ್ ಉಪಾನಕ್ತಿ | [ಆದುದರಿಂದ ಪುರೋಡಾಶದ] ಮೇಲುಭಾಗ ದಲ್ಲಿ ಆಜ್ಯದಿಂದ ಅಭ್ಯಂಜನ ಮಾಡಿ, ಕೆಳಗಡೆಯೂ ತುಪ್ಪದಿಂದ ಅಂಜನವನ್ನು ಮಾಡಬೇಕು. **[ವಿಧಿ]** |
| ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ ೪೮ | ಇದು ಸುವರ್ಗಲೋಕದ ಪೂರ್ಣಪ್ರಾಪ್ತಿಗೆ ಕಾರಣವಾಗುತ್ತದೆ. |

---

ಇದು ಚತುರವತ್ತದ ವಿಧಿಯಾಗಿದೆ. ಪ್ರಶಂಸೆಯಿಂದ ವಿಧಿಯನ್ನು ಕಲ್ಪಿಸಿಕೊಳ್ಳಬೇಕು.

ಅಂಗಿರೋನಾಮಕರಾದ ಋಷಿಗಳು ಸ್ವರ್ಗಲೋಕಕ್ಕೆ ಹೋದಾಗ ಪುರೋಡಾಶವು ಆಮೆಯ ರೂಪದಿಂದ ಹೊರಡುತ್ತಿರುವುದನ್ನು ಕಂಡು, ಅದನ್ನು ಅಗ್ನಿಗಾಗಿ ನಿಲ್ಲಲು ಹೇಳಿದಾಗ ನಿಂತಿತು.

ಸರ್ವಾಣಿ ಕಪಾಲಾನ್ಯಭಿ ಪ್ರಥಯತಿ ತಾವತಃ ಪುರೋಡಾಶಾ

ನಮುಷ್ಮಿನ್ಲೋಕೇಽಭಿ ಜಯತಿ ಯೋ ವಿದಗ್ಧಸ್ಸ

ನೈರ್‌ಋತೋ

---

ಸರ್ವಾಣಿ । ಕಪಾಲಾನಿ । ಅಭೀತಿ । ಪ್ರಥಯತಿ । ತಾವತಃ । ಪುರೋಡಾಶಾನ್ ।

ಅಮುಷ್ಮಿನ್ । ಲೋಕೇ । ಅಭೀತಿ । ಜಯತಿ । ಯಃ । ವಿದಗ್ಧ ಇತಿ ವಿ-ದಗ್ಧಃ । ಸಃ ।

ನೈರ್‌ಋತ ಇತಿ ನೈಃ-ಋತಃ ।

---

**ಎಲ್ಲ ಕಪಾಲಗಳಲ್ಲಿಯೂ ಪುರೋಡಾಶವನ್ನು ಹರಡುವಿಕೆಯ ವಿಧಿ; ಪ್ರಶಂಸೆ.**

| | |
|---|---|
| ಸರ್ವಾಣಿ ಕಪಾಲಾನಿ ಅಭಿ | ಎಲ್ಲ ಕಪಾಲಗಳ ಮೇಲೆಯೂ ಹರಡಿಕೊಳ್ಳುವಂತೆ |
| ಪ್ರಥಯತಿ | ಕೈಯಿಂದ ಪುರೋಡಾಶವನ್ನು ತಟ್ಟಬೇಕು. [ವಿಧಿ] |
| ತಾವತಃ ಪುರೋಡಾಶಾನ್ | ಅಷ್ಟು ಪುರೋಡಾಶಗಳಿಂದಲೂ ಲಭ್ಯವಾಗುವ ಫಲಗಳನ್ನು |
| ಅಮುಷ್ಮಿನ್ ಲೋಕೇ ಅಭಿಜಯತಿ | ಸ್ವರ್ಗಲೋಕದಲ್ಲಿ ಸಂಪಾದಿಸುತ್ತಾನೆ. |

**ಚೆನ್ನಾಗಿ ಪಕ್ವ ಮಾಡಬೇಕೆಂಬ ವಿಧಿ; ಅರ್ಥವಾದ.**

| | |
|---|---|
| ಯಃ ವಿದಗ್ಧಃ | ಯಾವುದು ಉರಿಯು ಹೆಚ್ಚಾಗಿ ಸುಟ್ಟಿದೆಯೋ, ಅಥವಾ ಒಂದು ಕಡೆ ಪಕ್ವವಾಗಿ ಮತ್ತೊಂದು ಕಡೆ ಬೇಯದೆ ಇರುತ್ತದೆಯೋ |
| ಸಃ ನೈರ್‌ಋತಃ | ಅದು ರಾಕ್ಷಸರಿಗೆ ಪ್ರಿಯವಾದುದು. |

---

ಹೀಗಾಗಿ ಅಷ್ಟಾಕಪಾಲಸಂಸ್ಕೃತವಾದ ಪುರೋಡಾಶವನ್ನು ಅಮಾವಾಸ್ಯೆ ಹಾಗೂ ಪೌರ್ಣಮಾಸಿಗಳಲ್ಲಿ ಅಗ್ನಿಗಾಗಿ ಅರ್ಪಿಸಬೇಕು. ಇದು ಸ್ವರ್ಗಲೋಕದ ಸಾಧಕವೂ ಹೌದು.

ಯೋಽಶೃತಸ್ಸ ರೌದ್ರೋ ಯಶ್ಶೃತಸ್ಸ ಸದೇವಸ್ತಸ್ಮಾದವಿ

ದಹತಾ ಶೃತಂಕೃತ್ಯಸ್ಸದೇವತ್ವಾಯ ಭಸ್ಮನಾಽಭಿ ವಾಸಯತಿ

ತಸ್ಮಾನ್ಮಾಗ್ಂಸೇನಾಸ್ಥಿ ಛನ್ನಂ ವೇದೇನಾಭಿ ವಾಸಯತಿ

---

ಯಃ । ಅಶೃತಃ । ಸಃ । ರೌದ್ರಃ । ಯಃ । ಶೃತಃ । ಸಃ । ಸದೇವ ಇತಿ ಸ-ದೇವಃ । ತಸ್ಮಾತ್ । ಅವಿದಹತೇತ್ಯವಿ-ದಹತಾ । ಶೃತಂಕೃತ್ಯ ಇತಿ ಶೃತಂ-ಕೃತ್ಯಃ । ಸದೇವತ್ವಾಯೇತಿ ಸದೇವ-ತ್ವಾಯ । ಭಸ್ಮನಾ । ಅಭೀತಿ । ವಾಸಯತಿ । ತಸ್ಮಾತ್ । ಮಾಗ್ಂಸೇನ । ಅಸ್ಥಿ । ಛನ್ನಮ್ । ವೇದೇನ । ಅಭೀತಿ । ವಾಸಯತಿ ।

---

| | |
|---|---|
| ಯಃ ಅಶೃತಃ ಸಃ ರೌದ್ರಃ ಯಃ ಶೃತಃ ಸಃ ಸದೇವಃ | ಯಾವುದು ಬೇಯದೇ ಇದೆಯೋ ಅದು ರುದ್ರನಿಗೆ ಪ್ರಿಯವಾದುದು. ಯಾವುದು ಸರಿಯಾಗಿ ಬೆಂದಿದೆಯೋ ಅದು ದೇವತೆಗಳಿಗೆ ಹಿತವಾದುದು. |
| ತಸ್ಮಾತ್ ಅವಿದಹತಾ ಶೃತಂಕೃತ್ಯಃ ಸದೇವತ್ವಾಯ | ಆದುದರಿಂದ ಅತಿಜ್ವಾಲೆಯಿಂದ ಸುಟ್ಟುಹೋಗದಂತೆ ಸರಿಯಾಗಿ ಬೇಯಿಸಬೇಕು. [ಅದು ದೇವತೆಗಳಿಗೆ ಪ್ರಿಯವಾಗುತ್ತದೆ]. |

**ಭಸ್ಮಸಹಿತವಾದ ಅಂಗಾರ(ಕೆಂಡ)ವನ್ನು ಮೇಲೆ ಹಾಕುವಿಕೆ [ವಿಧಿ]**

| | |
|---|---|
| ಭಸ್ಮನಾ ಅಭಿವಾಸಯತಿ | ಕೆಂಡದಿಂದ ಕೂಡಿದ ಭಸ್ಮದಿಂದ ಪುರೋಡಾಶವನ್ನು ಮುಚ್ಚಬೇಕು. |
| ತಸ್ಮಾತ್ ಮಾಗ್ಂಸೇನ ಅಸ್ಥಿ ಛನ್ನಮ್ | ಆದುದರಿಂದಲೇ ಮೂಳೆಗಳು ಮಾಂಸದಿಂದ ಆವೃತವಾಗಿವೆ. [ಇದೂ ಹಾಗೆಯೇ ಆಗುತ್ತದೆ] |
| ವೇದೇನ ಅಭಿವಾಸಯತಿ | ದರ್ಭಮಯವಾದ ವೇದದಿಂದ ಪುರೋಡಾಶದ ಮೇಲೆ ಸರಿಯಾಗಿ ಮುಚ್ಚುವಂತೆ ಹರಡಬೇಕು. |

ತಸ್ಮಾತ್ಕೇಶ್ಯೈ [..ತಸ್ಮಾತ್(ಳ)ಕೇಶ್ಯೈಶ್ಶಿ..] ಶ್ಶಿರಶ್ಛನ್ನಂ ಪ್ರಚ್ಯುತಂ ವಾ ಏತದಸ್ಮಾಲ್ಲೋಕಾದಗತಂ ದೇವಲೋಕಂ ಯಚ್ಛೃತಗ್ಂ ಹವಿರನಭಿಘಾರಿತಮಭಿಘಾರ್ಯೋದ್ವಾಸಯತಿ

---

ತಸ್ಮಾತ್ । (ಳ) । ಕೇಶ್ಯೈಃ । ಶಿರಃ । ಛನ್ನಮ್ । ಪ್ರಚ್ಯುತಮಿತಿ ಪ್ರ-ಚ್ಯುತಮ್ । ವೈ । ಏತತ್ । ಅಸ್ಮಾತ್ । ಲೋಕಾತ್ । ಅಗತಮ್ । ದೇವಲೋಕಮಿತಿ ದೇವ-ಲೋಕಮ್। ಯತ್ । ಶೃತಮ್ । ಹವಿಃ । ಅನಭಿಘಾರಿತಮಿತ್ಯನಭಿ-ಘಾರಿತಮ್ । ಅಭಿಘಾರ್ಯೇತ್ಯಭಿ-ಘಾರ್ಯ । ಉದಿತಿ । ವಾಸಯತಿ ।

---

ತಸ್ಮಾತ್ ಕೇಶ್ಯೈಃ ಶಿರಃ ಛನ್ನಮ್ — ಆದುದರಿಂದ ತಲೆಯು ಕೂದಲಿನಿಂದ ಆವೃತವಾಗಿದೆ. [ಇದೂ ಹಾಗೆಯೇ ಆಗುತ್ತದೆ.]

**ಅಭಿಘಾರಣವಿಧಿ;ಪ್ರಶಂಸೆ**

| | |
|---|---|
| ಯತ್ ಶೃತಮ್ ಹವಿಃ ಅನಭಿಘಾರಿತಮ್ | ಯಾವ ಹವಿಸ್ಸು ಮಂತ್ರಪೂರ್ವಕವಾಗಿ ಪಕ್ವವಾಗಿದ್ದರೂ ಅಭಿಘಾರಣರಹಿತವಾಗಿರುವುದೋ |
| ಏತತ್ ಅಸ್ಮಾತ್ ಲೋಕಾತ್ ಪ್ರಚ್ಯುತಮ್ ವೈ | ಈ ಹವಿಸ್ಸು ಈ ಲೋಕದಿಂದ ದೂರವಾಗುತ್ತದೆಯಷ್ಟೆ. |
| ದೇವಲೋಕಮ್ ಅಗತಮ್ | ಆದರೆ ಅಭಿಘಾರಣವಿಲ್ಲದಿರುವುದರಿಂದ ದೇವಲೋಕವನ್ನು ಹೊಂದಿದುದೂ ಆಗುವುದಿಲ್ಲ. |
| ಅಭಿಘಾರ್ಯ ಉದ್ವಾಸಯತಿ | ಆದುದರಿಂದ ಪಾಕಾನಂತರ ಅಭಿಘಾರಣವನ್ನು ಮಾಡಿ ತೆಗೆದಿಡಬೇಕು.**[ವಿಧಿ]** |

---

ಎಣ್ಣೆಯನ್ನು ಹಾಕದಿದ್ದರೆ ಬಂಡಿಯ ಚಕ್ರಗಳು ಸರಿಯಾಗಿ ಮುಂದೆ ಹೋಗದಿರುವಂತೆ ಅಭ್ಯಂಜನಾಲಂಕಾರವಿಲ್ಲದ ಪುರೋಡಾಶವೂ ಕೂಡ ನಾಶವಾಗುತ್ತದೆ. ಆದುದರಿಂದ

ದೇವತ್ರೈವೈನದ್ಗಮಯತಿ ಯದ್ಯೇಕಂ ಕಪಾಲಂ ನಶ್ಯೇ-

ದೇಕೋ ಮಾಸಸ್ಸಂವತ್ಸರಸ್ಯಾನವೇತಃ ಸ್ಯಾದಥ ಯಜಮಾನಃ

ಪ್ರಮೀಯೇತ ಯದ್ದ್ವೇ ನಶ್ಯೇತಾಂ

---

ದೇವತ್ರೇತಿ ದೇವ-ತ್ರಾ । ಏವ । ಏನತ್ । ಗಮಯತಿ । ಯದಿ । ಏಕಮ್ ।

ಕಪಾಲಮ್ । ನಶ್ಯೇತ್ । ಏಕಃ । ಮಾಸಃ । ಸಂವತ್ಸರಸ್ಯೇತಿ ಸಂ-ವತ್ಸರಸ್ಯ । ಅನವೇತ

ಇತ್ಯನವ-ಇತಃ । ಸ್ಯಾತ್ । ಅಥ । ಯಜಮಾನಃ । ಪ್ರೇತಿ । ಮೀಯೇತ । ಯತ್ ।

ದ್ವೇ ಇತಿ । ನಶ್ಯೇತಾಮ್ ।

---

| | |
|---|---|
| ದೇವತ್ರಾ ಏವ ಏನತ್ ಗಮಯತಿ | ಇದರಿಂದ ಹವಿಸ್ಸನ್ನು ದೇವತೆಗಳಲ್ಲಿ ಸ್ಥಾಪಿಸಿದಂತೆ ಆಗುತ್ತದೆ. |

**ಕಪಾಲಗಳನ್ನು ಲೆಕ್ಕ ಮಾಡಿ ತೆಗೆದಿಡಬೇಕೆಂಬ ವಿಧಿ;**
**ಪ್ರಶಂಸೆ**

| | |
|---|---|
| ಯದಿ ಏಕಮ್ ಕಪಾಲಮ್ ನಶ್ಯೇತ್ | ಒಂದು ವೇಳೆ ಪ್ರಮಾದದಿಂದ ಒಂದು ಕಪಾಲವು ನಷ್ಟವಾದರೆ |
| ಸಂವತ್ಸರಸ್ಯ ಏಕಃ ಮಾಸಃ ಅನವೇತಃ ಸ್ಯಾತ್ | ವರ್ಷದ ಒಂದು ತಿಂಗಳು ನ್ಯೂನವಾದಂತಾಗುತ್ತದೆ. |
| ಅಥ ಯಜಮಾನಃ ಪ್ರಮೀಯೇತ | ಅನಂತರ ಯಜಮಾನನು ಸಾಯುತ್ತಾನೆ. |
| ಯತ್ ದ್ವೇ ನಶ್ಯೇತಾಮ್ | ಎರಡು ಕಪಾಲಗಳು ನಷ್ಟವಾದರೆ |

---

ಮೇಲೆ ಮತ್ತು ಕೆಳಗೆ ತುಪ್ಪದಿಂದ ಪುರೋಡಾಶವನ್ನು ಅಲಂಕರಿಸಬೇಕು. ಇದು ವಿಧಿ.ಈ ರೀತಿ ಮಾಡುವುದರಿಂದ ಸ್ವರ್ಗಪ್ರಾಪ್ತಿಯಾಗುವುದೆಂದು ಪ್ರಶಂಸೆಯು ಇಲ್ಲಿದೆ.

ದೇವತೆಗಳು ಪುರೋಡಾಶದೇವತೆಯನ್ನು 'ಯಾಗಶಾಲೆಯನ್ನು ಏತಕ್ಕಾಗಿ ಬಿಟ್ಟು ಬಂದೆ?'

ದ್ವೌ ಮಾಸೌ ಸಂವತ್ಸರಸ್ಯಾನವೇತೌ ಸ್ಯಾತಾಮಥ ಯಜಮಾನಃ

ಪ್ರಮೀಯೇತ ಸಂಖ್ಯಾಯೋದ್ವಾಸಯತಿ ಯಜಮಾನಸ್ಯ

[..ಯಜಮಾನಸ್ಯ (೫) ಗೋಪೀಥಾಯ..] ಗೋಪೀಥಾಯ ಯದಿ

ನಶ್ಯೇದಾಶ್ವಿನಂ ದ್ವಿಕಪಾಲಂ ನಿರ್ವಪೇ–

---

ದ್ವೌ । ಮಾಸೌ । ಸಂವತ್ಸರಸ್ಯೇತಿ ಸಂ–ವತ್ಸರಸ್ಯ । ಅನವೇತಾವಿತ್ಯನವ–ಇತೌ । ಸ್ಯಾತಾಮ್।

ಅಥ । ಯಜಮಾನಃ । ಪ್ರೇತಿ । ಮೀಯೇತ । ಸಂಖ್ಯಾಯೇತಿ ಸಂ–ಖ್ಯಾಯ । ಉದಿತಿ ।

ವಾಸಯತಿ । ಯಜಮಾನಸ್ಯ । (೫) । ಗೋಪೀಥಾಯ । ಯದಿ । ನಶ್ಯೇತ್ । ಆಶ್ವಿನಮ್।

ದ್ವಿಕಪಾಲಮಿತಿ ದ್ವಿ–ಕಪಾಲಮ್ । ನಿರಿತಿ । ವಪೇತ್ ।

---

| | |
|---|---|
| ಸಂವತ್ಸರಸ್ಯ ದ್ವೌ ಮಾಸೌ ಅನವೇತೌ ಸ್ಯಾತಾಮ್ | ಸಂವತ್ಸರದ ಎರಡು ತಿಂಗಳು ನ್ಯೂನವಾದಂತಾಗುತ್ತದೆ. [ಇದರಿಂದಲೂ ಯಜಮಾನನು ಮರಣ ಹೊಂದುತ್ತಾನೆ.] |
| ಸಂಖ್ಯಾಯ ಉದ್ವಾಸಯತಿ ಯಜಮಾನಸ್ಯ ಗೋಪೀಥಾಯ | ಆದುದರಿಂದ ಯಜಮಾನನ ರಕ್ಷಣಾರ್ಥವಾಗಿ ಕಪಾಲಗಳನ್ನು ಎಣಿಸಿ ತೆಗೆದಿಡಬೇಕು. |

**ಕಪಾಲನಾಶಪ್ರಾಯಶ್ಚಿತ್ತೇಷ್ಟಿವಿಧಿ; ಪ್ರಶಂಸೆ.**

| | |
|---|---|
| ಯದಿ ನಶ್ಯೇತ್ ಆಶ್ವಿನಮ್ ದ್ವಿಕಪಾಲಮ್ ನಿರ್ವಪೇತ್ | ಕಪಾಲವು ನಾಶವಾದರೆ ಅಶ್ವಿನೀದೇವತಾಕವಾದ ದ್ವಿಕಪಾಲಹವಿಸ್ಸಿನ ಯಾಗವನ್ನು ಮಾಡಬೇಕು. |

---

ಎಂದು ಕೇಳಿದಾಗ ನಾನು ಅಂಜನಾಭ್ಯಂಜನರಹಿತನಾದುದರಿಂದ ಹೊರಗೆ ಬಂದನೆಂದು ಹೇಳಿತು ಎಂಬುದು ಉಪಾಖ್ಯಾನ.

ಎಲ್ಲ ಕಪಾಲಗಳ ಮೇಲೆಯೂ ಹರಡಿಕೊಳ್ಳುವಂತೆ ಪುರೋಡಾಶವನ್ನು ತಟ್ಟಬೇಕು.

ದ್ಯಾವಾಪೃಥಿವ್ಯಮೇಕಕಪಾಲಮಶ್ವಿನೌ ವೈ ದೇವಾನಾಂ ಭಿಷಜೌ

ತಾಭ್ಯಾಮೇವಾಸ್ಮೈ ಭೇಷಜಂ ಕರೋತಿ ದ್ಯಾವಾಪೃಥಿವ್ಯ

ಏಕಕಪಾಲೋ ಭವತ್ಯನಯೋರ್ವಾ ಏತನ್ನಶ್ಯತಿ

---

ದ್ಯಾವಾಪೃಥಿವ್ಯಮಿತಿ ದ್ಯಾವಾ-ಪೃಥಿವ್ಯಮ್ । ಏಕಕಪಾಲಮಿತ್ಯೇಕ-ಕಪಾಲಮ್ । ಅಶ್ವಿನೌ। ವೈ । ದೇವಾನಾಮ್ । ಭಿಷಜೌ । ತಾಭ್ಯಾಮ್ । ಏವ । ಅಸ್ಮೈ । ಭೇಷಜಮ್ । ಕರೋತಿ । ದ್ಯಾವಾಪೃಥಿವ್ಯ ಇತಿ ದ್ಯಾವಾ-ಪೃಥಿವ್ಯಃ । ಏಕಕಪಾಲ ಇತ್ಯೇಕ-ಕಪಾಲಃ । ಭವತಿ । ಅನಯೋಃ । ವೈ । ಏತತ್ । ನಶ್ಯತಿ ।

---

| | |
|---|---|
| ದೇವಾನಾಮ್ ಅಶ್ವಿನೌ ಭಿಷಜೌ ವೈ | ಅಶ್ವಿನೀದೇವತೆಗಳು ದೇವತೆಗಳ ವೈದ್ಯರಷ್ಟೆ. |
| ತಾಭ್ಯಾಮ್ ಏವ ಅಸ್ಮೈ ಭೇಷಜಮ್ ಕರೋತಿ | ಅವರಿಂದಲೇ ಅಧ್ವರ್ಯುವು ಈ ಯಜಮಾನನಿಗೆ ಕಪಾಲನಾಶಜನ್ಯದೋಷಕ್ಕೆ ಪ್ರಾಯಶ್ಚಿತ್ತರೂಪವಾದ ಚಿಕಿತ್ಸೆಯನ್ನು ಮಾಡಿಸುತ್ತಾನೆ. |
| ದ್ಯಾವಾಪೃಥಿವ್ಯಃ ಏಕಕಪಾಲಃ ಭವತಿ | ದ್ಯಾವಾಪೃಥಿವೀದೇವತಾಕವಾದ ಏಕಕಪಾಲದ್ರವ್ಯಕವಾದ ಯಾಗವು ಇನ್ನೊಂದು. |
| ಅನಯೋಃ ವೈ ಏತತ್ ನಶ್ಯತಿ | ಈ ಕಪಾಲವು ದ್ಯಾವಾಪೃಥಿವಿಗಳಲ್ಲಿ ತಾನೇ ನಷ್ಟವಾಗಿದೆ! |

---

ಇಲ್ಲಿ ಪುರೋಡಾಶಗಳನ್ನು ಪಡೆದುಕೊಳ್ಳುವುದೆಂದರೆ ಅವುಗಳ ಫಲವನ್ನು ಪಡೆದುಕೊಳ್ಳುವುದೆಂದು ತಾತ್ಪರ್ಯ.

ಭಸ್ಮಸಹಿತವಾದ ಕೆಂಡದಿಂದ ಪುರೋಡಾಶವನ್ನು ಮುಚ್ಚಬೇಕು. ಹಾಗೆಯೇ ವೇದದಿಂದ ಪುರೋಡಾಶವನ್ನು ಮುಚ್ಚಬೇಕು. ಇವೆರಡೂ ವಿಧಿಗಳು. ಇದಕ್ಕಾಗಿ ಪ್ರಶಂಸೆಯು ವೇದದಲ್ಲಿ ಹಲವು ಕಡೆಗಳಲ್ಲಿ ಕಂಡುಬರುತ್ತದೆ. ಇಲ್ಲಿ ಬರುವ ಅಷ್ಟಾಕಪಾಲಪುರೋಡಾಶದ ಪಾಕದ ವಿಷಯವು ತೈತ್ತಿರೀಯಬ್ರಾಹ್ಮಣದ ಮೂರನೆಯ ಅಷ್ಟಕದಲ್ಲಿಯೂ ಬರುತ್ತದೆ.

ಯನ್ನಶ್ಯತ್ಯನಯೋರೇವೈನದ್ವಿಂದತಿ ಪ್ರತಿಷ್ಠಿತ್ಯೈ॥೧೯-3॥

[ಪ್ರಾಜಾಪತ್ಯಂ ತೇऽಕ್ಷೋऽನುಪಾಕ್ತೋ ವೇದೇನಾಭಿ ವಾಸಯತಿ ತಸ್ಮಾ ದ್ಯಜಮಾನಸ್ಯ ದ್ವಾತ್ರಿಗ್ಂಶಚ್ಚ॥]

---

ಯತ್ । ನಶ್ಯತಿ । ಅನಯೋಃ । ಏವ । ಏನತ್ । ವಿಂದತಿ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ॥ 16 ॥

---

| | |
|---|---|
| ಯತ್ ನಶ್ಯತಿ ಏನತ್ ಅನಯೋಃ ಏವ ವಿಂದತಿ | ಯಾವ ಕಪಾಲವು ನಾಶವಾಗುವುದೋ ಅದನ್ನು ಈ ದ್ಯಾವಾಪೃಥಿವಿಗಳಲ್ಲಿಯೇ ಹೊಂದಿದಂತಾಗುತ್ತದೆ. [ಕಪಾಲನಾಶದೋಷವು ಪರಿಹಾರವಾಗುತ್ತದೆ] |
| ಪ್ರತಿಷ್ಠಿತ್ಯೈ | ಇದು ಯಜಮಾನನ ಶ್ರೇಷ್ಠಸ್ಥಿತಿಗೆ ಕಾರಣವಾಗುತ್ತದೆ. |

---

ಇಲ್ಲಿ ಬರುವ ಪಾಕವಿಚಾರವೂ ಆದೇ ಎಂದು ತಿಳಿಸಲು ಇಲ್ಲೂ ಹೇಳಿದೆ. ಆದುದರಿಂದ ಪುನರುಕ್ತಿದೋಷವಿಲ್ಲವೆನ್ನಬಹುದು. ಅಥವಾ ಬ್ರಾಹ್ಮಣಕ್ಕೆ **ಪಾರಕ್ಷುದ್ರಶಾಖೆ**ಯೆಂಬ ಹೆಸರಿರುವುದರಿಂದ ಶಾಖಾಂತರವೆಂದೂ ಭಾವಿಸಬಹುದು. ಕೆಲವು ವಿಶೇಷವಿಷಯಗಳನ್ನು ತಿಳಿಸುವುದಕ್ಕಾಗಿ ಅನುವಾದವೆನ್ನಬಹುದು. ಅಭಿಘಾರಣರಹಿತವಾದ ಹವಿಸ್ಸು ಈ ಲೋಕದಿಂದ ದೂರಾಗಿ ಅಭಿಘಾರಣವಿಲ್ಲದುದರಿಂದ ದೇವಲೋಕವನ್ನೂ ಸೇರದು. ಹೀಗಾಗಿ ಪಾಕಾನಂತರ ಅಭಿಘಾರಣವನ್ನು ಮಾಡಿ ತೆಗೆದಿಡಬೇಕು. ಇದು ಅಭಿಘಾರಣದ ಪ್ರಶಂಸೆ.

ಕಪಾಲಗಳ ಪರಿಗಣನೆಯನ್ನು ಮಾಡಿ ತೆಗೆದಿಡಬೇಕು. ಕಪಾಲಗಳು ನಾಶವಾದರೆ ಅದರ ಸಂಖ್ಯೆಗೆ ತಕ್ಕಂತೆ ಯಜಮಾನನಿಗೆ ಮರಣವಾಗುತ್ತದೆ. ಹೀಗಾಗಿ ಯಜಮಾನನ ರಕ್ಷಣೆಗಾಗಿ ಕಪಾಲಗಳನ್ನು ಎಣಿಸಿ ತೆಗೆದಿಡಬೇಕು.

ಕಪಾಲವು ನಾಶವಾದರೆ ಅಶ್ವಿನೀದೇವತೆಗಳಿಗೆ ದ್ವಿಕಪಾಲಹವಿಸ್ಸಿನ ಯಾಗವನ್ನು ಮಾಡಬೇಕು. ಅಶ್ವಿನೀದೇವತೆಗಳು ದೇವವೈದ್ಯರಾದುದರಿಂದ ಪ್ರಾಯಶ್ಚಿತ್ತರೂಪವಾದ ಚಿಕಿತ್ಸೆಯನ್ನು ಯಜಮಾನನಿಗೆ ಮಾಡಿಸಿದಂತಾಗುತ್ತದೆ. ಇದು ಯಜಮಾನನ ಶ್ರೇಷ್ಠಸ್ಥಿತಿಗೆ ಕಾರಣವೂ ಹೌದು. ಇದು ಪ್ರಾಯಶ್ಚಿತ್ತೇಷ್ಟಿವಿಧಿಯ ಪ್ರಶಂಸೆ.

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

### ೧) 'ಯದಾಗ್ನೇಯಃ' ಎಂಬ ವಾಕ್ಯದಲ್ಲಿನ ಆಗ್ನೇಯ ಎಂಬುದರ ಅರ್ಥವೇನು?

ದರ್ಶಪೂರ್ಣಮಾಸಪ್ರಕರಣದಲ್ಲಿ **'ಯದಾಗ್ನೇಯೋಽಷ್ಟಾಕಪಾಲೋಽಮಾವಾಸ್ಯಾಯಾಂ ಚ ಪೌರ್ಣಮಾಸ್ಯಾಂ ಚಾಚ್ಯುತೋ ಭವತಿ'** ಎಂಬ ವಾಕ್ಯವಿದೆ. ಇಲ್ಲಿನ ಆಗ್ನೇಯಶಬ್ದವು ಅಗ್ನಿಹೋತ್ರಶಬ್ದದಂತೆ ಕರ್ಮನಾಮಧೇಯವೇ? ಅಥವಾ ಅಗ್ನಿರೂಪದೇವತಾವಿಧಿಯೇ? ಎಂಬುದು ಇಲಿನ **ಸಂಶಯ.**

**'ಅಗ್ನಯೇ ಹೋತ್ರಮಸ್ಮಿನ್ನಿತಿ ಅಗ್ನಿಹೋತ್ರಮ್'** ಎಂಬುದಾಗಿ ದೇವತಾಪ್ರಾಪ್ತಿಯ ನಿಮಿತ್ತದಿಂದ **'ಅಗ್ನಿಹೋತ್ರಂ ಜುಹೋತಿ'** ಎಂಬ ವಾಕ್ಯವಿದೆ. ಇಲ್ಲಿಯೂ ಸಹ **'ಅಗ್ನಿಃ ದೇವತಾ ಅಸ್ಯ'** ಎಂಬ ವ್ಯುತ್ಪತ್ತಿ ಇರುವುದರಿಂದ ಆಗ್ನೇಯ ಶಬ್ದವು ಕರ್ಮನಾಮಧೇಯವೆನಿಸುತ್ತದೆ. ಇದು ಇಲ್ಲಿನ **ಪೂರ್ವಪಕ್ಷ.**

ಅಗ್ನಿಹೋತ್ರದ ವಿಷಯದಲ್ಲಿ **'ಅಗ್ನಿರ್ಜ್ಯೋತಿರ್ಜ್ಯೋತಿರಗ್ನಿಃ ಸ್ವಾಹಾ'** ಎಂಬ ಮಂತ್ರದಿಂದ ದೇವತಾಪ್ರಾಪ್ತಿಯಾಗುವುದರಿಂದ **'ಅಗ್ನಿಹೋತ್ರಂ ಜುಹೋತಿ'** ಎಂಬಲ್ಲಿ ಅಗ್ನಿಹೋತ್ರವೆಂಬುದು ಕರ್ಮನಾಮಧೇಯವಾಗಿದೆ. ಇಲ್ಲಿ ಅಂತಹ ದೇವತಾಪ್ರಾಪ್ತಿಯು ಇಲ್ಲವಾದುದರಿಂದ **'ಆಗ್ನೇಯ'** ಎಂಬುದು ದ್ರವ್ಯದೇವತಾವಿಶಿಷ್ಟಯಾಗವಿಧಿಯಾಗಿದೆ.

ಇಲ್ಲಿ ದ್ರವ್ಯ-ದೇವತೆಗಳೆಂಬ ಗುಣವಿಧಾನವಾದುದರಿಂದ ವಾಕ್ಯಭೇದವು ಒದಗುವುದೆಂಬ ಸಂಶಯವು ಉಂಟಾಗುವುದು. ಆದರೆ ಅನೇಕವಿಧಾನಗಳು ಇದ್ದರೂ ವಾಕ್ಯಭೇದವು ಒದಗುವುದಿಲ್ಲ. ಇಲ್ಲಿ ಕರ್ಮವು ಅಪ್ರಾಪ್ತವಾದುದರಿಂದ ಒಂದೇ ವಾಕ್ಯದಿಂದ ಅನೇಕ ಗುಣಗಳನ್ನು ವಿಧಿಸಬಹುದಾಗಿದೆ.

**ಪ್ರಾಪ್ತೇ ಕರ್ಮಣಿ ನಾನೇಕೋ ವಿಧಾತುಂ ಶಕ್ಯತೇ ಗುಣಃ ।**
**ಅಪ್ರಾಪ್ತೇ ತು ವಿಧೀಯಂತೇ ಬಹವೋಽಪ್ಯೇಕಯತ್ನತಃ ॥**

ಎಂಬ ನ್ಯಾಯದಂತೆ ಇಲ್ಲಿ ದ್ರವ್ಯದೇವತಾಕಾಲಾದಿವಿಶಿಷ್ಟವಾದ ಆಗ್ನೇಯಯಾಗವಿಧಿ ಎಂಬುದು ವಿಶಿಷ್ಟವಾದುದು ಒಂದೇ ಆಗಿರುವುದರಿಂದ ವಾಕ್ಯಭೇದವಿಲ್ಲ.

**೨) 'ಆಗ್ನೇಯೋऽಷ್ಟಾಕಪಾಲಃ' ಮೊದಲಾದ ಕಡೆಗಳಲ್ಲಿ ಸಮಗ್ರಹೋಮವೇ? ಅಂಶಹೋಮವೇ? [ಜ್ಯೈ.ಸೂ.3.4]**

**'ಆಗ್ನೇಯೋऽಷ್ಟಾಕಪಾಲಃ'**ಎಂಬಲ್ಲಿ ಆಗ್ನೇಯ ಎಂಬ ಶಬ್ದವು **'ಅಗ್ನಿಃ ದೇವತಾ ಅಸ್ಯ ಹವಿಷಃ ಪುರೋಡಾಶಸ್ಯ'**ಎಂಬುದಾಗಿ ಸಿದ್ಧವಾಗಿದೆ. ಈ ರೀತಿ ವಿವರಣೆಯಂತೆ ಸಂಪೂರ್ಣ ಹವಿಸ್ಸಿಗೆ ದೇವತಾಸಂಬಂಧವಿರುವುದರಿಂದ ಹವಿಸ್ಸಿನ ಪೂರ್ಣಹೋಮವನ್ನು ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

**'ದ್ವಿರ್ಹವಿಷೋऽವದ್ಯತಿ' 'ಅಂಗುಷ್ಠಪರ್ವಮಾತ್ರಮವದ್ಯತಿ' 'ಚತುರವತ್ತಂ ಜುಹೋತಿ'** ಮೊದಲಾದ ವಾಕ್ಯಗಳಿಂದ ಅಂಗುಷ್ಠದ ಗೆಣ್ಣಿನ ಪ್ರಮಾಣವನ್ನು,'ನಾಲ್ಕು ಬಾರಿ ವಿಭಾಗಿಸಿ,' 'ಎರಡು ಬಾರಿ ವಿಭಾಗಿಸಿ' ಎಂಬುದಾಗಿ ವಿಹಿತವಾಗಿರುವುದರಿಂದ ಸ್ವಲ್ಪ ಭಾಗವನ್ನೇ ಹೋಮ ಮಾಡಬೇಕು. ಅಷ್ಟರಿಂದಲೇ ದೇವತಾಸಂಬಂಧವು ನೆರವೇರುತ್ತದೆ. ಇದು ಇಲ್ಲಿನ **ಸಿದ್ಧಾಂತ.**

**೩) 'ಚತುರವತ್ತಂ' ಎಂಬುದರ ವಿವರಣೆ ಏನು? [ಜ್ಯೈ.ಸೂ.10.8]**

**'ಚತುರವತ್ತಂ ಜುಹೋತಿ'** ಎಂಬ ವಿಧಿವಾಕ್ಯವಿದೆ. ಇಲ್ಲಿ **ಚತುರವತ್ತಂ** ಎಂಬುದರ ಅರ್ಥವೇನು? ಹವಿಸ್ಸನ್ನು ನಾಲ್ಕು ಬಾರಿ ವಿಭಾಗಿಸಿದುದನ್ನು ಹೋಮ ಮಾಡಬೇಕೆ? ಅಥವಾ ಎರಡು ಬಾರಿ ಅವದಾನ,ಉಪಸ್ತರಣ ಅಭಿಘಾರಣಗಳು ಸೇರಿ ನಾಲ್ಕು ಸಂಖ್ಯೆಯು ನಿರ್ದಿಷ್ಟವಾಗಿದೆಯೆ? ಎಂಬುದು ಇಲ್ಲಿನ **ಸಂಶಯ.**

**'ಚತುರವತ್ತಂ ಜುಹೋತಿ'**ಎಂಬಲ್ಲಿ **'ಚತುರವತ್ತಮ್'** ಎಂಬುದು ದ್ವಿತೀಯಾ ವಿಭಕ್ತಿಯಲ್ಲಿರುವುದರಿಂದ ಪುರೋಡಾಶದ ಚತುರವದಾನವನ್ನೇ ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

**'ದ್ವಿರ್ಹವಿಷೋऽವದ್ಯತಿ'** ಎಂದು ಹವಿಸ್ಸಿನಲ್ಲಿ ಎರಡು ಅವದಾನಗಳನ್ನು ಹೇಳಿರುವುದರಿಂದ **'ಸಕೃದುಪಸ್ತೃಣಾತಿ' 'ದ್ವಿರಾದಧಾತಿ' 'ಸಕೃದಭಿಘಾರಯತಿ' 'ಚತುಸ್ಸಂಪದ್ಯತೇ'** ಎಂಬ ಕ್ರಮದಲ್ಲಿ ಸಂಖ್ಯಾಸಂಪತ್ತಿಯನ್ನು ಹೇಳಿರುವುದರಿಂದ ಹವಿಸ್ಸಿನಿಂದ ಎರಡು ಬಾರಿ ಮಾತ್ರ ಅವದಾನವೇ ಸರಿ. ಇದು ಇಲ್ಲಿನ **ಸಿದ್ಧಾಂತ.**

**೪) ಕರ್ಮಾನುಷ್ಠಾನದಲ್ಲಿ ಸಾನ್ನಾಯ್ಯ-ಪುರೋಡಾಶಗಳಲ್ಲಿ ಪ್ರಾಥಮ್ಯವು ಯಾವುದಕ್ಕೆ? [ಜ್ಯೈ.ಸೂ.5.4]**

ದರ್ಶ–ಪೂರ್ಣಮಾಸಪ್ರಕರಣದಲ್ಲಿ ಸಾನ್ನಾಯ್ಯಕ್ಕಾಗಿ ಬೇಕಾದ ವತ್ಸಾಪಾಕರಣಾದಿಗಳು ಮೊದಲು ಹೇಳಲ್ಪಟ್ಟಿವೆ. ಅನಂತರ ಪುರೋಡಾಶಕ್ಕಾಗಿ ಬೇಕಾದ ವ್ರೀಹಿನಿರ್ವಾಪಾದಿಗಳು ಹೇಳಲ್ಪಟ್ಟಿವೆ. ಹೀಗಾಗಿ ಯಾಗಾನುಷ್ಠಾನದಲ್ಲಿಯೂ ಪ್ರಾಥಮ್ಯವು ಸಾನ್ನಾಯ್ಯಕ್ಕೇ ಒದಗಿ, ಸಾನ್ನಾಯ್ಯದ ಅವದಾನವನ್ನು ಮೊದಲು ಅನುಷ್ಠಿಸಬೇಕಾಗುತ್ತದೆ.ಇದು ಇಲ್ಲಿನ **ಪೂರ್ವಪಕ್ಷ.**

ಯಾಜ್ಯಾ–ಪುರೋನುವಾಕ್ಯೆಗಳ ಮಂತ್ರಕ್ರಮದಂತೆ ಪುರೋಡಾಶಕ್ಕೇ ಮೊದಲು ಅವದಾನವನ್ನು ಮಾಡಿ ಹೋಮವನ್ನು ಅನುಷ್ಠಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

**೫) ಅವದಾನ–ಹವನಗಳ ಕ್ರಮವು ಹೇಗೆ? [ಜೈ.ಸೂ.5.2]**

ಅಗ್ನಿದೇವತೆಗೆ ಹವಿಸ್ಸಿನ ಅವದಾನವನ್ನು ಮಾಡಿದ ನಂತರ ಅಗ್ನೀಷೋಮಾದಿದೇವತೆಗಳಿಗೆ ಅವದಾನವನ್ನು ಮಾಡಿ,ಬಳಿಕ ಇದೇ ಕ್ರಮದಲ್ಲಿ ಹೋಮವನ್ನು ಅನುಷ್ಠಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಅವದಾನವನ್ನು ಮಾಡಿದ ಬಳಿಕ ಹೋಮಪರ್ಯಂತವಾಗಿ ಒಂದೇ ಪದಾರ್ಥವಾದುದರಿಂದ ಒಂದು ಹೋಮವನ್ನು ಅನುಷ್ಠಿಸಿ, ಮತ್ತೊಂದು ಹೋಮವನ್ನು ಅನುಷ್ಠಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

**೬) ಅವದಾನ ಮಾಡಿದ ಬಳಿಕ ಹವಿರ್ನಷ್ಟವಾದರೆ ಹೇಗೆ? [ಜೈ.ಸೂ.6.4]**

ಯಾಗಕ್ಕಾಗಿ ಹವಿಸ್ಸನ್ನು ಅವದಾನ ಮಾಡಿದ ಬಳಿಕ ಪ್ರಮಾದದಿಂದ ಆ ವಿಭಾಗಿಸಿ ಇಡಲ್ಪಟ್ಟ ಹವಿಸ್ಸು ನಷ್ಟವಾದರೆ ಉಳಿದ ಹವಿಸ್ಸಿನಿಂದ ಪುನಃ ಅವದಾನವನ್ನು ಮಾಡಬೇಕೇ? ಅಥವಾ ಪ್ರತ್ಯಾಮ್ನಾಯರೂಪವಾಗಿ ಆಜ್ಯಹೋಮವನ್ನು ಅನುಷ್ಠಿಸಬೇಕೆ? ಇದು ಇಲ್ಲಿನ **ಸಂಶಯ.**

ಅವದಾನವನ್ನು ಮಾಡಿದ ನಂತರವೂ ಹವಿಸ್ಸು ಉಳಿದಿರುವುದರಿಂದ ಆ ಉಳಿದ ಹವಿಸ್ಸಿನಿಂದ ಅವದಾನವನ್ನು ಮಾಡಿ ಹೋಮವನ್ನು ಅನುಷ್ಠಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

**'ಮಧ್ಯಾತ್ ದ್ವಿರವದ್ಯತಿ'** ಎಂಬ ವಚನವು ಇದೆ. ಆ ಮಧ್ಯಭಾಗವು ನಷ್ಟವಾದರೆ **'ಯಸ್ಯ ಸರ್ವಾಣಿ ಹವೀಂಷಿ ನಶ್ಯೇಯುರ್ದುಷ್ಯೇಯುರಪಹರೇಯುರ್ವಾಽಽಜ್ಯೇನೈತಾ ದೇವತಾಃ ಪರಿಸಂಖ್ಯಾಯ ಯಜೇತ'** [ಐ.ಬ್ರಾಹ್ಮಣ7.4] ಎಂದು–ಹವಿಸ್ಸೆಲ್ಲವೂ

ನಷ್ಟವಾದರೆ, ಹಾಳಾದರೆ, ಕದ್ದೊಯ್ಯಲ್ಪಟ್ಟರೆ ಆಜ್ಯದಿಂದಲೇ ಆ ಆಹುತಿಗಳನ್ನು ಪೂರ್ಣಗೊಳಿಸಬೇಕೆಂದು ಹೇಳಿರುವುದರಿಂದ ಇಲ್ಲಿಯೂ ಆಜ್ಯದಿಂದಲೇ ಹೋಮವನ್ನು ಪೂರ್ಣಗೊಳಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

## ॥ ಚತುರ್ಥೋಽನುವಾಕಃ ॥

ದೇವಸ್ಯ ತ್ವಾ ಸವಿತುಃ ಪ್ರಸವ ಇತಿ ಸ್ಫ್ಯಮಾದತ್ತೇ
ಪ್ರಸೂತ್ಯಾ ಅಶ್ವಿನೋರ್ಬಾಹುಭ್ಯಾಮಿತ್ಯಾಹಾಶ್ವಿನೌ ಹಿ

---

ದೇವಸ್ಯ । ತ್ವಾ । ಸವಿತುಃ । ಪ್ರಸವ ಇತಿ ಪ್ರ-ಸವೇ । ಇತಿ । ಸ್ಫ್ಯಮ್ । ಏತಿ । ದತ್ತೇ।
ಪ್ರಸೂತ್ಯಾ ಇತಿ ಪ್ರ-ಸೂತ್ಯೈ । ಅಶ್ವಿನೋಃ । ಬಾಹುಭ್ಯಾಮಿತಿ ಬಾಹು-ಭ್ಯಾಮ್ । ಇತಿ ।
ಆಹ । ಅಶ್ವಿನೌ । ಹಿ ।

---

ಮೂರನೆಯ ಅನುವಾಕದಲ್ಲಿ ಆಗ್ನೇಯಪುರೋಡಾಶವು ಹೇಳಲ್ಪಟ್ಟಿದೆ. ಈ ನಾಲ್ಕನೆಯ ಅನುವಾಕದಲ್ಲಿ ವೇದಿಕರಣವು ಹೇಳಲ್ಪಡುತ್ತದೆ.

### ಸ್ಫ್ಯ[ಕತ್ತಿಯ ಆಕಾರದ ಮರದ ದಂಡ]ವನ್ನು ತೆಗೆದುಕೊಳ್ಳುವ ವಿಧಿ; ಪ್ರಶಂಸೆ

| | |
|---|---|
| ದೇವಸ್ಯ ತ್ವಾ ಸವಿತುಃ ಪ್ರಸವೇ ಇತಿ | **'ದೇವಸ್ಯ ತ್ವಾ ಸವಿತುಃ ಪ್ರಸವೇ'** ಎಂಬ ಮಂತ್ರದಿಂದ ಅಧ್ವರ್ಯುವು |
| ಸ್ಫ್ಯಮ್ ಆದತ್ತೇ | ಸ್ಫ್ಯವನ್ನು ತೆಗೆದುಕೊಳ್ಳಬೇಕು. |
| ಪ್ರಸೂತ್ಯೈ | ಈ ಮಂತ್ರದಿಂದ ಸವಿತೃದೇವನ ಅನುಮತಿಯನ್ನು ಪಡೆದಂತಾಗುತ್ತದೆ. |
| ಅಶ್ವಿನೋಃ ಬಾಹುಭ್ಯಾಮ್ ಇತಿ ಆಹ | 'ಅಶ್ವಿನೀದೇವತೆಗಳ ಬಾಹುವಿನಿಂದ [ನಿನ್ನನ್ನು=ಸ್ಫ್ಯವನ್ನು] ತೆಗೆದುಕೊಳ್ಳುತ್ತೇನೆ' ಎಂದು ಶ್ರುತಿಯು ಹೇಳುತ್ತದೆ. |
| ಅಶ್ವಿನೌ ಹಿ | ಅಶ್ವಿನೀದೇವತೆಗಳು |

ದೇವಾನಾಮಧ್ವರ್ಯೂ ಆಸ್ತಾಂ ಪೂಷ್ಣೋ ಹಸ್ತಾಭ್ಯಾಮಿತ್ಯಾಹ

ಯತ್ಯೈ **ಶತಭೃಷ್ಟಿರಸಿ ವಾನಸ್ಪತ್ಯೋ ದ್ವಿಷತೋ ವಧ**

---

ದೇವಾನಾಮ್ । ಅಧ್ವರ್ಯೂ ಇತಿ । ಆಸ್ತಾಮ್ । ಪೂಷ್ಣಃ । ಹಸ್ತಾಭ್ಯಾಮ್ । ಇತಿ । ಆಹ । ಯತ್ಯೈ । **ಶತಭೃಷ್ಟಿರಿತಿ ಶತ-ಭೃಷ್ಟಿಃ । ಅಸಿ । ವಾನಸ್ಪತ್ಯಃ । ದ್ವಿಷತಃ । ವಧಃ ।**

---

| | |
|---|---|
| ದೇವಾನಾವ್ ಅಧ್ವರ್ಯೂ ಆಸ್ತಾಮ್ | ದೇವತೆಗಳ ಅಧ್ವರ್ಯುಗಳಾಗಿದ್ದರಷ್ಟೆ. [ಅದು ದರಿಂದ ಅವರ ಅನುಗ್ರಹದಿಂದ ನಿನ್ನನ್ನು ತೆಗೆದುಕೊಳ್ಳುತ್ತೇನೆ.] |
| ಪೂಷ್ಣಃ ಹಸ್ತಾಭ್ಯಾಮ್ ಇತಿ ಆಹ ಯತ್ಯೈ | 'ಯಜ್ಞಕಾರ್ಯಪ್ರವೃತ್ತಿಗಾಗಿ ಪೂಷದೇವನ ಕೈಗಳಿಂದ ನಿನ್ನನ್ನು ತೆಗೆದುಕೊಳ್ಳುತ್ತೇನೆ' ಎಂದು ಶ್ರುತಿಯು ಹೇಳುತ್ತದೆ. [ ಇದರಿಂದ ಪೂಷದೇವನ ಪ್ರಸಾದವನ್ನು ಪಡೆದಂತಾಯಿತು] |

| **ಮಂತ್ರ** | **ವಿನಿಯೋಗ** |
|---|---|
| **ಶತಭೃಷ್ಟಿರಸಿ ....ವಧಃ ॥** | ವೇದಿಕರಣವಾದ ಮೇಲೆ ಸ್ಫ್ಯವನ್ನು ಉತ್ಕರದಲ್ಲಿ ಹಾಕಲು |

**ಸ್ಫ್ಯವನ್ನು ಉತ್ಕರದಲ್ಲಿ ಹಾಕುವ ವಿಧಿ; ಪ್ರಶಂಸೆ**

✦**ಶತಭೃಷ್ಟಿಃ ಅಸಿ**=[ಎಲೈ ಸ್ಫ್ಯವೇ!]ನೀನು ನೂರಾರು ಶತ್ರುಗಳನ್ನು ಸಂತಾಪಗೊಳಿಸುವ/ಹುರಿದುಹಾಕುವ ಸಾಮರ್ಥ್ಯವುಳ್ಳವನಾಗಿದ್ದೀಯೆ; **ವಾನಸ್ಪತ್ಯಃ**=ವನಸ್ಪತಿಯಿಂದ ಹುಟ್ಟಿದವನೂ; **ದ್ವಿಷತಃ ವಧಃ**=ಶತ್ರುಗಳನ್ನು ನಾಶಗೊಳಿಸುವವನೂ ಆಗಿದ್ದೀಯೆ.

---

ಸ್ಫ್ಯವೆಂಬ ಯಜ್ಞಾಯುಧವನ್ನು ಸವಿತೃದೇವನ ಅನುಮತಿಯಿಂದಲೂ, ಅಶ್ವಿನೀದೇವತೆಗಳ ಬಾಹುವಿನಿಂದಲೂ, ಪೂಷದೇವನ ಕೈಗಳಿಂದಲೂ ತೆಗೆದುಕೊಳ್ಳುತ್ತೇನೆ.

ಮೊದಲನೆಯ ಕಾಂಡದ ಮೊದಲನೆಯ ಪ್ರಶ್ನದಲ್ಲಿ **'ಆದದ ಇಂದ್ರಸ್ಯ'** ಎಂಬ ಅನುವಾಕದಲ್ಲಿ **'ಆದದೇ'**ಎಂಬ ಒಂದೇ ಪದಸಮೂಹವಿದೆ. ಅದನ್ನು **'ದೇವಸ್ಯ ತ್ವಾ'**ಎಂದು ಆರಂಭಿಸಿ

ಇತ್ಯಾಹ ವಜ್ರಮೇವ ತಥ್ಸಗ್‌ಂಶ್ಯತಿ ಭ್ರಾತೃವ್ಯಾಯ
ಪ್ರಹರಿಷ್ಯನ್‌ಸ್ತಂಬಯಜುರ್ ಹರತ್ಯೇತಾವತೀ ವೈ
ಪೃಥಿವೀ ಯಾವತೀ ವೇದಿ-

---

ಇತಿ । ಆಹ । ವಜ್ರಮ್ । ಏವ । ತತ್ । ಸಮಿತಿ । ಶ್ಯತಿ । ಭ್ರಾತೃವ್ಯಾಯ । ಪ್ರಹರಿಷ್ಯನ್ನಿತಿ ಪ್ರ- ಹರಿಷ್ಯನ್ । ಸ್ತಂಬಯಜುರಿತಿ ಸ್ತಂಬ-ಯಜುಃ । ಹರತಿ । ಏತಾವತೀ । ವೈ । ಪೃಥಿವೀ । ಯಾವತೀ । ವೇದಿಃ ।

---

| **ಬ್ರಾಹ್ಮಣಭಾಗ** | **ವಿವರಣೆ** |
|---|---|
| ಇತಿ ಆಹ | ಹೀಗೆಂದು ಶ್ರುತಿಯು ಹೇಳುತ್ತದೆ. |
| ಭ್ರಾತೃವ್ಯಾಯ ಪ್ರಹರಿಷ್ಯನ್ ವಜ್ರಮ್ ಏವ ತತ್ ಸಂಶ್ಯತಿ | ಶತ್ರುವಿನ ಮೇಲೆ ಪ್ರಯೋಗಿಸುವವನಾಗಿ ವಜ್ರಾಯುಧರೂಪವಾದ ಸ್ಫ್ಯವನ್ನೇ ಅದು ತೀಕ್ಷ್ಣಗೊಳಿಸುತ್ತದೆ/ಮಂತ್ರದಿಂದ ಹರಿತಗೊಳಿಸುತ್ತಾನೆ. |

**ಸ್ತಂಬಯಜುಸ್ಸನ್ನು ಉತ್ಕರದಲ್ಲಿ ಹಾಕುವ ವಿಧಿ; ಪ್ರಶಂಸೆ**

| | |
|---|---|
| ಸ್ತಂಬಯಜುಃ ಹರತಿ | ಯಜುರ್ಮಂತ್ರಪೂರ್ವಕವಾಗಿ ಸ್ಫ್ಯದಿಂದ ಕೆತ್ತಿದ ಮಣ್ಣನ್ನು ಕತ್ತರಿಸಿದ ದರ್ಭೆ, ಹುಲ್ಲುಗಳೊಡನೆ ಉತ್ಕರದಲ್ಲಿ ಹಾಕಬೇಕು. |
| ಯಾವತೀ ವೇದಿಃ ಏತಾವತೀ ವೈ ಪೃಥಿವೀ | ವೇದಿಯು ಇರುವಷ್ಟು ಪ್ರದೇಶಮಾತ್ರವೇ ಯಜ್ಞಭೂಮಿಯಷ್ಟೆ. |

---

ಪೂರ್ಣ ಮಾಡಿಕೊಳ್ಳಬೇಕು. ತೈತ್ತಿರೀಯಬ್ರಾಹ್ಮಣದಲ್ಲಿಯೂ ಸಹ **'ದೇವಸ್ಯ ತ್ವಾ'** ಎಂಬುದನ್ನು ಸೇರಿಸಿಯೇ ವಿವರಣೆ ಮಾಡಲಾಗಿದೆ. ಇಲ್ಲಿ ವೇದಿಕರಣವು ಹೇಳಲ್ಪಟ್ಟಿದೆ.

ಸ್ತಸ್ಯಾ ಏತಾವತ ಏವ ಭ್ರಾತೃವ್ಯಂ ನಿರ್ಭಜತಿ

[..ನಿರ್ಭಜತಿ(೧)ತಸ್ಮಾತ್..] ತಸ್ಮಾನ್ನಾಭಾಗಂ ನಿರ್ಭಜಂತಿ

ತ್ರಿರ್ ಹರತಿ ತ್ರಯ ಇಮೇ ಲೋಕಾ

---

ತಸ್ಯಾಃ । ಏತಾವತಃ । ಏವ । ಭ್ರಾತೃವ್ಯಮ್ । ನಿರಿತಿ । ಭಜತಿ । (೧) । ತಸ್ಮಾತ್ ।

ನ । ಅಭಾಗಮ್ । ನಿರಿತಿ । ಭಜಂತಿ । ತ್ರಿಃ । ಹರತಿ । ತ್ರಯಃ । ಇಮೇ । ಲೋಕಾಃ।

---

| | |
|---|---|
| ತಸ್ಯಾಃ ಏತಾವತಃ ಏವ ಭ್ರಾತೃವ್ಯಮ್ ನಿರ್ಭಜತಿ | ಆ ವೇದಿಯ ಇಷ್ಟು ಪ್ರದೇಶದಿಂದಲೇ ಯಜಮಾನನ ಭಾಗಾಭಿಲಾಷಿಯಾದ ಶತ್ರುವನ್ನು ದೂರ ಮಾಡಿದವನಾಗುತ್ತಾನೆ. |
| ತಸ್ಮಾತ್ ನ ಅಭಾಗಮ್ ನಿರ್ಭಜಂತಿ | ಆದುದರಿಂದ ಭಾಗವನ್ನು ಅಪೇಕ್ಷಿಸದ ಶತ್ರುವನ್ನು ದೂರ ಮಾಡುವುದಿಲ್ಲ. |

**ಸ್ತಂಬಹರಣದಲ್ಲಿ ತ್ರಿತ್ವಸಂಖ್ಯಾವಿಧಿ; ಪ್ರಶಂಸೆ**

| | |
|---|---|
| ತ್ರಿಃ ಹರತಿ | ಸ್ತಂಬಯಜುಸ್ಸನ್ನು [ತೃಣದರ್ಭಸಹಿತವಾದ ಧೂಳು] ಮೂರು ಬಾರಿ ಉತ್ಕರದಲ್ಲಿ ಹಾಕಬೇಕು. |
| ಇಮೇ ಲೋಕಾಃ ತ್ರಯಃ | ಈ ಲೋಕಗಳೂ ಭೂಮಿ–ಅಂತರಿಕ್ಷ–ಸ್ವರ್ಗಗಳೆಂದು ಮೂರಾಗಿವೆ. |

---

ವೇದಿಕರಣವಾದ ಮೇಲೆ ಸ್ಫ್ಯವನ್ನು ಉತ್ಕರದಲ್ಲಿ ಹಾಕುವ ಮಂತ್ರವಿದಾಗಿದೆ. ಸ್ಫ್ಯಗ್ರಹಣದ ಪ್ರಸಂಗವಾದುದರಿಂದ ಇಲ್ಲಿಯೇ ಹೇಳಲಾಗಿದೆ.

ಇಲ್ಲಿ '**ಪೃಥಿವಿ ದೇವಯಜನಿ**' ಮೊದಲಾದ ಮೂರು ಮಂತ್ರಗಳು ವೇದಿಕರಣದಲ್ಲಿ ವಿಹಿತವಾಗಿವೆ. ವೇದಿಯ ಪ್ರದೇಶದಿಂದ ಯಜಮಾನನ ಭಾಗವನ್ನು ಬಯಸುವ ಶತ್ರುವನ್ನು ದೂರ ಮಾಡುತ್ತಾನೆ.

ಈ ಸ್ತಂಬಯಜುಸ್ಸನ್ನು ಮೂರು ಬಾರಿ ಹಾಕುವುದರಿಂದ ಮೂರು ಲೋಕಗಳಿಂದಲೂ,ನಾಲ್ಕನೆಯ ಬಾರಿ ಉತ್ಕರದಲ್ಲಿ ಹಾಕುವುದರಿಂದ ಉಳಿದ ಪ್ರದೇಶದಿಂದಲೂ ಶತ್ರುವನ್ನು ದೂರ ತಳ್ಳುವನು.

ಏಭ್ಯ ಏವೈನಂ ಲೋಕೇಭ್ಯೋ ನಿರ್ಭಜತಿ ತೂಷ್ಣೀಂ

ಚತುರ್ಥಗ್ಂ ಹರತ್ಯಪರಿಮಿತಾದೇವೈನಂ ನಿರ್ಭಜತ್ಯುದ್ಧಂತಿ

---

ಏಭ್ಯಃ । ಏವ । ಏನಮ್ । ಲೋಕೇಭ್ಯಃ । ನಿರಿತಿ । ಭಜತಿ । ತೂಷ್ಣೀಮ್ ।

ಚತುರ್ಥಮ್ । ಹರತಿ । ಅಪರಿಮಿತಾದಿತ್ಯಪರಿ–ಮಿತಾತ್ । ಏವ । ಏನಮ್ । ನಿರಿತಿ।

ಭಜತಿ । ಉದಿತಿ । ಹಂತಿ ।

---

| | |
|---|---|
| ಏನಮ್ ಏಭ್ಯಃ ಲೋಕೇಭ್ಯಃ ನಿರ್ಭಜತಿ ಏವ | ಹೀಗೆ ಮೂರು ಬಾರಿ ಸ್ತಂಬಯಜುರ್ಹರಣದಿಂದ ಈ ಮೂರು ಲೋಕಗಳಿಂದಲೂ ಯಜಮಾನನ ಶತ್ರುವನ್ನು ದೂರ ಮಾಡಿದಂತಾಗುತ್ತದೆ. |

**ಚತುರ್ಥಹರಣವಿಧಿ; ಪ್ರಶಂಸೆ**

| | |
|---|---|
| ಚತುರ್ಥಮ್ ತೂಷ್ಣೀಮ್ ಹರತಿ | ಮಂತ್ರರಹಿತವಾಗಿ (ಸುಮ್ಮನೆ) ನಾಲ್ಕನೆಯ ಸ್ತಂಬ ಯಜುರ್ಹರಣವನ್ನು ಮಾಡಬೇಕು. |
| ಅಪರಿಮಿತಾತ್ ಏವ ಏನಮ್ ನಿರ್ಭಜತಿ | ಮೂರು ಲೋಕಗಳೇ ಅಲ್ಲದೆ ವಿಶ್ವದ ಇತರ ಪ್ರದೇಶ ಗಳಿಂದಲೂ ಈ ಶತ್ರುವನ್ನು ದೂರಕ್ಕೆ ತಳ್ಳುತ್ತಾನೆ. |

**ವೇದಿಯ ಮೇಲ್ಭಾಗದ ಮಣ್ಣನ್ನು ಕೆತ್ತಿ ಹಾಕುವ ವಿಧಿ; ಪ್ರಶಂಸೆ**

| | |
|---|---|
| ಉದ್ಧಂತಿ | ವೇದಿಯ ಮೇಲ್ಭಾಗದ ಮಣ್ಣನ್ನು ಸ್ಫ್ಯದಿಂದ ಕೆತ್ತಿ ಹಾಕಬೇಕು. |

---

ವೇದಿಯ ಮೇಲುಭಾಗದ ಮಣ್ಣನ್ನು ಕತ್ತರಿಸಿ ಹಾಕುವ ವಿಧಿಯು ಇದು. ಇದನ್ನು **'ಉದ್ಧನನ'** ಎನ್ನುತ್ತಾರೆ. ಇದರಿಂದ ವೇದಿಯು ನಿರ್ಮಲವಾಗುತ್ತದೆ.

ಯದೇವಾಸ್ಯಾ ಅಮೇಧ್ಯಂ ತದಪ ಹಂತ್ಯುದ್ಧಂತಿ ತಸ್ಮಾದೋಷ

ಧಯಃ ಪರಾಭವಂತಿ ಮೂಲಂ ಛಿನತ್ತಿ ಭ್ರಾತೃವ್ಯಸ್ಯೈವ

ಮೂಲಂ ಛಿನತ್ತಿ ಪಿತೃದೇವತ್ಯಾಽತಿಖಾತೇ-

---

ಯತ್ । ಏವ । ಅಸ್ಯಾಃ । ಅಮೇಧ್ಯಮ್ । ತತ್ । ಅಪೇತಿ । ಹಂತಿ । ಉದಿತಿ । ಹಂತಿ । ತಸ್ಮಾತ್ । ಓಷಧಯಃ । ಪರೇತಿ । ಭವಂತಿ । ಮೂಲಮ್ । ಛಿನತ್ತಿ । ಭ್ರಾತೃವ್ಯಸ್ಯ । ಏವ । ಮೂಲಮ್ । ಛಿನತ್ತಿ । ಪಿತೃದೇವತ್ಯೇತಿ ಪಿತೃ-ದೇವತ್ಯಾ । ಅತಿಖಾತೇತ್ಯತಿ-ಖಾತಾ ।

---

| | |
|---|---|
| ಅಸ್ಯಾಃ ಯತ್ ಅಮೇಧ್ಯಮ್ ಏವ | ಯಾವುದು ವೇದಿಯ ಮೇಲ್ಭಾಗದಲ್ಲಿ ಅಪವಿತ್ರ ವಾದುದು ಇದೆಯೋ |
| ತತ್ ಅಪಹಂತಿ | ಅದನ್ನು ಹೋಗಲಾಡಿಸಿ ಶುದ್ಧಿಗೊಳಿಸುತ್ತಾನೆ. |
| ಉದ್ಧಂತಿ ತಸ್ಮಾತ್ ಓಷಧಯಃ ಪರಾಭವಂತಿ | ಕೆತ್ತಿ ಹಾಕಬೇಕು. ಅದರಿಂದ ಅಲ್ಲಿ ಬೆಳೆದಿರುವ ಹುಲ್ಲು ಮೊದಲಾದವು ನಾಶವಾಗಿ ವೇದಿಯು ಸ್ವಚ್ಛವಾಗುತ್ತದೆ. |

**ಬೇರುಗಳನ್ನು ಕತ್ತರಿಸುವ ವಿಧಿ; ಅದಕ್ಕೆ ಸಂಬಂಧಿಸಿದ ವಿಷಯಗಳು**

| | |
|---|---|
| ಮೂಲಮ್ ಛಿನತ್ತಿ | ಹುಲ್ಲೇ ಮೊದಲಾದವುಗಳ ಬೇರುಗಳನ್ನು ಕತ್ತರಿಸಿ ಹಾಕಬೇಕು. |
| ಭ್ರಾತೃವ್ಯಸ್ಯ ಮೂಲಮ್ ಏವ ಛಿನತ್ತಿ | ಇದರಿಂದ ಶತ್ರುವಿನ ಮೂಲವನ್ನೇ ಅಧ್ವರ್ಯುವು ಕತ್ತರಿಸಿ ಹಾಕುತ್ತಾನೆ. |
| ಅತಿಖಾತಾ ಪಿತೃದೇವತ್ಯಾ | ಚೋಟು ಆಳಕ್ಕಿಂತಲೂ ಆಳವಾಗಿ ಅಗೆದರೆ ಆ ವೇದಿಯು ಪಿತೃ ಸಂಬಂಧಿಯಾಗುತ್ತದೆ. |

---

ಪೃಥ್ವಿಯಿಂದ ಎಷ್ಟು ಪರಿಮಾಣದಷ್ಟು ಆಳಕ್ಕೆ ಅಗೆಯಬೇಕೆಂಬುದಕ್ಕೆ ಪರಿಮಾಣನಿರ್ದೇಶವಿದೆ.

ಯತೀಂ ಖನತಿ ಪ್ರಜಾಪತಿನಾ [..ಪತಿನಾ(೨)ಯಜ್ಞಮುಖೇನ..] ಯಜ್ಞಮುಖೇನ ಸಂಮಿತಾಮಾಪ್ರತಿಷ್ಠಾಯೈ ಖನತಿ ಯಜಮಾನ ಮೇವ ಪ್ರತಿಷ್ಠಾಂ ಗಮಯತಿ ದಕ್ಷಿಣತೋ ವರ್ಷೀಯಸೀಂ ಕರೋತಿ

---

ಇಯತೀಮ್ । ಖನತಿ । ಪ್ರಜಾಪತಿನೇತಿ ಪ್ರಜಾ-ಪತಿನಾ । (೨) । ಯಜ್ಞಮುಖೇನೇತಿ ಯಜ್ಞ-ಮುಖೇನ । ಸಂಮಿತಾಮಿತಿ ಸಂ-ಮಿತಾಮ್ । ಏತಿ । ಪ್ರತಿಷ್ಠಾಯಾ ಇತಿ ಪ್ರತಿ-ಸ್ಥಾಯೈ । ಖನತಿ । ಯಜಮಾನಮ್ । ಏವ । ಪ್ರತಿಷ್ಠಾಮಿತಿ ಪ್ರತಿ-ಸ್ಥಾಮ್। ಗಮಯತಿ । ದಕ್ಷಿಣತಃ । ವರ್ಷೀಯಸೀಮ್ । ಕರೋತಿ ।

---

| | |
|---|---|
| ಯಜ್ಞಮುಖೇನ ಪ್ರಜಾಪತಿನಾ ಸಂಮಿತಾಮ್ ಇಯತೀಮ್ ಖನತಿ | ಪ್ರಜಾಪತಿ ಸ್ವರೂಪನಾದ ಯಜ್ಞಕರ್ತನಾದ ಯಜಮಾನನ ಮುಖದ ಪರಿಮಾಣದಷ್ಟು ಆಳವಾಗಿ ಅಗೆಯಬೇಕು. ಇಷ್ಟು ಆಳವಾಗಿ [ಯಜಮಾನನ ಗಲ್ಲದಿಂದ ಕೂದಲಿನವರೆಗಿನ ಪರಿಮಾಣದಷ್ಟು] ಅಗೆಯಬೇಕು. ಅದಕ್ಕಿಂತ ಆಳವಾಗಿ ಅಗೆಯಬಾರದು. |

**ಗಟ್ಟಿಯಾದ ನೆಲವು ಸಿಗುವವರೆಗೂ ಅಗೆಯುವ ವಿಧಿ; ಪ್ರಶಂಸೆ**

| | |
|---|---|
| ಆಪ್ರತಿಷ್ಠಾಯೈ ಖನತಿ | ಗಟ್ಟಿಯಾದ ನೆಲವು ಸಿಕ್ಕುವವರೆಗೂ ಯಜ್ಞವೇದಿಯನ್ನು ಅಗೆಯಬೇಕು. **[ವಿಧಿ]** |
| ಯಜಮಾನಮ್ ಏವ ಪ್ರತಿಷ್ಠಾಮ್ ಗಮಯತಿ | ಇದರಿಂದ ಅಧ್ವರ್ಯುವು ಯಜಮಾನನನ್ನು ಭೂಮಿಯಲ್ಲಿ ಪ್ರತಿಷ್ಠಿತನನ್ನಾಗಿ ಮಾಡುತ್ತಾನೆ. |

**ದಕ್ಷಿಣಭಾಗವು ಉನ್ನತವಾಗಿರಬೇಕೆಂಬ ವಿಧಿ; ಪ್ರಶಂಸೆ**

| | |
|---|---|
| ದಕ್ಷಿಣತಃ ವರ್ಷೀಯಸೀಮ್ ಕರೋತಿ | ದಕ್ಷಿಣಭಾಗದಲ್ಲಿ ವೇದಿಯನ್ನು ಹೆಚ್ಚು ಎತ್ತರವಾಗಿರುವಂತೆ ನಿರ್ಮಿಸಬೇಕು. |

---

ಬ್ರಾಹ್ಮಣದಲ್ಲಿ **'ಚತುರಂಗುಲಂ'** ಎಂದು ಒಂದು ಪರಿಮಾಣದ ವಿಧಿಯು ಇದೆ.

ದೇವಯಜನಸ್ಯೈವ ರೂಪಮಕಃ ಪುರೀಷವತೀಂ ಕರೋತಿ

ಪ್ರಜಾ ವೈ ಪಶವಃ ಪುರೀಷಂ ಪ್ರಜಯೈವೈನಂ ಪಶುಭಿಃ

ಪುರೀಷವಂತಂ ಕರೋ–

---

ದೇವಯಜನಸ್ಯೇತಿ ದೇವ–ಯಜನಸ್ಯ । ಏವ । ರೂಪಮ್ । ಅಕಃ । ಪುರೀಷವತೀಮಿತಿ ಪುರೀಷ–ವತೀಮ್ । ಕರೋತಿ । ಪ್ರಜೇತಿ ಪ್ರ–ಜಾ । ವೈ । ಪಶವಃ । ಪುರೀಷಮ್। ಪ್ರಜಯೇತಿ ಪ್ರ–ಜಯಾ । ಏವ । ಏನಮ್ । ಪಶುಭಿರಿತಿ ಪಶು–ಭಿಃ । ಪುರೀಷವಂತಮಿತಿ ಪುರೀಷ–ವಂತಮ್ । ಕರೋತಿ ।

---

| | |
|---|---|
| ದೇವಯಜನಸ್ಯ ರೂಪಮ್ ಏವ ಅಕಃ | ಇದರಿಂದ ದೇವತೆಗಳ ಯಾಗಕ್ಕೆ ತಕ್ಕ ಯಾಗ ಭೂಮಿಯ ಸ್ವರೂಪವನ್ನು ಮಾಡಿದವನಾಗುತ್ತಾನೆ. |

**ವೇದಿಯು ಮೆದುಮಣ್ಣಿನಿಂದ ತುಂಬಿರುವಂತೆ ಮಾಡಬೇಕೆಂಬ ವಿಧಿ; ಪ್ರಶಂಸೆ**

| | |
|---|---|
| ಪುರೀಷವತೀಮ್ ಕರೋತಿ | ವೇದಿಯನ್ನು ಮೃದುವಾದ ಧೂಳಿಯಿಂದ ತುಂಬಿರುವಂತೆ ಮಾಡಬೇಕು. |
| ಪ್ರಜಾಃ ವೈ ಪಶವಃ ಪುರೀಷಮ್ | ಪ್ರಜೆಯೂ ಮತ್ತು ಪಶುಗಳೂ ಭೂಮಿಯ ಪುರೀಷವಿದ್ದಂತೆ. |
| ಏನಮ್ ಪ್ರಜಯಾ ಏವ ಪಶುಭಿಃ ಪುರೀಷವಂತಮ್ ಕರೋತಿ | ಹೀಗೆ ಮಾಡುವುದರಿಂದ [ಮೃದುಧೂಳಿಸಂಪನ್ನವಾದ ವೇದಿಯಂತೆ] ಅಧ್ವರ್ಯುವು ಯಜಮಾನನನ್ನು ಪ್ರಜಾ–ಪಶುಸಮೃದ್ಧನನ್ನಾಗಿ ಮಾಡುತ್ತಾನೆ. |

---

ಇಲ್ಲಿ ಯಜಮಾನನ ಮುಖಪರಿಮಾಣದ ವಿಧಿಯಿದೆ. ಇಂತಹ ಕಡೆಗಳಲ್ಲಿ ಭೂಮಿಯ ವೈವಿಧ್ಯಕ್ಕೆ ತಕ್ಕಂತೆ ವಿಕಲ್ಪವೆಂದು ತಿಳಿಯಬೇಕು.ಇಲ್ಲಿ ಮೂಲಚ್ಛೇದನ, ಖನನ ಇವುಗಳ ವಿಧಿ ಮತ್ತು ಪ್ರಶಂಸೆಯು ಇದೆ.

ತ್ಯುತ್ತರಂ ಪರಿಗ್ರಾಹಂ ಪರಿಗೃಹ್ಣಾತ್ಯೇತಾವತೀ ವೈ ಪೃಥಿವೀ

ಯಾವತೀ ವೇದಿಸ್ತಸ್ಯಾ ಏತಾವತ ಏವ ಭ್ರಾತೃವ್ಯಂ

ನಿರ್ಭಜ್ಯಾತ್ಮನ ಉತ್ತರಂ ಪರಿಗ್ರಾಹಂ ಪರಿಗೃಹ್ಣಾತಿ

---

ಉತ್ತರಮಿತ್ಯುತ್-ತರಮ್ । ಪರಿಗ್ರಾಹಮಿತಿ ಪರಿ-ಗ್ರಾಹಮ್ । ಪರೀತಿ । ಗೃಹ್ಣಾತಿ । ಏತಾವತೀ । ವೈ । ಪೃಥಿವೀ । ಯಾವತೀ । ವೇದಿಃ । ತಸ್ಯಾಃ । ಏತಾವತಃ । ಏವ । ಭ್ರಾತೃವ್ಯಮ್ । ನಿರ್ಭಜ್ಯೇತಿ ನಿಃ-ಭಜ್ಯ । ಆತ್ಮನೇ । ಉತ್ತರಮಿತ್ಯುತ್-ತರಮ್ । ಪರಿಗ್ರಾಹಮಿತಿ ಪರಿ-ಗ್ರಾಹಮ್ । ಪರೀತಿ । ಗೃಹ್ಣಾತಿ ।

---

**ಉತ್ತರಪರಿಗ್ರಾಹವಿಧಿ [ವೇದಿಯನ್ನು ಅಳೆಯುವುದರ ವಿಧಿ; ಪ್ರಶಂಸೆ.**

| | |
|---|---|
| ಉತ್ತರಮ್ ಪರಿಗ್ರಾಹಮ್ ಪರಿಗೃಹ್ಣಾತಿ | [**'ಋತಮಸಿ'** ಮೊದಲಾದ ಮಂತ್ರಗಳಿಂದ] ವೇದಿಯನ್ನು/ವೇದಿಯ ಎಲ್ಲೆಯನ್ನು ಅಳತೆ ಮಾಡಬೇಕು. |
| ಯಾವತೀ ವೇದಿಃ ಏತಾವತೀ ವೈ ಪೃಥಿವೀ | ಯಜ್ಞವೇದಿಯು ಎಷ್ಟು ಪರಿಮಾಣವುಳ್ಳದುದೋ ಇದೇ ಉಪಯುಕ್ತವಾದ ಭೂಮಿಯಾಗಿದೆ. |
| ತಸ್ಯಾಃ ಏತಾವತಃ ಏವ ಭ್ರಾತೃವ್ಯಮ್ ನಿರ್ಭಜ್ಯ ಆತ್ಮನೇ ಉತ್ತರಮ್ ಪರಿಗ್ರಾಹಮ್ ಪರಿಗೃಹ್ಣಾತಿ | ಆ ಭೂಮಿಯ ಇಷ್ಟು ಪರಿಮಾಣದ ಪ್ರದೇಶದಿಂದಲೇ ಶತ್ರುವನ್ನು ದೂರ ಮಾಡಿ ತನಗಾಗಿ ಮಾಡಿಕೊಳ್ಳುವುದಕ್ಕಾಗಿ ಈ ಉತ್ತರಪರಿಗ್ರಾಹವನ್ನು ಮಾಡುತ್ತಾನೆ. |

---

ಯಜ್ಞವೇದಿಯನ್ನು ಗಟ್ಟಿಯಾದ ನೆಲವು ಸಿಗುವವರೆಗೂ ಅಗೆಯಬೇಕು. ಇದರಿಂದ ಯಜಮಾನನನ್ನು ಭೂಮಿಯಲ್ಲಿ ಪತಿಷ್ಠಾಪಿಸಿದಂತಾಗುತ್ತದೆ.

ವೇದಿಯು ದಕ್ಷಿಣಭಾಗದಲ್ಲಿ ಉನ್ನತವಾಗಿರಬೇಕು. ಇದು ದೇವತೆಗಳ ಯಾಗಭೂಮಿಯ ಸ್ವರೂಪ. ಇದಕ್ಕೆ ವಿರುದ್ಧವಾದರೆ ಅದು ಪಿತೃಯೋಗ್ಯವಾದ ಯಾಗಭೂಮಿಯಾದೀತು.

ಕ್ರೂರಮಿವ ವಾ[..ಮಿವ ವೈ(ಇ)ಏತತ್ಕರೋ..]ಏತತ್ಕರೋತಿ

ಯದ್ವೇದಿಂ ಕರೋತಿ ಧಾ ಅಸಿ ಸ್ವಧಾ ಅಸೀತಿ

ಯೋಯುಪ್ಯತೇ ಶಾಂತ್ಯೈ೮

---

ಕ್ರೂರಮ್ । ಇವ । ವೈ । (ಇ) । ಏತತ್ । ಕರೋತಿ । ಯತ್ । ವೇದಿಮ್ । ಕರೋತಿ । ಧಾಃ । ಅಸಿ । ಸ್ವಧೇತಿ ಸ್ವ-ಧಾ । ಅಸಿ । ಇತಿ । ಯೋಯುಪ್ಯತೇ । ಶಾಂತ್ಯೈ೮ ।

---

**ಸಮೀಕರಣವಿಧಿ; ಪ್ರಶಂಸೆ**

| | |
|---|---|
| ಯತ್ ವೇದಿಮ್ ಕರೋತಿ ಏತತ್ ಕ್ರೂರಮ್ ಇವ ಕರೋತಿ ವೈ | ವೇದಿಯನ್ನು ಮಾಡುವುದು ಯಾವುದುಂಟೋ ಅದು ಕ್ರೂರವೆನ್ನುವಂತಿರುವ ಕಾರ್ಯವನ್ನೆಸಗಿದಂತಾಗುತ್ತದೆ. |
| ಧಾಃ ಅಸಿ ಸ್ವಧಾ ಅಸಿ ಇತಿ | 'ವೇದಿಯೇ! ನೀನು ಯಜ್ಞವನ್ನು ಧರಿಸುವವಳೂ, ಸ್ವರೂಪದಿಂದ ಬರ್ಹಿಸ್ಸು ಮೊದಲಾದವುಗಳಿಗೆ ಆಶ್ರಯಸ್ಥಾನವೂ ಆಗಿರುವೆ' ಎಂಬ ಮಂತ್ರದಿಂದ |
| ಯೋಯುಪ್ಯತೇ ಶಾಂತ್ಯೈ೮ | ಈ ದೋಷಪರಿಹಾರಕ್ಕಾಗಿ ವೇದಿಯನ್ನು ಸಮನಾಗಿ ಹಳ್ಳ-ತಿಟ್ಟುಗಳಿಲ್ಲದಂತೆ ಮಾಡಬೇಕು.**[ವಿಧಿ]** |

---

ವೇದಿಯನ್ನು ಮೃದುವಾದ ಧೂಳಿನಿಂದ ತುಂಬಿರುವಂತೆ ಮಾಡಬೇಕು. ಪ್ರಜೆಗಳ ಮತ್ತು ಪಶುಗಳ ಸಂಚಾರದಿಂದ ಉಂಟಾಗುವ ಧೂಳಿಯು ಭೂಮಿಯ ಮೃದುವಾದ ಭಾಗವಾಗಿರುತ್ತದೆ.ಇದರಿಂದ ಯಜಮಾನನನ್ನು ಪ್ರಜಾ-ಪಶುಸಮೃದ್ಧನಾಗುವಂತೆ ಮಾಡಿದಂತಾಗುತ್ತದೆ.

**'ಪುರಾಕ್ರೂರಸ್ಯ'** ಮೊದಲಾದ ಮಂತ್ರಗಳಿಂದ ಮೊದಲು ವೇದಿಯ ಆಳತೆಯನ್ನು ಮಾಡುವುದು ಪೂರ್ವಪರಿಗ್ರಾಹ. ವೇದಿನಿರ್ಮಾಣವಾದ ಮೇಲೆ **'ಋತಮಸಿ'** ಮೊದಲಾದ ಮಂತ್ರಗಳಿಂದ ವೇದಿಯ ಎಲ್ಲೆಯನ್ನು ನಿರ್ಧರಿಸುವುದು ಉತ್ತರಪರಿಗ್ರಾಹ.

ಭೂಮಿಯಲ್ಲಿ ಯಜ್ಞವೇದಿಯು ಎಷ್ಟು ಪರಿಮಾಣವುಳ್ಳದ್ದಾಗಿದೆಯೋ ಅಷ್ಟು ಉಪಯುಕ್ತವಾದುದು.

ಪ್ರೋಕ್ಷಣೀರಾ ಸಾದಯತ್ಯಾಪೋ ವೈ ರಕ್ಷೋಘ್ನೀ

ರಕ್ಷಸಾಮಪಹತ್ಯೈ ಸ್ಫ್ಯಸ್ಯ ವರ್ತ್ಮನ್ನಾಸಾದಯತಿ ಯಜ್ಞಸ್ಯ

ಸಂತತ್ಯೈ

---

ಪ್ರೋಕ್ಷಣೀರಿತಿ ಪ್ರ-ಉಕ್ಷಣೀಃ । ಏತಿ । ಸಾದಯತಿ । ಆಪಃ । ವೈ । ರಕ್ಷೋಘ್ನೀರಿತಿ ರಕ್ಷಃ-ಘ್ನೀಃ । ರಕ್ಷಸಾಮ್ । ಅಪಹತ್ಯಾ ಇತ್ಯಪ-ಹತ್ಯೈ । ಸ್ಫ್ಯಸ್ಯ । ವರ್ತ್ಮನ್ । ಸಾದಯತಿ । ಯಜ್ಞಸ್ಯ । ಸಂತತ್ಯಾ ಇತಿ ಸಂ-ತತ್ಯೈ ।

---

### ಪ್ರೋಕ್ಷಣೀಪಾತ್ರೆಯ ಆಸಾದನೆಯ ವಿಧಿ; ಪ್ರಶಂಸೆ

| | |
|---|---|
| ಪ್ರೋಕ್ಷಣೀಃ ಆಸಾದಯತಿ | ಪ್ರೋಕ್ಷಣೀಪಾತ್ರವನ್ನು ನೀರಿನಿಂದ ತುಂಬಿಸಿ, ವೇದಿಯಲ್ಲಿ ಆಸಾದನೆ ಮಾಡಬೇಕು. |
| ಆಪಃ ರಕ್ಷೋಘ್ನೀಃ ವೈ | ನೀರುಗಳು ರಕ್ಷೋಗಣಗಳನ್ನು ಕೊಲ್ಲತಕ್ಕವುಗಳಾಗಿವೆ. |
| ರಕ್ಷಸಾಮ್ ಅಪಹತ್ಯೈ | ಈ ಆಸಾದನವು ರಾಕ್ಷಸರ ನಾಶಕ್ಕೆ ಕಾರಣವಾಗುತ್ತದೆ. |
| ಸ್ಫ್ಯಸ್ಯ ವರ್ತ್ಮನ್ ಸಾದಯತಿ | ಸ್ಫ್ಯವನ್ನು ಇಟ್ಟಿರುವ ಮಾರ್ಗದಲ್ಲಿ ಪ್ರೋಕ್ಷಣ್ಯಾಸಾದನವನ್ನು ಮಾಡಬೇಕು. |
| ಯಜ್ಞಸ್ಯ ಸಂತತ್ಯೈ | ಇದು ಯಜ್ಞವು ಅವಿಚ್ಛಿನ್ನವಾಗಿ ನಡೆಯಲು ಕಾರಣವಾಗುತ್ತದೆ. |

---

ಈ ಉತ್ತರಪರಿಗ್ರಾಹದಿಂದ ಅಷ್ಟರಿಂದ ಶತ್ರುವನ್ನು ದೂರ ಮಾಡಿ, ತನ್ನದನ್ನಾಗಿ ಮಾಡುತ್ತಾನೆ. ವೇದಿಯನ್ನು ಮಾಡುವಾಗ ಹಳ್ಳ-ತಿಟ್ಟುಗಳನ್ನು ಮಾಡುವುದರಿಂದ,ತೃಣಾದಿಗಳ ಹಿಂಸೆಯು ಆಗುವುದರಿಂದ ಈ ವೇದಿಕರಣವು ಕ್ರೂರಕಾರ್ಯವೆನಿಸುತ್ತದೆ.

ಈ ದೋಷಪರಿಹಾರಕ್ಕಾಗಿ ವೇದಿಯನ್ನು **'ಧಾ ಅಸಿ ಸ್ವಧಾ ಅಸಿ'** ಮೊದಲಾದ ಮಂತ್ರದಿಂದ ಸಮಾನವಾಗಿ ಹಳ್ಳ-ತಿಟ್ಟುಗಳಿಲ್ಲದಿರುವಂತೆ ಮಾಡಬೇಕು.ಇದರಿಂದ ದೋಷನಿವೃತ್ತಿಯಾಗುತ್ತದೆ. ಇದು ಯಾವುದಕ್ಕೂ ಹಿಂಸೆಯಾಗಬಾರದೆಂದು ಸೂಚಿಸುತ್ತದೆ.

ಯಂ ದ್ವಿಷ್ಯಾತ್ತಂ ಧ್ಯಾಯೇಚ್ಛುಚೈವೈನಮರ್ಪಯತಿ ||೨೩-4||

**[ಭಜತಿ ಪ್ರಜಾಪತಿನೇವ ವೈ ತ್ರಯಸ್ತ್ರಿಗ್ಂಶಚ್ಚ ||]**

---

ಯಮ್ | ದ್ವಿಷ್ಯಾತ್ | ತಮ್ | ಧ್ಯಾಯೇತ್ | ಶುಚಾ | ಏವ | ಏನಮ್ | ಅರ್ಪಯತಿ ||೨೩||

---

**ದ್ವೇಷನಾಶಕ್ಕಾಗಿ ಧ್ಯಾನವಿಧಿ; ಆದರ ಪ್ರಶಂಸೆ**

| | |
|---|---|
| ಯಮ್ ದ್ವಿಷ್ಯಾತ್ | ಯಜಮಾನನು ಯಾವನನ್ನು ದ್ವೇಷಿಸುತ್ತಾನೆಯೋ |
| ತಮ್ ಧ್ಯಾಯೇತ್ ಏನಮ್ | ಅವನನ್ನು ಸ್ಮರಿಸಬೇಕು. ಇದರಿಂದ ಶತ್ರುವನ್ನು |
| ಶುಚಾ ಏವ ಅರ್ಪಯತಿ | ಶೋಕದಿಂದ ಪೀಡಿತನಾಗುವಂತೆ ಮಾಡುತ್ತಾನೆ. |

---

ನೀರು ರಕ್ಷೋನಾಶಕವಾಗಿದೆಯೆಂದು ಅರ್ಘ್ಯಪ್ರದಾನಪ್ರಕರಣದಲ್ಲಿ ಹೇಳಿದೆ:- **'ತಾ ಏತಾ ಆಪೋ ವಜ್ರೀ ಭೂತ್ವಾ ತಾನಿ ರಕ್ಷಾಗ್ಂಸಿ ಮಂದೇಹಾರುಣೇ ದ್ವೀಪೇ ಪ್ರಕ್ಷಿಪಂತಿ' [ತೈ.ಆ.2.2]** ಗಾಯತ್ರೀಮಂತ್ರದಿಂದ ಅಭಿಮಂತ್ರಿತವಾಗಿರುವ ನೀರು ವಜ್ರಾಯುಧವಾಗಿ ಪರಿಣಮಿಸಿ ರಾಕ್ಷಸರನ್ನು ಮಂದೇಹಾರುಣದ್ವೀಪದಲ್ಲಿ ಎಸೆದು ನಾಶಪಡಿಸುವುದು.

ವೇದಿಯನ್ನು ನಿರ್ಮಿಸಿದ ನಂತರ ಸ್ಫ್ಯವನ್ನು ಇಟ್ಟಿರುವ ಮಾರ್ಗದಲ್ಲಿ ಪ್ರೋಕ್ಷಣೀ ಪಾತ್ರದ ಆಸಾದನೆಯನ್ನು ಮಾಡಬೇಕು. ಇದು ರಕ್ಷೋಬಾಧೆಯನ್ನು ದೂರಮಾಡುವುದು. ಆಗ ಯಜಮಾನನು ಯಾರನ್ನು ದ್ವೇಷಿಸುತ್ತಾನೆಯೋ ಅವನನ್ನು ಸ್ಮರಿಸಬೇಕು. ಇದರಿಂದ ಶತ್ರುವು ಶೋಕಪೀಡಿತನಾಗುವನು.

ಬೇರೆಯ ಶತ್ರುವು ಇಲ್ಲದಿದ್ದರೆ ಪಾಪವನ್ನೇ ಶತ್ರುವೆಂದು ಸ್ಮರಿಸಿ, ಪಾಪರಹಿತನಾಗುವನು.

## ॥ ಪಂಚಮೋಽನುವಾಕಃ ॥

ಬ್ರಹ್ಮವಾದಿನೋ ವದಂತ್ಯದ್ಭಿರ್ ಹವೀಗ್ಂಷಿ ಪ್ರೌಕ್ಷೀಃ

ಕೇನಾಪ ಇತಿ ಬ್ರಹ್ಮಣೇತಿ ಬ್ರೂಯಾ-

---

ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ । ಅದ್ಭಿರಿತ್ಯತ್-ಭಿಃ । ಹವೀಗ್ಂಷಿ ।

ಪ್ರೇತಿ । ಔಕ್ಷೀಃ । ಕೇನ । ಅಪಃ । ಇತಿ । ಬ್ರಹ್ಮಣಾ । ಇತಿ । ಬ್ರೂಯಾತ್ ।

---

ನಾಲ್ಕನೆಯ ಅನುವಾಕದಲ್ಲಿ ವೇದಿಕರಣವು ಹೇಳಲ್ಪಟ್ಟಿದೆ. ಈ ಐದನೆಯ ಅನುವಾಕದಲ್ಲಿ ವೇದಿಯಲ್ಲಿ ಬರ್ಹಿರಾದಿಗಳ ಆಸಾದನವು ಹೇಳಲ್ಪಡುತ್ತದೆ.

### ಪ್ರೋಕ್ಷಣವಿಧಾನ; ಸ್ತುತಿ

| | |
|---|---|
| ಬ್ರಹ್ಮವಾದಿನಃ | ವೇದಜ್ಞರು [ಅಧ್ವರ್ಯುವನ್ನು ಕುರಿತು] |
| ಅದ್ಭಿಃ ಹವೀಗ್ಂಷಿ ಪ್ರ | ಪ್ರೋಕ್ಷಣೀಜಲಗಳಿಂದ ಬೇರೆಯ ಹವಿರಾದಿ |
| ಔಕ್ಷೀಃ | ವಸ್ತುಗಳನ್ನು ಶುಧ್ಯರ್ಥವಾಗಿ ಪ್ರೋಕ್ಷಿಸುವೆಯಷ್ಟೆ. |
| ಕೇನ ಅಪಃ | ಯಾವ ಬೇರೆಯ ಶುದ್ಧ ವಸ್ತುವಿನಿಂದ ನೀರನ್ನು ಪ್ರೋಕ್ಷಿಸುವೆ? |
| ಇತಿ ವದಂತಿ | ಎಂದು ಪ್ರಶ್ನಿಸುತ್ತಾರೆ. |
| ಬ್ರಹ್ಮಣಾ ಇತಿ ಬ್ರೂಯಾತ್ | ಮಂತ್ರದಿಂದಲೇ [ನೀರಿಗೆ ಪ್ರೋಕ್ಷಣೆಯೆಂದು] ಅಧ್ವರ್ಯುವು ಹೇಳಬೇಕು. |

---

ವೇದವಿದರು ಯಜ್ಞದ ಹವಿಸ್ಸನ್ನು ಶುದ್ಧಿಗೊಳಿಸಲು ನೀರು ಇರುವುದಾದರೂ ನೀರನ್ನು ಯಾವ ವಸ್ತುವು ಶುದ್ಧಿಗೊಳಿಸುವುದು?ಎಂದು ವಿಚಾರ ಮಾಡಿ ವೇದಮಂತ್ರವೇ ಶುದ್ಧಿ ಗೊಳಿಸುವುದೆಂದು ಜಿಜ್ಞಾಸೆ ಮಾಡಿ ನಿರ್ಣಯಿಸಿರುತ್ತಾರೆ. ಹೀಗೆ ಮಂತ್ರವಿದರ ಜಿಜ್ಞಾಸೆಯು

ದದ್ಭಿರ್ಹ್ಯೇವ ಹವೀಗ್ಂಷಿ ಪ್ರೋಕ್ಷತಿ ಬ್ರಹ್ಮಣಾಽಪ ಇಧ್ಮಾ

ಬರ್‌ಹಿಃ ಪ್ರೋಕ್ಷತಿ ಮೇಧ್ಯಮೇವೈನತ್ಕರೋತಿ ವೇದಿಂ ಪ್ರೋಕ್ಷ-

---

ಅದ್ಭಿರಿತ್ಯತ್-ಭಿಃ । ಹಿ । ಏವ । ಹವೀಗ್ಂಷಿ । ಪ್ರೋಕ್ಷತೀತಿ ಪ್ರ-ಉಕ್ಷತಿ । ಬ್ರಹ್ಮಣಾ। ಅಪಃ । ಇಧ್ಮಾಬರ್‌ಹಿರಿತೀಧ್ಮಾ-ಬರ್‌ಹಿಃಃ । ಪ್ರೇತಿ । ಉಕ್ಷತಿ । ಮೇಧ್ಯಮ್ । ಏವ । ಏನತ್ । ಕರೋತಿ । ವೇದಿಮ್ । ಪ್ರೇತಿ । ಉಕ್ಷತಿ ।

---

| | |
|---|---|
| ಅದ್ಭಿಃ ಏವ ಹವೀಗ್ಂಷಿ ಪ್ರೋಕ್ಷತಿ | [ಅದುದರಿಂದ] ನೀರಿನಿಂದಲೇ ಬೇರೆಯ ಬರ್ಹಿರಾದಿಗಳನ್ನು ಪ್ರೋಕ್ಷಿಸಬೇಕು. |
| ಬ್ರಹ್ಮಣಾ ಅಪಃ **[ಪ್ರೋಕ್ಷತಿ]** | ಮಂತ್ರದಿಂದ[**'ಪ್ರೋಕ್ಷಿತಾಃ ಸ್ಥ'**]ಎಂಬ ಮಂತ್ರೋಚ್ಚಾರಣದಿಂದ ನೀರನ್ನು ಪ್ರೋಕ್ಷಿಸ ಬೇಕು. **[ವಿಧಿ]** |

**ಇಧ್ಮ-ಬರ್ಹಿಗಳ ಪ್ರೋಕ್ಷಣೆ-ಅರ್ಥವಾದ**

| | |
|---|---|
| ಇಧ್ಮಾ ಬರ್‌ಹಿಃ ಪ್ರೋಕ್ಷತಿ | [ದ್ವಂದ್ವ(ಜೊತೆ)ವಾಗಿ ಇಟ್ಟಿರುವ] ಇಧ್ಮವನ್ನೂ, ಬರ್ಹಿಸ್ಸನ್ನೂ ಪ್ರೋಕ್ಷಿಸಬೇಕು. **[ವಿಧಿ]** |
| ಏನತ್ ಮೇಧ್ಯಮ್ ಏವ ಕರೋತಿ | ಇದರಿಂದ ಅಧ್ವರ್ಯುವು ಎರಡನ್ನೂ ಶುದ್ಧಿಗೊಳಿಸುತ್ತಾನೆ. |

**ವೇದಿಪ್ರೋಕ್ಷಣವಿಧಿ; ಪ್ರಶಂಸೆಯ ಅರ್ಥವಾದ**

| | |
|---|---|
| ವೇದಿಮ್ ಪ್ರೋಕ್ಷತಿ | ಯಜ್ಞವೇದಿಯನ್ನು ಪ್ರೋಕ್ಷಿಸಬೇಕು. **[ವಿಧಿ]** |

---

ಹಲವು ಕಡೆಗಳಲ್ಲಿ ಕಂಡು ಬರುತ್ತದೆ.

ಯಜ್ಞವೇದಿಯನ್ನೂ, ಇಧ್ಮ ಬರ್ಹಿಸ್ಸುಗಳನ್ನೂ ಅಧ್ವರ್ಯುವು ಪ್ರೋಕ್ಷಿಸುವನು. ಇದರಿಂದ ಇಧ್ಮ ಬರ್ಹಿಸ್ಸುಗಳನ್ನು ಶುದ್ಧಿಗೊಳಿಸಿ, ವೇದಿಯನ್ನು ಯಜ್ಞಕ್ಕೆ ಅಣಿಗೊಳಿಸುವನು.

ತ್ರ್ಯಖ್ಷಾ ವಾ ಏಷಾಽಲೋಮಕಾಽಮೇಧ್ಯಾ ಯದ್ವೇದಿರ್ಮೇಧ್ಯಾ

ಮೇವೈನಾಂ ಕರೋತಿ ದಿವೇ ತ್ವಾಽಂತರಿಕ್ಷಾಯ ತ್ವಾ ಪೃಥಿವ್ಯೈ

ತ್ವೇತಿ ಬರ್ಹಿರಾಸಾದ್ಯ [..ಸಾದ್ಯ ಪ್ರ(೧)ಉಕ್ಷತ್ಯೇಭ್ಯಃ..]

---

ಖುಕ್ಷಾ । ವೈ । ಏಷಾ । ಅಲೋಮಕಾ । ಅಮೇಧ್ಯಾ । ಯತ್ । ವೇದಿಃ । ಮೇಧ್ಯಾಮ್ ।

ಏವ । ಏನಾಮ್ । ಕರೋತಿ । ದಿವೇ । ತ್ವಾ । ಅಂತರಿಕ್ಷಾಯ । ತ್ವಾ । ಪೃಥಿವ್ಯೈ ।

ತ್ವಾ । ಇತಿ । ಬರ್ಹಿಃ । ಆಸಾದ್ಯೇತ್ಯಾ-ಸಾದ್ಯ । ಪ್ರೇತಿ । (೧) । ಉಕ್ಷತಿ ।

---

| | |
|---|---|
| ಯತ್ ವೇದಿಃ ಏಷಾ ಖುಕ್ಷಾ ವೈ ಅಲೋಮಕಾ ಅಮೇಧ್ಯಾ | ವೇದಿಯೆಂಬುದು ಯಾವುದುಂಟೋ ಅದು ಕಠಿಣವಾಗಿದೆ.ತೃಣರಹಿತವಾಗಿದೆ.ಅಪವಿತ್ರವಾಗಿದೆ. |
| ಏನಾಮ್ ಮೇಧ್ಯಾಮ್ ಏವ ಕರೋತಿ | [ಈ ಪ್ರೋಕ್ಷಣದಿಂದ ಅಧ್ವರ್ಯುವು] ಈ ವೇದಿಯನ್ನು ಶುದ್ಧವಾಗಿಸಿ, ಯಜ್ಞಾರ್ಹವನ್ನಾಗಿ ಮಾಡುತ್ತಾನೆ. |

**ಬರ್ಹಿರಾಸದನ-ಪ್ರೋಕ್ಷಣವಿಧಿ; ಪ್ರಶಂಸೆ**

| | |
|---|---|
| ಬರ್ಹಿಃ ಆಸಾದ್ಯ | ಬರ್ಹಿಸ್ಸನ್ನು ವೇದಿಯಲ್ಲಿ ಹರಡಿ |
| ದಿವೇ ತ್ವಾ **[ಇತಿ]** | ಸ್ವರ್ಗಲೋಕಕ್ಕಾಗಿ ನಿನ್ನನ್ನು [ಪ್ರೋಕ್ಷಿಸುವೆನು] [ಎಂದು ಅಗ್ರಭಾಗವನ್ನೂ] |
| ಅಂತರಿಕ್ಷಾಯ ತ್ವಾ **[ಇತಿ]** | ಅಂತರಿಕ್ಷಲೋಕಕ್ಕಾಗಿ ನಿನ್ನನ್ನು [ಪ್ರೋಕ್ಷಿಸುವೆನು ಎಂದು ಮಧ್ಯಭಾಗವನ್ನೂ] |
| ಪೃಥಿವ್ಯೈ ತ್ವಾ **[ಇತಿ]** | ಭೂಲೋಕಕ್ಕಾಗಿ ನಿನ್ನನ್ನು [ಪ್ರೋಕ್ಷಿಸುವೆನು ಎಂದು ಮೂಲಭಾಗವನ್ನೂ] |
| ಪ್ರೋಕ್ಷತಿ | ಪ್ರೋಕ್ಷಿಸಬೇಕು. **[ಬರ್ಹಿಃಪ್ರೋಕ್ಷಣವಿಧಿ]** |

---

ಈ ಬರ್ಹಿಃಪ್ರೋಕ್ಷಣದಿಂದ ಮೂರು ಲೋಕಗಳ ಅನುಗ್ರಹ/ಪ್ರಾಪ್ತಿಯೂ

ಪ್ರೋಕ್ಷತ್ಯೇಭ್ಯ ಏವೈನಲ್ಲೋಕೇಭ್ಯಃ ಪ್ರೋಕ್ಷತಿ ಕ್ರೂರಮಿವ

ವಾ ಏತತ್ಕರೋತಿ ಯತ್ಖನತ್ಯಪೋ ನಿನಯತಿ ಶಾಂತ್ಯೈ

---

ಏಭ್ಯಃ । ಏವ । ಏನತ್ । ಲೋಕೇಭ್ಯಃ । ಪ್ರೇತಿ । ಉಕ್ಷತಿ । ಕ್ರೂರಮ್ । ಇವ । ವೈ ।

ಏತತ್ । ಕರೋತಿ । ಯತ್ । ಖನತಿ । ಅಪಃ । ನೀತಿ । ನಯತಿ । ಶಾಂತ್ಯೈ ।

---

| | |
|---|---|
| ಏನತ್ ಏಭ್ಯಃ ಏವ ಲೋಕೇಭ್ಯಃ ಪ್ರೋಕ್ಷತಿ | ಈ ಮೂರು ಲೋಕಗಳಿಗಾಗಿಯೇ ಈ ಬರ್ಹಿಸ್ಸನ್ನು ಅಧ್ವರ್ಯುವು ಪ್ರೋಕ್ಷಿಸುತ್ತಾನೆ. |

**ಪ್ರೋಕ್ಷಣೀಶೇಷಜಲವನ್ನು ಹಾಕುವ ವಿಧಿ-ಅರ್ಥವಾದ**

| | |
|---|---|
| ಯತ್ ಖನತಿ | ಖನನ (ಅಗೆಯುವುದು) ಎಂಬುದು ಯಾವುದುಂಟೋ ಅದು |
| ಏತತ್ ಕ್ರೂರಮ್ ಇವ ಕರೋತಿ ವೈ | ಇದು ಹಿಂಸೆಯನ್ನು ಮಾಡುವ ಕಾರ್ಯವನ್ನು ಮಾಡಿದಂತಾಗುತ್ತದೆ. |
| ಅಪಃ ನಿನಯತಿ ಶಾಂತ್ಯೈ | [ಆ ದೋಷನಿವೃತ್ತಿಯಾಗಿ ಶಾಂತಿಗಾಗಿ] ಪ್ರೋಕ್ಷಣೀಶೇಷಜಲವನ್ನು ವೇದಿಯಲ್ಲಿ ಹಾಕಬೇಕು. **[ವಿಧಿ]** |

---

ಆಗುತ್ತದೆಯೆಂದು ಪ್ರೋಕ್ಷಣೆಯ ಪ್ರಶಂಸೆ.ಬರ್ಹಿಸ್ಸಿನ ಆಸಾದನೆಯ ಅನಂತರ ಪ್ರೋಕ್ಷಣೆಯು ವಿಹಿತವಾಗಿದೆ. ಆಸಾದನೆಗೆ ಬೇರೆ ಮಂತ್ರವಿಲ್ಲ.

ವೇದಿಗಾಗಿ ನೆಲವನ್ನು ಅಗೆಯುವುದರಿಂದ ಕೆಲವು ಸೂಕ್ಷ್ಮಜೀವಿಗಳಿಗೆ ಹಿಂಸೆಯಾಗುತ್ತದೆ. ಹಳ್ಳ-ತಿಟ್ಟುಗಳಾಗುವುದೂ ಭೂಮಿಗೆ ಹಿಂಸೆಯನ್ನು ಮಾಡಿದಂತೆ. ಈ ದೋಷನಿವೃತ್ತಿಯಾಗಿ ಶಾಂತಿಯಾಗಲು ವೇದಿಯ ದಕ್ಷಿಣಶ್ರೋಣಿಯಿಂದ ಉತ್ತರಶ್ರೋಣಿಯವರೆಗೂ ಪ್ರೋಕ್ಷಣೀಶೇಷಜಲವನ್ನು ಹಾಕುವುದರಿಂದ ಈ ದೋಷದ ಪರಿಹಾರವಾಗುತ್ತದೆ. ಜಲವನ್ನು ಹಾಕಲು **'ಸ್ವಧಾ ಪಿತೃಭ್ಯಃ'** ಎಂದು ಹೇಳಬೇಕು ಇದರಿಂದ ಮಾಸರೂಪವಾದ ಬರ್ಹಿಷದಪಿತೃಗಳಿಗೆ ತೃಪ್ತಿಯಾಗಲಿ ಎಂದರ್ಥ.

ಪುರಸ್ತಾತ್ಪ್ರಸ್ತರಂ ಗೃಹ್ಣಾತಿ ಮುಖ್ಯಮೇವೈನಂ
ಕರೋತೀಯಂತಂ ಗೃಹ್ಣಾತಿ ಪ್ರಜಾಪತಿನಾ ಯಜ್ಞಮುಖೇನ
ಸಂಮಿತಂ ಬರ್ಹಿಃ ಸ್ತೃಣಾತಿ ಪ್ರಜಾ ವೈ ಬರ್ಹಿಃ

---

ಪುರಸ್ತಾತ್ । ಪ್ರಸ್ತರಮಿತಿ ಪ್ರ-ಸ್ತರಮ್ । ಗೃಹ್ಣಾತಿ । ಮುಖ್ಯಮ್ । ಏವ । ಏನಮ್।
ಕರೋತಿ । ಇಯಂತಮ್ । ಗೃಹ್ಣಾತಿ । ಪ್ರಜಾಪತಿನೇತಿ ಪ್ರಜಾ-ಪತಿನಾ ।
ಯಜ್ಞಮುಖೇನೇತಿ ಯಜ್ಞ-ಮುಖೇನ । ಸಂಮಿತಮಿತಿ ಸಂ-ಮಿತಮ್ । ಬರ್ಹಿಃ ।
ಸ್ತೃಣಾತಿ । ಪ್ರಜಾ ಇತಿ ಪ್ರ-ಜಾಃ । ವೈ । ಬರ್ಹಿಃ ।

---

**ಪ್ರಸ್ತರಗ್ರಹಣವಿಧಿ; ಪ್ರಶಂಸೆ; ಅರ್ಥವಾದ**

| | |
|---|---|
| ಪುರಸ್ತಾತ್ ಪ್ರಸ್ತರಮ್ ಗೃಹ್ಣಾತಿ | ವೇದಿಯ ಪೂರ್ವಭಾಗದಲ್ಲಿ [ಬ್ರಹ್ಮನಾಗಲೀ, ಯಜಮಾನನಾಗಲೀ] ಪ್ರಸ್ತರ*ವನ್ನು ಹಿಡಿದಿರಬೇಕು. **[ವಿಧಿ]** |
| ಏನಮ್ ಮುಖ್ಯಮ್ ಏವ ಕರೋತಿ | ಇದರಿಂದ ಈ ಯಜಮಾನನನ್ನು ಮುಖ್ಯನನ್ನಾಗಿ ಮಾಡಿದಂತಾಗುತ್ತದೆ. |
| ಇಯಂತಮ್ ಗೃಹ್ಣಾತಿ | ಯಜಮಾನನ ಮುಖದಷ್ಟು ಉನ್ನತವಾಗಿ ಹಿಡಿಯಬೇಕು. |
| ಪ್ರಜಾಪತಿನಾ ಯಜ್ಞಮುಖೇನ ಸಂಮಿತಮ್ | ಯಜ್ಞಕರ್ತನಾದ ಯಜಮಾನನು ಪ್ರಜಾಪಾಲಕನಾದ ಪ್ರಜಾಪತಿಯಾಗಿದ್ದಾನೆ. |

**ಬರ್ಹಿಸ್ಸಿನ ಸ್ತರಣವಿಧಿ; ಪ್ರಶಂಸೆ**

| | |
|---|---|
| ಬರ್ಹಿಃ ಸ್ತೃಣಾತಿ | ವೇದಿಯಲ್ಲಿ ಬರ್ಹಿಸ್ಸನ್ನು ಹರಡಬೇಕು **[ವಿಧಿ]** |
| ಪ್ರಜಾಃ ವೈ ಬರ್ಹಿಃ | ಪ್ರಜೆಗಳು ಬರ್ಹಿಸ್ಸಿನ ರೂಪದಂತಿದ್ದಾರೆ. |

---

*** ಮೊದಲು ಕತ್ತರಿಸಿದ ಮುಷ್ಟಿಪ್ರಮಾಣದ ದರ್ಭೆ.**

ಪೃಥಿವೀ ವೇದಿಃ ಪ್ರಜಾ ಏವ ಪೃಥಿವ್ಯಾಂ ಪ್ರತಿಷ್ಠಾಪಯತ್ಯನತಿ ದೃಶ್ಞಗ್ಗ್ಂ ಸ್ತೃಣಾತಿ ಪ್ರಜಯೈವೈನಂ ಪಶುಭಿರನತಿದೃಶ್ಞಂ ಕರೋ ತ್ಯುತ್ತರಂ[ಕರೋತಿ(೨)ಉತ್ತರಂ..]ಬರ್ಹಿಷಃ ಪ್ರಸ್ತರಗ್ಂ ಸಾದಯತಿ

---

ಪೃಥಿವೀ । ವೇದಿಃ । ಪ್ರಜಾ ಇತಿ ಪ್ರ-ಜಾಃ । ಏವ । ಪೃಥಿವ್ಯಾಮ್ । ಪ್ರತೀತಿ । ಸ್ಥಾಪಯತಿ । ಅನತಿದೃಶ್ಞಮಿತ್ಯನತಿ-ದೃಶ್ಞಮ್ । ಸ್ತೃಣಾತಿ । ಪ್ರಜಯೇತಿ ಪ್ರ-ಜಯಾ । ಏವ । ಏನಮ್ । ಪಶುಭಿರಿತಿ ಪಶು-ಭಿಃ । ಅನತಿದೃಶ್ಞಮಿತ್ಯನತಿ-ದೃಶ್ಞಮ್ । ಕರೋತಿ । ಉತ್ತರಮಿತ್ಯುತ್-ತರಮ್ । (೨) । ಬರ್ಹಿಷಃ । ಪ್ರಸ್ತರಮಿತಿ ಪ್ರ-ಸ್ತರಮ್ । ಸಾದಯತಿ ।

---

| | |
|---|---|
| ಪೃಥಿವೀ ವೇದಿಃ | ಭೂಮಿಯು ವೇದಿಸ್ವರೂಪವಾಗಿದ್ದಾಳೆ. |
| ಪೃಥಿವ್ಯಾಮ್ ಪ್ರಜಾಃ<br>ಪ್ರತಿಷ್ಠಾಪಯತಿ ಏವ | ಈ ಸ್ತರಣದಿಂದ ಅಧ್ವರ್ಯುವು ಪೃಥಿವಿಯಲ್ಲಿ ಪ್ರಜೆಗಳನ್ನು ನೆಲೆಗೊಳಿಸುತ್ತಾನೆ. |

**ಅವಿರಲವಾಗಿ ಬರ್ಹಿಃಸ್ತರಣವಿಧಿ; ಪ್ರಶಂಸೆ**

| | |
|---|---|
| ಅನತಿದೃಶ್ಞಮ್ ಸ್ತೃಣಾತಿ | ನೆಲವು ಕಾಣದಂತೆ ದಟ್ಟವಾಗಿ ಬರ್ಹಿಸ್ಸನ್ನು ಹರಡಬೇಕು. [ವಿಧಿ] |
| ಏನಮ್ ಪ್ರಜಯಾ ಪಶುಭಿಃ<br>ಅನತಿದೃಶ್ಞಮ್ ಕರೋತಿ | ಯಜಮಾನನು ಪ್ರಜೆಯಿಂದಲೂ ಪಶುಗಳಿಂದಲೂ ತುಂಬಿದವನಾಗಿ ಕಾಣಿಸದವನಾಗುತ್ತಾನೆ. |

**ಪ್ರಸ್ತರಸಾದನವಿಧಿ; ಪ್ರಶಂಸೆ**

| | |
|---|---|
| ಬರ್ಹಿಷಃ ಉತ್ತರಮ್<br>ಪ್ರಸ್ತರಮ್ ಸಾದಯತಿ | ಹರಡಿದ ಬರ್ಹಿಸ್ಸಿನ ಮೇಲುಗಡೆಯಲ್ಲಿ ಪ್ರಸ್ತರವನ್ನು ಹರಡಬೇಕು [ವಿಧಿ] |

ಪ್ರಜಾ ವೈ ಬರ್‌ಹಿರ್ಯಜಮಾನಃ ಪ್ರಸ್ತರೋ ಯಜಮಾನ ಮೇವಾಯಜಮಾನಾದುತ್ತರಂ ಕರೋತಿ ತಸ್ಮಾದ್ಯಜಮಾನೋಽಯಜಮಾನಾದುತ್ತರೋಽಂತರ್ದಧಾತಿ

---

ಪ್ರಜಾ ಇತಿ ಪ್ರ-ಜಾಃ । ವೈ । ಬರ್‌ಹಿಃ । ಯಜಮಾನಃ । ಪ್ರಸ್ತರ ಇತಿ ಪ್ರ-ಸ್ತರಃ । ಯಜಮಾನಮ್ । ಏವ । ಅಯಜಮಾನಾತ್ । ಉತ್ತರಮಿತ್ಯುತ್-ತರಮ್ । ಕರೋತಿ। ತಸ್ಮಾತ್ । ಯಜಮಾನಃ । ಅಯಜಮಾನಾತ್ । ಉತ್ತರ ಇತ್ಯುತ್-ತರಃ । ಅಂತಃ । ದಧಾತಿ ।

---

| | |
|---|---|
| ಪ್ರಜಾಃ ವೈ ಬರ್‌ಹಿಃ | ಪ್ರಜೆಗಳು ಕೆಳಗಡೆ ಇರುವ ಬರ್ಹಿಸ್ಸಿನಂತೆ. |
| ಯಜಮಾನಃ ಪ್ರಸ್ತರಃ | ಮೇಲಿನ ಪ್ರಸ್ತರವು ಯಜಮಾನನಂತೆ. |
| ಯಜಮಾನಮ್ ಏವ ಅಯಜಮಾನಾತ್ ಉತ್ತರಮ್ ಕರೋತಿ | [ಹೀಗೆ ಅಧ್ವರ್ಯುವು ಸಾದನ ಮಾಡುವುದರಿಂದ] ಯಜಮಾನನನ್ನೇ ಯಜಮಾನನಲ್ಲದ ಬೇರೆಯವನಿಗಿಂತ ಶ್ರೇಷ್ಠನನ್ನಾಗಿ ಮಾಡುತ್ತಾನೆ. |
| ತಸ್ಮಾತ್ ಅಯಜಮಾನಾತ್ ಯಜಮಾನಃ ಉತ್ತರಃ | ಆದುದರಿಂದ ಲೋಕದಲ್ಲಿ ಯಾಗವನ್ನು ಅನುಷ್ಠಿಸುವವನು ಬೇರೆಯವರಿಗಿಂತ ಶ್ರೇಷ್ಠನಾಗಿರುತ್ತಾನೆ. |

**ಬರ್ಹಿಸ್ಸು-ಪ್ರಸ್ತರಗಳ ನಡುವೆ ದರ್ಭದ್ವಯನಿಕ್ಷೇಪ-ಪ್ರಶಂಸೆ**

| | |
|---|---|
| ಅಂತರ್ದಧಾತಿ | [**'ವಿಶೋ ಯಂತ್ರೇ ಸ್ಥಃ'**]ಎಂಬ ಮಂತ್ರದಿಂದ ಬರ್ಹಿಸ್ಸು-ಪ್ರಸ್ತರಗಳ] ನಡುವೆ ಎರಡು ದರ್ಭಗಳನ್ನು ಅಡ್ಡಲಾಗಿ ಇಡಬೇಕು |

---

ವೇದಿಯಲ್ಲಿ ಬರ್ಹಿಃಸ್ತರಣದಿಂದ ಪೃಥಿವಿಯಲ್ಲಿ ಪ್ರಜೆಗಳನ್ನು ನೆಲೆಗೊಳಿಸುತ್ತಾನೆ. ಈ ರೀತಿಯ ರೂಪಕಗಳು ಹಲವೆಡೆ ಬರುತ್ತವೆ. ಇದು ಪ್ರಶಂಸೆಗಾಗಿ ತಿಳಿಸುವ ರೀತಿ.

ವ್ಯಾವೃತ್ತ್ಯಾ ಅನಕ್ತಿ ಹವಿಷ್ಕೃತಮೇವೈನಗ್‍ಂ ಸುವರ್ಗಂ ಲೋಕಂ ಗಮಯತಿ ತ್ರೇಧಾಽನಕ್ತಿ ತ್ರಯ ಇಮೇ ಲೋಕಾ

---

ವ್ಯಾವೃತ್ತ್ಯಾ ಇತಿ ವಿ-ಆವೃತ್ತ್ಯೈ । ಅನಕ್ತಿ । ಹವಿಷ್ಕೃತಮಿತಿ ಹವಿಃ-ಕೃತಮ್ । ಏವ । ಏನಮ್ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಗಮಯತಿ । ತ್ರೇಧಾ । ಅನಕ್ತಿ । ತ್ರಯಃ । ಇಮೇ । ಲೋಕಾಃ ।

---

ವ್ಯಾವೃತ್ತ್ಯೈ — [ಇದು] ಬೇರ್ಪಡಿಸಲು ಸಾಧನವಾಗುತ್ತದೆ.

**ಪ್ರಸ್ತರಪ್ರಹರಣಕಾಲದಲ್ಲಿ ಆಜ್ಯದಿಂದ ಅಂಜನವಿಧಿ; ಪ್ರಶಂಸೆ**

ಅನಕ್ತಿ — [ಪ್ರಸ್ತರವನ್ನು] ಅದ್ದಿ ಆಜ್ಯಸಿಕ್ತವಾಗುವಂತೆ ಮಾಡಬೇಕು.

ಹವಿಷ್ಕೃತಮ್ ಏನಮ್ ಸುವರ್ಗಮ್ ಲೋಕಮ್ ಗಮಯತಿ ಏವ — ಈ ಅಂಜನದಿಂದ ಸ್ವತಃ ಹವಿಸ್ಸಲ್ಲದ ಪ್ರಸ್ತರವನ್ನು ಹವಿಸ್ಸನ್ನಾಗಿ ಮಾಡಿ ಸ್ವರ್ಗವನ್ನು ಹೊಂದುವಂತೆ ಮಾಡುತ್ತಾನೆ.

**ಅಂಜನದಲ್ಲಿ ತ್ರಿತ್ವವಿಧಿ; ಪ್ರಶಂಸೆ**

ತ್ರೇಧಾ ಅನಕ್ತಿ — ಮೂರು ಬಾರಿ ಪ್ರಸ್ತರಾಂಜನವನ್ನು ಮಾಡಬೇಕು. **[ವಿಧಿ]**

ಇಮೇ ಲೋಕಾಃ ತ್ರಯಃ — ಭೂಮಿ-ಅಂತರಿಕ್ಷ-ಸ್ವರ್ಗಗಳೆಂದು ಈ ಲೋಕಗಳು ಮೂರಾಗಿವೆ.

---

ದಟ್ಟವಾಗಿ ಬರ್ಹಿಸ್ಸನ್ನು ಹರಡುವುದರಿಂದ ಯಜಮಾನನಿಗೆ ಪ್ರಜಾ-ಪಶುಸಮೃದ್ಧಿಯುಂಟಾಗುತ್ತದೆ. ಇದು ಸ್ತರಣವಿಧಿಯ ಪ್ರಶಂಸೆ.

ಬರ್ಹಿಸ್ಸು ಕೆಳಗಡೆ, ಪ್ರಸ್ತರವು ಮೇಲುಗಡೆ ಇರುವುದನ್ನು ಯಜಮಾನ ಮತ್ತು ಪ್ರಜೆಗಳಿಗೆ ಹೋಲಿಸಿ ಪ್ರಸ್ತರಸಾದನವಿಧಿಯನ್ನು ಸ್ತುತಿಸಲಾಗಿದೆ.

ಏಭ್ಯ ಏವೈನಂ ಲೋಕೇಭ್ಯೋಽನಕ್ತಿ ನ ಪ್ರತಿಶೃಣಾತಿ ಯತ್ಪ್ರತಿ ಶೃಣೀಯಾದನೂರ್ಧ್ವಂಭಾವುಕಂ ಯಜಮಾನಸ್ಯ ಸ್ಯಾದುಪರೀವ ಪ್ರಹರ [..ಪ್ರಹರತಿ(೩)ಉಪರೀವ ಹಿ..]

---

ಏಭ್ಯಃ । ಏವ ಏನಮ್ । ಲೋಕೇಭ್ಯಃ । ಅನಕ್ತಿ । ನ । ಪ್ರತೀತಿ । ಶೃಣಾತಿ । ಯತ್। ಪ್ರತಿಶೃಣೀಯಾದಿತಿ ಪ್ರತಿ-ಶೃಣೀಯಾತ್ । ಅನೂರ್ಧ್ವಂಭಾವುಕಮಿತ್ಯನೂರ್ಧ್ವಂ-ಭಾವುಕಮ್ । ಯಜಮಾನಸ್ಯ । ಸ್ಯಾತ್ । ಉಪರಿ । ಇವ । ಪ್ರೇತಿ । ಹರತಿ । (೩) ।

---

| | |
|---|---|
| ಏನಮ್ ಏಭ್ಯಃ ಏವ ಲೋಕೇಭ್ಯಃ ಅನಕ್ತಿ | ಈ ಲೋಕಗಳ ಪ್ರಾಪ್ತಿಗಾಗಿ ಮೂರು ಬಾರಿ ಪ್ರಸ್ತರಾಂಜನವನ್ನು ಮಾಡಿದಂತಾಗುತ್ತದೆ. |

**ಪ್ರಸ್ತರಪ್ರಹರಣದ ವಿಷಯದಲ್ಲಿ ಕೆಲವು ವಿಧಿ-ನಿಷೇಧಗಳು; ಅವುಗಳ ಪ್ರಶಂಸೆ.**

| | |
|---|---|
| ನ ಪ್ರತಿಶೃಣಾತಿ | ಕೆಂಡಗಳ ಮೇಲೆ ಎಳೆದು ಹಾಕುತ್ತಾ ಪ್ರಸ್ತರವನ್ನು ಅಗ್ನಿಯಲ್ಲಿ ಪ್ರಹರಣ ಮಾಡಬಾರದು. |
| ಯತ್ ಪ್ರತಿಶೃಣೀಯಾತ್ | ಹೀಗೆ ಎಳೆಯುತ್ತಾ ಪ್ರಹರಣವನ್ನು ಮಾಡುವುದು ಯಾವುದೋ [ಅದರಿಂದ] |
| ಯಜಮಾನಸ್ಯ ಅನೂರ್ಧ್ವಂ ಭಾವುಕಮ್ ಸ್ಯಾತ್ | ಯಜಮಾನನು ಸ್ವರ್ಗಕ್ಕೆ ಹೋಗಲು (ಮೇಲಕ್ಕೆ ಹೋಗಲು) ಸಾಧನವಾಗುವುದಿಲ್ಲ. |
| ಉಪರಿ ಇವ ಪ್ರಹರತಿ | ಪ್ರಸ್ತರವನ್ನು ಮೇಲೆ ಇರುವಂತೆಯೇ ಅಗ್ನಿಯಲ್ಲಿ ಹಾಕಬೇಕು. |

---

ಅಧ್ವರ್ಯುವು **'ಅಕ್ತಗ್ಂ ರಿಹಾಣಾಃ'** ಎಂಬ ಮಂತ್ರದಿಂದ ಜುಹೂವಿನಲ್ಲಿ ಪ್ರಸ್ತರದ ಅಗ್ರವನ್ನೂ, **'ಪ್ರಜಾಂ ಯೋನಿಮ್'** ಎಂಬ ಮಂತ್ರದಿಂದ ಉಪಭೃತ್ತಿನಲ್ಲಿ ಪ್ರಸ್ತರದ ಮಧ್ಯಭಾಗವನ್ನೂ, **'ಆಪ್ಯಾಯಂತಾಮಾಪಃ'** ಎಂಬ ಮಂತ್ರದಿಂದ ಧ್ರುವಾಪಾತ್ರೆಯಲ್ಲಿ

ತ್ಯುಪರೀವ ಹಿ ಸುವರ್ಗೋ ಲೋಕೋ ನಿಯಚ್ಛತಿ

ವೃಷ್ಟಿಮೇವಾಸ್ಮೈ ನಿಯಚ್ಛತಿ ನಾತ್ಯಗ್ರಂ ಪ್ರಹರೇದ್ಯದತ್ಯಗ್ರಂ

ಪ್ರಹರೇದತ್ಯಾಸಾರಿಣ್ಯಧ್ವರ್ಯೋ-

---

ಉಪರಿ । ಇವ । ಹಿ । ಸುವರ್ಗ ಇತಿ ಸುವಃ-ಗಃ । ಲೋಕಃ । ನೀತಿ । ಯಚ್ಛತಿ । ವೃಷ್ಟಿಮ್ । ಏವ । ಅಸ್ಮೈ । ನೀತಿ । ಯಚ್ಛತಿ । ನ । ಅತ್ಯಗ್ರಮಿತ್ಯತಿ-ಅಗ್ರಮ್ । ಪ್ರೇತಿ । ಹರೇತ್ । ಯತ್ । ಅತ್ಯಗ್ರಮಿತ್ಯತಿ-ಅಗ್ರಮ್ । ಪ್ರಹರೇದಿತಿ ಪ್ರ-ಹರೇತ್ । ಅತ್ಯಾಸಾರಿಣೀತ್ಯತಿ-ಆಸಾರಿಣೀ । ಅಧ್ವರ್ಯೋಃ ।

---

| | |
|---|---|
| ಉಪರಿ ಇವ ಹಿ ಸುವರ್ಗಃ | ಸ್ವರ್ಗಲೋಕವು ಮೇಲಿರುವಂತೆಯೇ |
| ಲೋಕಃ | ತಾನೆ ಇದೆ! |
| ನಿಯಚ್ಛತಿ | ಕೈಗಳನ್ನು ಅಧೋಮುಖವಾಗಿ ಇಟ್ಟುಕೊಳ್ಳಬೇಕು. |
| ಅಸ್ಮೈ ವೃಷ್ಟಿಮ್ ಏವ | ಇದರಿದ ಕೆಳಗೆ [ಭೂಮಿಯಲ್ಲಿ] ಈ ಯಜಮಾನ |
| ನಿಯಚ್ಛತಿ | ನಿಗಾಗಿ ಮಳೆಯನ್ನು ಸುರಿಸಿದಂತಾಗುತ್ತದೆ. |

**ಅಗ್ನಿಗಿಂತ ಪ್ರಸ್ತರವು ಮುಂದೆ ಹೋಗಬಾರದೆಂಬ ನಿಷೇಧ; ಆದರ ಅರ್ಥವಾದ**

| | |
|---|---|
| ನ ಅತ್ಯಗ್ರಂ ಪ್ರಹರೇತ್ | ಪ್ರಸ್ತರದ ಅಗ್ರಭಾಗವು ಅಗ್ನಿಯನ್ನು ಮೀರಿ ಮುಂದೆ ಹೋಗುವಂತೆ ಪ್ರಸ್ತರಪ್ರಹರಣವನ್ನು ಮಾಡಬಾರದು. |
| ಯತ್ ಅತ್ಯಗ್ರಂ ಪ್ರಹರೇತ್ | ಅಗ್ನಿಯನ್ನು ಮೀರಿದ ಪ್ರಸ್ತರಾಗ್ರಪ್ರಹರಣವೆಂಬುದು |
| ಅತ್ಯಾಸಾರಿಣೀ | ಅತಿವೃಷ್ಟಿಗೆ ಕಾರಣವಾಗಿ |
| ಅಧ್ವರ್ಯೋಃ **[ಅತ್ಯಾಸಾರಿಣೀ]** | ಅಧ್ವರ್ಯುವಿನ ಅತಿಸಾರರೋಗಕ್ಕೆ ಕಾರಣವಾಗಿ |

---

ಪ್ರಸ್ತರವನ್ನು ಅದ್ದಿ ಆಜ್ಯಸಿಕ್ತವಾಗುವಂತೆ ಮಾಡುತ್ತಾನೆ.

ಪ್ರಸ್ತರಪ್ರಹರಣವು ಕೊನೆಯಲ್ಲಿ ಅನುಷ್ಠಿಸಬೇಕಾದ ಕರ್ಮ. ಪ್ರಸ್ತರಪ್ರಸಂಗವು

ನಾಶುಕಾ ಸ್ಯಾನ್ನ ಪುರಸ್ತಾತ್ಪ್ರತ್ಯಸ್ಯೇದ್ಯತ್ಪುರಸ್ತಾತ್ಪ್ರತ್ಯಸ್ಯೇ

ತ್ಸುವರ್ಗಾಲ್ಲೋಕಾದ್ಯಜಮಾನಂ ಪ್ರತಿನುದೇ-

---

ನಾಶುಕಾ । ಸ್ಯಾತ್ । ನ । ಪುರಸ್ತಾತ್ । ಪ್ರತೀತಿ । ಅಸ್ಯೇತ್ । ಯತ್ । ಪುರಸ್ತಾತ್ । ಪ್ರತ್ಯಸ್ಯೇದಿತಿ ಪ್ರತಿ-ಅಸ್ಯೇತ್ । ಸುವರ್ಗಾದಿತಿ ಸುವಃ-ಗಾತ್ । ಲೋಕಾತ್ । ಯಜಮಾನಮ್ । ಪ್ರತೀತಿ । ನುದೇತ್ ।

---

**[ಅಧ್ವರ್ಯೋಃ]** ನಾಶುಕಾ ಸ್ಯಾತ್ — [ಅಧ್ವರ್ಯುವಿನ] ನಾಶಕ್ಕೆ ಕಾರಣವಾಗುತ್ತದೆ.*

**ಪ್ರತ್ಯಗಗ್ರಪ್ರಹರಣ ನಿಷೇಧ; ಪ್ರಾಗಗ್ರಪ್ರಹರಣವಿಧಿ; ಅರ್ಥವಾದ**

ನ ಪುರಸ್ತಾತ್ ಪ್ರತ್ಯಸ್ಯೇತ್ — ಪೂರ್ವಕ್ಕೆ ಮೂಲವೂ ಪಶ್ಚಿಮಕ್ಕೆ ಅಗ್ರವೂ ಇರುವಂತೆ ಪ್ರಸ್ತರವನ್ನು ಅಗ್ನಿಯಲ್ಲಿ ಹಾಕಬಾರದು.

ಯತ್ ಪುರಸ್ತಾತ್ ಪ್ರತ್ಯಸ್ಯೇತ್ — ಪಶ್ಚಿಮಾಗ್ರವಾಗಿ ಪ್ರಸ್ತರವನ್ನು ಅಗ್ನಿಯಲ್ಲಿ ಹಾಕುವುದೆಂಬುದು ಯಾವುದುಂಟೋ ಅದು

ಸುವರ್ಗಾತ್ ಲೋಕಾತ್ ಯಜಮಾನಮ್ ಪ್ರತಿ ನುದೇತ್ — ಸ್ವರ್ಗಲೋಕದಿಂದ ಯಜಮಾನನನ್ನು ಅಧ್ವರ್ಯುವು ದೂರ ಮಾಡಿದಂತೆ ಆಗುತ್ತದೆ.

---

ಇರುವುದರಿಂದ ಇಲ್ಲಿಯೇ ಹೇಳಲಾಗಿದೆ. ಇದು ಪ್ರಹರಣದ ಪ್ರಶಂಸೆಯಾಗಿದೆ.

ಪ್ರಸ್ತರಾಂಜನವನ್ನು ಮೂರು ಬಾರಿ ಮಾಡಬೇಕು.ಇದು ಸಂಖ್ಯಾವಿಧಿ ಮತ್ತು ಅದರ ಪ್ರಶಂಸೆಯಾಗಿದೆ.

ಪ್ರಸ್ತರಪ್ರಹರಣವನ್ನು ಮಾಡುವಾಗ ಪ್ರಸ್ತರವನ್ನು ಕೆಂಡದ ಮೇಲೆ ಎಳೆಯುತ್ತಾ ಹಾಕಬಾರದು. ಹೀಗೆ ಮಾಡಿದರೆ ಯಜಮಾನನಿಗೆ ಸ್ವರ್ಗಪ್ರಾಪ್ತಿಗೆ ಪ್ರತಿಬಂಧಕವಾಗುತ್ತದೆ. ಪ್ರಸ್ತರವನ್ನು ಮೇಲೆ ಇರುವಂತೆಯೇ ಕೈಯಲ್ಲಿ ಹಿಡಿದು ಅಗ್ನಿಯಲ್ಲಿ ಹಾಕಬೇಕು.ಸ್ವರ್ಗವು ಮೇಲೆ ತಾನೇ

---

* ಸಾಯಣಭಾಷ್ಯದಲ್ಲಿ ಅಧಿಕವೃಷ್ಟಿಯಿದ ಆಗುವ ಸಸ್ಯನಾಶವೇ ಅಧ್ವರ್ಯುನಾಶವೆಂಬ ವಿವರಣೆಯಿದೆ. ಅಥವಾ ಅತಿಸಾರರೋಗದಿಂದ ಅಧ್ವರ್ಯುನಾಶವೆಂಬುದಾಗಿಯೂ ವಿವರಣೆಯು ಇದೆ. ಇದರಲ್ಲಿ ಎರಡನೆಯ ವಿವರಣೆಯು ಸಹಜವಾಗಿ ತೋರುತ್ತದೆ.

ತ್ಪ್ರಾಂಚಂ ಪ್ರಹರತಿ ಯಜಮಾನಮೇವ ಸುವರ್ಗಂ ಲೋಕಂ ಗಮಯತಿ ನ ವಿಷ್ವಂಚಂ ವಿಯುಯಾದ್ಯದ್ವಿಷ್ವಂಚಂ ವಿಯುಯಾಥ್ಸ್ತ್ರ್ಯಸ್ಯ[..ಯುಯಾತ್(ಳ)ಸ್ತ್ರ್ಯಸ್ಯ..]ಜಾಯೇತೋ

---

ಪ್ರಾಂಚಮ್ । ಪ್ರೇತಿ । ಹರತಿ । ಯಜಮಾನಮ್ । ಏವ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಗಮಯತಿ । ನ । ವಿಷ್ವಂಚಮ್ । ವೀತಿ । ಯುಯಾತ್ । ಯತ್। ವಿಷ್ವಂಚಮ್ । ವಿಯುಯಾದಿತಿ ವಿ-ಯುಯಾತ್ ।(ಳ)। ಸ್ತ್ರೀ । ಅಸ್ಯ । ಜಾಯೇತ ।

---

| | |
|---|---|
| ಪ್ರಾಂಚಮ್ ಪ್ರಹರತಿ | ಪ್ರಸ್ತರವನ್ನು ಅಗ್ನಿಯಲ್ಲಿ ಪೂರ್ವಾಗ್ರವಾಗಿ ಹಾಕಬೇಕು. |
| ಯಜಮಾನಮ್ ಏವ ಸುವರ್ಗಮ್ ಲೋಕಮ್ ಗಮಯತಿ | ಇದರಿಂದ ಯಜಮಾನನನ್ನೇ ಸ್ವರ್ಗಲೋಕಕ್ಕೆ ಹೋಗುವಂತೆ ಮಾಡುತ್ತಾನೆ. |

**ದರ್ಭಾಗ್ರಗಳ ಏಕೀಕರಣವಿಧಿ; ಅರ್ಥವಾದ**

| | |
|---|---|
| ನ ವಿಷ್ವಂಚಮ್ ವಿಯುಯಾತ್ | [ಆಗ್ನೀಧ್ರನು ] ಪ್ರಸ್ತರದ ದರ್ಭಾಗ್ರಗಳು ಎಲ್ಲೆಡೆ ಹರಡಿರುವಂತೆ ಮಾಡಬಾರದು. |
| ಯತ್ ವಿಷ್ವಂಚಮ್ ವಿಯುಯಾತ್ | ಹಾಗೆ ಹರಡಿರುವಂತೆ ಮಾಡುವುದು ಯಾವುದುಂಟೋ |
| ಅಸ್ಯ ಸ್ತ್ರೀ ಜಾಯೇತ | [ಅದರಿಂದ] ಈ ಯಜಮಾನನಿಗೆ ಹೆಣ್ಣುಮಗುವಾಗುತ್ತದೆ/**ಹರಡಿರುವಂತೆ ಮಾಡುವುದರಿಂದ ಸ್ತ್ರೀತ್ವದ ಅಭಿವ್ಯಕ್ತಿಯು ಆಗುತ್ತದೆ.** |

---

ಇದೆ! ಕೈಗಳನ್ನು ಅಧೋಮುಖವನ್ನಾಗಿ ಮಾಡಿಕೊಂಡು ಪರಿಧಿ ಪ್ರಹರಣವನ್ನು ಮಾಡಬೇಕು. ಇದರಿಂದ ಯಜಮಾನನಿಗೋಸ್ಕರ ಮಳೆಯನ್ನು ಸುರಿಸಿದವ ನಾಗುತ್ತಾನೆ. ಇದು ನಿಷೇಧದ ಅರ್ಥವಾದ. ವಿಧಿಗಳ ಪ್ರಶಂಸೆ.

ಪ್ರಸ್ತರವನ್ನು ಅಗ್ನಿಯಲ್ಲಿ ಪ್ರಹರಣ ಮಾಡುವಾಗ ಅದರ ಅಗ್ರಭಾಗವು ಅಗ್ನಿಯನ್ನು ಮೀರಬಾರದು. ಹಾಗೆ ಮಾಡಿದರೆ ಅಧ್ವರ್ಯುವಿನ ವಿನಾಶಕ್ಕೆ ಕಾರಣವಾಗುತ್ತದೆ.

ರ್ಧ್ವಮುದ್ಯೌತ್ಯೂರ್ಧ್ವಮಿವ ಹಿ ಪುಗ್ಂಸಃ ಪುಮಾನೇವಾಸ್ಯ ಜಾಯತೇ ಯಥ್ಸ್ಫ್ಯೇನ ವೋಪವೇಷೇಣ ವಾ ಯೋಯುಪ್ಯೇತ

---

ಊರ್ಧ್ವಮ್ । ಉದಿತಿ । ಯೌತಿ । ಊರ್ಧ್ವಮ್ । ಇವ । ಹಿ । ಪುಗ್ಂಸಃ । ಪುಮಾನ್ । ಏವ । ಅಸ್ಯ । ಜಾಯತೇ । ಯತ್ । ಸ್ಫ್ಯೇನ । ವಾ । ಉಪವೇಷೇಣೇತ್ಯುಪ-ವೇಷೇಣ । ವಾ । ಯೋಯುಪ್ಯೇತ ।

---

| | |
|---|---|
| ಊರ್ಧ್ವಮ್ ಉದ್ಯೌತಿ | ಊರ್ಧ್ವಮುಖವಾಗಿ ದಂಡಾಕಾರವಾಗಿ ಒಟ್ಟಾಗಿರುವಂತೆ ಮಾಡಬೇಕು. |
| ಪುಗ್ಂಸಃ ಊರ್ಧ್ವಮ್ ಇವ ಹಿ | ಪುರುಷವ್ಯಂಜನವು ಊರ್ಧ್ವಮುಖವಾಗಿರುತ್ತದೆಯಷ್ಟೆ. |
| ಅಸ್ಯ ಪುಮಾನ್ ಏವ ಜಾಯತೇ | ಇದರಿಂದ ಯಜಮಾನನಿಗೆ ಗಂಡುಮಗುವೇ ಹುಟ್ಟುತ್ತದೆ. |

**ಆಗ್ನೀಧ್ರನು ಕೈಯಿಂದಲೇ ಪ್ರಸ್ತರಾಗ್ರಗಳನ್ನು ಒಗ್ಗೂಡಿಸಬೇಕೆಂಬ ವಿಧಿ; ಪ್ರಶಂಸೆ**

| | |
|---|---|
| ಯತ್ ಸ್ಫ್ಯೇನ ವಾ | ಒಂದು ವೇಳೆ ಆಗ್ನೀಧ್ರನು ಸ್ಫ್ಯದಿಂದಾಗಲೀ |
| ಉಪವೇಷೇಣ ವಾ | ಕತ್ತರಿಸಿ ಬಿಟ್ಟಿರುವ ಪರ್ಣಶಾಖೆಯಿಂದಾಗಲೀ |
| ಯೋಯುಪ್ಯೇತ | ಪ್ರಸ್ತರಾಗ್ರಗಳನ್ನು ಒಟ್ಟು ಗೂಡಿಸಿದರೆ/ಚೆನ್ನಾಗಿ ಜ್ವಲಿಸುವಂತೆ ಎತ್ತಿಹಿಡಿದರೆ |

---

ಅಗ್ನಿಯಲ್ಲಿ ಪ್ರಸ್ತರಪ್ರಹರಣವನ್ನು ಮಾಡುವಾಗ ಪೂರ್ವಕ್ಕೆ ಮೂಲವೂ, ಪಶ್ಚಿಮಕ್ಕೆ ಅಗ್ರವೂ ಬರುವಂತೆ ಪ್ರಹರಣವನ್ನು ಮಾಡಬಾರದು, ಪ್ರಸ್ತರಪ್ರಹರಣವನ್ನು ಹೇಗೆ ಮಾಡಬೇಕೆಂದು ತಿಳಿಸುವುದಕ್ಕಾಗಿ ಈ ಬ್ರಾಹ್ಮಣಭಾಗ. ಅದರ ಅರ್ಥವಾದವೂ ಇದೆ.

ಪ್ರಸ್ತರದ ದರ್ಭಾಗ್ರಗಳನ್ನು ಒಟ್ಟುಕೂಡಿಸುವುದು ಆಗ್ನೀಧ್ರನ ಕಾರ್ಯ. ಅವನು ಪ್ರಸ್ತರದ ಅಗ್ರಗಳು ಮೇಲ್ಮುಖವಾಗಿ ಇರುವಂತೆ ಒಟ್ಟುಗೂಡಿಸಬೇಕು. ಈ ವಿಧಿಯ ಪ್ರಶಂಸೆಯು ಈ ಭಾಗದಲ್ಲಿ ಇದೆ.

ಸ್ತೃತಿರೇವಾಸ್ಯ ಸಾ ಹಸ್ತೇನ ಯೋಯುಪ್ಯತೇ ಯಜಮಾನಸ್ಯ ಗೋಪೀಥಾಯ ಬ್ರಹ್ಮವಾದಿನೋ ವದಂತಿ ಕಿಂ ಯಜ್ಞಸ್ಯ ಯಜಮಾನ ಇತಿ ಪ್ರಸ್ತರ ಇತಿ ತಸ್ಯ ಕ್ವ ಸುವರ್ಗೋ ಲೋಕ

---

ಸ್ತೃತಿಃ । ಏವ । ಅಸ್ಯ । ಸಾ । ಹಸ್ತೇನ । ಯೋಯುಪ್ಯತೇ । ಯಜಮಾನಸ್ಯ । ಗೋಪೀಥಾಯ। ಬ್ರಹ್ಮವಾದಿನ ಇತಿ ಬ್ರಹ್ಮ–ವಾದಿನಃ । ವದಂತಿ । ಕಿಮ್ । ಯಜ್ಞಸ್ಯ । ಯಜಮಾನಃ । ಇತಿ। ಪ್ರಸ್ತರ ಇತಿ ಪ್ರ–ಸ್ತರಃ । ಇತಿ । ತಸ್ಯ । ಕ್ವ । ಸುವರ್ಗ ಇತಿ ಸುವಃ–ಗಃ । ಲೋಕಃ ।

---

| | |
|---|---|
| ಅಸ್ಯ ಸಾ ಸ್ತೃತಿಃ ಏವ | ಅದು ಈ ಯಜಮಾನನಿಗೆ ಹಿಂಸೆಗೆ ಕಾರಣವಾಗುತ್ತದೆ. |
| ಹಸ್ತೇನ ಯೋಯುಪ್ಯತೇ | ಆಗ್ನೀಧ್ರನ ಕೈಯಿಂದಲೇ ಪ್ರಸ್ತರಾಗ್ರಗಳನ್ನು ಒಟ್ಟುಗೂಡಿಸಬೇಕು. |
| ಯಜಮಾನಸ್ಯ ಗೋಪೀಥಾಯ | ಇದು ಯಜಮಾನನ ರಕ್ಷಣೆಗೆ ಕಾರಣವಾಗುತ್ತದೆ. |

**ಪ್ರಹರಣಾಧಾರವಾಗಿ ಆಹವನೀಯವಿಧಿ; ಪ್ರಶಂಸೆ**

| | |
|---|---|
| ಬ್ರಹ್ಮವಾದಿನಃ | ವೇದಜ್ಞರು [ಪರಸ್ಪರವಾಗಿ] |
| ಯಜ್ಞಸ್ಯ ಕಿಮ್ ಯಜಮಾನಃ ಇತಿ ವದಂತಿ | ಯಜ್ಞಾಂಗಗಳಲ್ಲಿ ಯಾವುದು ಯಜಮಾನನಂತೆ ಮುಖ್ಯವಾದುದು? ಎಂದು ಹೇಳಿಕೊಳ್ಳುತ್ತಾರೆ. |
| ಪ್ರಸ್ತರಃ ಇತಿ | [ಅದಕ್ಕೆ] ಪ್ರಸ್ತರವು [ಯಜಮಾನನಂತೆ ಮುಖ್ಯವಾದುದೆಂದು ಉತ್ತರಿಸಬೇಕು.] |
| ತಸ್ಯ ಸುವರ್ಗಃ ಲೋಕಃ ಕ್ವ ಇತಿ | ಆ ಪ್ರಸ್ತರರೂಪಯಜಮಾನನಿಗೆ ಸ್ವರ್ಗಲೋಕವು ಎಲ್ಲಿದೆ? ಎಂದು [ಕೇಳುವ ಪ್ರಶ್ನೆಗೆ] |

---

ಆಗ್ನೀಧ್ರನು ಸ್ಫ್ಯದಿಂದಾಗಲೀ, ಉಪವೇಷದಿಂದಾಗಲೀ ಪ್ರಸ್ತರಾಗ್ರಗಳನ್ನು ಒಟ್ಟುಗೂಡಿಸಬಾರದು.ಹೀಗೆ ಒಟ್ಟುಗೂಡಿಸಿದರೆ ಆದು ಯಜಮಾನನ ಹಿಂಸೆಗೆ ಕಾರಣವಾಗುತ್ತದೆ. ಆದುದರಿಂದ ಕೈಯಿಂದಲೇ ಒಟ್ಟುಗೂಡಿಸಬೇಕು. ಆ ವಿಧಿಯೂ ಅದರ ಅರ್ಥವಾದವೂ ಇಲ್ಲಿದೆ.

ಇತ್ಯಾಹವನೀಯ ಇತಿ ಬ್ರೂಯಾದ್ಯತ್ಪ್ರಸ್ತರಮಾಹವನೀಯೇ

ಪ್ರಹರತಿ ಯಜಮಾನಮೇವ[..ಮೇವ(೫)ಸುವರ್ಗಂ..]ಸುವರ್ಗಂ

ಲೋಕಂ ಗಮಯತಿ ವಿ ವಾ ಏತದ್ಯಜಮಾನೋ ಲಿಶತೇ

ಯತ್ಪ್ರಸ್ತರಂ ಯೋಯುಪ್ಯಂತೇ

---

ಇತಿ । ಆಹವನೀಯ ಇತ್ಯಾ-ಹವನೀಯಃ । ಇತಿ । ಬ್ರೂಯಾತ್ । ಯತ್ । ಪ್ರಸ್ತರಮಿತಿ ಪ್ರ-ಸ್ತರಮ್ । ಆಹವನೀಯ ಇತ್ಯಾ-ಹವನೀಯೇ । ಪ್ರಹರತೀತಿ ಪ್ರ-ಹರತಿ । ಯಜಮಾನಮ್ । ಏವ ।(೫)। ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಗಮಯತಿ। ವೀತಿ । ವೈ । ಏತತ್ । ಯಜಮಾನಃ । ಲಿಶತೇ । ಯತ್ । ಪ್ರಸ್ತರಮಿತಿ ಪ್ರ-ಸ್ತರಮ್। ಯೋಯುಪ್ಯಂತೇ ।

---

| | |
|---|---|
| ಆಹವನೀಯಃ ಇತಿ ಬ್ರೂಯಾತ್ | ಆಹವನೀಯಾಗ್ನಿಯೇ ಪ್ರಸ್ತರರೂಪಯಜಮಾನನಿಗೆ ಸ್ವರ್ಗಲೋಕ ಎಂದು ಉತ್ತರಿಸಬೇಕು. |
| ಯತ್ ಪ್ರಸ್ತರಮ್ ಆಹವನೀಯೇ ಪ್ರಹರತಿ | ಪ್ರಸ್ತರರೂಪಯಜಮಾನನನ್ನು ಸ್ವರ್ಗರೂಪ ಆಹವನೀಯದಲ್ಲಿ ಹಾಕುವುದು ಯಾವುದುಂಟೋ [ಆದರಿಂದ] |
| ಯಜಮಾನಮ್ ಏವ ಸುವರ್ಗಮ್ ಲೋಕಮ್ ಗಮಯತಿ | ಯಜಮಾನನನ್ನು ಅಧ್ವರ್ಯುವು ಸ್ವರ್ಗಕ್ಕೆ ಹೋಗುವಂತೆ ಮಾಡುತ್ತಾನೆ. |

**ಬರ್ಹಿರನುಪ್ರಹರಣವಿಧಿ; ಅರ್ಥವಾದ**

| | |
|---|---|
| ಯತ್ ಪ್ರಸ್ತರಮ್ ಯೋಯುಪ್ಯಂತೇ ಏತತ್ ಯಜಮಾನಃ ವಿಲಿಶತೇ ವೈ | ಪ್ರಸ್ತರಮೂಲವನ್ನು ಎತ್ತುವುದು ಯಾವುದುಂಟೋ ಇದರಿಂದ ಯಜಮಾನನು ಕೃಶನಾಗುತ್ತಾನೆ/ರೋಗಪೀಡಿತನಾಗುತ್ತಾನೆ. [ಇದರ ನಿವೃತ್ತಿಗಾಗಿ] |

ಬರ್ಹಿರನು ಪ್ರಹರತಿ ಶಾಂತ್ಯಾ ಅನಾರಂಭಣ ಇವ ವಾ

ಏತರ್ಹ್ಯಧ್ವರ್ಯುಸ್ಸ ಈಶ್ವರೋ ವೇಪನೋ

ಭವಿತೋರ್ಧ್ರುವಾಸೀತೀ–

---

ಬರ್ಹಿಃ । ಅನು । ಪ್ರೇತಿ । ಹರತಿ । ಶಾಂತ್ಯೈ । ಅನಾರಂಭಣ ಇತ್ಯನಾ–ರಂಭಣಃ । ಇವ । ವೈ । ಏತರ್ಹಿ । ಅಧ್ವರ್ಯುಃ । ಸಃ । ಈಶ್ವರಃ । ವೇಪನಃ । ಭವಿತೋಃ । ಧ್ರುವಾ । ಅಸಿ । ಇತಿ ।

---

| | |
|---|---|
| ಬರ್ಹಿಃ ಅನು ಪ್ರಹರತಿ ಶಾಂತ್ಯೈ | ದರ್ಭೆಯ ಅನುಪ್ರಹರಣವನ್ನು ಮಾಡುತ್ತಾನೆ. [ಅನುಪ್ರಹರಣವನ್ನು ಮಾಡಬೇಕು] ಇದು ರೋಗ ಶಾಂತಿಯನ್ನುಂಟುಮಾಡುತ್ತದೆ. |

## ಭೂಸ್ಪರ್ಶನ ವಿಧಿ; ಅರ್ಥವಾದ

| | |
|---|---|
| ಏತರ್ಹಿ ಅಧ್ವರ್ಯುಃ ಅನಾರಂಭಣಃ ಇವ ವೈ | [ಬರ್ಹಿರನುಪ್ರಹರಣದಿಂದ] ಈ ಆಧ್ವರ್ಯುವು ಯಜಮಾನರೂಪ ಆಶ್ರಯರಹಿತನಂತಾಗುತ್ತಾನೆ. |
| ಸಃ ವೇಪನಃ ಭವಿತೋಃ ಈಶ್ವರಃ | ಆ ಆಧ್ವರ್ಯುವು ಭಯಪೀಡಿತನಾಗಿ ನಡುಗುವಂತಾಗುತ್ತಾನೆ/ನಡುಗುವಂತಾಗಲು ತೊಡಗುತ್ತಾನೆ. |
| **'ಧ್ರುವಾ ಅಸಿ'** ಇತಿ | ಎಲೈ ಭೂಮಿಯೇ! ನೀನು ಸ್ಥಿರವಾಗಿದ್ದೀಯೆ ಎಂಬ [ಮಂತ್ರದಿಂದ] |

---

ಋತ್ವಿಜರು ಈ ರೀತಿ ಅನುಷ್ಠಿಸಬೇಕೆಂದು ಶ್ರುತಿಯು ಹೇಳುತ್ತದೆಯಾದರೂ ಋತ್ವಿಜರು ಅನುಷ್ಠಿಸುವ ಕಾರ್ಯಗಳ ಫಲವು ಯಜಮಾನನಿಗೇ ಸೇರುತ್ತದೆಯೆಂದು ತಿಳಿಯಬೇಕು.

ಪ್ರಹರಣಕ್ಕೆ ಆಧಾರವಾಗಿ ಆಹವನೀಯವು ಇರಬೇಕೆಂಬ ವಿಧಿಯನ್ನು ಆಹವನೀಯವು ಪ್ರಸ್ತರಕ್ಕೆ ಸ್ವರ್ಗರೂಪವಾಗಿ ಇದೆಯೆಂಬ ಅರ್ಥವಾದದ ಮೂಲಕ ತಿಳಿಸಲಾಗಿದೆ. ಇಂತಹ ರೂಪಕಗಳು ವಿಧಿಯ ಪ್ರಶಂಸೆಗಾಗಿ ಹಲವು ಕಡೆಗಳಲ್ಲಿ ಶ್ರುತಿಯಲ್ಲಿ ಇವೆ. **'ಆದಿತ್ಯೋ ಯೂಪಃ'** **'ಯಜಮಾನಃ ಪಶುಃ'** ಇವೇ ಮೊದಲಾದ ವಾಕ್ಯಗಳನ್ನು ಗಮನಿಸಬಹುದು.

ಮಾಮಭಿ ಮೃಶತೀಯಂ ವೈ ಧ್ರುವಾಽಸ್ಯಾಮೇವ ಪ್ರತಿತಿಷ್ಠತಿ

ನ ವೇಪನೋ ಭವತ್ಯಗಾ 3 ನಗ್ನೀದಿತ್ಯಾಹ

---

ಇಮಾಮ್ । ಅಭೀತಿ । ಮೃಶತಿ । ಇಯಮ್ । ವೈ । ಧ್ರುವಾ । ಅಸ್ಯಾಮ್ । ಏವ । ಪ್ರತೀತಿ । ತಿಷ್ಠತಿ । ನ । ವೇಪನಃ । ಭವತಿ । ಅಗಾ3ನ್ । ಅಗ್ನೀದಿತ್ಯಗ್ನಿ-ಇತ್ । ಇತಿ । ಆಹ ।

---

| | |
|---|---|
| ಇಮಾಮ್ ಅಭಿಮೃಶತಿ | ಅಧ್ವರ್ಯುವು ಈ ಭೂಮಿಯನ್ನು ಸ್ಪರ್ಶಿಸಬೇಕು. [ವಿಧಿ] |
| ಇಯಮ್ ವೈ ಧ್ರುವಾ | ಈ ಭೂಮಿಯು ಸ್ಥಿರವಾಗಿ ಇರುವಳಷ್ಟೆ. |
| ಅಸ್ಯಾಮ್ ಏವ ಪ್ರತಿತಿಷ್ಠತಿ | ಈ ಭೂಮಿಯಲ್ಲಿಯೇ ಅಧ್ವರ್ಯುವು ಸ್ಥಿರನಾಗಿರುತ್ತಾನೆ. |
| ವೇಪನಃ ನ ಭವತಿ | ಅಧ್ವರ್ಯುವು ಭಯದಿಂದ ನಡುಗುವವನಾಗುವುದಿಲ್ಲ. |

**ಅಧ್ವರ್ಯು-ಆಗ್ನೀಧ್ರರ ಸಂವಾದ; ಶಾಖಾಂತರಮಂತ್ರನಿಷೇಧ; ಮಂತ್ರವಿಧಿ; ಅರ್ಥವಾದ**

| | |
|---|---|
| *ಅಗಾ3ನ್ ಅಗ್ನೀತ್ ಇತಿ ಆಹ | [ಸಂವಾದದಲ್ಲಿ ಅಧ್ವರ್ಯುವು ಆಗ್ನೀಧ್ರನಿಗೆ] 'ಆಗ್ನೀಧ್ರನೇ! [ಯಜಮಾನನು ಸ್ವರ್ಗವನ್ನು] ಹೊಂದಿದನೇ'? ಎಂದು ಪ್ರಶ್ನಿಸುತ್ತಾನೆ. |

---

ಪ್ರಸ್ತರದ ಮೂಲವನ್ನು ಎತ್ತಿದರೆ ಯಜಮಾನನು ರೋಗಪೀಡಿತನಾಗುವನು. ಇದರ ಶಾಂತಿಗಾಗಿ-ಪ್ರಸ್ತರವನ್ನು ಸ್ರುಗಾದಿಗಳಲ್ಲಿ ಅಂಜನ ಮಾಡುವಾಗ ಬೇರೆಯಾಗಿ ತೆಗದಿಟ್ಟಿರುವ ದರ್ಭೆಯನ್ನು ಪ್ರಸ್ತರಪ್ರಹರಣವನ್ನು ಅನುಸರಿಸಿ-ಅಗ್ನಿಯಲ್ಲಿ ಅನುಪ್ರಹರಣ ಮಾಡಬೇಕು. ಹೀಗೆ ಮಾಡುವುದರಿಂದ ರೋಗಶಾಂತಿಯುಂಟಾಗುತ್ತದೆ.

---

*ಪ್ರಶ್ನಾರ್ಥದಲ್ಲಿ ಇಲ್ಲಿ ಪ್ಲುತವು ಬಂದಿದೆ. **[ಪಾ.ಸೂ.8.2.105]**

ಯದ್ಬ್ರೂಯಾದಗನ್ನಗ್ನಿರಿತ್ಯಗ್ನಾವಗ್ನಿಂ ಗಮಯೇನ್ನಿರ್ಯಜಮಾ

ನಗ್ಂ ಸುವರ್ಗಾಲ್ಲೋಕಾದ್ಭಜೇದಗನ್ನಿತ್ಯೇವ ಬ್ರೂಯಾದ್ಯಜಮಾ

ನಮೇವ ಸುವರ್ಗಂ ಲೋಕಂ ಗಮಯತಿ ॥೨೯-5॥

**[ಆಸದ್ಯ ಪ್ರಾನತಿದೃಶ್ಞಂ ಕರೋತಿ ಹರತಿ ವಿಯುಯಾದ್ಯಜಮಾನಮೇವಾಗ್ನಿರಿತಿ**

**ಸಪ್ತದಶ ಚ ॥]**

---

ಯತ್ । ಬ್ರೂಯಾತ್ । ಅಗನ್ನ್ । ಅಗ್ನಿಃ । ಇತಿ । ಅಗ್ನೌ । ಅಗ್ನಿಮ್ । ಗಮಯೇತ್ ।

ನಿರಿತಿ । ಯಜಮಾನಮ್ । ಸುವರ್ಗಾದಿತಿ ಸುವಃ-ಗಾತ್ । ಲೋಕಾತ್ । ಭಜೇತ್ ।

ಅಗನ್ನ್ । ಇತಿ । ಏವ । ಬ್ರೂಯಾತ್ । ಯಜಮಾನಮ್ । ಏವ । ಸುವರ್ಗಮಿತಿ

ಸುವಃ-ಗಮ್ । ಲೋಕಮ್ । ಗ!ಮಯತಿ ॥ ೨೯ ॥

---

| | |
|---|---|
| ಅಗನ್ ಅಗ್ನಿಃ ಇತಿ ಯತ್ ಬ್ರೂಯಾತ್ | [ಆಗ್ನೀಧ್ರನು] **'ಅಗನ್ ಅಗ್ನಿಃ'** ಎಂದು ಶಾಖಾಂತರಮಂತ್ರವನ್ನು ಹೇಳಿದರೆ |
| ಅಗ್ನೌ ಅಗ್ನಿಮ್ ಗಮಯೇತ್ | ಆಹವನೀಯಾಗ್ನಿಯಲ್ಲಿ ಪ್ರಸ್ತರಾಗ್ನಿಯನ್ನು ಹಾಕಿದಂತಾಗುತ್ತದೆ. |
| ಯಜಮಾನಮ್ ಸುವರ್ಗಾತ್ ಲೋಕಾತ್ ನಿಃ ಭಜೇತ್ | ಯಜಮಾನನನ್ನು ಸ್ವರ್ಗಲೋಕದಿಂದ ದೂರ ಮಾಡಿದವನಾಗುತ್ತಾನೆ. |
| **'ಅಗನ್ನ್'** ಇತ್ಯೇವ ಬ್ರೂಯಾತ್ | **'ಅಗನ್'** ಎಂದು ಮಾತ್ರ ಹೇಳಬೇಕು. |
| ಯಜಮಾನಮ್ ಏವ ಸುವರ್ಗಮ್ ಲೋಕಮ್ ಗಮಯತಿ | ಇದರಿಂದ ಆಗ್ನೀಧ್ರನು ಯಜಮಾನನನ್ನೇ ಸ್ವರ್ಗಲೋಕವನ್ನು ಹೊಂದುವಂತೆ ಮಾಡುತ್ತಾನೆ. |

---

ಇಲ್ಲಿ ಪ್ರಸ್ತರವನ್ನು ಯಜಮಾನನೆಂದು ಭಾವಿಸಿ ಪ್ರಸ್ತರಪ್ರಹರಣದಿಂದ ಯಜಮಾನನೇ

ಸ್ವರ್ಗಕ್ಕೆ ಹೋದಂತೆ ತಿಳಿದು ಅಧ್ವರ್ಯುವು ಆಶ್ರಯರಹಿತನಾದಂತೆಯೂ ಭೂಸ್ಪರ್ಶದಿಂದ ಆಶ್ರಯವನ್ನು ಪಡೆದು, ಮಂತ್ರಪೂರ್ವಕವಾದ ಸ್ಪರ್ಶಬಲದಿಂದ ಸ್ಥಿರನಾಗುವನೆಂದೂ, ನಡುಕವನ್ನು ಹೊಂದಬೇಕಾಗಿಲ್ಲವೆಂದೂ ತಿಳಿಸುತ್ತಾ, ಭೂಸ್ಪರ್ಶನವಿಧಿ ಮತ್ತು ಪ್ರಶಂಸೆಗಳು ಇವೆ.

ಅಧ್ವರ್ಯುವಿಗೂ ಆಗ್ನೀಧ್ರನಿಗೂ ನಡೆಯದ ಸಂವಾದವು ಇಲ್ಲಿ ಹೇಳಲ್ಪಟ್ಟಿದೆ. ಅಧ್ವರ್ಯುವು ಆಗ್ನೀಧ್ರನನ್ನು ಕುರಿತು **'ಅಗಾ3ನ್ ಅಗ್ನೀತ್'** ಎಂದು ಪ್ರಶ್ನಿಸುತ್ತಾನೆ. ಆಗ್ನೀಧ್ರನು ಶಾಖಾಂತರ ಮಂತ್ರವಾದ **'ಅಗನ್ ಅಗ್ನಿಃ'** ಎಂದು ಹೇಳಿದರೆ, ಆಹವನೀಯಾಗ್ನಿಯಲ್ಲಿ ಪ್ರಸ್ತರಾಗ್ನಿಯನ್ನು ಹಾಕಿದಂತೆ ಆಗುತ್ತದೆ. ಅಲ್ಲದೆ ಯಜಮಾನನನ್ನು ಸ್ವರ್ಗಲೋಕದಿಂದ ದೂರ ಮಾಡಿದಂತಾಗುತ್ತದೆ. ಹೀಗಾಗಿ ಪ್ರಸ್ತರರೂಪನಾದ ಯಜಮಾನನು ಸ್ವರ್ಗವನ್ನು ಪಡೆದಿರುತ್ತಾನೆ ಎಂಬ ಅರ್ಥವನ್ನು ಕೊಡುವ **'ಅಗನ್'** ಎಂಬ ಮಂತ್ರವನ್ನೇ ಹೇಳಬೇಕು. ಇದರಿಂದ ಆಗ್ನೀಧ್ರನು ಯಜಮಾನನನ್ನೇ ಸ್ವರ್ಗಲೋಕವನ್ನು ಹೊಂದುವಂತೆ ಮಾಡುತ್ತಾನೆ. ಹೀಗಾಗಿ ಈ ಬ್ರಾಹ್ಮಣಭಾಗದಲ್ಲಿ ವಿಧಿ-ಶಾಖಾಂತರಮಂತ್ರನಿಷೇಧ-ಮಂತ್ರವಿಧಿ ಮತ್ತು ಅದರ ಪ್ರಶಂಸೆಗಳಿವೆ.

* * *

## ॥ ಷಷ್ಠೋಽನುವಾಕಃ ॥

ಅಗ್ನೇಸ್ತ್ರಯೋ ಜ್ಯಾಯಾಗ್ಂಸೋ ಭ್ರಾತರ ಆಸನ್ತೇ
ದೇವೇಭ್ಯೋ ಹವ್ಯಂ ವಹಂತಃ ಪ್ರಾಮೀಯಂತ ಸೋಽಗ್ನಿ-

---

ಅಗ್ನೇಃ । ತ್ರಯಃ । ಜ್ಯಾಯಾಗ್ಂಸಃ । ಭ್ರಾತರಃ । ಆಸನ್ನ್ । ತೇ । ದೇವೇಭ್ಯಃ ।
ಹವ್ಯಮ್ । ವಹಂತಃ । ಪ್ರೇತಿ । ಅಮೀಯಂತ । ಸಃ । ಅಗ್ನಿಃ ।

---

ಪ್ರಸ್ತರಗಳಿಗೆ ಸಂಬಂಧಪಟ್ಟ ವಿಷಯಗಳು ಐದನೆಯ ಅನುವಾಕದಲ್ಲಿ ಹೇಳಲ್ಪಟ್ಟವು. ಈ ಆರನೆಯ ಅನುವಾಕದಲ್ಲಿ ಪರಿಧಿನಿಧಾನ, ಉಪಾಂಶುಯಾಜ, ಸ್ವಿಷ್ಟಕೃತ್ತುಗಳು ಹೇಳಲ್ಪಡುತ್ತವೆ. ಮೊದಲು ಪರಿಧಿಗಳಿಗೆ ಸಂಬಂಧಿಸಿದ ಉಪಾಖ್ಯಾನವನ್ನು ಉಪೋದ್ಘಾತ ರೂಪವಾಗಿ ಶ್ರುತಿಯು ತಿಳಿಸುತ್ತಿದೆ.

### ಅಗ್ನಿಯ ಮರೆಸಿಕೊಳ್ಳುವಿಕೆ; ಮೀನಿಗೆ ಬಂದ ಶಾಪ ಇವುಗಳ ಉಪಾಖ್ಯಾನ

| | |
|---|---|
| ಅಗ್ನೇಃ ತ್ರಯಃ ಜ್ಯಾಯಾಗ್ಂಸಃ | ಅಗ್ನಿದೇವನಿಗೆ ಹಿರಿಯರಾದ ಮೂವರು ಸಹೋದ |
| ಭ್ರಾತರಃ ಆಸನ್ | ರರು/ಅಣ್ಣಂದಿರು ಇದ್ದರು. |
| ತೇ ದೇವೇಭ್ಯಃ ಹವ್ಯಮ್ | ಅವರು ದೇವತೆಗಳಿಗಾಗಿ ಹವಿಸ್ಸನ್ನು ಹೊರುತ್ತಾ |
| ವಹಂತಃ ಪ್ರಾಮೀಯಂತ | ಶಕ್ತಿಹೀನರಾಗಿ ಮರಣಾವಸ್ಥೆಯನ್ನು ಹೊಂದಿದರು. |
| ಸಃ ಅಗ್ನಿಃ | ಆ ಅಗ್ನಿಯು |

---

ಪರಿಧಿನಿಧಾನವನ್ನು ಹೇಳುವುದಕ್ಕಾಗಿ, ಪರಿಧಿಗಳಿಂದ ಹೊರಭಾಗದಲ್ಲಿ ಬಿದ್ದ ಹವಿಸ್ಸು ದೇವತೆಗಳಿಗೆ ಸೇರುವುದಿಲ್ಲವೆಂದು ತಿಳಿಸುವುದಕ್ಕಾಗಿ ಈ ಉಪಾಖ್ಯಾನವನ್ನು ಹೇಳಲಾಗಿದೆ.

ರಬಿಭೇದಿತ್ಥಂ ವಾವ ಸ್ಯ ಆರ್ತಿಮಾರಿಷ್ಯತೀತಿ ಸ ನಿಲಾಯತ ಸೋಽಪಃ ಪ್ರಾವಿಶತ್ತಂ ದೇವತಾಃ ಪ್ರೈಷಮೈಚ್ಛನ್ತಂ ಮತ್ಸ್ಯಃ ಪ್ರಾಬ್ರವೀತ್ತ-

---

ಸಃ । ಅಗ್ನಿಃ । ಅಬಿಭೇತ್ । ಇತ್ಥಮ್ । ವಾವ । ಸ್ಯಃ । ಆರ್ತಿಮ್ । ಏತಿ । ಅರಿಷ್ಯತಿ । ಇತಿ। ಸಃ । ನಿಲಾಯತ । ಸಃ । ಅಪಃ । ಪ್ರೇತಿ । ಅವಿಶತ್ । ತಮ್ । ದೇವತಾಃ । ಪ್ರೈಷಮಿತಿ ಪ್ರ-ಐಷಮ್ । ಐಚ್ಛನ್ನ್ । ತಮ್ । ಮತ್ಸ್ಯಃ । ಪ್ರೇತಿ । ಅಬ್ರವೀತ್ । ತಮ್ ।

---

| | |
|---|---|
| ಇತ್ಥಮ್ ವಾವ ಸ್ಯಃ ಆರ್ತಿಮ್ ಆ ಅರಿಷ್ಯತಿ ಇತಿ ಅಬಿಭೇತ್ ಸಃ ನಿಲಾಯತ | ಹೀಗೆಯೇ ಹವಿಸ್ಸನ್ನು ಹೊರುವ ಬೇರೆಯವನೂ ಪೀಡೆಯನ್ನುಹೊಂದುವನೆಂದು ಭಯಪಟ್ಟನು. ಅವನು ತಲೆಮರೆಸಿಕೊಂಡನು. |
| ಸಃ ಅಪಃ ಪ್ರಾವಿಶತ್ | ಆ ಅಗ್ನಿಯು ಮರೆಯಾಗುವುದಕ್ಕಾಗಿ ನೀರನ್ನು ಪ್ರವೇಶಿಸಿದನು. |
| ತಮ್ ದೇವತಾಃ ಪ್ರೈಷಮ್ ಐಚ್ಛನ್ನ್ | ಆಗ ದೇವತೆಗಳು ಅವನನ್ನು ಚೆನ್ನಾಗಿ ಹುಡುಕಲು ಇಚ್ಛಿಸಿದರು. |
| ತಮ್ ಮತ್ಸ್ಯಃ ಪ್ರಾಬ್ರವೀತ್ ತಮ್ | ಆಗ ನೀರಿನಲ್ಲಿರುವ ಮೀನು ದೇವತೆಗಳಿಗೆ ನೀರಿನಲ್ಲಿರುವ ಅಗ್ನಿಯನ್ನು ತಿಳಿಸಿತು. [ಅಗ್ನಿಯು]ಮೀನಿಗೆ |

---

ಇಲ್ಲಿ ಪ್ರಾಮೀಯಂತ=ಸಾವನ್ನಪ್ಪಿದರು ಎಂಬರ್ಥ ತೋರುತ್ತಿದ್ದರೂ 'ಸಾಯುವ ಸ್ಥಿತಿಗೆ ಬಂದರು, ಎಂದು ವಿವರಿಸುವುದು ಸಮಯೋಚಿತವಾಗಿದೆ.

ಮಶಪದ್ಧಿಯಾಧಿಯಾ ತ್ವಾ ವಧ್ಯಾಸುರ್ಯೋ ಮಾ ಪ್ರಾವೋಚ

ಇತಿ ತಸ್ಮಾನ್ಮತ್ಸ್ಯಂ ಧಿಯಾಧಿಯಾ ಘ್ನಂತಿ ಶಪ್ತೋ

[..ಶಪ್ತಃ(೧)ಹಿ ತಮನ್ವ..] ಹಿ ತಮನ್ವವಿಂದನ್ತ

---

ಅಶಪತ್ । ಧಿಯಾಧಿಯೇತಿ ಧಿಯಾ-ಧಿಯಾ । ತ್ವಾ । ವಧ್ಯಾಸುಃ । ಯಃ । ಮಾ । ಪ್ರೇತಿ । ಅವೋಚಃ । ಇತಿ । ತಸ್ಮಾತ್ । ಮತ್ಸ್ಯಮ್ । ಧಿಯಾಧಿಯೇತಿ ಧಿಯಾ-ಧಿಯಾ । ಘ್ನಂತಿ । ಶಪ್ತಃ । (೧) । ಹಿ । ತಮ್ । ಅನ್ವಿತಿ । ಅವಿಂದನ್ನ್ । ತಮ್ ।

---

| | |
|---|---|
| ಯಃ ಮಾ ಪ್ರಾವೋಚಃ | 'ಯಾವ ನೀನು ದೇವತೆಗಳಿಗೆ ನನ್ನನ್ನು ಚೆನ್ನಾಗಿ |
| ತ್ವಾ | ತಿಳಿಸಿಕೊಟ್ಟೆಯೋ ಅಂತಹ ನಿನ್ನನ್ನು |
| ಧಿಯಾಧಿಯಾ ವಧ್ಯಾಸುಃ | ಬುದ್ಧಿಪೂರ್ವಕವಾಗಿ [ಬೆಸ್ತರು] ಬೇಕುಬೇಕಾದಾಗ |
| ಇತಿ ಅಶಪತ್ | ಕೊಲ್ಲಲಿ' ಎಂದು ಶಪಿಸಿದನು. |
| ತಸ್ಮಾತ್ ಶಪ್ತಃ | ಅದುದರಿಂದ ಹೀಗೆ ಶಾಪಗ್ರಸ್ತವಾದುದರಿಂದ |
| ಮತ್ಸ್ಯಮ್ ಧಿಯಾಧಿಯಾ | [ಬೆಸ್ತರು] ಮೀನನ್ನು ಬುದ್ಧಿಪೂರ್ವಕವಾಗಿಯೇ |
| ಘ್ನಂತಿ ಹಿ | ಕೊಲ್ಲುತ್ತಾರೆಯಷ್ಟೆ. |

## ಪರಿಧಿಗಳ ಹೊರಗೆ ಬಿದ್ದ ಭಾಗಗಳ ವಿನಿಯೋಗ; ಉಪಾಖ್ಯಾನ

| | |
|---|---|
| ತಮ್ ಅನ್ವವಿಂದನ್ | ಹೀಗೆ ದೇವತೆಗಳು ಅಗ್ನಿಯನ್ನು ಸಮೀಪಿಸಿದರು. |
| ತಮ್ | ಆ ಅಗ್ನಿಯನ್ನು ಕುರಿತು |

---

ಈ ಉಪಾಖ್ಯಾನವು ಹವಿಸ್ಸನ್ನು ಪರಿಧಿಗಳ ಒಳಗೆ ಬೀಳುವಂತೆ ಹೋಮ ಮಾಡಬೇಕೆಂಬುದನ್ನೂ, ಹೊರಗೆ ಬೀಳಿಸಬಾರದೆಂದೂ ತಿಳಿಸುತ್ತದೆ.ಇದರಿಂದ ಪರಿಧಿಗಳಿಗಿಂತ

ಮಬ್ರುವನ್ನುಪ ನ ಆವರ್ತಸ್ವ ಹವ್ಯಂ ನೋ ವಹೇತಿ
ಸೋಽಬ್ರವೀದ್ವರಂ ವೃಣೈ ಯದೇವ ಗೃಹೀತಸ್ಯಾಹುತಸ್ಯ ಬಹಿಃ
ಪರಿಧಿ ಸ್ಕಂದಾತ್ತನ್ಮೇ ಭ್ರಾತೃಣಾಂ ಭಾಗಧೇಯಮಸದಿತಿ

---

ಅಬ್ರುವನ್ನ್ । ಉಪೇತಿ । ನಃ । ಏತಿ । ವರ್ತಸ್ವ । ಹವ್ಯಮ್ । ನಃ । ವಹ । ಇತಿ ।
ಸಃ । ಅಬ್ರವೀತ್ । ವರಮ್ । ವೃಣೈ । ಯತ್ । ಏವ । ಗೃಹೀತಸ್ಯ । ಆಹುತಸ್ಯ ।
ಬಹಿಃಪರಿಧೀತಿ ಬಹಿಃ-ಪರಿಧಿ । ಸ್ಕಂದಾತ್ । ತತ್ । ಮೇ । ಭ್ರಾತೃಣಾಮ್ ।
ಭಾಗಧೇಯಮಿತಿ ಭಾಗ-ಧೇಯಮ್ । ಅಸತ್ । ಇತಿ ।

---

| | |
|---|---|
| ನಃ ಉಪ ಆವರ್ತಸ್ವ ನಃ ಹವ್ಯಮ್ ವಹ ಇತಿ ಅಬ್ರುವನ್ | 'ನಮ್ಮನ್ನು ಜೊತೆಗೂಡಿ ಇರು. ನಮಗೆ ಹವ್ಯಗಳನ್ನು ತಂದು ಕೊಡು' ಎಂದು ಹೇಳಿದರು. |
| ಸಃ ವರಮ್ ವೃಣೈ [ಇತಿ] ಅಬ್ರವೀತ್ | ಆಗ ಅಗ್ನಿಯು 'ನಾನು ಒಂದು ವರವನ್ನು ಬೇಡುವೆನು. ಅದನ್ನು ಕೊಡಿ' ಎಂದನು. |
| ಯತ್ ಗೃಹೀತಸ್ಯ ಆಹುತಸ್ಯ | 'ಯಾವುದು ಜುಹೂವಿನಲ್ಲಿ ಗ್ರಹಣ ಮಾಡಿ ಹೋಮ ಮಾಡುವುದಕ್ಕೆ ಮೊದಲೇ |
| ಬಹಿಃಪರಿಧಿ ಸ್ಕಂದಾತ್ | ಪರಿಧಿಗಳ ಹೊರಭಾಗದಲ್ಲಿಯೇ ಚೆಲ್ಲಿರುವುದೋ |
| ತತ್ ಮೇ ಭ್ರಾತೃಣಾಮ್ ಭಾಗಧೇಯಮ್ ಅಸತ್ ಇತಿ | ಅದು ನನ್ನ ಸಹೋದರರಿಗೆ ಭಾಗವಾಗಲಿ' [ಎಂದು ವರವನ್ನು ಕೇಳಿದನು.] |

---

ಹೊರಭಾಗದಲ್ಲಿ ಹವಿಸ್ಸು ಬೀಳದಂತೆ ಎಚ್ಚರ ವಹಿಸಬೇಕು. ಹೊರಗೆ ಬಿದ್ದುದನ್ನು ತೆಗೆದು ಅಗ್ನಿಯಲ್ಲಿ ಹಾಕಬಾರದು.

ತಸ್ಮಾದ್ಯದ್ಗೃಹೀತಸ್ಯಾಹುತಸ್ಯ ಬಹಿಃಪರಿಧಿ ಸ್ಕಂದತಿ ತೇಷಾಂ ತದ್ಭಾಗಧೇಯಂ ತಾನೇವ ತೇನ ಪ್ರೀಣಾತಿ ಪರಿಧೀನ್ಪರಿ ದಧಾತಿ ರಕ್ಷಸಾಮಪಹತ್ಯೈ ಸಗ್ಂಸ್ಪರ್ಶಯತಿ [..ಯತಿ(೨)ರಕ್ಷಸಾ..]

---

ತಸ್ಮಾತ್ । ಯತ್ । ಗೃಹೀತಸ್ಯ । ಆಹುತಸ್ಯ । ಬಹಿಃಪರಿಧೀತಿ ಬಹಿಃ-ಪರಿಧಿ । ಸ್ಕಂದತಿ । ತೇಷಾಮ್ । ತತ್ । ಭಾಗಧೇಯಮಿತಿ ಭಾಗ-ಧೇಯಮ್ । ತಾನ್ । ಏವ । ತೇನ । ಪ್ರೀಣಾತಿ । ಪರಿಧೀನಿತಿ ಪರಿ-ಧೀನ್ । ಪರೀತಿ । ದಧಾತಿ । ರಕ್ಷಸಾಮ್ । ಅಪಹತ್ಯಾ ಇತ್ಯಪ-ಹತ್ಯೈ । ಸಮಿತಿ । ಸ್ಪರ್ಶಯತಿ । (೨) ।

---

| | |
|---|---|
| ತಸ್ಮಾತ್ ಯತ್ ಗೃಹೀತಸ್ಯ ಆಹುತಸ್ಯ ಬಹಿಃಪರಿಧಿ ಸ್ಕಂದತಿ | ಆದುದರಿಂದ ಜುಹೂವಿನಲ್ಲಿ ಗ್ರಹಣ ಮಾಡಿ, ಹೋಮ ಮಾಡದೆ ಇರುವ ಹವಿಸ್ಸಿನ ಯಾವ ಭಾಗವು ಪರಿಧಿಯ ಹೊರಗಡೆ ಬಿದ್ದು ಹೋಗುವುದೋ, |
| ತತ್ ತೇಷಾಮ್ ಭಾಗಧೇಯಮ್ | ಅದು ಅಗ್ನಿಯ ಆ ಭ್ರಾತೃಗಳ ಭಾಗವಾಗಿದೆ. |
| ತಾನ್ ಏವ ತೇನ ಪ್ರೀಣಾತಿ | ಯಜಮಾನನು ಆ ಭಾಗದಿಂದ ಆ ಭ್ರಾತೃಗಳನ್ನು ತೃಪ್ತಿಪಡಿಸಿದಂತಾಗುತ್ತದೆ. |

**ಪರಿಧಿನಿಧಾನವಿಧಿ; ಪ್ರಶಂಸೆ**

| | |
|---|---|
| ಪರಿಧೀನ್ ಪರಿದಧಾತಿ | ಮೂರು ಪರಿಧಿಗಳನ್ನು ಅಗ್ನಿಯ ಮೂರು ಕಡೆಗಳಲ್ಲಿ ಇಡಬೇಕು. |
| ರಕ್ಷಸಾಮ್ ಅಪಹತ್ಯೈ | ಇದು ರಕ್ಷೋಗಣಗಳನ್ನು ದೂರ ಮಾಡಿ ನಾಶಪಡಿಸುವುದಕ್ಕೆ ಕಾರಣವಾಗುತ್ತದೆ. |

**ಪರಿಧಿಸ್ಥಾಪನವಿಷಯದಲ್ಲಿ ವಿಶೇಷವಿಧಿಗಳು; ಪ್ರಶಂಸೆ**

| | |
|---|---|
| ಸಮ್ ಸ್ಪರ್ಶಯತಿ | ಮಧ್ಯಮಪರಿಧಿ ಮತ್ತು ದಕ್ಷಿಣೋತ್ತರಪರಿಧಿಗಳು ಪರಸ್ಪರವಾಗಿ ಸ್ಪರ್ಶಿಸುವಂತೆ ಇರಬೇಕು. |

ರಕ್ಷಸಾಮನನ್ವವಚಾರಾಯ ನ ಪುರಸ್ತಾತ್ಪರಿದಧಾತ್ಯಾದಿತ್ಯೋ
ಹ್ಯೇವೋದ್ಯನ್ಪುರಸ್ತಾದ್ರಕ್ಷಾಗ್ಂಸ್ಯಪಹ

---

ರಕ್ಷಸಾಮ್ । ಅನನ್ವವಚಾರಾಯೇತ್ಯನನು-ಅವಚಾರಾಯ । ನ । ಪುರಸ್ತಾತ್ । ಪರೀತಿ । ದಧಾತಿ । ಆದಿತ್ಯಃ । ಹಿ । ಏವ । ಉದ್ಯನ್ನಿತ್ಯುತ್-ಯನ್ । ಪುರಸ್ತಾತ್ । ರಕ್ಷಾಗ್ಂಸಿ । ಅಪಹಂತೀತ್ಯಪ-ಹಂತಿ ।

---

| | |
|---|---|
| ರಕ್ಷಸಾಮ್ ಅನನ್ವವಚಾರಾಯ | ಇದರಿಂದ ರಕ್ಷೋಗಣಗಳು ಅಗ್ನಿಸಮೀಪಕ್ಕೆ ಬಂದು ಯಾಗವಿಘ್ನವನ್ನುಂಟುಮಾಡುವುದಕ್ಕೆ ಅವಕಾಶ ವಿಲ್ಲದಂತಾಗುತ್ತದೆ. |
| ಪುರಸ್ತಾತ್ ನ ಪರಿದಧಾತಿ | ಅಗ್ನಿಯ ಪೂರ್ವಭಾಗದಲ್ಲಿ ಪರಿಧಿಯನ್ನು ಇಡ ಬೇಕಾಗಿಲ್ಲ. |
| ಉದ್ಯನ್ ಆದಿತ್ಯಃ ಏವ ಪುರಸ್ತಾತ್ ರಕ್ಷಾಗ್ಂಸಿ ಅಪಹಂತಿ ಹಿ | [ಏಕೆಂದರೆ] ಸೂರ್ಯನು ಹುಟ್ಟುತ್ತಲೇ ಪೂರ್ವ ದಿಕ್ಕಿನಲ್ಲಿ ರಕ್ಷೋಗಣಗಳನ್ನು ನಾಶಪಡಿಸುವನಷ್ಟೆ. |

---

ಅಗ್ನಿಯ ಮೂರು ಕಡೆಗಳಲ್ಲಿ ಪರಿಧಿಗಳನ್ನು ಇಡಬೇಕು. ಪರಿಧಿಗಳು ಮೂರು. **'ತ್ರೀನ್ ಪರಿಧೀನ್'** [ತೈ.ಬ್ರಾ.3.3.7]ಎಂದೇ ಬ್ರಾಹ್ಮಣದಲ್ಲಿ ಇದೆ.ಸಾಮಾನ್ಯವಾಗಿ ಬಹುವಚನವಿರುವ ಕಡೆಯಲ್ಲಿ ಮೂರು ಎಂದೇ ಇಟ್ಟುಕೊಳ್ಳಬೇಕು.*

---

* ಇದು ಪೂರ್ವಮೀಮಾಂಸಾಶಾಸ್ತ್ರದಲ್ಲಿ **'ಕಪಿಂಜಲಾಧಿಕರಣ ನ್ಯಾಯ'** ಎಂದು ಪ್ರಸಿದ್ಧವಾಗಿದೆ.

**'ಕಪಿಂಜಲಾನ್ ಆಲಭೇತ'** ಎಂದು ಶ್ರುತಿ ಇದೆ. ಕಪಿಂಜಲ ಪಕ್ಷಿಗಳನ್ನು ಆಲಂಭನ ಮಾಡಬೇಕು. ಎಂದು ಅದರ ಅರ್ಥ. ಎಷ್ಟು ಎಂದು ತಿಳಿಸಲು ಸಂಖ್ಯಾವಾಚಕಶಬ್ದವು ಇಲ್ಲಿ ಇಲ್ಲ. ಹೀಗಾಗಿ **'ಕಪಿಂಜಲಾನ್'** ಎಂಬಲ್ಲಿ ಏಕವಚನ, ದ್ವಿವಚನಪ್ರತ್ಯಯಗಳ ನಂತರ ವಿಧಾನ ಮಾಡಿರುವ ಬಹುವಚನಪ್ರತ್ಯಯವು ದ್ವಿತ್ವದ ನಂತರ ಮೊದಲು ಪ್ರಾಪ್ತವಾಗುವ ತ್ರಿತ್ವವನ್ನು ತಿಳಿಸುವುದರಿಂದ, ಪ್ರಾಪ್ತವಾಗುವ ಮೂರು ಎಂಬುದನ್ನು ಬಿಡಲು ಯಾವ ಪ್ರಮಾಣವಾಗಲೀ, ಬೇರೆ ಸಂಖ್ಯಾವಾಚಕವಾಗಲೀ ಇಲ್ಲದಿರುವುದರಿಂದ ಮೂರು ಎಂದೇ ಅರ್ಥ ಮಾಡಬೇಕು. ಇದು ನ್ಯಾಯದ ತಾತ್ಪರ್ಯ.

ನ್ಯೂ ರ್ಧ್ವೇ ಸಮಿಧಾವಾ ದಧಾತ್ಯುಪರಿಷ್ಟಾದೇವ

ರಕ್ಷಾಗ್ಂಸ್ಯಪಹಂತಿ ಯಜುಷಾಽನ್ಯಾಂ ತೂಷ್ಣೀಮನ್ಯಾಂ

ಮಿಥುನತ್ವಾಯ ದ್ವೇ ಆ ದಧಾತಿ ದ್ವಿಪಾದ್ಯಜಮಾನಃ

---

ಊರ್ಧ್ವೇ ಇತಿ । ಸಮಿಧಾವಿತಿ ಸಂ–ಇಧೌ । ಏತಿ । ದಧಾತಿ । ಉಪರಿಷ್ಟಾತ್ । ಏವ । ರಕ್ಷಾಗ್ಂಸಿ । ಅಪೇತಿ । ಹಂತಿ । ಯಜುಷಾ । ಅನ್ಯಾಮ್ । ತೂಷ್ಣೀಮ್ । ಅನ್ಯಾಮ್ । ಮಿಥುನತ್ವಾಯೇತಿ ಮಿಥುನ–ತ್ವಾಯ । ದ್ವೇ ಇತಿ । ಏತಿ । ದಧಾತಿ । ದ್ವಿಪಾದಿತಿ ದ್ವಿ–ಪಾತ್। ಯಜಮಾನಃ ।

---

**ಆಘಾರಸಮಿತ್ತುಗಳ ಆಧಾನವಿಧಿ; ಪ್ರಶಂಸೆ**

| | |
|---|---|
| ಊರ್ಧ್ವೇ ಸಮಿಧೌ ಆದಧಾತಿ | [ಆಗ್ನೇಯದಲ್ಲಿ ಒಂದು, ಈಶಾನ್ಯದಲ್ಲಿ ಒಂದು ಹೀಗೆ] ಊರ್ಧ್ವಾಗ್ರವಾಗಿ ಎರಡು ಸಮಿತ್ತುಗಳನ್ನು ಇಡಬೇಕು. |
| ಉಪರಿಷ್ಟಾತ್ ಏವ ರಕ್ಷಾಗ್ಂಸಿ ಅಪಹಂತಿ | [ಇದರಿಂದ] ಮೇಲ್ಭಾಗದಿಂದ ಬರಬಹುದಾದ ರಾಕ್ಷಸರನ್ನು ದೂರ ಮಾಡಿ ನಾಶಮಾಡುತ್ತಾನೆ. |

**ಆಘಾರಸಮಿದಾಧಾನದಲ್ಲಿ ವಿಶೇಷವಿಧಿ; ಪ್ರಶಂಸೆ**

| | |
|---|---|
| ಯಜುಷಾ ಅನ್ಯಾಮ್ | **'ವೀತಿಹೋತ್ರಂ ತ್ವಾ'** ಎಂಬ ಯಜುರ್ಮಂತ್ರದಿಂದ ಒಂದು ಸಮಿತ್ತನ್ನೂ |
| ತೂಷ್ಣೀಮ್ ಅನ್ಯಾಮ್ | ಮಂತ್ರರಹಿತವಾಗಿ ಇನ್ನೊಂದನ್ನೂ |
| ಮಿಥುನತ್ವಾಯ ದ್ವೇ ಆದಧಾತಿ | [ಹೀಗೆ] ಎರಡು ಸಮಿತ್ತುಗಳನ್ನು ಸ್ತ್ರೀ ಪುರುಷ ಯುಗ್ಮಸಂಪತ್ತಿಗಾಗಿ ಇಡಬೇಕು. |
| ದ್ವಿಪಾತ್ ಯಜಮಾನಃ | ಯಜಮಾನನೂ ದ್ವಿತ್ವಸಂಖ್ಯೆಯುಳ್ಳ ಎರಡು ಪಾದಗಳುಳ್ಳವನಷ್ಟೆ. |

**ಪ್ರತಿಷ್ಠಿತ್ಯೈ ಬ್ರಹ್ಮವಾದಿನೋ ವದಂತಿ ಸ ತ್ವೈ ಯಜೇತ ಯೋ ಯಜ್ಞಸ್ಯಾಽಽರ್ತ್ಯಾ ವಸೀಯಾನ್ಥ್ಸ್ಯಾದಿತಿ ಭೂಪತಯೇ ಸ್ವಾಹಾ**

---

ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ । ಸಃ । ತು । ವೈ । ಯಜೇತ । ಯಃ । ಯಜ್ಞಸ್ಯ । ಆರ್ತ್ಯಾ । ವಸೀಯಾನ್ । ಸ್ಯಾತ್ । ಇತಿ । ಭೂಪತಯ ಇತಿ ಭೂ-ಪತಯೇ । ಸ್ವಾಹಾ ।

---

| | |
|---|---|
| ಪ್ರತಿಷ್ಠಿತ್ಯೈ | [ಹೀಗಾಗಿ ಆಧಾನವು] ಭೂಮಿಯಲ್ಲಿ ಅವನು ಪ್ರತಿಷ್ಠಿತನಾಗಿ ಬಾಳಲು ಕಾರಣವಾಗುತ್ತದೆ. |

## ಸ್ಕನ್ನದೋಷಪ್ರಾಯಶ್ಚಿತ್ತ; ಅರ್ಥವಾದ

| | |
|---|---|
| ಬ್ರಹ್ಮವಾದಿನಃ ಯಃ ಯಜ್ಞಸ್ಯ ಆರ್ತ್ಯಾ ವಸೀಯಾನ್ ಸ್ಯಾತ್ ಸಃ ತು ವೈ ಯಜೇತ ಇತಿ ವದಂತಿ | ವೇದವಿದರು ಯಜ್ಞಕ್ಕೆ ಹವಿಃಸ್ಕಂದನದಿಂದ ಹಾನಿಯಾದರೂ ಯಾವ ಯಜಮಾನನು ಹೆಚ್ಚಾಗಿ ಧನವಂತನೋ/ಯಶೋವಂತನೋ ಅವನೇ ಯಾಗವನ್ನು ಮಾಡಲು ಅರ್ಹನೆಂದು ಮಾತನಾಡಿ ಕೊಳ್ಳುತ್ತಾರೆ. |

ಆಗ ವೇದವಿದನೊಬ್ಬನು ಅವರ ಪ್ರಶ್ನೆಗೆ ಹೀಗೆ ಉತ್ತರಿಸುತ್ತಾನೆ.

✦ **ಭೂಪತಯೇ ಸ್ವಾಹಾ**= ಭೂಪತಿಗೆ ಇದು ಹುತವಾಗಲಿ;

---

ಆಘಾರಸಮಿದಾಧಾನದ ವಿಶೇಷವು ಇಲ್ಲಿ ಹೇಳಲ್ಪಟ್ಟಿದೆ. ವಿಭಿನ್ನ ರೂಪಗಳನ್ನು ಹೇಳುವಾಗ ಸ್ತ್ರೀಪುರುಷಯುಗ್ಮವು ತೋರುತ್ತದೆ. ಇದು ಪ್ರಜಾವೃದ್ಧಿಗೆ ಕಾರಣವಾಗುತ್ತದೆ. 'ದ್ವಿತ್ವ ಸಂಖ್ಯೆಯು ದ್ವಿಪಾದಪುರುಷನ ಪ್ರಕೃಷ್ಟಸ್ಥಿತಿಗೆ ಕಾರಣವಾಗುತ್ತದೆ'. ಎಂದು ಹಲವು ಕಡೆಗಳಲ್ಲಿ ಬರುತ್ತದೆ.

ಇಲ್ಲಿ **'ವೀತಿಹೋತ್ರಮ್'**ಎಂಬ ಮಂತ್ರವು ಗಾಯತ್ರೀಛಂದಸ್ಸಿನಲ್ಲಿದ್ದರೂ ಯಜುರ್ವೇದದಲ್ಲಿ ಇದೆಯೆಂದು **ಯಜುಷಾ** ಎಂದು ಹೇಳಲಾಗಿದೆಯೆಂದು ಮಿಶ್ರರು ತಿಳಿಸಿರುತ್ತಾರೆ.

**ಭುವನಪತಯೇ ಸ್ವಾಹಾ ಭೂತಾನಾಂ [ನಾಮ್(೩)ಪತಯೇ..]**

**ಪತಯೇ ಸ್ವಾಹೇತಿ** ಸ್ಕನ್ನಮನು ಮಂತ್ರಯೇತ ಯಜ್ಞಸ್ಯೈವ

ತದಾರ್ತ್ಯಾ ಯಜಮಾನೋ ವಸೀಯಾನ್ಭವತಿ ಭೂಯಸೀರ್ ಹಿ

ದೇವತಾಃ ಪ್ರೀಣಾತಿ

---

ಭುವನಪತಯ ಇತಿ ಭುವನ-ಪತಯೇ । ಸ್ವಾಹಾ । ಭೂತಾನಾಮ್ ।(೩)। ಪತಯೇ । ಸ್ವಾಹಾ । ಇತಿ । ಸ್ಕನ್ನಮ್ । ಅನ್ವಿತಿ । ಮಂತ್ರಯೇತ । ಯಜ್ಞಸ್ಯ । ಏವ । ತತ್ । ಆರ್ತ್ಯಾ । ಯಜಮಾನಃ । ವಸೀಯಾನ್ । ಭವತಿ । ಭೂಯಸೀಃ । ಹಿ । ದೇವತಾಃ । ಪ್ರೀಣಾತಿ ।

---

**ಭುವನಪತಯೇ ಸ್ವಾಹಾ=**ಭುವನಪತಿಗೆ ಇದು ಹುತವಾಗಲಿ; **ಭೂತಾನಾಂ ಪತಯೇ ಸ್ವಾಹಾ=**ಭೂತಗಳ ಒಡೆಯನಿಗೆ ಇದು ಹುತವಾಗಲಿ.

| | |
|---|---|
| ಇತಿ ಸ್ಕನ್ನಮ್ ಅನು | ಹೀಗೆ ಮೂರು ಮಂತ್ರಗಳಿಂದ ಚೆಲ್ಲಿ ಹೋಗಿರುವ |
| ಮಂತ್ರಯೇತ | ಹವಿಸ್ಸನ್ನು ಅನುಮಂತ್ರಣ ಮಾಡಬೇಕು. |
| ಯಜ್ಞಸ್ಯ ಆರ್ತ್ಯಾ ಏವ ತತ್ | [ಹೀಗೆ ಮಾಡಿದರೆ] ಯಜ್ಞಕ್ಕೆ ಸ್ಕನ್ನದೋಷವುಂಟಾ |
| ಯಜಮಾನಃ ವಸೀಯಾನ್ | ಗಿದ್ದರೂ [ಆ ದೋಷಪರಿಹಾರವಾಗಿ ದೇವತೆಗಳ |
| ಭವತಿ | ಅನುಗ್ರಹದಿಂದ] ಹೆಚ್ಚು ಹಣವಂತನೇ ಆಗುತ್ತಾನೆ. |
| ಭೂಯಸೀಃ ದೇವತಾಃ | [ಏಕೆಂದರೆ ಈ ಅನುಮಂತ್ರಣದಿಂದ] ಹೆಚ್ಚು |
| ಪ್ರೀಣಾತಿ ಹಿ | ದೇವತೆಗಳನ್ನು ಸಂತೋಷಪಡಿಸಿದವನಾಗುತ್ತಾನೆ. |

---

ಹವಿಸ್ಸಿನ ಸ್ಕನ್ನದೋಷಪ್ರಾಯಶ್ಚಿತ್ತವು ಇಲ್ಲಿ ಹೇಳಲ್ಪಟ್ಟಿದೆ. ಭೂಪತಿ ಮುಂತಾದವರು ದೇವತಾವಿಶೇಷಗಳು. ಅಥವಾ ಅಗ್ನಿಯ ಭ್ರಾತೃಗಳು.ಹೀಗೆ ಪ್ರಾಸಂಗಿಕವಾಗಿ ಸ್ಕನ್ನದೋಷ

ಜಾಮಿ ವಾ ಏತದ್ಯಜ್ಞಸ್ಯ ಕ್ರಿಯತೇ ಯದನ್ವಂಚೌ ಪುರೋಡಾಶಾವು

ಪಾಗ್ಂಶುಯಾಜಮಂತರಾ ಯಜತ್ಯಜಾಮಿತ್ವಾಯಾಥೋ ಮಿಥುನತ್ವಾ

---

ಜಾಮಿ । ವೈ । ಏತತ್ । ಯಜ್ಞಸ್ಯ । ಕ್ರಿಯತೇ । ಯತ್ । ಅನ್ವಂಚೌ । ಪುರೋಡಾಶೌ ।

ಉಪಾಗ್ಂಶುಯಾಜಮಿತ್ಯುಪಾಗ್ಂಶು-ಯಾಜಮ್ । ಅಂತರಾ । ಯಜತಿ । ಅಜಾಮಿತ್ವಾಯೇ

ತ್ಯಜಾಮಿ-ತ್ವಾಯ । ಅಥೋ ಇತಿ । ಮಿಥುನತ್ವಾಯೇತಿ ಮಿಥುನ-ತ್ವಾಯ ।

---

**ಉಪಾಂಶುಯಾಜವಿಧಿ; ಅರ್ಥವಾದ**

| | |
|---|---|
| ಯತ್ ಅನ್ವಂಚೌ ಪುರೋಡಾಶೌ | ಅನುಕ್ರಮವಾಗಿ ಆಗ್ನೇಯ,ಅಗ್ನೀಷೋಮೀಯಗಳೆಂಬ ಪುರೋಡಾಶಯಾಗಗಳಿದ್ದರೆ, |
| ಏತತ್ ಯಜ್ಞಸ್ಯ ಜಾಮಿ ಕ್ರಿಯತೇ ವೈ | ಇದು ಯಜ್ಞದಲ್ಲಿ ಆಲಸ್ಯವನ್ನು ಉಂಟುಮಾಡುತ್ತದೆ. |
| ಉಪಾಗ್ಂಶುಯಾಜಮ್ ಅಂತರಾ ಯಜತಿ | ಹೀಗಾಗಿ ಎರಡು ಪುರೋಡಾಶಯಾಗಗಳ ಮಧ್ಯದಲ್ಲಿ ಆಜ್ಯದ್ರವ್ಯದಿಂದ ಉಪಾಂಶುಯಾಜಯಾಗವನ್ನು ಅನುಷ್ಠಿಸಬೇಕು. |
| ಅಜಾಮಿತ್ವಾಯ | ಇದು ಆಲಸ್ಯಪರಿಹಾರಕ್ಕೆ ಕಾರಣವಾಗುತ್ತದೆ. |
| ಅಥೋ ಮಿಥುನತ್ವಾಯ | ಮತ್ತು ಪುರೋಡಾಶ-ಆಜ್ಯಗಳೆಂಬ ಜೋಡಿಗೂ ಸಾಧನವಾಗುತ್ತದೆ. |

---

ಪ್ರಾಯಶ್ಚಿತ್ತವನ್ನು ಹೇಳಲಾಗಿದೆ.ಹೆಚ್ಚಿನ ಸಂಖ್ಯೆಯ ದೇವತೆಗಳಿಗೆ ಹವಿಸ್ಸನ್ನು ಸಮರ್ಪಿಸಿದಂತೆ ಆಗುವುದರಿಂದ ಹೆಚ್ಚಿನ ಫಲವು ಪ್ರಾಪ್ತವಾಗುತ್ತದೆ ಎಂಬುದಾಗಿ ಅದರ ಸ್ತುತಿ.

ಏಕವಿಧವಾದ ಕಾರ್ಯಗಳನ್ನು ಮತ್ತೆ ಮತ್ತೆ ಮಾಡುವುದು ಆಲಸ್ಯಕ್ಕೆ ಕಾರಣವಾಗುತ್ತದೆ. ಆದುದರಿಂದ ಆಗ್ನೇಯ-ಅಗ್ನೀಷೋಮೀಯಪುರೋಡಾಶಯಾಗಗಳ ಮಧ್ಯದಲ್ಲಿ ಉಪಾಂಶುಯಾಜಯಾಗವನ್ನು ಆಜ್ಯದ್ರವ್ಯದಿಂದ ಮಾಡುವುದರಿಂದ ಬೇಸರವು ದೂರವಾಗುತ್ತದೆ. ಇದು ಯುಗ್ಮಕ್ಕೂ ಸಾಧನವಾಗುತ್ತದೆ ಎಂದು ಉಪಾಂಶುಯಾಜಯಾಗದ ಸ್ತುತಿ ಇಲ್ಲಿದೆ.

ಯಾಗ್ನಿರಮುಷ್ಮಿನ್ಲೋಕ ಆಸೀದ್ಯಮೋಸ್ಮಿನ್ತೇ ದೇವಾ ಅಬ್ರುವನ್ನೇ

ತೇಮೌ ವಿ ಪರ್ಯೂಹಾಮೇತ್ಯನ್ನಾದ್ಯೇನ ದೇವಾ ಅಗ್ನಿ[ಅಗ್ನಿಮ್

(ಳ)ಉಪಾ..]ಮುಪಾಮಂತ್ರಯಂತ ರಾಜ್ಯೇನ ಪಿತರೋ ಯಮಂ

---

ಅಗ್ನಿಃ । ಅಮುಷ್ಮಿನ್ನ್ । ಲೋಕೇ । ಆಸೀತ್ । ಯಮಃ । ಅಸ್ಮಿನ್ನ್ । ತೇ । ದೇವಾಃ ।

ಅಬ್ರುವನ್ನ್ । ಏತಿ । ಇತ । ಇಮೌ । ವಿ । ಪರೀತಿ । ಊಹಾಮ । ಇತಿ ।

ಅನ್ನಾದ್ಯೇನೇತ್ಯನ್ನ-ಅದ್ಯೇನ । ದೇವಾಃ । ಅಗ್ನಿಮ್ ।(ಳ)। ಉಪಾಮಂತ್ರಯಂತೇತ್ಯುಪ-

ಅಮಂತ್ರಯಂತ । ರಾಜ್ಯೇನ । ಪಿತರಃ । ಯಮಮ್ ।

---

### ಅಗ್ನಿಸ್ವಿಷ್ಟಕೃದ್ಯಾಗಕ್ಕೆ ಸಂಬಂಧಿಸಿದ ಉಪಾಖ್ಯಾನ

| | |
|---|---|
| ಅಗ್ನಿಃ ಅಮುಷ್ಮಿನ್ ಲೋಕೇ ಆಸೀತ್ | ಒಂದು ಕಾಲದಲ್ಲಿ ಅಗ್ನಿದೇವನು ಸ್ವರ್ಗಲೋಕದಲ್ಲಿ ಇದ್ದನು. |
| ಯಮಃ ಅಸ್ಮಿನ್ **ಲೋಕೇ ಆಸೀತ್** | ಯಮನು ಈ ಭೂಲೋಕದಲ್ಲಿ ಇದ್ದನು. |
| ತೇ ದೇವಾಃ | ಆಗ ದೇವತೆಗಳು |
| ಏತ ಇಮೌ ವಿ ಪರಿ ಊಹಾಮ ಇತಿ ಅಬ್ರುವನ್ | 'ಬನ್ನಿ,ಇವರಿಬ್ಬರನ್ನೂ ಬದಲಾಗುವಂತೆ ಮಾಡೋಣ' ಎಂದೂ ಮಾತನಾಡಿಕೊಂಡರು. |
| ದೇವಾಃ ಅನ್ನಾದ್ಯೇನ ಅಗ್ನಿಮ್ ಉಪಾಮಂತ್ರಯಂತ | ದೇವತೆಗಳು ಅನ್ನಸಮೃದ್ಧಿಯನ್ನು ಕೊಡುತ್ತೇವೆಂದು ಹೇಳಿ ಅಗ್ನಿಯನ್ನು ಒಪ್ಪಿಸಿದರು. |
| ಪಿತರಃ ರಾಜ್ಯೇನ ಯಮಮ್ **ಉಪಾಮಂತ್ರಯಂತ** | ಪಿತೃದೇವತೆಗಳು ಪಿತೃರಾಜ್ಯವನ್ನು ಕೊಡುತ್ತೇವೆಂದು ಹೇಳಿ ಯಮನನ್ನು ಒಪ್ಪಿಸಿದರು. |

---

ಈ ಉಪಾಖ್ಯಾನವು ಸ್ವಿಷ್ಟಕೃದ್ಯಾಗದ ಪೀಠಿಕೆ ಇದ್ದಂತೆ. ಇದು ಪ್ರಶಂಸಾರ್ಥವಾದುದರಿಂದ

ತಸ್ಮಾದಗ್ನಿರ್ದೇವಾನಾಮನ್ನಾದೋ ಯಮಃ ಪಿತೃಣಾಗ್ಂ ರಾಜಾ

ಯ ಏವಂ ವೇದ ಪ್ರ ರಾಜ್ಯಮನ್ನಾದ್ಯಮಾಪ್ನೋತಿ ತಸ್ಮಾ

ಏತದ್ಭಾಗಧೇಯಂ ಪ್ರಾಯಚ್ಛನ್ ಯದಗ್ನಯೇ ಸ್ವಿಷ್ಟಕೃತೇಽವದ್ಯಂತಿ

---

ತಸ್ಮಾತ್ । ಅಗ್ನಿಃ । ದೇವಾನಾಮ್। ಅನ್ನಾದ ಇತ್ಯನ್ನ-ಅದಃ । ಯಮಃ । ಪಿತೃಣಾಮ್ ।

ರಾಜಾ । ಯಃ । ಏವಮ್ । ವೇದ । ಪ್ರೇತಿ । ರಾಜ್ಯಮ್ । ಅನ್ನಾದ್ಯಮಿ ತ್ಯನ್ನ-ಅದ್ಯಮ್ ।

ಆಪ್ನೋತಿ । ತಸ್ಮೈ । ಏತತ್ । ಭಾಗಧೇಯಮಿತಿ ಭಾಗ-ಧೇಯಮ್ । ಪ್ರೇತಿ । ಅಯಚ್ಛನ್ನ್ ।

ಯತ್ । ಅಗ್ನಯೇ । ಸ್ವಿಷ್ಟಕೃತ ಇತಿ ಸ್ವಿಷ್ಟ-ಕೃತೇ । ಅವದ್ಯಂತೀತ್ಯವ-ದ್ಯಂತಿ ।

---

| | |
|---|---|
| ತಸ್ಮಾತ್ ಅಗ್ನಿಃ ದೇವಾನಾಮ್ ಅನ್ನಾದಃ | ಆದುದರಿಂದ ದೇವತೆಗಳಲ್ಲಿ ಅಗ್ನಿಯು ಅನ್ನಭೋಗಿ ಯಾಗಿರುವನು. |
| ಯಮಃ ಪಿತೃಣಾಮ್ ರಾಜಾ | ಯಮನು ಪಿತೃಲೋಕಕ್ಕೆ ಪ್ರಭುವಾಗಿರುತ್ತಾನೆ. |
| ಯಃ ಏವಮ್ ವೇದ | ಯಾವನು ಈ ವಿಷಯವನ್ನು ತಿಳಿದಿರುತ್ತಾನೆಯೋ, [ಅವನು] |
| ರಾಜ್ಯಮ್ ಅನ್ನಾದ್ಯಮ್ ಪ್ರ ಆಪ್ನೋತಿ | ಅನ್ನಸಮೃದ್ಧಿಯನ್ನೂ ರಾಜ್ಯಸಂಪತ್ತನ್ನೂ ಹೊಂದುವನು. |

## ಸ್ವಿಷ್ಟಕೃದ್ಯಾಗವಿಧಿ; ಪ್ರಶಂಸೆ

| | |
|---|---|
| ಯತ್ ಅಗ್ನಯೇ ಸ್ವಿಷ್ಟಕೃತೇ ಅವದ್ಯಂತಿ | ಸ್ವಿಷ್ಟಕೃದಗ್ನಿಗೋಸ್ಕರ ಯಾವ ಹವಿರವದಾನವನ್ನು ಮಾಡುವರೋ/ಸ್ವಿಷ್ಟಕೃದ್ಯಾಗವನ್ನು ಮಾಡುವುದು ಯಾವುದುಂಟೋ |
| ತಸ್ಮೈ ಏತತ್ ಭಾಗಧೇಯಮ್ ಪ್ರಾಯಚ್ಛನ್ | ಇದನ್ನು ದೇವತೆಗಳು ಸ್ವಿಷ್ಟಕೃದಗ್ನಿಗೆ ಭಾಗವನ್ನಾಗಿ ಕೊಟ್ಟರು. |

ಯದಗ್ನಯೇ ಸ್ವಿಷ್ಟಕೃತೇಽವದ್ಯತಿ ಭಾಗಧೇಯೇನೈವ ತದ್ರುದ್ರಗ್ಂ ಸಮರ್ಧಯತಿ ಸಕೃಥ್ಸಕೃದವದ್ಯತಿ ಸಕೃದಿವ ಹಿ ರುದ್ರ ಉತ್ತರಾರ್ಧಾದವದ್ಯತ್ಯೇಷಾ ವೈ ರುದ್ರಸ್ಯ [..ರುದ್ರಸ್ಯ(೫) ] ದಿಕ್ಸ್ವಾಯಾ

---

ಯತ್ । ಅಗ್ನಯೇ । ಸ್ವಿಷ್ಟಕೃತ ಇತಿ ಸ್ವಿಷ್ಟ-ಕೃತೇ । ಅವದ್ಯತೀತ್ಯವ-ದ್ಯತಿ । ಭಾಗಧೇಯೇನೇತಿ ಭಾಗ-ಧೇಯೇನ । ಏವ । ತತ್ । ರುದ್ರಮ್ । ಸಮಿತಿ । ಅರ್ಧಯತಿ । ಸಕೃಥ್ಸಕೃದಿತಿ ಸಕೃತ್-ಸಕೃತ್ । ಅವೇತಿ । ದ್ಯತಿ । ಸಕೃತ್ । ಇವ । ಹಿ । ರುದ್ರಃ । ಉತ್ತರಾರ್ಧಾದಿತ್ಯುತ್ತರ-ಅರ್ಧಾತ್ । ಅವೇತಿ । ದ್ಯತಿ । ಏಷಾ । ವೈ । ರುದ್ರಸ್ಯ । (೫) । ದಿಕ್ ।

---

| | |
|---|---|
| ಯತ್ ಅಗ್ನಯೇ ಸ್ವಿಷ್ಟಕೃತೇ ಅವದ್ಯತಿ | ಸಿಷ್ಟಕೃದಗ್ನಿಗೋಸ್ಕರ ಅವದಾನ ಮಾಡುವುದು ಯಾವುದುಂಟೋ |
| ತತ್ ಭಾಗಧೇಯೇನ ಏವ ರುದ್ರಮ್ ಸಮರ್ಧಯತಿ | ಅದು ತನ್ನ ಭಾಗದಿಂದಲೇ ಅಗ್ನಿರೂಪನಾದ ರುದ್ರನನ್ನು ಸಮೃದ್ಧನನ್ನಾಗಿ ಮಾಡುತ್ತದೆ. |

**ಸ್ವಿಷ್ಟಕೃದ್ಧೋಮದಲ್ಲಿ ದ್ವಿರವದಾನಸ್ಥಾನದಲ್ಲಿ ಸಕೃದವದಾನವಿಧಿ; ಪ್ರಶಂಸೆ**

| | |
|---|---|
| ಸಕೃತ್ ಸಕೃತ್ ಅವದ್ಯತಿ | ಸ್ವಿಷ್ಟಕೃದ್ಧೋಮಕ್ಕಾಗಿ ಹವಿಸ್ಸನ್ನು ಒಂದೊಂದು ಬಾರಿ ಇಡಬೇಕು. |
| ಸಕೃತ್ ಇವ ಹಿ ರುದ್ರಃ | ರುದ್ರನು ಒಬ್ಬನೇ ಆಗಿರುವುದರಿಂದ ಸಕೃದವದಾನವು ಸೂಕ್ತವಾಗಿದೆ. |

**ಉತ್ತರಭಾಗವಿಧಿ; ಪ್ರಶಂಸೆ**

| | |
|---|---|
| ಉತ್ತರಾರ್ಧಾತ್ ಅವದ್ಯತಿ | ಹವಿಸ್ಸಿನ ಉತ್ತರಭಾಗದಿಂದ ಅವದಾನವನ್ನು ಮಾಡಬೇಕು. |
| ಏಷಾ ವೈ ರುದ್ರಸ್ಯ ದಿಕ್ | ಇದು ರುದ್ರನ ದಿಕ್ಕಾಗಿದೆಯಷ್ಟೆ. |

ಮೇವ ದಿಶಿ ರುದ್ರಂ ನಿರವದಯತೇ ದ್ವಿರಭಿ ಘಾರಯತಿ
ಚತುರವತ್ತಸ್ಯಾಪ್ತ್ಯೈ ಪಶವೋ ವೈ ಪೂರ್ವಾ ಆಹುತಯ
ಏಷ ರುದ್ರೋ ಯದಗ್ನಿ-

---

ಸ್ವಾಯಾಮ್ । ಏವ । ದಿಶಿ । ರುದ್ರಮ್ । ನಿರವದಯತ ಇತಿ ನಿಃ-ಅವದಯತೇ । ದ್ವಿಃ। ಅಭೀತಿ । ಘಾರಯತಿ । ಚತುರವತ್ತಸ್ಯೇತಿ ಚತುಃ-ಅವತ್ತಸ್ಯ । ಆಪ್ತ್ಯೈ । ಪಶವಃ । ವೈ। ಪೂರ್ವಾಃ । ಆಹುತಯ ಇತ್ಯಾ-ಹುತಯಃ । ಏಷಃ । ರುದ್ರಃ । ಯತ್ । ಅಗ್ನಿಃ ।

---

| | |
|---|---|
| ಸ್ವಾಯಾಮ್ ಏವ ದಿಶಿ ರುದ್ರಮ್ ನಿರವದಯತೇ | ತನ್ನದಾದ ದಿಕ್ಕಿನಲ್ಲಿಯೇ ರುದ್ರನನ್ನು ಸಂಪೂರ್ಣವಾಗಿ ತೃಪ್ತಿಪಡಿಸಿದಂತಾಗುತ್ತದೆ. |

**ಎರಡು ಬಾರಿ ಅಭಿಘಾರಣವಿಧಿ; ಪ್ರಶಂಸೆ**

| | |
|---|---|
| ದ್ವಿಃ ಅಭಿಘಾರಯತಿ | ಸಿಷ್ಟಕೃದ್ಧವಿಸ್ಸಿಗೆ ಎರಡು ಬಾರಿ ಅಭಿಘಾರ ಮಾಡಬೇಕು. |
| ಚತುರವತ್ತಸ್ಯ ಆಪ್ತ್ಯೈ | [ಇದು] ಚತುರವತ್ತದ ಪ್ರಾಪ್ತಿಗೆ ಸಾಧನವಾಗುತ್ತದೆ. |

**ಪೂರ್ವಾಹುತಿಗಳಿಗೆ ಸೇರದಂತೆ ಹೋಮ ಮಾಡಬೇಕೆಂಬ ವಿಧಿ; ಅದರ ಅರ್ಥವಾದ**

| | |
|---|---|
| ಪೂರ್ವಾಃ ಆಹುತಯಃ ಪಶವಃ ವೈ | ಇಷ್ಟಸಾಧನವಾದುದರಿಂದ ಮೊದಲಿನ ಪುರೋಡಾಶಾದಿಹೋಮಗಳು ಪಶುಗಳಾಗಿವೆಯಷ್ಟೆ. |
| ಯತ್ ಅಗ್ನಿಃ ಏಷಃ ರುದ್ರಃ | ಅಗ್ನಿಯು ಕ್ರೂರನಾದ ರುದ್ರನೇ ಆಗಿರುತ್ತಾನೆ. |

---

ಇಲ್ಲಿ ಕಾಲಾದಿಗಳ ವಿಮರ್ಶೆಯು ಇಲ್ಲ.ಅರ್ಥವಾದಗಳಿಗೆ ಸ್ವಾರ್ಥದಲ್ಲಿ ಪ್ರಾಮಾಣ್ಯವಿಲ್ಲ. ಆದುದರಿಂದ ಸ್ವಿಷ್ಟಕೃದ್ಯಾಗವು ಪ್ರಶಸ್ತವಾಗಿದೆ ಎಂಬ ಪ್ರಶಂಸೆಯ ಅರಿವೇ ಇದರ ಪ್ರಯೋಜನ. ಸ್ವಿಷ್ಟಕೃದ್ಯಾಗದ ಪ್ರಶಂಸೆಯು ಇಲ್ಲಿದೆ. **'ಏಷಾ ವಾ ಅಸ್ಯ ಘೋರಾ ತನೂಃ ಯದ್ರುದ್ರಃ'**

ಯರ್ತ್ಪೂರ್ವಾ ಆಹುತೀರಭಿ ಜುಹುಯಾದ್ರುದ್ರಾಯ ಪಶೂನಪಿ ದಧ್ಯಾದಪಶುರ್ಯಜಮಾನಸ್ಸ್ಯಾದತಿಹಾಯ ಪೂರ್ವಾ ಆಹುತೀರ್ಜುಹೋತಿ ಪಶೂನಾಂ ಗೋಪೀಥಾಯ ||೩೫-6||

[ಶಪ್ತಸ್ಸ್ವರ್ಶಯತಿ ಭೂತಾನಾಮಗ್ನಿಗ್ಂ ರುದ್ರಸ್ಯ ಸಪ್ತತ್ರಿಗ್ಂಶಚ್ಚ ||]

---

ಯತ್ । ಪೂರ್ವಾಃ । ಆಹುತೀರಿತ್ಯಾ-ಹುತೀಃ । ಅಭೀತಿ । ಜುಹುಯಾತ್ । ರುದ್ರಾಯ। ಪಶೂನ್ । ಅಪೀತಿ । ದಧ್ಯಾತ್ । ಅಪಶುಃ । ಯಜಮಾನಸ್ಯ । ಸ್ಯಾತ್ । ಅತಿಹಾಯೇತ್ಯತಿ-ಹಾಯ । ಪೂರ್ವಾಃ । ಆಹುತೀರಿತ್ಯಾ-ಹುತೀಃ । ಜುಹೋತಿ । ಪಶೂನಾಮ್ । ಗೋಪೀಥಾಯ ||೩೫||

---

| | |
|---|---|
| ಯತ್ ಪೂರ್ವಾಃ ಆಹುತೀಃ ಅಭಿಜುಹುಯಾತ್ | ಒಂದು ವೇಳೆ ಸ್ವಿಷ್ಟಕೃದ್ಧೋಮವನ್ನು ಪೂರ್ವಾಹುತಿಗಳ ಮೇಲೆಯೇ ಮಾಡಿದರೆ, |
| ರುದ್ರಾಯ ಪಶೂನ್ ಅಪಿ ದಧ್ಯಾತ್ | ರುದ್ರದೇವನಿಗೆ ಪಶುಗಳನ್ನು ಇನ್ನೊಂದರಿಂದ ತಡೆದು ಕೊಟ್ಟಂತೆ ಆಗುವುದು. |
| ಯಜಮಾನಃ ಅಪಶುಃ ಸ್ಯಾತ್ | ಇದರಿಂದ ಯಜಮಾನನು ಪಶುಸಂಪತ್ತಿ ಇಲ್ಲದವನಾಗುವನು. |
| ಪೂರ್ವಾಃ ಆಹುತೀಃ ಅತಿಹಾಯ ಜುಹೋತಿ | ಆದುದರಿಂದ ಪೂರ್ವಾಹುತಿಗಳಿಗೆ ತಗುಲದಂತೆ [ದೂರವಾಗಿ ಅಗ್ನಿಯ ಈಶಾನ್ಯಭಾಗದಲ್ಲಿ] ಸ್ವಿಷ್ಟಕೃದ್ಧೋಮವನ್ನು ಅನುಷ್ಠಿಸಬೇಕು. |
| ಪಶೂನಾಮ್ ಗೋಪೀಥಾಯ | ಇದು ಪಶುಗಳ ರಕ್ಷಣೆಗೆ ಸಾಧನವಾಗುತ್ತದೆ. |

---

**'ರುದ್ರೋ ವಾ ಏಷ ಯದಗ್ನಿಃ'** ಎಂಬ ಮಂತ್ರಗಳಿಂದ ರುದ್ರ-ಅಗ್ನಿಗಳಿಗೆ ಅಭೇದವನ್ನು ಹೇಳಲಾಗಿದೆ.ಅದರಂತೆಯೇ ಇಲ್ಲಿ ಸ್ವಿಷ್ಟಕೃದಗ್ನಿದೇವನನ್ನು ರುದ್ರದೇವನೆಂದು ಹೇಳಲಾಗಿದೆ.

ರುದ್ರನು ಒಬ್ಬನೇ ಎಂಬುದಾಗಿ**'ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ'**ಎಂದು ಮಂತ್ರಾಂತರದಲ್ಲಿ ಹೇಳಿದೆ. ಹೀಗಾಗಿ ರುದ್ರನಿಗೆ ಒಮ್ಮೆ ಅವದಾನವು ಸೂಕ್ತವಾಗಿದೆ. ಉತ್ತರ ದಿಕ್ಕು ರುದ್ರನ ದಿಕ್ಕೆಂದು ಬೇರೆಯ ಕಡೆಗಳಲ್ಲಿಯೂ ಇದೆ. ಹವಿಸ್ಸಿನ ಉತ್ತರಾರ್ಧದಿಂದ ಸ್ವಿಷ್ಟಕೃದಗ್ನಿಗಾಗಿ ಅವದಾನ ಮಾಡುವುದು ರುದ್ರಪ್ರೀತಿಕರವೆಂದು ಇಲ್ಲಿನ ಪ್ರಶಂಸೆ.

**'ಚತುರವತ್ತಂ ಜುಹೋತಿ'** ಎಂಬ ವಿಧಿಯಿದೆ. ಬೇರೆಯ ಯಾಗಗಳಲ್ಲಿ ಸಕೃದುಪಸ್ತರಣ, ದ್ವಿರವದಾನ, ಸಕೃದಭಿಘಾರಣ-ಹೀಗೆ ಚತುರವದಾನವಾಗುತ್ತದೆ. ಸ್ವಿಷ್ಟಕೃದ್ಯಾಗದಲ್ಲಿ ಸಕೃದುಪಸ್ತರಣ, ಸಕೃದವದಾನ ಮತ್ತು ದ್ವಿರಭಿಘಾರಣಗಳಿಂದ ಒಟ್ಟು ಚತುರವತ್ತವಾಗುತ್ತದೆ.

ಸ್ವಿಷ್ಟಕೃದ್ಧೋಮವನ್ನು ಯಾವ ರೀತಿಯಲ್ಲಿ ಅನುಷ್ಠಿಸಬೇಕೆಂಬ ವಿಧಿಯಿದೆ. ಈ ಹೋಮವನ್ನು ಇತರ ಹೋಮಗಳ ಸಂಪರ್ಕವಿಲ್ಲದಂತೆ ಉತ್ತರಪೂರ್ವಭಾಗದಲ್ಲಿ ಮಾಡುವುದರಿಂದ ಪಶುರಕ್ಷಣೆಯುಂಟಾಗಿ ಯಜಮಾನನು ಪಶುಸಂಪನ್ನನಾಗುತ್ತಾನೆ.

ಈ ಸ್ವಿಷ್ಟಕೃದ್ಧೋಮದಿಂದ ರುದ್ರನು ಪ್ರೀತನಾಗುವನು.

* * *

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

### ೧) ಉಪಾಂಶುಯಾಜಯಾಗದ ವಿಧಾಯಕ-ಅನುವಾದಕವಾಕ್ಯಗಳು ಯಾವುದು? [ಜೈ.ಸೂ.2.2.11.12]

ದರ್ಶ-ಪೂರ್ಣಮಾಸಪ್ರಕರಣದಲ್ಲಿ **'ಅಜಾಮಿತ್ವಾಯ ಉಪಾಗ್ಂಶುಯಾಜಮಂತರಾ ಯಜತಿ'** ಎಂಬ ವಾಕ್ಯವಿದೆ.**'ವಿಷ್ಣುರುಪಾಂಶು ಯಷ್ಟವ್ಯಃ ಅಜಾಮಿತ್ವಾಯ' 'ಪ್ರಜಾಪತಿರುಪಾಂಶು ಯಷ್ಟವ್ಯಃ ಅಜಾಮಿತ್ವಾಯ' 'ಅಗ್ನೀಷೋಮಾವುಪಾಂಶು ಯಷ್ಟವ್ಯೌ ಅಜಾಮಿತ್ವಾಯ'** ಎಂಬ ವಾಕ್ಯಗಳು ಇವೆ.ಇಲ್ಲಿ ಉಪಾಂಶುಯಾಜಯಾಗಕ್ಕೆ ಯಾವುದು ವಿಧಾಯಕ? ಯಾವುದು ಅನುವಾದಕ? ಎಂಬುದು ಇಲ್ಲಿನ **ಸಂಶಯ.**

ಇಲ್ಲಿ **'ವಿಷ್ಣುರುಪಾಂಶು ಯಷ್ಟವ್ಯಃ'** ಮೊದಲಾದ ಮೂರು ವಾಕ್ಯಗಳಲ್ಲಿ ಯಾಗವಿಧಿ. **'ಉಪಾಂಶುಯಾಜಮಂತರಾ ಯಜತಿ'** ಎಂಬುದು ಯಾಗತ್ರಯದ ಸಮುದಾಯಾನುವಾದವೆಂದು **ಪೂರ್ವಪಕ್ಷ.**

ಇಲ್ಲಿ ವಾಕ್ಯಾರಂಭದಲ್ಲಿ ಎರಡು ಪುರೋಡಾಶಯಾಗಗಳನ್ನು ಒಂದಾದ ಮೇಲೆ ಒಂದರಂತೆ ಮಾಡುವುದು ಆಲಸ್ಯಕ್ಕೆ ಕಾರಣವೆಂದು ಹೇಳಿ ಮಧ್ಯದಲ್ಲಿ ಆಜ್ಯದ್ರವ್ಯಕವಾದ, ಉಪಾಂಶುವಾಗಿ ಮಾಡಬೇಕಾದ ಉಪಾಂಶುಯಾಜವನ್ನು ಮಾಡುವುದು ಆಲಸ್ಯದೋಷವನ್ನು ಪರಿಹರಿಸಿ ಅಜಾಮಿತ್ವಕ್ಕೆ ಕಾರಣವಾಗುತ್ತದೆ ಎಂದು ಉಪಸಂಹಾರ ಮಾಡಲಾಗಿದೆ. ಈ ವಿಷಯವು ವಿಷ್ಣ್ವಾದಿವಾಕ್ಯಗಳಲ್ಲಿ ಇಲ್ಲ.ಆದುದರಿಂದ ಈ ಮಹಾವಾಕ್ಯವು ಉಪಾಂಶುತ್ವ-ಅಂತರಾಲ ಕಾಲವಿಶಿಷ್ಟಯಾಗವಿಧಿ. ವಿಷ್ಣ್ವಾದಿವಾಕ್ಯಗಳು ಶಾಖಾಂತರದಲ್ಲಿ ಹೇಳುವ ದೇವತಾನು ವಾದವಾಗಿವೆ. ಇಲ್ಲಿ ಯಾಜ್ಯಾ-ಪುರೋನುವಾಕ್ಯಾಕ್ರಮದಲ್ಲಿ ಹೇಳಿರುವ ದೇವತೆ-ಧ್ರೌವಾಜ್ಯ ದ್ರವ್ಯದಿಂದ ಕೂಡಿರುವ ಯಾಗವಿಧಾನ.ಇಲ್ಲಿರುವ **'ಯಜತಿ** ಎಂಬುದಕ್ಕೆ **ಯಜೇತ್'** ಎಂದು ವಿಧ್ಯರ್ಥವೇ. ಹೀಗಾಗಿ **'ಉಪಾಂಶುಯಾಜಮಂತರಾ ಯಜತಿ'** ಎಂಬುದು ವಿಧಿವಾಕ್ಯವೇ ಇದು ಇಲ್ಲಿನ **ಸಿದ್ಧಾಂತ.**

## ೨) ಉಪಾಂಶುಯಾಜಯಾಗದ ದ್ರವ್ಯವು ಯಾವುದು?

**[ಜೈ.ಸೂ.10.8]**

**'ಉಪಾಂಶುಯಾಜಮಂತರಾ ಯಜತಿ'** ಎಂದು ವಿಹಿತವಾಗಿರುವ ಯಾಗದಲ್ಲಿ ದ್ರವ್ಯವು ಯಾವುದು? ಇದು ಇಲ್ಲಿನ **ಸಂಶಯ.**

ಹವಿಸ್ಸುಗಳೆಂದು ಹೇಳಿರುವ ಪುರೋಡಾಶಭಿನ್ನದ್ರವ್ಯಗಳಲ್ಲಿ ಯಾವುದಾದರೂ ಆಗಬಹುದೆಂದು ಇಲ್ಲಿನ **ಪೂರ್ವಪಕ್ಷ.**

**'ತಾವಬ್ರೂತಾಮಗ್ನೀಷೋಮಾವಾಜ್ಯಸ್ಯೈವ ತಾವುಪಾಂಶು ಪೌರ್ಣಮಾಸ್ಯಾಂ ಯಜನ್'** ಎಂದಿರುವುದರಿಂದ ಆಜ್ಯವೇ ದ್ರವ್ಯವು.ಅದರಲ್ಲಿಯೂ **'ಸರ್ವಸ್ಮೈ ವಾ ಏತದ್ಯಜ್ಞಾಯ ಗೃಹ್ಯತೇ । ಯದ್ಧ್ರುವಾಯಾಮಾಜ್ಯಮ್'** । ಎಂಬ ಶ್ರುತಿವಾಕ್ಯದಿಂದ ಧ್ರೌವಾಜ್ಯವೇ ಹವಿಸ್ಸಾಗಿದೆ. ಇದು ಇಲ್ಲಿನ **ಸಿದ್ಧಾಂತ.**

**'ಜುಹೋತೀತಿ ಚೋದ್ಯಮಾನೇ ಸರ್ಪಿರಾಜ್ಯಂ ಪ್ರತೀಯಾತ್'** [**'ಜುಹೋತಿ'** ಎಂಬ ವಚನದಿಂದ ವಿಧಾನ ಮಾಡಿರುವಲ್ಲಿ ಆಜ್ಯವನ್ನು ಹವಿಸ್ಸೆಂದು ತಿಳಿಯಬೇಕು] ಎಂಬ ಆಪಸ್ತಂಬಪರಿಭಾಷಾಸೂತ್ರವೂ ಇದೆ.

## ೩) ಉಪಾಂಶುಯಾಜದಲ್ಲಿ ದೇವತೆ ಯಾರು ?

**[ಜೈ.ಸೂ.10.8.30]**

ಉಪಾಂಶುಯಾಜವನ್ನು ಅನುಷ್ಠಿಸುವಾಗ ದೇವತೆಯು ಯಾರು ? ಇದು **ಸಂಶಯ.**

**'ವಿಷ್ಣುರುಪಾಂಶು ಯಷ್ಟವ್ಯಃ'** ಮುಂತಾದ ವಾಕ್ಯಗಳು ವಿಧಾಯಕಗಳಲ್ಲ, ಅನುವಾದಕಗಳು ಎಂದು ಹಿಂದೆ ತಿಳಿಸಿರುವುದರಿಂದ ಅದರಿಂದ ದೇವತಾವಿಧಾನವಲ್ಲ. ಆ ವಾಕ್ಯಗಳಲ್ಲಿನ ದೇವತೆಗಳು ಉಪಾಂಶುಯಾಜದ ದೇವತೆಗಳಲ್ಲ. ಆದುದರಿಂದ ದ್ರವ್ಯ-ದೇವತಾಸಂಬಂಧವೇ ಯಾಗವಾದುದರಿಂದ ಇಲ್ಲಿ ಯಾವ ದೇವತೆಯೂ ಇಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

ಉಪಾಂಶುಯಾಜವು ದರ್ಶ-ಪೂರ್ಣಮಾಸಪ್ರಕರಣದಲ್ಲಿಯೇ ಇರುವುದರಿಂದ ಮಂತ್ರಕ್ರಮದಲ್ಲಿರುವ ಮಾಂತ್ರವರ್ಣಿಕದೇವತೆಯೇ ಉಪಾಂಶುಯಾಜಕ್ಕೂ ಸಹ ದೇವತೆಯಾಗುತ್ತದೆ. ಇದು ಇಲ್ಲಿನ **ಸಿದ್ಧಾಂತ.**

## ೪) ಉಪಾಂಶುಯಾಜದ ದೇವತಾನಿರ್ಣಯವು ಹೇಗೆ?

**[ಜೈ.ಸೂ.10.8.30]**

ಉಪಾಂಶುಯಾಜಯಾಗದಲ್ಲಿ ದೇವತಾನಿರ್ಣಯವನ್ನು ಮಾಡುವುದು ಹೇಗೆ? ಇದು ಇಲ್ಲಿನ **ಸಂಶಯ.**

ಪ್ರಜಾಪತಿ, ಅಗ್ನಿ,ಅಗ್ನೀಷೋಮರು ಅಥವಾ ವಿಷ್ಣು ಇವರಲ್ಲಿ ಯಾರಾದರೊಬ್ಬರು ಆಗಬಹುದು. ಇದು ಇಲ್ಲಿನ **ಪೂರ್ವಪಕ್ಷ.**

**'ಯತ್ ಕಿಂಚಿತ್ ಪ್ರಾಜಾಪತ್ಯೇ ಯಜ್ಞೇ ಕ್ರಿಯತೇ ತತ್ ಉಪಾಂಶು ಕ್ರಿಯತೇ'** ಎಂಬ ವಚನದಿಂದ ಇದು ಉಪಾಂಶುಯಾಜಯಾಗವಾದುದರಿಂದ ಪ್ರಜಾಪತಿಯೇ ದೇವತೆ ಎಂದು ಮೊದಲನೆಯ ಪಕ್ಷ.

ಹವಿಸ್ಸನ್ನು ಪಡೆಯುವ ದೇವತೆಗಳಲ್ಲಿ ಮುಖ್ಯನಾದುದರಿಂದ ಅಗ್ನಿಯೇ ದೇವತೆ ಎಂದು ಎರಡನೆಯ ಪಕ್ಷ.

ಅರ್ಥವಾದವಾಕ್ಯದಲ್ಲಿ **'ಅಗ್ನೀಷೋಮಾವಾಜ್ಯಸ್ಯೈವ'** ಎಂದಿರುವುದರಿಂದ ಅಗ್ನೀಷೋಮರೇ ದೇವತೆಗಳು ಎಂದು ಮೂರನೆಯ ಪಕ್ಷ.

ಶಾಖಾಂತರದಲ್ಲಿ ವಿಷ್ಣುದೇವತಾಕವಾದ ಯಾಜ್ಯಾನುವಾಕ್ಯೆಗಳು ಇರುವುದರಿಂದ ವಿಷ್ಣುವೇ ದೇವತೆಯೆಂದು ನಾಲ್ಕನೆಯ ಮತ.

ಇವುಗಳಲ್ಲಿ ಯಾವುದಾದರೊಂದನ್ನು ಅಂಗೀಕರಿಸಿದರೂ ಉಳಿದ ಪಕ್ಷಗಳಿಗೆ ಬಾಧ ವುಂಟಾಗುತ್ತದೆ.ಉಪಾಂಶುಯಾಜಕ್ಕಾಗಿ ಹೇಳುವ ಯಾಜ್ಯಾನುವಾಕ್ಯೆಗಳಲ್ಲಿ ಅಗ್ನಿದೇವತೆಯ ಯಾಜ್ಯಾನುವಾಕ್ಯೆಯ ಪಾಠವು ಇಲ್ಲವಾದುದರಿಂದ ಅಗ್ನಿಯು ದೇವತೆಯಾಗುವುದಿಲ್ಲ. ಆದುದರಿಂದ ಬೇರೆ ಬೇರೆ ಶಾಖೆಗಳಲ್ಲಿರುವ ಯಾಜ್ಯಾನುವಾಕ್ಯೆಗಳನ್ನು ಅನುಸರಿಸಿ,

ಮಾಂತ್ರವರ್ಣಿಕದೇವತಾವಿಧಿಯಿಂದ ವಿಷ್ಣು,ಪ್ರಜಾಪತಿ,ಅಗ್ನೀಷೋಮರು ಉಪಾಂಶು ಯಾಜಕ್ಕೆ ವಿಕಲ್ಪವಾಗಿ ದೇವತೆಗಳೆಂದು ಅಂಗೀಕರಿಸಬೇಕು. ಹೀಗಿರುವಾಗ **'ವಿಷ್ಣುರುಪಾಂಶು ಯಷ್ಟವ್ಯಃ'**ಮುಂತಾದ ವಾಕ್ಯಗಳು ಅರ್ಥವಾದದಲ್ಲಿದ್ದು ಈ ದೇವತಾವಿಕಲ್ಪದ ಅನುವಾದ ಗಳಾಗಿವೆ. ಇದು ಇಲ್ಲಿನ **ಸಿದ್ಧಾಂತ.**

## ೫) ಉಪಾಂಶುಯಾಜದ ಕಾಲ ಯಾವುದು?

**[ಜೈ.ಸೂ.10.8.33-37]**

ಉಪಾಂಶುಯಾಜವನ್ನು ಅನುಷ್ಠಿಸಬೇಕಾದ ಕಾಲ ಯಾವುದು ? ಇದು ಇಲ್ಲಿನ **ಸಂಶಯ.**

ಎರಡು ಪುರೋಡಾಶಯಾಗಗಳ ಅಂತರಾಲಕಾಲದಲ್ಲಿ ಅನುಷ್ಠಿಸಬೇಕೆಂದು **'ಅಂತರಾ ಯಜತಿ'** ಎಂದು ಹೇಳಲಾಗಿದೆ. ಈ ಅನುಷ್ಠಾನವು ಜಾಮಿತ್ವಪರಿಹಾರಕ್ಕಾಗಿ ಎಂದೂ ಹೇಳಲಾಗಿದೆ. ಈ ಎರಡು ಪುರೋಡಾಶಯಾಗಗಳು ಪೌರ್ಣಮಾಸ್ಯೇಷ್ಟಿಯಲ್ಲಿ ಆಗ್ನೇಯ-ಅಗ್ನೀಷೋಮಪುರೋಡಾಶಯಾಗಗಳಾಗಿರುತ್ತವೆ. ದರ್ಶದಲ್ಲಿ ಆಗ್ನೇಯ-ಐಂದ್ರಾಗ್ನ ಪುರೋಡಾಶಯಾಗಗಳಾಗಿರುತ್ತವೆ. ಹೀಗಾಗಿ ದರ್ಶ-ಪೂರ್ಣಮಾಸಗಳೆರಡೂ ಉಪಾಂಶು ಯಾಜಕ್ಕೆ ಕಾಲವೆಂದು ಒಂದು **ಪೂರ್ವಪಕ್ಷ.**

ಶಾಖಾಂತರದಲ್ಲಿ ವಿಷ್ಣುದೇವತಾಕವಾದ ಯಾಜ್ಯಾ-ಪುರೋನುವಾಕ್ಯೆಗಳೂ, ಆಗ್ನೇಯ ಯಾಜ್ಯಾ-ಪುರೋನುವಾಕ್ಯೆಗಳೂ ಇರುವುದರಿಂದ ದರ್ಶೇಷ್ಟಿಯಲ್ಲಿಯೇ ಉಪಾಂಶು ಯಾಜವನ್ನು ಅನುಷ್ಠಿಸಬೇಕೆಂದು ಇನ್ನೊಂದು **ಪೂರ್ವಪಕ್ಷ.**

ವಾಕ್ಯಶೇಷದಲ್ಲಿ **'ಉಪಾಂಶು ಪೌರ್ಣಮಾಸ್ಯಾಂ ಯಜನ್'** ಎಂದು ಇರುವುದರಿಂದ ವಚನದಿಂದ ಹೇಳಲ್ಪಟ್ಟಿರುವ ಪೂರ್ಣಮಾಸವೇ ಉಪಾಂಶುಯಾಜಕ್ಕೆ ಕಾಲವೆಂಬುದು **ಸಿದ್ಧಾಂತ.**

ಹೀಗಿರುವಾಗ ವಿಷ್ಣುದೇವತಾಕವಾದ ಮಂತ್ರಗಳನ್ನು ಅವುಗಳು ಪಠಿತವಾದ ಸ್ಥಳದಿಂದ ಉತ್ಕರ್ಷ ಮಾಡಬೇಕು.

## ೬) ಸೋಮಯಾಗಕ್ಕೆ ಮೊದಲಿನ ಪೌರ್ಣಮಾಸದಲ್ಲಿ ಉಪಾಂಶುಯಾಜವಿದೆಯೇ?

**[ಜೈ.ಸೂ.10.8]**

ಸೋಮಯಾಗವನ್ನು ಅನುಷ್ಠಿಸುವ ಮೊದಲು ಮಾಡುವ ಪೌರ್ಣಮಾಸ್ಯೇಷ್ಟಿಯಲ್ಲಿ ಉಪಾಂಶುಯಾಜವಿದೆಯೇ? ಇದು ಇಲ್ಲಿನ **ಸಂಶಯ.**

ಸೋಮಯಾಗಕ್ಕೆ ಮೊದಲು ಪೂರ್ಣಮಾಸೇಷ್ಟಿಯಲ್ಲಿ ಅಗ್ನೀಷೋಮೀಯ ಪುರೋಡಾಶವು ಇಲ್ಲದಿರುವುದರಿಂದ ಎರಡು ಪುರೋಡಾಶಗಳು ಇರುವುದಿಲ್ಲ ಹೀಗಾಗಿ ಎರಡು ಪುರೋಡಾಶಯಾಗಗಳ ನಡುವಿನ ಅಂತರಾಲಕಾಲವೂ ಇರುವುದಿಲ್ಲ. ಅಂತರಾಲಕಾಲವಿಲ್ಲದಿರುವುದರಿಂದ ಅಂತಹ ಪೌರ್ಣಮಾಸಯಾಗದಲ್ಲಿ ಉಪಾಂಶುಯಾಜವಿಲ್ಲ ಇದು ಇಲ್ಲಿನ **ಪೂರ್ವಪಕ್ಷ.**

**'ಶಂಖಧ್ವನಿವೇಳಾಯಾಂ ಪ್ರತಿದಿನಮಾಗಂತವ್ಯಮ್'** ಎಂಬ ವಾಕ್ಯವನ್ನು ಹೇಳಿದಾಗ ಬರಬೇಕಾದ ಕಾಲಕ್ಕೆ ಶಂಖನಾದವು ಉಪಲಕ್ಷಕವಾಗುತ್ತದೆ. ಹೀಗಾಗಿ ಒಮ್ಮೆ ಶಂಖನಾದವಾಗದಿದ್ದರೂ ಕಾಲವು ಇದ್ದೇ ಇರುವುದರಿಂದ ಆ ಕಾಲಕ್ಕೆ ಬರಬೇಕಾದವರು ಬಂದೇ ಬರುತ್ತಾರೆ. ಅಂತೆಯೇ ಇಲ್ಲಿಯೂ ಸಹ ಆಗ್ನೇಯಯಾಗವೇ ಉಪಾಂಶುಯಾಜಕ್ಕೆ ಉಪಲಕ್ಷಕವಾಗುತ್ತದೆ. ಹೀಗಾಗಿ ಸೋಮಯಾಗವನ್ನು ಅನುಷ್ಠಿಸುವ ಮೊದಲು ಮಾಡುವ ಪೌರ್ಣಮಾಸಯಾಗದಲ್ಲಿ ಎರಡು ಪುರೋಡಾಶಯಾಗಗಳು ಇಲ್ಲದಿದ್ದರೂ ಆಗ್ನೇಯಯಾಗವು ಇರುವುದರಿಂದ, ಒಂದೇ ಪುರೋಡಾಶಯಾಗವಿದ್ದರೂ ಸಹ ಅಲ್ಲಿ ಉಪಾಂಶುಯಾಜವಿರುತ್ತದೆ. ಇದು ಇಲ್ಲಿನ **ಸಿದ್ಧಾಂತ.**

## ೭) ಧ್ರೌವಾಜ್ಯದಿಂದ ಸ್ವಿಷ್ಟಕೃದಾದಿಶೇಷಗಳನ್ನು ಅನುಷ್ಠಿಸಬೇಕೆ? [ಜೈ.ಸೂ.3.5]

ಧ್ರುವಾಪಾತ್ರೆಯಲ್ಲಿರುವ ಆಜ್ಯದಿಂದ ಉಪಾಂಶುಯಾಜವನ್ನು ಅನುಷ್ಠಿಸಿದ ಮೇಲೆ ಅದರ ಶೇಷದಿಂದ ಸ್ವಿಷ್ಟಕೃದಾದಿಶೇಷಕರ್ಮವನ್ನು ಅನುಷ್ಠಿಸಬೇಕೆ? ಇದು ಇಲ್ಲಿನ **ಸಂಶಯ.**

**'ಸರ್ವೇಭ್ಯಃ ಹವಿರ್ಭ್ಯಃ ಸಮವದ್ಯತಿ' [ಆಪ.ಶ್ರೌ.2.20.3]** ಎಲ್ಲ ಹವಿಸ್ಸುಗಳಿಂದಲೂ ಭಾಗವನ್ನು ತೆಗೆದು ಸ್ವಿಷ್ಟಕೃದಗ್ನಿಗೆ ಹವಿಃಪ್ರದಾನ ಎಂಬ ವಚನವಿರುವುದರಿಂದ ಧ್ರೌವಾಜ್ಯದಿಂದಲೂ ಶೇಷಪರಿಗ್ರಹವನ್ನು ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

**'ಉಪಯುಕ್ತಸ್ಯ ಆಕೀರ್ಣಕರತಾನಿವರ್ತಕಂ ಕರ್ಮ ಪ್ರತಿಪತ್ತಿಕರ್ಮ'** ಹವಿಸ್ಸಿಗಾಗಿ ಉಪಯೋಗಿಸಿದ ವಸ್ತುವು ಹರಡಿಹೋಗದಂತೆ ವಿನಿಯೋಗ ಮಾಡುವ ಕರ್ಮವು ಪ್ರತಿಪತ್ತಿಕರ್ಮವೆನಿಸುತ್ತದೆ. ಸ್ವಿಷ್ಟಕೃದ್ಯಾಗವು **ಪ್ರತಿಪತ್ತಿಕರ್ಮ**ವಾಗಿದೆ. ಪ್ರಕೃತ ಧ್ರೌವಾಜ್ಯದಿಂದ ಮಾಡಬೇಕಾದ ಉಪಸ್ತರಣಾದಿಕರ್ಮಗಳು ಇರುವುದರಿಂದ ಆಜ್ಯವು ಶೇಷವಾಗುವುದಿಲ್ಲ ಹೀಗಾಗಿ ಉಪಾಂಶುಯಾಜವನ್ನು ಅನುಷ್ಠಿಸಿದ ಮೇಲೆ ಉಳಿದ ಹವಿಸ್ಸಿನಿಂದ ಶೇಷಕಾರ್ಯವು ಇರುವುದಿಲ್ಲ. ಇದು ಇಲ್ಲಿನ **ಸಿದ್ಧಾಂತ.**

## ೮) ಸ್ವಿಷ್ಟಕೃದ್ಧೋಮವು ಯಾವ ರೀತಿಯದು?

**[ಜೈ.ಸೂ.4.1.15]**

ಸ್ವಿಷ್ಟಕೃದ್ಧೋಮದ ಅನುಷ್ಠಾನವು ಏತಕ್ಕಾಗಿ? ಅದು ಕೇವಲ ದ್ರವ್ಯಸಂಸ್ಕಾರಕ್ಕಾಗಿ ಅನುಷ್ಠಿಸುವ ಕರ್ಮವೇ? ಅದರಿಂದ ಅಪೂರ್ವದ ಉತ್ಪತ್ತಿಯೂ ಆಗುತ್ತದೆಯೇ? ಇದು ಇಲ್ಲಿನ **ಸಂಶಯ.**

ಒಂದು ಕಾರ್ಯಕ್ಕೆ ಒಂದೇ ಪ್ರಯೋಜನವಿರುವುದು ಯುಕ್ತ. ಈ ಸ್ವಿಷ್ಟಕೃದ್ಯಾಗಕ್ಕೆ ದ್ರವ್ಯ ಸಂಸ್ಕಾರವೆಂಬ ದೃಷ್ಟಪ್ರಯೋಜನವು ಇರುವುದರಿಂದ, ದೃಷ್ಟಪ್ರಯೋಜನದಿಂದಲೇ ಉಪಕ್ಷೀಣವಾದ ಸ್ವಿಷ್ಟಕೃದ್ಯಾಗವು ಅಪೂರ್ವೋತ್ಪತ್ತಿಯೆಂಬ ಅದೃಷ್ಟಪ್ರಯೋಜನವನ್ನುಂಟು ಮಾಡಲಾರದು. ಇದು ಇಲ್ಲಿನ **ಪೂರ್ವಪಕ್ಷ.**

ಯಾಗದಲ್ಲಿ ಮೂರು ಅಂಶಗಳು ಇರುತ್ತವೆ. ಮಂತ್ರಪಾಠ, ದ್ರವ್ಯಪ್ರಕ್ಷೇಪ ಹಾಗೂ ದೇವತೋದ್ದೇಶದ್ರವ್ಯತ್ಯಾಗ. ಈ ಮೂರೂ ಅಂಶಗಳಿಗೆ ಪ್ರತ್ಯೇಕ ಪ್ರಯೋಜನಗಳು ಇರುವುದು ಯುಕ್ತವೇ ಆಗಿದೆ. ಇದು ಅಂಗಾಪೂರ್ವವೆಂಬ ಅದೃಷ್ಟದ ಉತ್ಪತ್ತಿಗೆ ಕಾರಣವಾಗುತ್ತದೆ. ಇದನ್ನು ಅವಾಂತರಾಪೂರ್ವವೆಂದೂ ಹೇಳುತ್ತಾರೆ. ಸ್ವಿಷ್ಟಕೃದ್ಧೋಮವು ಅವಾಂತರ ಕರ್ಮವಾದುದರಿಂದ ಅವಾಂತರಾಪೂರ್ವದನ್ನುಂಟುಮಾಡುತ್ತದೆ. ಈ ಅವಾಂತರಾಪೂರ್ವಗಳು ಪರಮಾಪೂರ್ವಕ್ಕೆ ಉಪಕಾರಿಯಾಗುತ್ತವೆ. ಇದು ಇಲ್ಲಿನ **ಸಿದ್ಧಾಂತ.**

## ೯) ಸ್ವಿಷ್ಟಕೃದ್ಯಾಗದ ಹವಿಸ್ಸಿನ ಅವದಾನವು ಯಾವುದರಿಂದ?

**[ಜೈ.ಸೂ 4.1-26-27 ]**

**'ಸ್ವಿಷ್ಟಕೃತೇ ಉತ್ತರಾರ್ಧಾದವದ್ಯತಿ'** ಎಂಬ ವಚನವು ಇದೆ. **[ಆಪ. ಶ್ರೌ.2.20.3]** ಸ್ವಿಷ್ಟಕೃದ್ಯಾಗಕ್ಕಾಗಿ ಹವಿಸ್ಸಿನ ಉತ್ತರಾರ್ಧದಿಂದ ಅವದಾನವನ್ನು ಮಾಡಬೇಕು. ಎಂಬ ವಚನವಿದೆ. ಹೀಗಾಗಿ ಸ್ವಿಷ್ಟಕೃದ್ಯಾಗಕ್ಕಾಗಿ ಮತ್ತೊಂದು ಪುರೋಡಾಶವನ್ನು ಮಾಡಿಕೊಳ್ಳ ಬೇಕೆ? ಇದು ಇಲ್ಲಿನ **ಸಂಶಯ.**

ಉತ್ತರಾಂಶವೂ ಅರ್ಧಾಂಶವೂ ಸಿದ್ಧಿಸಬೇಕಾದರೆ ಹೊಸದಾದ ಪುರೋಡಾಶವನ್ನೇ ಇಟ್ಟುಕೊಳ್ಳಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಉತ್ತರಾರ್ಧ ಎಂಬ ಶಬ್ದದಲ್ಲಿ ಉತ್ತರ ಮತ್ತು ಅರ್ಧ ಎಂಬ ಎರಡು ಶಬ್ದಗಳೂ ಅಂಶವಾಚಿಗಳಾಗಿವೆ.ಹೀಗಾಗಿ ಭಾಗವುಳ್ಳ ವಸ್ತುವನ್ನು ಆಕಾಂಕ್ಷಿಸುತ್ತವೆ. ಪ್ರಕೃತದಲ್ಲಿ ಆಗ್ನೇಯ ಪುರೋಡಾಶವೂ ಮತ್ತು ಅದರ ಭಾಗವೂ ಸಿದ್ಧವಾಗಿರುವುದರಿಂದ ಉತ್ತರಾರ್ಧದಿಂದ

ಸ್ವಿಷ್ಟಕೃದ್ಯಾಗವೆಂಬುದು ಸಮಂಜಸವಾಗುತ್ತದೆ. ಹೀಗಾಗಿ ಸ್ವಿಷ್ಟ ಕೃದ್ಯಾಗಕ್ಕಾಗಿ ಮತ್ತೊಂದು ಪುರೋಡಾಶಕರಣವು ಬೇಕಾಗಿಲ್ಲ.ಇದು ಇಲ್ಲಿನ **ಸಿದ್ಧಾಂತ.**

## ೧೦) ಸ್ವಿಷ್ಟಕೃದ್ಯಾಗಕ್ಕೆ ಸಂಬಂಧಿಸಿದ ಹವಿಃಶೇಷವು ಯಾವುದು?

**[ಜೈ.ಸೂ.3.4.35]**

**'ಶೇಷಾತ್ ಸ್ವಿಷ್ಟಕೃತೇ ಸಮವದ್ಯತಿ'** ಎಂಬ ವಚನವಿದೆ. ಹೀಗಾಗಿ ಹವಿಃಶೇಷದಿಂದ ಅವದಾನವನ್ನು ಮಾಡಬೇಕು. ಆಗ್ನೇಯವೇ ಮುಂತಾದ ಮೂರು ಯಾಗಗಳು ಅನುಷ್ಠಿತ ವಾಗಿರುತ್ತವೆ. ಈ ಯಾಗತ್ರಯದಲ್ಲಿ ಯಾವ ಹವಿಃಶೇಷವನ್ನು ಸ್ವಿಷ್ಟಕೃದ್ಯಾಗಕ್ಕಾಗಿ ಪರಿಗ್ರಹಿಸಬೇಕು? ಎಂಬುದು ಇಲ್ಲಿನ **ಸಂಶಯ.**

ಶಾಸ್ತ್ರಾನುಷ್ಠಾನಸಿದ್ಧಿಗಾಗಿ ಯಾವುದಾದರೂ ಒಂದು ಹವಿಸ್ಸಿನ ಶೇಷವನ್ನು ಉಪಯೋಗಿಸಿ ಕೊಂಡರೂ ಆಗಬಹುದು. ಅದರಿಂದ ಶಾಸ್ತ್ರಾರ್ಥಾನುಷ್ಠಾನವಾಗುತ್ತದೆ ಎಂಬುದು ಇಲ್ಲಿನ **ಪೂರ್ವಪಕ್ಷ.**

ಈ ಸ್ವಿಷ್ಟಕೃದ್ಯಾಗವು ಯಾಗದಲ್ಲಿ ಉಪಯುಕ್ತವಾದ ಹವಿಸ್ಸುಗಳಿಗೆ ಸಂಸ್ಕಾರಕ್ಕಾಗಿ ಇರುವ ಯಾಗವಾಗಿದೆ. ಯಾಗತ್ರಯದ ಮೂರು ಹವಿಸ್ಸುಗಳಿಗೂ ಸಂಸ್ಕಾರದ ಅಪೇಕ್ಷೆಯು ಇದೆ. ಆದುದರಿಂದ ಎಲ್ಲ ಹವಿಸ್ಸುಗಳಿಂದಲೂ ಒಂದೊಂದು ಬಾರಿ ಸ್ವಿಷ್ಟಕೃದ್ಯಾಗಕ್ಕಾಗಿ ಅವದಾನ ವನ್ನು ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

## ॥ ಸಪ್ತಮೋಽನುವಾಕಃ ॥

ಮನುಃ ಪೃಥಿವ್ಯಾ ಯಜ್ಞಿಯಮೈಚ್ಛತ್ಸ ಘೃತಂ ನಿಷಿಕ್ತಮ

ವಿಂದಥ್ಸೋಽಬ್ರವೀತ್ಕೋಽಸ್ಯೇಶ್ವರೋ ಯಜ್ಞೇಽಪಿ ಕರ್ತೋ̐ರಿತಿ

---

ಮನುಃ । ಪೃಥಿವ್ಯಾಃ । ಯಜ್ಞಿಯಮ್ । ಐಚ್ಛತ್ । ಸಃ । ಘೃತಮ್ । ನಿಷಿಕ್ತಮಿತಿ

ನಿ–ಸಿಕ್ತಮ್ । ಅವಿಂದತ್ । ಸಃ । ಅಬ್ರವೀತ್ । ಕಃ । ಅಸ್ಯ । ಈಶ್ವರಃ । ಯಜ್ಞೇ ।

ಅಪೀತಿ । ಕರ್ತೋ̐ಃ । ಇತಿ ।

---

ಆರನೆಯ ಅನುವಾಕದಲ್ಲಿ ಉಪಾಂಶುಯಾಜ, ಸ್ವಿಷ್ಟಕೃತ್ತುಗಳು ಹೇಳಲ್ಪಟ್ಟವು. ಅಲ್ಲಿಗೆ ಆಧ್ವರ್ಯವಕಾಂಡಶೇಷವು ಮುಗಿಯಿತು.ಇನ್ನು ಮುಂದಿನ ನಾಲ್ಕು ಅನುವಾಕಗಳು ಇಷ್ಟಿಹೌತ್ರ ಬ್ರಾಹ್ಮಣಗಳು. ಅವುಗಳಲ್ಲಿ ಈ ಏಳನೆಯ ಅನುವಾಕದಲ್ಲಿ ಇಡಾಜನ್ಮವಿಷಯವು ಹೇಳಲ್ಪಟ್ಟಿದೆ.

### ಇಡಾಜನ್ಮದ ಉಪಾಖ್ಯಾನ

| | |
|---|---|
| ಮನುಃ ಪೃಥಿವ್ಯಾಃ | ಮನುವು ಭೂಮಿಯ ಮೇಲೆ ಯಜ್ಞಾರ್ಹವಸ್ತುವನ್ನು |
| ಯಜ್ಞಿಯಮ್ ಐಚ್ಛತ್ | ಹುಡುಕಲು ಇಚ್ಛಿಸಿದನು. |
| ಸಃ ನಿಷಿಕ್ತಮ್ ಘೃತಮ್ | [ಹಾಗೆ ಹುಡುಕುವಾಗ] ಭೂಮಿಯ ಮೇಲೆ ಚೆಲ್ಲಿ |
| ಅವಿಂದತ್ | ರುವ ತುಪ್ಪವನ್ನು ಹೊಂದಿದನು. |
| ಸಃ ಅಸ್ಯ ಯಜ್ಞೇ ಅಪಿ | ಅವನು[ಭೋಜನಾದಿಗಳಲ್ಲಿ ಉಪಯೋಗಿಸುವ] ಈ |
| ಕರ್ತೋ̐ಃ ಈಶ್ವರಃ ಕಃ? | ತುಪ್ಪವನ್ನು ಯಜ್ಞದಲ್ಲಿಯೂ ಉಪಯುಕ್ತವಾಗುವಂತೆ |
| | ಮಾಡಲು ಯಾರು ಸಮರ್ಥನು? |
| ಇತಿ ಅಬ್ರವೀತ್ | ಎಂದು [ದೇವತೆಗಳನ್ನು ಕುರಿತು] ಪ್ರಶ್ನಿಸಿದನು. |

ತಾವಬ್ರೂತಾಂ ಮಿತ್ರಾವರುಣೌ ಗೋರೇವಾಽಽವಮೀಶ್ವರೌ

ಕರ್ತೋಃ ಸ್ವ ಇತಿ ತೌ ತತೋ ಗಾಗ್ಂ ಸಮೈರಯತಾಗ್ಂ

ಸಾ ಯತ್ರಯತ್ರ ನ್ಯಕ್ರಾಮತ್ತತೋ ಘೃತಮಪೀಡ್ಯತ

---

ತೌ । ಅಬ್ರೂತಾಮ್ । ಮಿತ್ರಾವರುಣಾವಿತಿ ಮಿತ್ರಾ–ವರುಣೌ । ಗೋಃ । ಏವ ।

ಅವಮ್ । ಈಶ್ವರೌ । ಕರ್ತೋಃ । ಸ್ವಃ । ಇತಿ । ತೌ । ತತಃ । ಗಾಮ್ । ಸಮಿತಿ ।

ಐರಯತಾಮ್ । ಸಾ । ಯತ್ರಯತ್ರೇತಿ ಯತ್ರ–ಯತ್ರ । ನ್ಯಕ್ರಾಮದಿತಿ ನಿ–ಅಕ್ರಾಮತ್।

ತತಃ । ಘೃತಮ್ । ಅಪೀಡ್ಯತ ।

---

| | |
|---|---|
| ತೌ ಮಿತ್ರಾವರುಣೌ ಗೋಃ ಏವ ಕರ್ತೋಃ ಅವಮ್ ಈಶ್ವರೌ ಸ್ವಃ ಇತಿ ಅಬ್ರೂತಾಮ್ | ಆಗ ಮಿತ್ರಾವರುಣದೇವತೆಗಳು['ಬರಿಯ ತುಪ್ಪಕ್ಕೇನು? ತುಪ್ಪಕ್ಕೆ ಪ್ರಕೃತಿಯಾಗಿರುವ] ಗೋವನ್ನೇ ನಾವು ಯಜ್ಞಾಂಗವನ್ನಾಗಿ ಮಾಡುವುದಕ್ಕೆ ಸಮರ್ಥರಾಗಿದ್ದೇವೆ.' ಎಂದು ಹೇಳಿದರು. |
| ತೌ ತತಃ ಗಾಮ್ ಸಮೈರಯತಾಮ್ | ಬಳಿಕ ಆ ಮಿತ್ರಾವರುಣರು ಸ್ವರ್ಗದಲ್ಲಿರುವ ಇಡಾರೂಪವಾದ ಗೋವನ್ನು ಭೂಮಿಗೆ ತಂದರು. |
| ಸಾ ಯತ್ರಯತ್ರ ನ್ಯಕ್ರಾಮತ್ | ಆ ಇಡಾರೂಪವಾದ ಗೋವು ಎಲ್ಲೆಲ್ಲಿ ತನ್ನ ಹೆಜ್ಜೆಯನ್ನಿಟ್ಟಿತೋ |
| ತತಃ ಘೃತಮ್ ಅಪೀಡ್ಯತ | ಅಲ್ಲಿಂದ ತುಪ್ಪವು/**ಉದಕವು** ಹೊರಬಂದಿತು. |

---

ಇಡಾಭಕ್ಷಣದ ಉಪೋದ್ಘಾತರೂಪವಾಗಿ ಇಡಾಜನ್ಮದ ಉಪಾಖ್ಯಾನವನ್ನು ಹೇಳಲಾಗಿದೆ. ಸಂಹಿತೆಯ ಮೊದಲನೆಯ ಕಾಂಡದಲ್ಲಿ ಇಡೋಪಾಹ್ವಾನವನ್ನು ಪ್ರಶಂಸೆ ಮಾಡುವಾಗ **'ಗೌರ್ವಾ ಅಸ್ಯೈ ಶರೀರಮ್' 'ಅನ್ನಂ ವೈ' 'ಪ್ರತಿಷ್ಠಾಂ ವಾ ಅಸ್ಯ' 'ವೃಷ್ಟಿರ್ವಾ ಇಡಾ'**

ತಸ್ಮಾದ್ಘೃತಪದ್ಯುಚ್ಯತೇ ತದಸ್ಯೈ ಜನ್ಮೋಪಹೂತಗ್ಂ

ರಥಂತರಗ್ಂ ಸಹ ಪೃಥಿವ್ಯೇತ್ಯಾಹೇಯಂ [ಇತ್ಯಾಹ(೧)ಇಯಂ]

ವೈ ರಥಂತರ

---

ತಸ್ಮಾತ್ । ಘೃತಪದೀತಿ ಘೃತ-ಪದೀ । ಉಚ್ಯತೇ । ತತ್ । ಅಸ್ಯೈ । ಜನ್ಮ । ಉಪಹೂತಮಿತ್ಯುಪ-ಹೂತಮ್ । ರಥಂತರಮಿತಿ ರಥಂ-ತರಮ್ । ಸಹ । ಪೃಥಿವ್ಯಾ । ಇತಿ । ಆಹ । (೧) । ಇಯಮ್ । ವೈ । ರಥಂತರಮಿತಿ ರಥಂ-ತರಮ್ ।

---

| | |
|---|---|
| ತಸ್ಮಾತ್ ಘೃತಪದೀ ಉಚ್ಯತೇ | ಆದುದರಿಂದ ಇಡಾರೂಪಧೇನುವು **'ಘೃತಪದೀ'** ಎಂಬುದಾಗಿ ಹೇಳಲ್ಪಡುತ್ತದೆ. |
| ತತ್ ಅಸ್ಯೈ ಜನ್ಮ | ಅದು ಈ ಇಡಾರೂಪಿಯಾದ ಧೇನುವಿನ ಉತ್ಪತ್ತಿ ಪ್ರಕಾರವಾಗಿದೆ. |

## ಇಡಾಜಪಮಂತ್ರಗಳು

**ಉಪಹೂತಗ್ಂ ರಥಂತರಮ್..** ಮೊದಲುಗೊಂಡು **ಉಪಹೂತಾ ಹೋ** ಎಂಬಲ್ಲಿಯ ವರೆಗೆ ಇರುವ ಮಂತ್ರಗಳು ಇಡಾಜಪಮಂತ್ರಗಳು. ಅವುಗಳನ್ನು ಉಪಾಂಶುವಾಗಿ ಹೇಳಬೇಕು. **ಇಡೋಪಹೂತಾ** ಮೊದಲಾದ ಮಂತ್ರಗಳನ್ನು ಗಟ್ಟಿಯಾಗಿ ಹೇಳಬೇಕು.

## ಮೊದಲನೆಯ ಇಡಾಮಂತ್ರದ ವಿವರಣೆ

| | |
|---|---|
| ಉಪಹೂತಮ್ ರಥಂತರಮ್ ಸಹ ಪೃಥಿವ್ಯಾ ಇತಿ ಆಹ | ಶ್ರುತಿಯು**'ಉಪಹೂತಗ್ಂ..ಪೃಥಿವ್ಯಾ'**ಎಂದು ಹೇಳುತ್ತದೆ. |
| ಇಯಮ್ ವೈ ರಥಂತರಮ್ | ಈ ಭೂಮಿಯೇ ರಥಂತರವಷ್ಟೆ. |

---

ಹೀಗೆ ಬಹುವಿಧವಾಗಿ ಪ್ರಶಂಸೆ ಮಾಡಲಾಗಿದೆ.ವೃಷ್ಟಿ ಎಂಬ ಅರ್ಥವನ್ನು ಇಟ್ಟುಕೊಂಡು **'ಘೃತ'** ಎಂಬ ಪದಕ್ಕೆ ನೀರು ಎಂಬ ಅರ್ಥವನ್ನು ಮಾಡಿರುತ್ತಾರೆ.

ಮಿಮಾಮೇವ ಸಹಾನ್ನಾದ್ಯೇನೋಪಹ್ವಯತ ಉಪಹೂತಂ

ವಾಮದೇವ್ಯಗ್ಂ ಸಹಾಂತರಿಕ್ಷೇಣೇತ್ಯಾಹ ಪಶವೋ ವೈ

ವಾಮದೇವ್ಯಂ ಪಶೂನೇವ ಸಹಾಂತರಿಕ್ಷೇಣೋಪ ಹ್ವಯತ

---

ಇಮಾಮ್ । ಏವ । ಸಹ । ಅನ್ನಾದ್ಯೇನೇತ್ಯನ್ನ-ಅದ್ಯೇನ । ಉಪೇತಿ । ಹ್ವಯತೇ ।
ಉಪಹೂತಮಿತ್ಯುಪ-ಹೂತಮ್ । ವಾಮದೇವ್ಯಮಿತಿ ವಾಮ-ದೇವ್ಯಮ್ । ಸಹ ।
ಅಂತರಿಕ್ಷೇಣ । ಇತಿ । ಆಹ । ಪಶವಃ । ವೈ । ವಾಮದೇವ್ಯಮಿತಿ ವಾಮ-ದೇವ್ಯಮ್ ।
ಪಶೂನ್ । ಏವ । ಸಹ । ಅಂತರಿಕ್ಷೇಣ । ಉಪೇತಿ । ಹ್ವಯತೇ ।

---

| | |
|---|---|
| ಇಮಾಮ್ ಏವ ಸಹ ಅನ್ನಾದ್ಯೇನ ಉಪಹ್ವಯತೇ | ಇಂತಹ ಭೂಮಿಯನ್ನೇ ಉತ್ತಮಾರ್ಹವಾದ ಅನ್ನಾದ್ಯದೊಡನೆ ಹೋತೃವು ಆಹ್ವಾನಿಸುತ್ತಾನೆ. |

**ಎರಡನೆಯ ಮಂತ್ರದ ವಿವರಣೆ**

| | |
|---|---|
| ಉಪಹೂತಮ್ ವಾಮದೇವ್ಯಮ್ ಸಹ ಅಂತರಿಕ್ಷೇಣ ಇತಿ ಆಹ | ಶ್ರುತಿಯು **'ಉಪಹೂತಂ ವಾಮದೇವ್ಯಮ್ ಸಹ ಅಂತರಿಕ್ಷೇಣ'** ಎಂದು ಹೇಳುತ್ತದೆ. |
| ಪಶವಃ ವೈ ವಾಮದೇವ್ಯಮ್ | ವಾಮದೇವ್ಯಸಾಮವು ಪಶುಸ್ವರೂಪವೇ ಆಗಿದೆ. |
| ಪಶೂನ್ ಏವ ಸಹ ಅಂತರಿಕ್ಷೇಣ ಉಪಹ್ವಯತೇ | ಪಶುಸಾಧನವಾದ ಅಂತರಿಕ್ಷದೊಡನೆ ಪಶು ರೂಪವಾದ ವಾಮದೇವ್ಯವನ್ನೇ ಇದರಿಂದ ಆಹ್ವಾನಿಸುತ್ತಾನೆ. |

---

ಪೃಷ್ಠಸ್ತೋತ್ರಸಾಮಗಳಲ್ಲಿ ರಥಂತರವು ಮೊದಲನೆಯದು.ಲೋಕಗಳಲ್ಲಿ ಭೂಮಿಯು ಮೊದಲನೆಯದು. ಇಂತಹ ರಥಂತರವು ಅನ್ನಾದಹೇತುವಾದ ಭೂಮಿಯೊಡನೆ ಸಮೀಪಕ್ಕೆ

ಉಪಹೂತಂ ಬೃಹಥ್ಸಹ ದಿವೇತ್ಯಾಹೈರಂ ವೈ ಬೃಹದಿರಾಮೇವ ಸಹ ದಿವೋಪಹ್ವಯತ ಉಪಹೂತಾಸ್ಸಪ್ತ ಹೋತ್ರಾ ಇತ್ಯಾಹ

---

ಉಪಹೂತಮಿತ್ಯುಪ–ಹೂತಮ್ । ಬೃಹತ್ । ಸಹ । ದಿವಾ । ಇತಿ । ಆಹ । ಐರಮ್। ವೈ । ಬೃಹತ್ । ಇರಾಮ್ । ಏವ । ಸಹ । ದಿವಾ । ಉಪೇತಿ । ಹ್ವಯತೇ । ಉಪಹೂತಾ ಇತ್ಯುಪ–ಹೂತಾಃ । ಸಪ್ತ । ಹೋತ್ರಾಃ । ಇತಿ । ಆಹ ।

---

## ಇಡಾಜಪದ ಮೂರನೆಯ ಮಂತ್ರದ ವಿವರಣೆ

| | |
|---|---|
| ಉಪಹೂತಮ್ ಬೃಹತ್ ಸಹ ದಿವಾ ಇತ್ಯಾಹ | 'ಮತ್ತೊಂದು ಸಾಮವಾದ ಬೃಹತ್ಸಾಮವು ದ್ಯುಲೋಕದೊಡನೆ ಆಹ್ವಾನಿಸಲ್ಪಟ್ಟಿದೆ' ಎಂದು ಶ್ರುತಿಯು ಹೇಳುತ್ತದೆ. |
| ಐರಮ್ ವೈ ಬೃಹತ್ | ಬೃಹತ್ಸಾಮವು ವೃಷ್ಟಿಸಂಬಂಧಿಯಾಗಿದೆ. |
| ಇರಾಮ್ ಏವ ದಿವಾ ಸಹ ಉಪಹ್ವಯತೇ | ಈ ಮಂತ್ರದಿಂದ ವೃಷ್ಟಿಯನ್ನೇ ದ್ಯುಲೋಕದೊಡನೆ ಆಹ್ವಾನಿಸುತ್ತಾನೆ. |

## ನಾಲ್ಕನೆಯ ಮಂತ್ರದ ವಿವರಣೆ

| | |
|---|---|
| ಉಪಹೂತಾಃ ಸಪ್ತ ಹೋತ್ರಾಃ ಇತಿ ಆಹ | *'ಸಪ್ತಹೋತ್ರಕರು ಆಹ್ವಾನಿತರಾಗಿದ್ದಾರೆ' ಎಂದು ಶ್ರುತಿಯು ಹೇಳುತ್ತದೆ. |

---

ಬರುವಂತೆ ಆಹ್ವಾನಿಸಲ್ಪಟ್ಟಿದೆ. ಎಂದು ಶ್ರುತಿಯು ಹೇಳುತ್ತದೆ. ಈ ಮಂತ್ರಗಳಲ್ಲಿ ರೂಪಕರೂಪದಿಂದ ಇಡಾಹ್ವಾನವನ್ನು ಮಾಡಿದ್ದಾರೆ. ಇವು ಪ್ರಶಂಸಾರ್ಥವಾಗಿವೆ.

ಪೃಷ್ಠಸ್ತೋತ್ರಸಾಮಗಳಲ್ಲಿ ವಾಮದೇವ್ಯವೂ ಒಂದು. ಇದು ಪಶುಸಾಧನವಾದ ಅಂತರಿಕ್ಷದೊಡನೆ ಆಹ್ವಾನಿಸಲ್ಪಟ್ಟಿದೆ ಎಂದು ಶ್ರುತಿಯು ಹೇಳುತ್ತದೆ. ವಾಮದೇವ್ಯಸಾಮವು

---

* ಹೋತೃ, ಪ್ರಶಾಸ್ತೃ, ಬ್ರಾಹ್ಮಣಾಚ್ಛಂಸೀ, ಪೋತೃ, ನೇಷ್ಟೃ, ಆಗ್ನೀಧ್ರ, ಮತ್ತು ಅಚ್ಛಾವಾಕ ಇವರೇ ಸಪ್ತಹೋತ್ರಕರು.

ಹೋತ್ರಾ ಏವೋಪಹ್ವಯತ ಉಪಹೂತಾ ಧೇನು

[..ಧೇನುಃ(೨)ಸಹರ್ಷ..] ಸ್ಸಹರ್ಷಭೇತ್ಯಾಹ

ಮಿಥುನಮೇವೋಪಹ್ವಯತ ಉಪಹೂತೋ ಭಕ್ಷಸ್ಸಖೇತ್ಯಾಹ

---

ಹೋತ್ರಾಃ । ಏವ । ಉಪೇತಿ । ಹ್ವಯತೇ । ಉಪಹೂತೇತ್ಯುಪ-ಹೂತಾ । ಧೇನುಃ ।

(೨)। ಸಹರ್ಷಭೇತಿ ಸಹ-ಋಷಭಾ । ಇತಿ । ಆಹ । ಮಿಥುನಮ್ । ಏವ । ಉಪೇತಿ ।

ಹ್ವಯತೇ । ಉಪಹೂತ ಇತ್ಯುಪ-ಹೂತಃ । ಭಕ್ಷಃ । ಸಖಾ । ಇತಿ । ಆಹ ।

---

ಹೋತ್ರಾಃ ಏವ ಉಪಹ್ವಯತೇ — ಈ ಹೋತ್ರುಕರನ್ನೇ ಆಹ್ವಾನ ಮಾಡಿದವನಾಗುತ್ತಾನೆ.

**ಐದನೆಯ ಮಂತ್ರದ ವಿವರಣೆ**

ಉಪಹೂತಾ ಧೇನುಃ ಸಹರ್ಷಭಾ ಇತ್ಯಾಹ ಮಿಥುನಮ್ ಏವ ಉಪಹ್ವಯತೇ — ಈ ಮಂತ್ರದ ಪಾಠವು 'ಧೇನುವು ವೃಷಭಸಹಿತವಾಗಿ ಆಹ್ವಾನಿಸಲ್ಪಟ್ಟಿದೆ.' ಎಂದು ಹೇಳುತ್ತದೆ. ಇದರಿಂದ ಧೇನುವೃಷಭಾದಿಯುಗ್ಮವನ್ನೇ ಈ ಮಂತ್ರಜಪದಿಂದ ಆಹ್ವಾನಿಸುವಂತೆ ಆಗುತ್ತದೆ.

**ಮತ್ತೊಂದು ಮಂತ್ರದ ವಿವರಣೆ**

ಉಪಹೂತಃ ಭಕ್ಷಃ ಸಖಾ ಇತ್ಯಾಹ — 'ಮಿತ್ರನಂತೆ ಉಪಕಾರಕನಾದ ಸೋಮನು ಆಹ್ವಾನಿತನಾಗಿದ್ದಾನೆ.'ಎಂದು ಮಂತ್ರವು ಹೇಳುತ್ತದೆ.

---

ಪಶುರೂಪವೇ ಆಗಿದೆ. ವಾಮದೇವ್ಯವು ಪಶುಸಾಧನವೆಂದೂ, ಅಂತರಿಕ್ಷವು ಪಶುಸಂಬಂಧಿಯೆಂದೂ ಸ್ತೋತ್ರ ಮಾಡಲ್ಪಟ್ಟಿದೆ. ಇದು ಇಡಾಜಪಮಂತ್ರಗಳಲ್ಲಿ ಎರಡನೆಯ ಮಂತ್ರದ ಸ್ತುತಿಯಾಗಿದೆ.

**'ವೃಷ್ಟಿರ್ವಾ ಇಡಾ'** ಎಂದು ಸ್ತುತಿಸಿರುವುದರಿಂದ ಇಡಾಹ್ವಾನದಿಂದ ಹೋತೃವು ವೃಷ್ಟಿಯನ್ನೇ ದ್ಯುಲೋಕದೊಡನೆ ಆಹ್ವಾನಿಸುತ್ತಾನೆ ಎಂಬ ಸ್ತುತಿ ಇದು.

ಸೋಮಪೀಥಮೇವೋಪಹ್ವಯತ ಉಪಹೂತಾೕಳಹೋ ಇತ್ಯಾಹಾ

ತ್ಮಾನಮೇವೋಪಹ್ವಯತ ಆತ್ಮಾ ಹ್ಯುಪಹೂತಾನಾಂ ವಸಿಷ್ಠ ಇಡಾ

ಮುಪ ಹ್ವಯತೇ ಪಶವೋ ವಾ ಇಡಾ ಪಶೂನೇವೋಪಹ್ವಯತೇ

---

ಸೋಮಪೀಥಮಿತಿ ಸೋಮ-ಪೀಥಮ್ । ಏವ । ಉಪೇತಿ । ಹ್ವಯತೇ । ಉಪಹೂತಾ(ಳ)

ಇತ್ಯುಪ-ಹೂತಾ (ಳ) । ಹೋ ಇತಿ । ಇತಿ । ಆಹ । ಆತ್ಮಾನಮ್ । ಏವ । ಉಪೇತಿ ।

ಹ್ವಯತೇ । ಆತ್ಮಾ । ಹಿ । ಉಪಹೂತಾನಾಮಿತ್ಯುಪ-ಹೂತಾನಾಮ್ । ವಸಿಷ್ಠಃ ।

ಇಡಾಮ್ । ಉಪೇತಿ । ಹ್ವಯತೇ । ಪಶವಃ । ವೈ । ಇಡಾ । ಪಶೂನ್ । ಏವ ।

ಉಪೇತಿ । ಹ್ವಯತೇ ।

---

| | |
|---|---|
| ಸೋಮಪೀಥಮ್ ಏವ ಉಪ ಹ್ವಯತೇ | ಮತ್ತೆ ಮತ್ತೆ ಸೋಮಪಾನವನ್ನೇ ಇದು ಆಹ್ವಾನಿಸುತ್ತದೆ. |

**ಮತ್ತೊಂದು ಮಂತ್ರದ ವಿವರಣೆ**

| | |
|---|---|
| ಉಪಹೂತಾೕಳಹೋ ಇತಿ ಆಹ ಆತ್ಮಾನಮ್ ಏವ ಉಪಹ್ವಯತೇ | 'ಆತ್ಮನೇ ಇದರಿಂದ ಆಹ್ವಾನಿತನಾಗಿದ್ದಾನೆ.' ಎಂದು ಮಂತ್ರವು ಹೇಳುತ್ತದೆ. |
| ಆತ್ಮಾ ಹಿ ಉಪಹೂತಾನಾಮ್ ವಸಿಷ್ಠಃ | ಆಹ್ವಾನಿತರಾದ ಪೃಥಿವೀ-ರಥಂತರಾದಿಗಳಲ್ಲಿ ಆತ್ಮನೇ ಅತಿಮುಖ್ಯನಲ್ಲವೇ! |

**ಇಡೋಪಾಹ್ವಾನದ ಪ್ರಶಂಸೆ**

| | |
|---|---|
| ಇಡಾಮ್ ಉಪಹ್ವಯತೇ | ಇಡಾದೇವಿಯನ್ನು **ಇಡೋಪಹೂತಾ** ಮೊದಲಾದ ಮಂತ್ರಗಳಿಂದ ಹೋತೃವು ಆಹ್ವಾನಿಸುತ್ತಾನೆ. |
| ಪಶವಃ ವೈ ಇಡಾ ಪಶೂನ್ ಏವ ಉಪಹ್ವಯತೇ | ಇಡೆಯು ಪಶುಸ್ವರೂಪವಷ್ಟೆ. ಇದು ಪಶುಗಳನ್ನೇ ಆಹ್ವಾನಿಸಿದಂತಾಗುತ್ತದೆ. |

ಚತುರುಪಹ್ವಯತೇ ಚತುಷ್ಪಾದೋ ಹಿ ಪಶವೋ

ಮಾನವೀತ್ಯಾಹ ಮನುರ್ಹ್ಯೇ[..ಹ್ಯೇತಾಮ್(೩)ಅಗ್ರೇ..]

ತಾಮಗ್ರೇಽಪಶ್ಯದ್ಘೃತಪದೀತ್ಯಾಹ

---

ಚತುಃ । ಉಪೇತಿ । ಹ್ವಯತೇ । ಚತುಷ್ಪಾದ ಇತಿ ಚತುಃ-ಪಾದಃ । ಹಿ । ಪಶವಃ ।

ಮಾನವೀ । ಇತಿ । ಆಹ । ಮನುಃ । ಹಿ । ಏತಾಮ್ ।(೩)। ಅಗ್ರೇ । ಅಪಶ್ಯತ್ ।

ಘೃತಪದೀತಿ ಘೃತ-ಪದೀ । ಇತಿ । ಆಹ ।

---

| | |
|---|---|
| ಚತುಃ ಉಪಹ್ವಯತೇ | **'ಇಡೋಪಹೂತಾ' 'ಉಪಹೂತೇಡಾ'** ಎಂದು ನಾಲ್ಕು ಬಾರಿ ಇಡೆಯನ್ನು ಆಹ್ವಾನಿಸುತ್ತಾನೆ. |
| ಚತುಷ್ಪಾದಃ ಪಶವಃ ಹಿ | ಪಶುಗಳು ನಾಲ್ಕು ಕಾಲುಗಳುಳ್ಳವಷ್ಟೆ. |

**ಮಾನವೀ,ಘೃತಪದೀ, ಮೈತ್ರಾವರುಣೀ ಪದಗಳ ವಿವರಣೆ**

| | |
|---|---|
| ಮಾನವೀ ಇತಿ ಆಹ | ಶ್ರುತಿಯು ಇಡೆಯನ್ನು **'ಮಾನವೀ'**ಎಂದು ಹೊಗಳುತ್ತದೆ. |
| ಮನುಃ ಹಿ ಏತಾಮ್ ಅಗ್ರೇ ಅಪಶ್ಯತ್ | ಮನುವು ತಾನೇ ಮೊದಲು ಇಡೆಯನ್ನು ನೋಡಿ ಪಡೆದನು!! [ಮಾನವೀ ಎಂಬುದು ಅನ್ವರ್ಥವಾಗಿದೆ.] |
| ಘೃತಪದೀ ಇತಿ ಆಹ | ಶ್ರುತಿಯು ಇಡೆಯನ್ನು**'ಘೃತಪದೀ'**ಎಂದು ಸ್ತುತಿಸುತ್ತದೆ. |

---

ಈ ನಾಲ್ಕನೆಯ ಮಂತ್ರಜಪದಿಂದ ಹೋತೃವು ಸೋಮಯಾಗದ ಏಳು ಹೋತ್ರಕರನ್ನೇ ಆಹ್ವಾನಿಸುತ್ತಾನೆ.

ಐದನೆಯ ಮಂತ್ರಜಪದಿಂದ ಹೋತೃವು ಧೇನು ವೃಷಭಾದಿಯುಗ್ಮವನ್ನೇ ಆಹ್ವಾನಿಸುತ್ತಾನೆ.

ಆರನೆಯ ಮಂತ್ರಜಪದಿಂದ ಬ್ರಾಹ್ಮಣನಿಗೆ ಮುಖ್ಯವಾಗಿರುವ ಸೋಮಪಾನವನ್ನೇ

ಯದೇವಾಸ್ಯೈ ಪದಾದ್ಘೃತಮಪೀಡ್ಯತ ತಸ್ಮಾದೇವಮಾಹ ಮೈತ್ರಾವರುಣೀತ್ಯಾಹ ಮಿತ್ರಾವರುಣೌ ಹ್ಯೇನಾಗ್ಂ ಸಮೈರಯತಾಂ ಬ್ರಹ್ಮ ದೇವಕೃತಮುಪಹೂತಮಿತ್ಯಾಹ

---

ಯತ್ । ಏವ । ಅಸ್ಯೈ । ಪದಾತ್ । ಘೃತಮ್ । ಅಪೀಡ್ಯತ । ತಸ್ಮಾತ್ । ಏವಮ್ । ಆಹ। ಮೈತ್ರಾವರುಣೀತಿ ಮೈತ್ರಾ-ವರುಣೀ । ಇತಿ । ಆಹ । ಮಿತ್ರಾವರುಣಾವಿತಿ ಮಿತ್ರಾ-ವರುಣೌ । ಹಿ । ಏನಾಮ್ । ಸಮೈರಯತಾಮಿತಿ ಸಂ-ಐರಯತಾಮ್ । ಬ್ರಹ್ಮ । ದೇವ ಕೃತಮಿತಿ ದೇವ-ಕೃತಮ್ । ಉಪಹೂತಮಿತ್ಯುಪ-ಹೂತಮ್ । ಇತಿ । ಆಹ ।

---

| | |
|---|---|
| ಯತ್ ಏವ ಅಸ್ಯೈ ಪದಾತ್ ಘೃತಮ್ ಅಪೀಡ್ಯತ ತಸ್ಮಾತ್ ಏವಮ್ ಆಹ | ಯಾವ ಕಾರಣದಿಂದ ಇಡಾದೇವಿಯ ಹೆಜ್ಜೆ ಹೆಜ್ಜೆಯಿಂದಲೂ ತುಪ್ಪವು ಹೊರಬಂದಿತೋ ಆದುದರಿಂದ ಶ್ರುತಿಯು ಇಡೆಯನ್ನು **ಘೃತಪದೀ** ಎಂದು ಹೇಳುತ್ತದೆ. |
| ಮೈತ್ರಾವರುಣೀ ಇತಿ ಆಹ | ಶ್ರುತಿಯು ಇಡೆಯನ್ನು ಮಿತ್ರಾವರುಣಸಂಬಂಧಿಯೆಂದು ಹೇಳುತ್ತದೆ. |
| ಏನಾಮ್ ಮಿತ್ರಾವರುಣೌ ಹಿ ಸಮೈರಯತಾಮ್ | ಮಿತ್ರಾವರುಣದೇವತೆಗಳು ತಾನೇ ಇಡಾರೂಪಿಣಿಯಾದ ಗೋವನ್ನು ಭೂಮಿಯಲ್ಲಿ ಸಂಚರಿಸುವಂತೆ ಮಾಡಿದರು! |

## 'ಬ್ರಹ್ಮ...ಉಪಹೂತಮ್' ಮಂತ್ರದ ವಿವರಣೆ

| | |
|---|---|
| ಬ್ರಹ್ಮ ದೇವಕೃತಮ್ ಉಪಹೂತಮ್ ಇತಿ ಆಹ | ಶ್ರುತಿಯು ದೇವಕೃತವಾದ [ಋತ್ವಿಕ್ಕೃತವಾದ] ಪ್ರೌಢವಾದ ಯಜ್ಞಕರ್ಮದ ಉಪಾಹ್ವಾನವೇ ಇದಾಗಿದೆಯೆಂದು ಹೇಳುತ್ತದೆ. |

ಬ್ರಹ್ಮೈವೋಪ ಹ್ವಯತೇ ದೈವ್ಯಾ ಅಧ್ವರ್ಯವ ಉಪಹೂತಾ ಉಪಹೂತಾ ಮನುಷ್ಯಾ ಇತ್ಯಾಹ ದೇವಮನುಷ್ಯಾನೇವೋಪ ಹ್ವಯತೇ

---

ಬ್ರಹ್ಮ । ಏವ । ಉಪೇತಿ । ಹ್ವಯತೇ । ದೈವ್ಯಾಃ । ಅಧ್ವರ್ಯವಃ । ಉಪಹೂತಾ ಇತ್ಯುಪ-ಹೂತಾಃ । ಉಪಹೂತಾ ಇತ್ಯುಪ-ಹೂತಾಃ । ಮನುಷ್ಯಾಃ । ಇತಿ । ಆಹ । ದೇವಮನುಷ್ಯಾನಿತಿ ದೇವ-ಮನುಷ್ಯಾನ್ । ಏವ । ಉಪೇತಿ । ಹ್ವಯತೇ ।

---

| | |
|---|---|
| ಬ್ರಹ್ಮ ಏವ ಉಪಹ್ವಯತೇ | ಇದರಿಂದ ವ್ಯಾಪಕವಾದ (ಬೃಹತ್ತಾದ) ಯಜ್ಞ ಕರ್ಮವನ್ನೇ ಆಹ್ವಾನಿಸುತ್ತಾನೆ. |

**ದೈವ್ಯಾ...ಮುಂತಾದ ಮಂತ್ರಗಳ ವಿವರಣೆ**

| | |
|---|---|
| ದೈವ್ಯಾಃ ಅಧ್ವರ್ಯವಃ ಉಪಹೂತಾಃ ಉಪಹೂತಾಃ ಮನುಷ್ಯಾಃ ಇತಿ ಆಹ | ದೇವತೆಗಳಿಗೆ ಸಂಬಂಧಿಸಿದ ಅಧ್ವರ್ಯುಗಳ ಉಪಾಹ್ವಾನವಿದೆ.ಹಾಗೆಯೇ ಮನುಷ್ಯಸಂಬಂಧಿ ಯಾದ ಅಧ್ವರ್ಯುಗಳೂ ಆಹೂತರಾಗಿದ್ದಾರೆ. ಎಂದು ಶ್ರುತಿಯು ಹೇಳುತ್ತದೆ. |
| ದೇವಮನುಷ್ಯಾನ್ ಏವ ಉಪಹ್ವಯತೇ | ಇದರಿಂದ ದೇವಾಧ್ವರ್ಯುಗಳನ್ನೂ ಮಾನವಾ ಧ್ವರ್ಯುಗಳನ್ನೂ ಆಹ್ವಾನಿಸಿದವನಾಗುತ್ತಾನೆ. |

---

ಆಹ್ವಾನಿಸಿದಂತಾಗುತ್ತದೆ.ಅಭ್ಯಾಸ(ಆವೃತ್ತಿ)ದಿಂದ ನಾಲ್ಕು ಬಾರಿ ಇಡೆಯನ್ನು ಆಹ್ವಾನಿಸಿ ದಂತಾಗುತ್ತದೆ.

ಇದು ಗೋರೂಪಧಾರಿಣಿಯಾದ ಇಡೆಗೆ ತಕ್ಕುದ್ದಾಗಿದೆ.ಪಶುಗಳಿಗೆ ನಾಲ್ಕು ಕಾಲುಗಳಿರುವವಷ್ಟೆ. ಅದುದರಿಂದ ಚತುರುಪಾಹ್ವಾನವು ಉಚಿತವಾಗಿದೆ. **'ಇಡೋಪಹೂತಾ'** ಎಂಬ ಆಹ್ವಾನ ದಿಂದ ಪರಾಙ್ಮುಖಳಾದ ಇಡಾದೇವಿಯು**'ಉಪಹೂತೇಡಾ'**ಎಂಬ ಆಹ್ವಾನದಿಂದ

ಯ ಇಮಂ ಯಜ್ಞಮವಾನ್ ಯೇ ಯಜ್ಞಪತಿಂ ವರ್ಧಾನಿತ್ಯಾಹ [(ಳ)] ಯಜ್ಞಾಯ ಚೈವ ಯಜಮಾನಾಯ ಚಾಶಿಷಮಾ ಶಾಸ್ತ

---

ಯೇ । ಇಮಮ್ । ಯಜ್ಞಮ್ । ಅವಾನ್ । ಯೇ । ಯಜ್ಞಪತಿಮಿತಿ ಯಜ್ಞ–ಪತಿಮ್। ವರ್ಧಾನ್ । ಇತಿ । ಆಹ [(ಳ)] ಯಜ್ಞಾಯ । ಚ । ಏವ । ಯಜಮಾನಾಯ । ಚ । ಆಶಿಷಮಿತ್ಯಾ–ಶಿಷಮ್ । ಏತಿ । ಶಾಸ್ತೇ ।

---

**ಯ ಇಮಮ್... ಮೊದಲಾದ ಮಂತ್ರಗಳ ವ್ಯಾಖ್ಯಾನ**

| | |
|---|---|
| ಯೇ ಇಮಮ್ ಯಜ್ಞಮ್ ಅವಾನ್ | ಯಾವ ದೇವತೆಗಳು ಈ ಯಜ್ಞವನ್ನು ರಕ್ಷಿಸುವರೋ |
| ಯೇ ಯಜ್ಞಪತಿಮ್ ವರ್ಧಾನ್ ಇತಿ ಆಹ **[ತೇ ಉಪಹೂತಾಃ]** | ಯಾವ ದೇವತೆಗಳು ಯಜ್ಞಪತಿಯಂತೆ ಯಜಮಾನನನ್ನು ವೃದ್ಧಿಗೊಳಿಸುತ್ತಾರೆಯೋ ಆ ದೇವತೆಗಳು ಆಹೂತರಾಗಿದ್ದಾರೆ ಎಂದು ಶ್ರುತಿಯು ಹೇಳುತ್ತದೆ. |
| ಯಜ್ಞಾಯ ಚ ಯಜಮಾನಾಯ ಚ ಆಶಿಷಮ್ ಆಶಾಸ್ತೇ ಏವ | ಯಜ್ಞಕ್ಕೂ, ಮತ್ತು ಯಜಮಾನನಿಗೂ ರಕ್ಷಣ–ವರ್ಧನಗಳ ವಿಷಯಕವಾದ ಶುಭಾಶಂಸೆಯನ್ನು ಮಾಡಿದಂತಾಗುತ್ತದೆ. |

---

ಸಮ್ಮುಖಳಾಗುತ್ತಾಳೆ. ಇದರಿಂದ ಯಜಮಾನನು ಪಶುಸಂಪನ್ನನಾಗುತ್ತಾನೆ.

**ಮಾನವೀ, ಘೃತಪದೀ ,ಮೈತ್ರಾವರುಣೀ** ಈ ಶಬ್ದಗಳು ಅನ್ವರ್ಥವಾಗಿ ಇಡೆಯನ್ನು ಸ್ತುತಿಸುತ್ತವೆ.

**'ಬ್ರಹ್ಮ ದೇವಕೃತಮ್'** ಎಂಬ ಮಂತ್ರದಿಂದ ಆಹ್ವಾನವು–ದೇವತೆಗಳಿಂದಲೂ ಋತ್ವಿಜರಿಂದಲೂ ಅನುಷ್ಠಿಸಲ್ಪಡುವ ಪ್ರೌಢಕರ್ಮದ ಉಪಾಹ್ವಾನವು ಇದಾಗಿದೆಯೆಂದು–ಹೇಳುತ್ತದೆ.

ದೇವ ಶಬ್ದಕ್ಕೆ ಋತ್ವಿಕ್ ಎಂಬ ಅರ್ಥವು ಇದೆ.ಬ್ರಹ್ಮಶಬ್ದಕ್ಕೂ ಸಹ ಅನೇಕ ಅರ್ಥಗಳು*ಇವೆ.

---

***ವೇದಸ್ತತ್ತ್ವಂ ತಪೋ ಬ್ರಹ್ಮ ಬ್ರಹ್ಮಾ ವಿಪ್ರಃ ಪ್ರಜಾಪತಿಃ** –ಅಮರಕೋಶ

ಉಪಹೂತೇ ದ್ಯಾವಾಪೃಥಿವೀ ಇತ್ಯಾಹ ದ್ಯಾವಾಪೃಥಿವೀ

ಏವೋಪಹ್ವಯತೇ ಪೂರ್ವಜೇ ಋತಾವರೀ ಇತ್ಯಾಹ

ಪೂರ್ವಜೇ ಹ್ಯೇತೇ ಋತಾವರೀ

---

ಉಪಹೂತೇ ಇತ್ಯುಪ-ಹೂತೇ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಇತಿ ।

ಆಹ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಏವ । ಉಪೇತಿ । ಹ್ವಯತೇ ।

ಪೂರ್ವಜೇ ಇತಿ ಪೂರ್ವ-ಜೇ । ಋತಾವರೀ ಇತ್ಯೃತ-ವರೀ । ಇತಿ । ಆಹ ।

ಪೂರ್ವಜೇ ಇತಿ ಪೂರ್ವ-ಜೇ । ಹಿ । ಏತೇ ಇತಿ । ಋತಾವರೀ ಇತ್ಯೃತ-ವರೀ ।

---

**ಉಪಹೂತೇ....ಎಂಬ ಮಂತ್ರಭಾಗದ ವಿವರಣೆ**

| | |
|---|---|
| ಉಪಹೂತೇ ದ್ಯಾವಾಪೃಥಿವೀ ಇತಿ ಆಹ | ಭೂಮಿ-ಅಂತರಿಕ್ಷಗಳು ಆಹ್ವಾನಿಸಲ್ಪಟ್ಟಿವೆ ಎಂಬುದಾಗಿ ಶ್ರುತಿಯು ಹೇಳುತ್ತದೆ. |
| ದ್ಯಾವಾಪೃಥಿವೀ ಏವ ಉಪಹ್ವಯತೇ | ಇದರಿಂದ ಭೂಮ್ಯಂತರಿಕ್ಷಗಳನ್ನೇ ಆಹ್ವಾನಿಸಿದವನಾಗುತ್ತಾನೆ. |

**ಪೂರ್ವಜೇ.....ಮುಂತಾದ ಮಂತ್ರಭಾಗಗಳ ವಿವರಣೆ**

| | |
|---|---|
| ಪೂರ್ವಜೇ ಋತಾವರೀ ಇತಿ ಆಹ | ಈ ದ್ಯಾವಾಪೃಥಿವಿಗಳು ಬೇರೆಯ ವಿಕಾರಗಳಿಗಿಂತಲೂ ಮೊದಲು ಹುಟ್ಟಿದವುಗಳು/**ಯಜ್ಞಕ್ಕೆ ಆಶ್ರಯವಾದವುಗಳು** ಎಂದು ಶ್ರುತಿಯು ಹೇಳುತ್ತದೆ. |
| ಏತೇ ಋತಾವರೀ ಪೂರ್ವಜೇ ಹಿ | ಈ ದ್ಯಾವಾಪೃಥಿವಿಗಳು ಎಲ್ಲಕ್ಕಿಂತಲೂ ಪೂರ್ವದಲ್ಲಿ ಜನಿಸಿದವುಗಳೂ, ಯಜ್ಞಕ್ಕೆ ಆಧಾರಗಳೂ ಆಗಿವೆಯಷ್ಟೆ. [ಅವುಗಳನ್ನು ಈ ಮಂತ್ರಭಾಗವು ಆಹ್ವಾನಿಸುತ್ತದೆ] |

ದೇವೀ ದೇವಪುತ್ರೇ ಇತ್ಯಾಹ ದೇವೀ ಹ್ಯೇತೇ ದೇವಪುತ್ರೇ ಉಪ ಹೂತೋಽಯಂ ಯಜಮಾನ ಇತ್ಯಾಹ ಯಜಮಾನಮೇವೋಪ ಹ್ವಯತ ಉತ್ತರಸ್ಯಾಂ ದೇವಯಜ್ಯಾಯಾಮುಪಹೂತೋ

---

ದೇವೀ ಇತಿ । ದೇವಪುತ್ರ ಇತಿ ದೇವ-ಪುತ್ರೇ । ಇತಿ । ಆಹ । ದೇವೀ ಇತಿ । ಹಿ । ಏತೇ ಇತಿ । ದೇವಪುತ್ರೇ ಇತಿ ದೇವ-ಪುತ್ರೇ । ಉಪಹೂತ ಇತ್ಯುಪ-ಹೂತಃ । ಅಯಮ್ । ಯಜಮಾನಃ । ಇತಿ । ಆಹ । ಯಜಮಾನಮ್ । ಏವ । ಉಪೇತಿ । ಹ್ವಯತೇ । ಉತ್ತರಸ್ಯಾಮಿತ್ಯುತ್-ತರಸ್ಯಾಮ್ । ದೇವಯಜ್ಯಾಯಾಮಿತಿ ದೇವ-ಯಜ್ಯಾಯಾಮ್ । ಉಪಹೂತ ಇತ್ಯುಪ-ಹೂತಃ ।

---

| | |
|---|---|
| ದೇವೀ ದೇವಪುತ್ರೇ ಇತಿ ಆಹ | ಈ ಭೂಮ್ಯಂತರಿಕ್ಷಗಳು ದೇವತಾಸ್ವರೂಪವಾಗಿವೆ. ದೇವತೆಗಳು ಇವುಗಳ ಪುತ್ರರೂಪರಾಗಿದ್ದಾರೆಂದು ಮಂತ್ರವು ಪ್ರಶಂಸಿಸುತ್ತದೆ. |
| ಏತೇ ದೇವಪುತ್ರೇ ದೇವೀ ಹಿ | ದೇವತೆಗಳು ಇವುಗಳ ಮಕ್ಕಳಂತೆಯೇ ಇರುತ್ತಾರಷ್ಟೆ. ಈ ದ್ಯಾವಾಪೃಥಿವಿಗಳು ದೇವತಾಸ್ವರೂಪವೂ ಆಗಿವೆ. |
| ಅಯಮ್ ಯಜಮಾನಃ ಉಪ ಹೂತಃ ಇತಿ ಆಹ | ಈ ಯಜಮಾನನು ಇಡಾಭಕ್ಷಣಕ್ಕಾಗಿ ಆಹೂತನಾಗಿದ್ದಾನೆ. ಎಂದು ಶ್ರುತಿಯು ಹೊಗಳುತ್ತದೆ. |
| ಯಜಮಾನಮ್ ಏವ ಉಪಹ್ವಯತೇ | ಇದರಿಂದ ಹೋತೃವು ಯಜಮಾನನನ್ನೇ ಇಡಾಭಕ್ಷಣಕ್ಕಾಗಿ ಆಹ್ವಾನಿಸಿದವನಾಗುತ್ತಾನೆ. |

**ಉತ್ತರಸ್ಯಾಂ....ಮೊದಲಾದ ಮಂತ್ರಭಾಗಗಳ ವಿವರಣೆ**

| | |
|---|---|
| ಉತ್ತರಸ್ಯಾಮ್ ದೇವಯಜ್ಯಾಯಾಮ್ ಉಪಹೂತಃ | ಉತ್ತರಯಾಗರೂಪವಾದ ಸೋಮಾದಿಯಾಗಗಳಿಗಾಗಿ ಯಜಮಾನನು ಉಪಹೂತನಾಗಿದ್ದಾನೆ. |

ಭೂಯಸಿ ಹವಿಷ್ಕರಣ ಉಪಹೂತೋ ದಿವ್ಯೇ

ಧಾಮನ್ನುಪಹೂತ [..ಹೂತಃ(೫)] ಇತ್ಯಾಹ ಪ್ರಜಾ ವಾ

ಉತ್ತರಾ ದೇವಯಜ್ಯಾ ಪಶವೋ ಭೂಯೋ ಹವಿಷ್ಕರಣಗ್ಂ

---

ಭೂಯಸಿ । ಹವಿಷ್ಕರಣ ಇತಿ ಹವಿಃ-ಕರಣೇ । ಉಪಹೂತ ಇತ್ಯುಪ-ಹೂತಃ । ದಿವ್ಯೇ ।

ಧಾಮನ್ನ್ । ಉಪಹೂತ ಇತ್ಯುಪ-ಹೂತಃ । (೫) । ಇತಿ । ಆಹ । ಪ್ರಜೇತಿ ಪ್ರ-ಜಾ ।

ವೈ । ಉತ್ತರೇತ್ಯುತ್-ತರಾ । ದೇವಯಜ್ಯೇತಿ ದೇವ-ಯಜ್ಯಾ। ಪಶವಃ । ಭೂಯಃ ।

ಹವಿಷ್ಕರಣಮಿತಿ ಹವಿಃ-ಕರಣಮ್ ।

---

| | |
|---|---|
| ಭೂಯಸಿ ಹವಿಷ್ಕರಣೇ ಉಪಹೂತಃ | ಹಲವು ಹವಿಸ್ಸುಗಳಿಂದ ಕೂಡಿರುವ ಈ ದರ್ಶ-ಪೂರ್ಣಮಾಸಾದಿಕರ್ಮಗಳಿಗಾಗಿ ಯಜಮಾನನು ಸಮೀಪದಲ್ಲಿರುವಂತೆ ಆಹೂತನಾಗಿದ್ದಾನೆ. |
| ದಿವ್ಯೇ ಧಾಮನ್ ಉಪಹೂತಃ | ಉತ್ತಮವಾದ ಸ್ವರ್ಗಪ್ರಾಪ್ತಿಗಾಗಿ ಯಜಮಾನನು ಉಪಹೂತನಾಗಿದ್ದಾನೆ. |
| ಇತಿ ಆಹ | ಹೀಗೆ ಮಂತ್ರವು ಹೇಳುತ್ತದೆ. |
| ಪ್ರಜಾ ವೈ ಉತ್ತರಾ ದೇವಯಜ್ಯಾ | ಪ್ರಜಾಸಾಧನವಾದ ಸೋಮಯಾಗವು ಉತ್ತರ ದೇವಯಜ್ಯೆ. |
| ಪಶವಃ ಭೂಯಃ ಹವಿಷ್ಕರಣಮ್ | ಪಶುಸಾಧನವಾದ ಹಲವು ಹವಿಸ್ಸುಗಳುಳ್ಳ ದರ್ಶ-ಪೂರ್ಣಮಾಸವು ಭೂಯೋಹವಿಷ್ಕರಣವಾಗಿದೆ. |

---

ದೇವತೆಗಳ ಅಧ್ವರ್ಯುಗಳು ಉಪಹೂತರಾಗಿದ್ದಾರೆ.'**ಅಶ್ವಿನೌ ಹಿ ದೇವಾನಾಮಧ್ವರ್ಯೂ ಆಸ್ತಾಮ್**'ಎಂಬ ಮಂತ್ರಾಂತರದಲ್ಲಿ ಅಶ್ವಿನೀದೇವತೆಗಳು ದೇವತೆಗಳು ಅನುಷ್ಠಿಸುವ ಯಾಗದಲ್ಲಿ ಅಧ್ವರ್ಯುಗಳಾಗಿ(ಯಾಗನಿರ್ವಾಹಕರಾಗಿ) ಉಪಾಹ್ವಾನವನ್ನು ಪಡೆದಿದ್ದಾರೆ. ಹೀಗಾಗಿ ಅಶ್ವಿನೀದೇವತೆಗಳು ದೇವಾಧ್ವರ್ಯುಗಳು. ಮಾನವಾಧ್ವರ್ಯುಗಳು ಪ್ರಸಿದ್ಧರಾಗಿಯೇ ಇದ್ದಾರೆ.

ಸುವರ್ಗೋ ಲೋಕೋ ದಿವ್ಯಂ ಧಾಮೇದಮಸೀದಮಸೀ

ತ್ಯೇವ ಯಜ್ಞಸ್ಯ ಪ್ರಿಯಂ ಧಾಮೋಪ ಹ್ವಯತೇ

---

ಸುವರ್ಗ ಇತಿ ಸುವಃ-ಗಃ । ಲೋಕಃ । ದಿವ್ಯಮ್ । ಧಾಮ । ಇದಮ್ । ಅಸಿ । ಇದಮ್।

ಅಸಿ । ಇತಿ । ಏವ । ಯಜ್ಞಸ್ಯ । ಪ್ರಿಯಮ್ । ಧಾಮ । ಉಪೇತಿ । ಹ್ವಯತೇ ।

---

| | |
|---|---|
| ಸುವರ್ಗಃ ಲೋಕಃ ದಿವ್ಯಮ್ ಧಾಮ | ಸ್ವರ್ಗಲೋಕವು ಯಜಮಾನನಿಗೆ ದಿವ್ಯಸ್ಥಾನವಾಗಿದೆ. [ಇವುಗಳಿಗಾಗಿ ಯಜಮಾನನು ಉಪಹೂತನಾಗಿದ್ದಾನೆ] |
| ಇದಮ್ ಅಸಿ | ಈ ನಿರೂಢಪಶುಬಂಧಯಾಗವನ್ನು ಮಾಡಲು ಇಚ್ಛಿಸುವವನಾಗಿದ್ದೀಯೆ. |
| ಇದಮ್ ಅಸಿ | ಈ ಸೋಮಯಾಗಾದಿಸಕಲಕರ್ಮಗಳನ್ನು ಅನುಷ್ಠಿಸಲು ಇಚ್ಛಿಸುವವನಾಗಿದ್ದೀಯೆ. |
| ಇತಿ ಏವ ಯಜ್ಞಸ್ಯ ಪ್ರಿಯಮ್ ಧಾಮ ಉಪಹ್ವಯತೇ | ಹೀಗೆ ಸರ್ವಯಜ್ಞಾದಿಗಳಿಗೂ ಸಂಬಂಧಿಸಿದಂತೆ ಪ್ರಿಯವಾದ ಸ್ಥಾನಗಳಿಗಾಗಿ ಯಜಮಾನನನ್ನು ಹೋತೃವು ಆಹ್ವಾನಿಸುತ್ತಾನೆ. |

---

ಈ ಇಬ್ಬರನ್ನೂ ಇಡಾಭಕ್ಷಣಕ್ಕಾಗಿ ಆಹ್ವಾನಿಸಿದವನಾಗಿದ್ದಾನೆ.

ಇಲ್ಲಿಯ ಮಂತ್ರಗಳ ಸಂಕ್ಷಿಪ್ತ ತಾತ್ಪರ್ಯ ಹೀಗಿದೆ:- ಈ ಯಜ್ಞವನ್ನು ರಕ್ಷಿಸುವ- ವರ್ಧಿಸುವಂತೆ ಮಾಡುವ ದೇವತೆಗಳು ಆಹೂತರಾಗಿದ್ದಾರೆ. ಇದರಿಂದ ಯಜ್ಞಕ್ಕೂ ಯಜಮಾನನಿಗೂ ರಕ್ಷಕ-ವರ್ಧಕರಿಗೂ ಶುಭಾಶಂಸನೆಯನ್ನು ಮಾಡಿದಂತಾಗುತ್ತದೆ. ಇದು ಮಂತ್ರಭಾಗದ ಪ್ರಶಂಸೆ.

'ಭೂಮಿ-ಅಂತರಿಕ್ಷಗಳು ಆಹ್ವಾನಿಸಲ್ಪಟ್ಟಿವೆ.' ಎಂಬ ಮಂತ್ರದಿಂದ ಅವುಗಳನ್ನೇ ಆಹ್ವಾನಿಸಿದಂತಾಗಿದೆಯೆಂಬುದು ಆ ಮಂತ್ರದ ಪ್ರಶಂಸೆ.

**'ಪೂರ್ವಜೇ ಋತಾವರೀ'** ಮೊದಲಾದ ಮಂತ್ರಗಳಿಂದ ದೇವತೆಗಳು-ಮನುಷ್ಯರು ಮೊದಲಾದವರು ಜನಿಸುವ ಮೊದಲೇ ಉತ್ಪನ್ನವಾಗಿರುವ, ದೇವತೆಗಳನ್ನೇ ಪುತ್ರರೂಪರನ್ನಾಗಿ ಪಡೆದಿರುವ ದ್ಯಾವಾಪೃಥಿವಿಗಳು ದೇವತಾಸ್ವರೂಪರು. ಅವುಗಳನ್ನು ಇಡಾಭಕ್ಷಣಕ್ಕಾಗಿ

ವಿಶ್ವಮಸ್ಯ ಪ್ರಿಯಮುಪಹೂತಮಿತ್ಯಾಹಾಛಂಬಟ್ಕಾರಮೇವೋಪ ಹ್ವಯತೇ॥೪೧-7॥

[ ಆಹ ಧೇನುರೇತಾಂ ವರ್ಧಾನಿತ್ಯಾಹ ಧಾಮನ್ನುಪಹೂತಶ್ಚತುಸ್ತ್ರಿಗ್ಂಶ ಚ್ಚ॥]

---

ವಿಶ್ವಮ್। ಅಸ್ಯ । ಪ್ರಿಯಮ್ । ಉಪಹೂತಮಿತ್ಯುಪ-ಹೂತಮ್ । ಇತಿ । ಆಹ । ಅಛಂಬಟ್ಕಾರಮಿತ್ಯಛಂಬಟ್-ಕಾರಮ್ । ಏವ । ಉಪೇತಿ । ಹ್ವಯತೇ ॥ ೪೧ ॥

---

**ವಿಶ್ವಮಸ್ಯ....ಎಂಬ ಮಂತ್ರದ ವಿವರಣೆ**

| | |
|---|---|
| ಅಸ್ಯ ವಿಶ್ವಮ್ ಪ್ರಿಯಮ್ ಉಪಹೂತಮ್ ಇತಿ ಆಹ ಅಛಂಬಟ್ಕಾರಮ್ ಏವ ಉಪಹ್ವಯತೇ | ಈ ಯಜಮಾನನಿಗೆ ಪ್ರಿಯವಾದುದೆಲ್ಲವೂ ಆಹ್ವಾನಿಸಲ್ಪಟ್ಟಿದೆ ಎಂದು ಶ್ರುತಿಯು ಹೇಳುತ್ತದೆ. ವ್ಯರ್ಥವಾಗದಂತೆ ಯಜಮಾನನೂ, ಅವನಿಗೆ ಪ್ರಿಯವಾದುದೆಲ್ಲವೂ ಹೋತೃವಿನಿಂದ ಉಪಹೂತವಾಗಿವೆ. |

---

ಆಹ್ವಾನಿಸಲಾಗಿದೆ ಎಂಬುದು ಆ ಮಂತ್ರದ ಪ್ರಶಂಸೆ. ಯಜಮಾನನನ್ನು ಇಡಾಭಕ್ಷಣಕ್ಕಾಗಿ ಆಹ್ವಾನಿಸಿದವನಾಗುತ್ತಾನೆ. ಎಂದು ಇನ್ನೊಂದು ಮಂತ್ರದ ಪ್ರಶಂಸೆ.

ಮುಂದಿನ ಸೋಮಾದಿ ಯಾಗಗಳಿಗಾಗಿಯೂ, ಉತ್ತಮವಾದ ಸ್ವರ್ಗಪ್ರಾಪ್ತಿಗಾಗಿಯೂ, ಯಜಮಾನನು ಉಪಹೂತನಾಗಿರುವನು. ಹಲವು ಹವಿಸ್ಸುಳ್ಳ ದರ್ಶ-ಪೂರ್ಣಮಾಸಕ್ಕಾಗಿ, ಸ್ವರ್ಗಲೋಕಕ್ಕಾಗಿ ಯಜಮಾನನು ಆಹೂತನಾಗಿರುವನು.

'ಇಂತಹ ಯಜ್ಞವನ್ನು ಅನುಷ್ಠಿಸಲು,' ಎಂಬುದನ್ನು **ಇದಮಸಿ-ಇದಮಸಿ** ಎಂದು ಶ್ರುತಿಯು ನಿರ್ದೇಶ ಮಾಡುತ್ತದೆ. ಈ ರೀತಿಯಾಗಿ ವೀಪ್ಸಾದಿಂದ ನಿರ್ದೇಶ ಮಾಡಿದಾಗ, ಸರ್ವ ಯಜ್ಞಗಳನ್ನೂ ಅನುಷ್ಠಿಸುವ ಸಂಬಂಧವಾಗಿ ಪ್ರಿಯವಾದ ಸ್ಥಾನಗಳಿಗಾಗಿಯೂ ಹೋತೃವು ಯಜಮಾನನನ್ನು ಆಹ್ವಾನ ಮಾಡುತ್ತಾನೆಂದು ತಾತ್ಪರ್ಯ.

ಅಂತೂ ಈ ಯಜಮಾನನಿಗೆ ಪ್ರಿಯವಾದುದೆಲ್ಲವೂ ಆಹ್ವಾನಿಸಲ್ಪಟ್ಟಿದೆ. ಒಂದೂ ವ್ಯರ್ಥವಾಗದಂತೆ ಹೋತೃವು ಎಲ್ಲವನ್ನೂ ಆಹ್ವಾನಿಸಿರುವನು.

**'ವಿಶ್ವಸ್ಯ ಪ್ರಿಯಸ್ಯೋಪಹೂತಸ್ಯೋಪಹೂತಃ'** ಎಂಬ ಬ್ರಾಹ್ಮಣವಾಕ್ಯದ ಅರ್ಥವು ಸ್ಪಷ್ಟವಾಗಿರುವುದರಿಂದ ಬ್ರಾಹ್ಮಣದಲ್ಲಿ ಪ್ರತ್ಯೇಕ ವಿವರಣೆಯು ಇಲ್ಲ.

* * *

# ಅನುವಾಕದ ವಿಶೇಷವಿಷಯಗಳು

## ಅ) ಮೀಮಾಂಸಾ

### ೧) ಸತ್ರಯಾಗದಲ್ಲಿ ಯಜ್ಞಪತಿಶಬ್ದದ ಪ್ರಯೋಗವು ಹೇಗೆ?

ದರ್ಶ-ಪೂರ್ಣಮಾಸದ ಇಡೋಪಾಹ್ವಾನಮಂತ್ರದಲ್ಲಿ **'ಯೇ ಯಜ್ಞಪತಿಂ ವರ್ಧಾನ್'** ಎಂದು ಹೇಳಬೇಕು. ಅನೇಕ ಯಜಮಾನರನ್ನು ಹೊಂದಿರುವ ಸತ್ರಯಾಗದಲ್ಲಿ ಆ ಶಬ್ದವನ್ನು ಬಹುವಚನಾಂತವಾಗಿ ಬದಲಾಯಿಸಿಕೊಳ್ಳಬೇಕೆ? ಇದು ಇಲ್ಲಿನ **ಸಂಶಯ.**

ಇಡೋಪಾಹ್ವಾನಮಂತ್ರಗಳಲ್ಲಿ **'ಯೇ ಯಜ್ಞಪತಿಂ ವರ್ಧಾನ್'** ಎಂಬ ಭಾಗವು ಯಜ್ಞಪತಿ ವೃದ್ಧಿಪ್ರಕಾಶನಸಮರ್ಥವಾಗಿರುವುದರಿಂದ ವೃದ್ಧಿಜಪದಲ್ಲಿ ವಿನಿಯೋಗಿಸುವುದು ಯುಕ್ತವಾಗಿದೆ. ಹೀಗಾಗಿ ಸತ್ರಯಾಗಗಳಲ್ಲಿ ಅನೇಕ ಯಜಮಾನರು ಇರುವುದರಿಂದ **'ಯಜ್ಞಪತಿಂ ವರ್ಧಾನ್'** ಎಂಬಲ್ಲಿ ಬಹುವಚನಾಂತವನ್ನಾಗಿ ಊಹ ಮಾಡುವುದು ಯುಕ್ತ ಎಂದು ಇಲ್ಲಿನ **ಪೂರ್ವಪಕ್ಷ.**

ಈ ಮಂತ್ರವು ಇಡೋಪಾಹ್ವಾನದಲ್ಲಿ ವಿನಿಯುಕ್ತವಾಗಿದೆ. ಇದು ಇಡಾಪ್ರಕರಣವಾಗಿರುವುದರಿಂದ ಮಹಾವಾಕ್ಯದೊಡನೆ ಈ ವಾಕ್ಯವು ಸೇರಿ, ಈ ಅವಾಂತರವಾಕ್ಯವು ಇಡಾಪ್ರಶಂಸೆಯನ್ನೇ ಮಾಡುತ್ತದೆ. ಈ ಇಡಾಪ್ರಶಂಸೆಯು ವಾಕ್ಯವು ಏಕವಚನಾಂತವಾಗಿದ್ದರೂ ಆಗುತ್ತದೆ.

ಹೀಗಾಗಿ **'ಯಜ್ಞಪತಿ'** ಎಂಬ ಶಬ್ದವು ಏಕವಚನಾಂತವಾಗಿದ್ದರೂ ಇಡಾಪ್ರಶಂಸೆಯು ಇಲ್ಲಿನ ತಾತ್ಪರ್ಯವಾದುದರಿಂದ ಬಹುವಚನಾಂತವಾದ ಊಹೆಯು ಇರುವುದಿಲ್ಲ. ಇದು ಇಲ್ಲಿನ **ಸಿದ್ಧಾಂತ.**

## ॥ ಅಷ್ಟಮೋಽನುವಾಕಃ ॥

ಪಶವೋ ವಾ ಇಡಾ ಸ್ವಯಮಾದತ್ತೇ ಕಾಮಮೇವಾತ್ಮನಾ
ಪಶೂನಾಮಾ ದತ್ತೇ ನ ಹ್ಯನ್ಯಃ ಕಾಮಂ ಪಶೂನಾಂ ಪ್ರಯಚ್ಛತಿ

---

ಪಶವಃ । ವೈ । ಇಡಾ । ಸ್ವಯಮ್ । ಏತಿ । ದತ್ತೇ । ಕಾಮಮ್ । ಏವ । ಆತ್ಮನಾ ।
ಪಶೂನಾಮ್ । ಏತಿ । ದತ್ತೇ । ನ । ಹಿ । ಅನ್ಯಃ । ಕಾಮಮ್ । ಪಶೂನಾಮ್ ।
ಪ್ರಯಚ್ಛತೀತಿ ಪ್ರ-ಯಚ್ಛತಿ ।

---

ಏಳನೆಯ ಅನುವಾಕದಲ್ಲಿ ಇಡೋಪಾಹ್ವಾನವು ಹೇಳಲ್ಪಟ್ಟಿತು. ಈ ಎಂಟನೆಯ ಅನುವಾಕದಲ್ಲಿ ಇಡಾಭಕ್ಷಣವೂ, ಪ್ರಾಶಿತ್ರಭಕ್ಷಣವೂ ಹೇಳಲ್ಪಟ್ಟಿದೆ.

### ಹೋತೃವಿನ ಅವಾಂತರೇಡಾವದಾನ; ಸ್ತುತಿ

| | |
|---|---|
| ಪಶವಃ ವೈ ಇಡಾ ಸ್ವಯಮ್ ಆದತ್ತೇ | ಇಡೆಯು ಪಶುರೂಪವಾಗಿದೆ.ಹೋತೃವು ತಾನೇ [ಇನ್ನೊಂದು] ಇಡಾವದಾನವನ್ನು ಮಾಡಬೇಕು. |
| ಪಶೂನಾಮ್ ಕಾಮಮ್ ಏವ ಆತ್ಮನಾ ಆದತ್ತೇ | ಇದರಿಂದ ಹೋತೃವು ಪಶುಗಳಿಗೆ ಇಷ್ಟವಾದುದನ್ನೇ ತಾನಾಗಿ ತೆಗೆದುಕೊಂಡವನಾಗುತ್ತಾನೆ. |
| ಅನ್ಯಃ ಪಶೂನಾಮ್ ಕಾಮಮ್ ನ ಹಿ ಪ್ರಯಚ್ಛತಿ | ಹೋತೃಭಿನ್ನನಾದ ಯಾವ ಬೇರೆ ಋತ್ವಿಜನೂ ಸಹ ಪಶುಗಳಿಗೆ ಇಷ್ಟವಾದುದನ್ನು ಕೊಡಲು ಸಮರ್ಥನಾಗುವುದಿಲ್ಲ. |

---

ಪಶ್ಚಿಮಾಭಿಮುಖನಾಗಿ ಕುಳಿತಿರುವ ಅಧ್ವರ್ಯುವು ಹೋತೃವಿನ ಕೈಯಲ್ಲಿ ಮೊದಲು ಒಂದು ಬಾರಿ ಅವಾಂತರೇಡಾವದಾನವನ್ನು ಮಾಡಿದ ಮೇಲೆ ಹೋತೃವು ಸ್ವಯಮವದಾನ

ವಾಚಸ್ಪತಯೇ ತ್ವಾ ಹುತಂ ಪ್ರಾಶ್ನಾಮೀತ್ಯಾಹ ವಾಚಮೇವ

ಭಾಗಧೇಯೇನ ಪ್ರೀಣಾತಿ ಸದಸಸ್ಪತಯೇ ತ್ವಾ ಹುತಂ

ಪ್ರಾಶ್ನಾಮೀತ್ಯಾಹ ಸ್ವಗಾಕೃತ್ಯೈ

---

ವಾಚಃ । ಪತಯೇ । ತ್ವಾ । ಹುತಮ್ । ಪ್ರೇತಿ । ಅಶ್ನಾಮಿ । ಇತಿ । ಆಹ । ವಾಚಮ್।

ಏವ । ಭಾಗಧೇಯೇನೇತಿ ಭಾಗ-ಧೇಯೇನ । ಪ್ರೀಣಾತಿ । ಸದಸಃ । ಪತಯೇ । ತ್ವಾ ।

ಹುತಮ್ । ಪ್ರೇತಿ । ಅಶ್ನಾಮಿ । ಇತಿ । ಆಹ । ಸ್ವಗಾಕೃತ್ಯಾ ಇತಿ ಸ್ವಗಾ-ಕೃತ್ಯೈ ।

---

**ಇಡಾಭಕ್ಷಣಮಂತ್ರಗಳ ವ್ಯಾಖ್ಯಾನ; ಅರ್ಥವಾದ**

| | |
|---|---|
| ವಾಚಸ್ಪತಯೇ ತ್ವಾ ಹುತಮ್ ಪ್ರಾಶ್ನಾಮಿ ಇತಿ ಆಹ | 'ಇಡೋಪಾಹ್ವಾನರೂಪವಾದ ವಾಕ್ಕನ್ನು ಹೇಳಿದ ಹೋತೃವಿನ ಜೀವಾತ್ಮನಿಗಾಗಿ ಇಡಾರೂಪವಾದ ಪುರೋಡಾಶವಾದ ನಿನ್ನನ್ನು ಭಕ್ಷಿಸುತ್ತೇನೆ' ಎಂದು ಈ ಮಂತ್ರವು ಹೇಳುತ್ತದೆ. |
| ವಾಚಮ್ ಏವ ಭಾಗಧೇಯೇನ ಪ್ರೀಣಾತಿ | ಈ ಮಂತ್ರದಿಂದ ಯಜಮಾನನು ತಕ್ಕ ಭಾಗವನ್ನು ಕೊಡುವುದರಿಂದ ವಾಗ್ದೇವತೆಯನ್ನೇ ತೃಪ್ತಿಪಡಿಸುತ್ತಾನೆ. |
| ಸದಸಸ್ಪತಯೇ ತ್ವಾ ಹುತಮ್ ಪ್ರಾಶ್ನಾಮಿ ಇತಿ ಆಹ | 'ಯಜ್ಞಸಭೆಯ ಮುಖ್ಯನಾದ ಹೋತೃವಿನ ಜೀವಾತ್ಮನಿಗಾಗಿ ನಿನ್ನನ್ನು ಭಕ್ಷಿಸುತ್ತೇನೆ' ಎಂದು ಈ ಮಂತ್ರವು ಹೇಳುತ್ತದೆ. |
| ಸ್ವಗಾಕೃತ್ಯೈ | ಇದು ಇಡೆಯನ್ನು ತನ್ನದನ್ನಾಗಿ ಮಾಡಿಕೊಳ್ಳಲು ನಿಮಿತ್ತವಾಗುತ್ತದೆ. |

---

ವನ್ನು ಮಾಡುತ್ತಾನೆ. ಇದು ಆ ಸ್ವಯಮವದಾನದ ಪ್ರಶಂಸೆ.

**'ವಾಚಸ್ಪತಯೇ...ಪ್ರಾಶ್ನಾಮಿ । ಸದಸಸ್ಪತಯೇ...ಪ್ರಾಶ್ನಾಮಿ ।'** ಎಂಬ ಈ ಮಂತ್ರಗಳ ವ್ಯಾಖ್ಯಾನವು ಮಂತ್ರಪೂರ್ವಕವಾದ ಭಕ್ಷಣವನ್ನು ಪ್ರಶಂಸಿಸುತ್ತದೆ.

ಚತುರವತ್ತಂ ಭವತಿ ಹವಿರ್ವೈ ಚತುರವತ್ತಂ ಪಶವಶ್ಚತುರವತ್ತಂ

ಯದ್ಧೋತಾ ಪ್ರಾಶ್ನೀಯಾದ್ಧೋ[..ದ್ಧೋತಾ(೧)ಆರ್ತಿಮಾ..]ತಾಽಽ

ರ್ತಿಮಾರ್ಛೇದ್ಯದಗ್ನೌ ಜುಹುಯಾದ್ರುದ್ರಾಯ ಪಶೂನಪಿ ದಧ್ಯಾ-

---

ಚತುರವತ್ತಮಿತಿ ಚತುಃ-ಅವತ್ತಮ್ । ಭವತಿ । ಹವಿಃ । ವೈ । ಚತುರವತ್ತಮಿತಿ ಚತುಃ-ಅವತ್ತಮ್ । ಪಶವಃ । ಚತುರವತ್ತಮಿತಿ ಚತುಃ-ಅವತ್ತಮ್ । ಯತ್ । ಹೋತಾ । ಪ್ರಾಶ್ನೀಯಾದಿತಿ ಪ್ರ-ಅಶ್ನೀಯಾತ್ । ಹೋತಾ । (೧) । ಆರ್ತಿಮ್ । ಏತಿ । ಋಚ್ಛೇತ್ । ಯತ್ । ಅಗ್ನೌ । ಜುಹುಯಾತ್ । ರುದ್ರಾಯ । ಪಶೂನ್ । ಅಪೀತಿ । ದಧ್ಯಾತ್ ।

---

**ಚತುರವತ್ತವಿಧಿ; ಮಂತ್ರಗಳ ಪ್ರಕಾರಾಂತರಪ್ರಶಂಸೆ**

| | |
|---|---|
| ಚತುರವತ್ತಮ್ ಭವತಿ | ಇಡೆಗೆ ಚತುರವತ್ತವಾಗಬೇಕು. |
| ಹವಿಃ ವೈ ಚತುರವತ್ತಮ್ | ಹವಿಸ್ಸೂ ಚತುರವತ್ತವಾಗಿದೆ. |
| ಪಶವಃ ಚತುರವತ್ತಮ್ | ನಾಲ್ಕು ಕಾಲುಗಳಿರುವುದರಿಂದ ಪಶುಗಳೂ ಚತುರವತ್ತಸದೃಶವೇ ಆಗಿವೆ. |
| ಯತ್ ಹೋತಾ ಪ್ರಾಶ್ನೀಯಾತ್ ಹೋತಾ ಆರ್ತಿಮ್ ಆರ್ಛೇತ್ | ಹೋತೃವು ಇಡಾಭಕ್ಷಣವನ್ನು ಮಾಡಿದರೆ ಹೋತೃವು ಪೀಡೆಯನ್ನು ಹೊಂದುತ್ತಾನೆ. **[ದೇವತಾರೂಪವಾದ ಇಡಾಭಕ್ಷಣವೇ ಇದಕ್ಕೆ ಕಾರಣ]** |
| ಯತ್ ಅಗ್ನೌ ಜುಹುಯಾತ್ ರುದ್ರಾಯ ಪಶೂನ್ ಅಪಿ ದಧ್ಯಾತ್ | ಇಡಾಭಾಗವನ್ನು ಅಗ್ನಿಯಲ್ಲಿ ಹೋಮ ಮಾಡಿದರೆ ಅಗ್ನಿರೂಪನಾದ ರುದ್ರನಿಗೆ ಪಶುಗಳನ್ನು ಸಮರ್ಪಿಸಿದಂತಾಗುತ್ತದೆ. |

ದಪಶುರ್ಯಜಮಾನಸ್ಸ್ಯಾದ್ವಾಚಸ್ಪತಯೇ ತ್ವಾ ಹುತಂ
ಪ್ರಾಶ್ನಾಮೀತ್ಯಾಹ ಪರೋಕ್ಷಮೇವೈನಜ್ಜುಹೋತಿ
ಸದಸಸ್ಪತಯೇ ತ್ವಾ ಹುತಂ ಪ್ರಾಶ್ನಾಮೀತ್ಯಾಹ ಸ್ವಗಾಕೃತ್ಯೈ

---

ಅಪಶುಃ । ಯಜಮಾನಃ । ಸ್ಯಾತ್ । ವಾಚಃ । ಪತಯೇ । ತ್ವಾ । ಹುತಮ್ । ಪ್ರೇತಿ ।
ಅಶ್ನಾಮಿ । ಇತಿ । ಆಹ । ಪರೋಕ್ಷಮಿತಿ ಪರಃ-ಅಕ್ಷಮ್ । ಏವ । ಏನತ್ । ಜುಹೋತಿ।
ಸದಸಃ । ಪತಯೇ । ತ್ವಾ । ಹುತಮ್ । ಪ್ರೇತಿ । ಅಶ್ನಾಮಿ । ಇತಿ । ಆಹ । ಸ್ವಗಾಕೃತ್ಯಾ
ಇತಿ ಸ್ವಗಾ-ಕೃತ್ಯೈ ।

---

| | |
|---|---|
| ಯಜಮಾನಃ ಅಪಶುಃ ಸ್ಯಾತ್ | ಯಜಮಾನನು ಪಶುರಹಿತನಾಗುತ್ತಾನೆ. |
| ವಾಚಸ್ಪತಯೇ ತ್ವಾ ಹುತಮ್ ಪ್ರಾಶ್ನಾಮಿ ಇತಿ ಆಹ | [ಈ ದೋಷಪರಿಹಾರಕ್ಕಾಗಿ] 'ಇಡಾಹ್ವಾನರೂಪವಾದ ವಾಕ್ಕನ್ನು ಹೇಳಿದ ಹೋತೃವಿನ ಜೀವಾತ್ಮನಿಗಾಗಿ ನಿನ್ನನ್ನು [ಪುರೋಡಾಶವನ್ನು] ಭಕ್ಷಣ ಮಾಡುತ್ತೇನೆ.' ಎಂದು ಮಂತ್ರವು ಹೇಳುತ್ತದೆ. ಈ ಮಂತ್ರದಿಂದ ಪ್ರಾಶನವನ್ನು ಮಾಡುತ್ತಾನೆ. |
| ಏನತ್ ಪರೋಕ್ಷಮ್ ಏವ ಜುಹೋತಿ | ಇದರಿಂದ ಪ್ರತ್ಯಕ್ಷವಾಗಿ ಇಡೆಯನ್ನು ಭಕ್ಷಿಸದೆ ಪರೋಕ್ಷವಾಗಿ ಹೋಮ ಮಾಡಿದಂತಾಯಿತು. |
| ಸದಸಸ್ಪತಯೇ ತ್ವಾ ಹುತಮ್ ಪ್ರಾಶ್ನಾಮಿ ಇತಿ ಆಹ | 'ಯಜ್ಞಸಭೆಯ ಅಧಿಪತಿಯಾದ ಹೋತೃವಿನ ಜೀವಾತ್ಮನಿಗಾಗಿ ಹುತವಾಗಿರುವ ಇದನ್ನು ಪ್ರಾಶನ ಮಾಡುತ್ತೇನೆ.' ಎಂದು ಮಂತ್ರವು ಹೇಳುತ್ತದೆ. |
| ಸ್ವಗಾಕೃತ್ಯೈ | [ಇದು] ಆ ಪುರೋಡಾಶಭಾಗವನ್ನು ತನ್ನದನ್ನಾಗಿ ಮಾಡಿಕೊಳ್ಳಲು ಕಾರಣವಾಗುತ್ತದೆ. |

---

ಇದು ಚತುರವದಾನವಿಧಿಯ ಪ್ರಶಂಸೆಯಾಗಿದೆ.ಅಲ್ಲದೆ **'ವಾಚಸ್ಪತಯೇ ಹುತಂ ತ್ವಾ ಪ್ರಾಶ್ನಾಮಿ'**ಎಂಬುದಾಗಿ ಇಡೋಪಾಹ್ವಾನವನ್ನು ಮಾಡಿದ ಯಜ್ಞಸಭೆಯ ಅಧಿಪತಿಯಾಗಿರುವ

ಪ್ರಾಶ್ಞಂತಿ ತೀರ್ಥ ಏವ ಪ್ರಾಶ್ಞಂತಿ ದಕ್ಷಿಣಾಂ ದದಾತಿ ತೀರ್ಥ

ಏವ ದಕ್ಷಿಣಾಂ ದದಾತಿ ವಿ ವಾ ಏತದ್ಯಜ್ಞಂ

[..ದ್ಯಜ್ಞಮ್(೨)ಛಿಂದಂತಿ..] ಛಿಂದಂತಿ ಯನ್ಮಧ್ಯತಃ ಪ್ರಾಶ್ಞಂತ್ಯ-

---

ಪ್ರೇತಿ । ಅಶ್ನಂತಿ । ತೀರ್ಥೇ । ಏವ । ಪ್ರೇತಿ । ಅಶ್ನಂತಿ । ದಕ್ಷಿಣಾಮ್ । ದದಾತಿ ।

ತೀರ್ಥೇ । ಏವ । ದಕ್ಷಿಣಾಮ್ । ದದಾತಿ । ವೀತಿ । ವೈ । ಏತತ್ । ಯಜ್ಞಮ್ ।(೨)।

ಛಿಂದಂತಿ । ಯತ್ । ಮಧ್ಯತಃ । ಪ್ರಾಶ್ಞಂತೀತಿ ಪ್ರ-ಅಶ್ನಂತಿ ।

---

**ಯಜಮಾನನೇ ಐದನೆಯವನಾಗಿರುವಂತೆ ಋತ್ವಿಜರ ಇಡಾಭಕ್ಷಣವಿಧಿ; ಪ್ರಶಂಸೆ**

| | |
|---|---|
| ಪ್ರಾಶ್ಞಂತಿ | ಯಜಮಾನನಿಂದೊಡಗೂಡಿರುವ ನಾಲ್ವರು ಋತ್ವಿಜರು ಇಡಾಭಕ್ಷಣವನ್ನು ಮಾಡಬೇಕು. |
| ತೀರ್ಥೇ ಏವ ಪ್ರಾಶ್ಞಂತಿ | ಹಸಿವಿನ ದುಃಖವನ್ನು ಹೋಗಲಾಡಿಸಿಕೊಳ್ಳುವ ಸಮಯದಲ್ಲಿಯೇ ಇಡಾಭಕ್ಷಣವನ್ನು ಮಾಡಿದಂತಾಗುತ್ತದೆ. |
| ದಕ್ಷಿಣಾಮ್ ದದಾತಿ | [ಪ್ರಧಾನಯಾಗದ ಅನಂತರ ಇಡಾಭಕ್ಷಣದಿಂದ ಋತ್ವಿಜರಿಗೆ] ದಕ್ಷಿಣೆಯನ್ನಿತ್ತಂತಾಗುತ್ತದೆ. |
| ತೀರ್ಥೇ ಏವ ದಕ್ಷಿಣಾಮ್ ದದಾತಿ | ತಕ್ಕ ಸಮಯದಲ್ಲಿಯೇ ದಕ್ಷಿಣೆಯನ್ನು ಕೊಟ್ಟಂತಾಗುತ್ತದೆ. |

**ವೇದಿಯ ಒಳಭಾಗದಲ್ಲಿ 'ಮನೋ ಜ್ಯೋತಿಃ' ಎಂಬ ಮಂತ್ರದಿಂದ ಜಲಪ್ರೋಕ್ಷಣ; ಆದರ ಪ್ರಶಂಸೆ**

| | |
|---|---|
| ಯತ್ ಮಧ್ಯತಃ ಪ್ರಾಶ್ಞಂತಿ | ಯಾಗದ ಮಧ್ಯದಲ್ಲಿ ಇಡಾಭಕ್ಷಣವನ್ನು ಮಾಡುವುದೆಂಬುದು ಯಾವುದು ಇದೆಯೋ |
| ಏತತ್ ಯಜ್ಞಮ್ ವಿಚ್ಛಿಂದಂತಿ ವೈ | ಇದು ಯಜ್ಞಕ್ಕೆ ವಿಚ್ಛಿತ್ತಿಯನ್ನುಂಟುಮಾಡುತ್ತದೆ. |

ದ್ಭಿರ್ಮಾರ್ಜಯಂತ ಆಪ್ಪೋ ವೈ ಸರ್ವಾ ದೇವತಾ

ದೇವತಾಭಿರೇವ ಯಜ್ಞಗ್‌ಂ ಸಂತನ್ವಂತಿ ದೇವಾ ವೈ

ಯಜ್ಞಾದ್ರುದ್ರಮಂತರಾಯನ್ಥ್ಸ ಯಜ್ಞಮವಿಧ್ಯ-

---

ಅದ್ಭಿರಿತ್ಯತ್-ಭಿಃ । ಮಾರ್ಜಯಂತೇ । ಆಪಃ । ವೈ । ಸರ್ವಾಃ । ದೇವತಾಃ ।
ದೇವತಾಭಿಃ । ಏವ । ಯಜ್ಞಮ್ । ಸಮಿತಿ । ತನ್ವಂತಿ । ದೇವಾಃ । ವೈ । ಯಜ್ಞಾತ್।
ರುದ್ರಮ್ । ಅಂತಃ । ಆಯನ್ನ್ । ಸಃ । ಯಜ್ಞಮ್ । ಅವಿಧ್ಯತ್ ।

---

| | |
|---|---|
| ಅದ್ಭಿಃ ಮಾರ್ಜಯಂತೇ | **'ಮನೋ ಜ್ಯೋತಿಃ'** ಎಂಬ ಮಂತ್ರದಿಂದ ಪ್ರಸ್ತರದಿಂದ ನೀರನ್ನು ಪ್ರೋಕ್ಷಿಸಿಕೊಳ್ಳಬೇಕು. |
| ಆಪಃ ಸರ್ವಾಃ ದೇವತಾಃ ವೈ | ನೀರು ಸರ್ವದೇವತಾಸ್ವರೂಪವಷ್ಟೆ. |
| ದೇವತಾಭಿಃ ಏವ ಯಜ್ಞಮ್ ಸಂತನ್ವಂತಿ | [ಈ ಜಲಪ್ರೋಕ್ಷಣದಿಂದ] ದೇವತೆಗಳಿಂದಲೇ ಯಜ್ಞವನ್ನು ಕೂಡಿಸುತ್ತಾರೆ./ ಯಜ್ಞವಿಚ್ಛಿತ್ತಿಯಾಗದಂತೆ ಮಾಡುತ್ತಾರೆ. |

**ಪ್ರಾಶಿತ್ರಹರಣಸಂಬಂಧಿಯಾದ ಉಪಾಖ್ಯಾನ**

| | |
|---|---|
| ದೇವಾಃ ವೈ ಯಜ್ಞಾತ್ ರುದ್ರಮ್ ಅಂತಃ ಆಯನ್ನ್ | ಒಮ್ಮೆ ದೇವತೆಗಳು ಯಜ್ಞವನ್ನು ಮಾಡುವಾಗ ಸಿಷ್ಟಕೃದಗ್ನಿರೂಪನಾದ ರುದ್ರನಿಗೆ ಭಾಗವನ್ನು ನೀಡದೆ ಬಿಟ್ಟು ಬಿಟ್ಟರು. |
| ಸಃ ಯಜ್ಞಮ್ ಅವಿಧ್ಯತ್ | ಆಗ ರುದ್ರನು ಕೋಪದಿಂದ ಯಜ್ಞವನ್ನು ನ್ಯೂನ (ಅಪೂರ್ಣ)ವನ್ನಾಗಿ ಮಾಡಿದನು. |

---

ಹೋತೃವಿನ ಜೀವಾತ್ಮನಿಗಾಗಿ ಅರ್ಪಿತವಾಗಿರುವ ಇಡೆಯನ್ನು ಎಂದು ಹೇಳುವುದರಿಂದ ಪರೋಕ್ಷವಾಗಿ ಭಕ್ಷಿಸಿದಂತಾಯಿತು.ಅಲ್ಲದೆ ಮಂತ್ರೋಚ್ಚಾರಣದಿಂದ ಭಾಗವನ್ನು ಕೊಟ್ಟಂತಾಯಿತು

ತ್ತಂ ದೇವಾ ಅಭಿ ಸಮಗಚ್ಛಂತ ಕಲ್ಪತಾಂ ನ ಇದಮಿತಿ

ತೇಽಬ್ರುವನ್ಥ್ಸ್ವಿಷ್ಟಂ ವೈ ನ ಇದಂ ಭವಿಷ್ಯತಿ ಯದಿಮಗ್ಂ

ರಾಧಯಿಷ್ಯಾಮ ಇತಿ ತಥ್ಸ್ವಿಷ್ಟಕೃತಸ್ಸ್ವಿಷ್ಟಕೃತ್ತ್ವಂ

---

ತಮ್ । ದೇವಾಃ । ಅಭಿ । ಸಮಿತಿ । ಅಗಚ್ಛಂತ । ಕಲ್ಪತಾಮ್ । ನಃ । ಇದಮ್ । ಇತಿ।

ತೇ । ಅಬ್ರುವನ್ನ್ । ಸ್ವಿಷ್ಟಮಿತಿ ಸು-ಇಷ್ಟಮ್ । ವೈ । ನಃ । ಇದಮ್ । ಭವಿಷ್ಯತಿ ।

ಯತ್ । ಇಮಮ್ । ರಾಧಯಿಷ್ಯಾಮಃ । ಇತಿ । ತತ್ । ಸ್ವಿಷ್ಟಕೃತ ಇತಿ ಸ್ವಿಷ್ಟ-ಕೃತಃ ।

ಸ್ವಿಷ್ಟಕೃತ್ತ್ವಮಿತಿ ಸ್ವಿಷ್ಟಕೃತ್-ತ್ವಮ್ ।

---

| | |
|---|---|
| ತಮ್ ದೇವಾಃ ಅಭಿ ಸಮಗಚ್ಛಂತ | ಆಗ ದೇವತೆಗಳು ರುದ್ರನ ಬಳಿಗೆ ಬಂದರು. |
| ಇದಮ್ ನಃ ಕಲ್ಪತಾಮ್ ಇತಿ | ರುದ್ರನ ಅನುಗ್ರಹದಿಂದ ಈ ನಮ್ಮ ಯಜ್ಞವು ಸಂಪೂರ್ಣವಾಗಲಿ ಎಂದು ಪ್ರಾರ್ಥಿಸಿ, ಭಾವಿಸಿದರು. |
| ತೇ ಸ್ವಿಷ್ಟಮ್ ವೈ ನಃ ಇದಮ್ ಭವಿಷ್ಯತಿ ಯತ್ ಇಮಮ್ ರಾಧಯಿಷ್ಯಾಮಃ ಇತಿ ಅಬ್ರುವನ್ನ್ | 'ಈ ರುದ್ರನನ್ನು ಹವಿಃಪ್ರದಾನದಿಂದ ಆರಾಧಿಸಿದರೆ, ಈ ನಮ್ಮ ಯಾಗವು ಚೆನ್ನಾಗಿ ಮಾಡಲ್ಪಟ್ಟಂತೆ' ಎಂದು ಕೆಲವರು ದೇವತೆಗಳು ಹೇಳಿಕೊಂಡರು. |
| ತತ್ ಸ್ವಿಷ್ಟಕೃತಃ ಸ್ವಿಷ್ಟಕೃತ್ತ್ವಮ್ | ಇದೇ ಸ್ವಿಷ್ಟಕೃದಗ್ನಿಯ **'ಸ್ವಿಷ್ಟಕೃತ್'** ಎಂಬ ಅನ್ವರ್ಥ ನಾಮವಾಗಿದೆ. |

---

ಎಂಬ ಚತುರವದಾನಕ್ಕೆ ಪ್ರಕಾರಾಂತರದಿಂದ ಪ್ರಶಂಸೆ.

ಯಜಮಾನನೇ ಐದನೆಯವನಾಗಿರುವಂತೆ ಋತ್ವಿಜರು ಇಡಾಭಕ್ಷಣವನ್ನು ಮಾಡಬೇಕು. ಇದರಿಂದ ಪ್ರಧಾನಯಾಗಾನಂತರ ಋತ್ವಿಜರಿಗೆ ದಕ್ಷಿಣೆಯನ್ನಿತ್ತಂತಾಗುತ್ತದೆ. ತಕ್ಕ ಸಮಯದಲ್ಲಿ

ತಸ್ಯಾಽವಿದ್ಧಂ [ನಿಃ(ಇ)ಅಕೃಂತನ್,] ನಿರಕೃಂತನ್, ಯವೇನ ಸಂಮಿತಂ ತಸ್ಮಾದ್ಯವಮಾತ್ರಮವದ್ಯೇದ್ಯಜ್ಜ್ಯಾಯೋಽವ ದ್ಯೇದ್ರೋಪಯೇತ್ತದ್ಯಜ್ಞಸ್ಯ

---

ತಸ್ಯ । ಅವಿದ್ಧಮಿತ್ಯಾ-ವಿದ್ಧಮ್ । ನಿರಿತಿ । (ಇ) । ಅಕೃಂತನ್ನ್ । ಯವೇನ । ಸಂಮಿತಮಿತಿ ಸಂ-ಮಿತಮ್ । ತಸ್ಮಾತ್ । ಯವಮಾತ್ರಮಿತಿ ಯವ-ಮಾತ್ರಮ್ । ಅವೇತಿ । ದ್ಯೇತ್। ಯತ್ । ಜ್ಯಾಯಃ । ಅವದ್ಯೇದಿತ್ಯವ-ದ್ಯೇತ್ । ರೋಪಯೇತ್ । ತತ್ । ಯಜ್ಞಸ್ಯ ।

---

**ಅವದಾನದ ಪರಿಮಾಣವಿಧಿ;ಆದರ ಅರ್ಥವಾದ**

| | |
|---|---|
| ತಸ್ಯ ಯವೇನ ಸಂಮಿತಮ್ ಅವಿದ್ಧಮ್ ನಿರಕೃಂತನ್ | ಆ ಪುರೋಡಾಶಭಾಗದಿಂದ ರುದ್ರನು ಕಿತ್ತುಕೊಂಡಿದ್ದ/ಸ್ವೀಕರಿಸಿದ್ದ ಯವಮಾತ್ರಪರಿಮಾಣವನ್ನು ಬೇರ್ಪಡಿಸಿದರು. |
| ತಸ್ಮಾತ್ ಯವಮಾತ್ರಮ್ ಅವದ್ಯೇತ್ | ಆದುದರಿಂದ ಪುರೋಡಾಶದ ಅಂಶವನ್ನು ಪ್ರಾಶಿತ್ರ ಭಕ್ಷಣಕ್ಕಾಗಿ ಯವಮಾತ್ರಪರಿಮಾಣದಷ್ಟು ಅವದಾನ ಮಾಡಬೇಕು. |
| ಯತ್ ಜ್ಯಾಯಃ ಅವದ್ಯೇತ್ ತತ್ ಯಜ್ಞಸ್ಯ ರೋಪಯೇತ್ | ಅದಕ್ಕಿಂತ ಹೆಚ್ಚಾಗಿ ಅವದಾನವನ್ನು* ಮಾಡಿದರೆ ಅದು ಯಜ್ಞದ ವಿಷಯದಲ್ಲಿ ಭ್ರಾಂತಿಯನ್ನುಂಟು ಮಾಡುತ್ತದೆ. |

---

ದಕ್ಷಿಣೆಯನ್ನು ನೀಡಿವಂತೆಯೂ ಆಗುತ್ತದೆಯೆಂಬ ಇಡಾಭಕ್ಷಣದ ವಿಧಿ ಹಾಗೂ ಅದರ ಪ್ರಶಂಸೆ.

ಯಾಗದ ಮಧ್ಯದಲ್ಲಿ ಇಡಾಭಕ್ಷಣವನ್ನು ಮಾಡುವುದರಿಂದ ಯಜ್ಞಕ್ಕೆ ವಿಚ್ಛಿತ್ತಿಯುಂಟಾಗುತ್ತದೆ. ಮಂತ್ರಪೂರ್ವಕವಾದ ಜಲಪ್ರೋಕ್ಷಣದಿಂದ ಯಜ್ಞವು ವಿಚ್ಛಿನ್ನವಾಗದಂತೆ ಮಾಡುತ್ತಾರೆ.

---

* ಅಜ್ಯಾಯೋ ಯವಮಾತ್ರಾತ್ । [ತೈ. ಬ್ರಾ. 3.7.5]

ಯದುಪ ಚ ಸ್ತೃಣೀಯಾದಭಿ ಚ ಘಾರಯೇದುಭಯತ

ಸ್ಸಗ್ಂಶ್ವಾಯಿ ಕುರ್ಯಾದವದಾಯಾಭಿ ಘಾರಯತಿ

ದ್ವಿಸ್ಸಂಪದ್ಯತೇ ದ್ವಿಪಾದ್ಯಜಮಾನಃ ಪ್ರತಿಷ್ಠಿತ್ಯೈ

---

ಯತ್ । ಉಪೇತಿ । ಚ । ಸ್ತೃಣೀಯಾತ್ । ಅಭೀತಿ । ಚ । ಘಾರಯೇತ್ । ಉಭಯತ

ಸ್ಸಗ್ಂಶ್ವಾಯೀತ್ಯುಭಯತಃ–ಸಗ್ಂಶ್ವಾಯಿ । ಕುರ್ಯಾತ್ । ಅವದಾಯೇತ್ಯವ–ದಾಯ ।

ಅಭೀತಿ । ಘಾರಯತಿ । ದ್ವಿಃ । ಸಮಿತಿ । ಪದ್ಯತೇ । ದ್ವಿಪಾದಿತಿ ದ್ವಿ–ಪಾತ್ ।

ಯಜಮಾನಃ । ಪ್ರತಿಷ್ಠಿತ್ಯಾ ಇತಿ ಪ್ರತಿ –ಸ್ಥಿತ್ಯೈ ।

---

| | |
|---|---|
| ಯತ್ ಉಪಸ್ತೃಣೀಯಾತ್ ಚ ಅಭಿಘಾರಯೇತ್ ಚ ಉಭಯತಸ್ಸಗ್ಂಶ್ವಾಯಿ ಕುರ್ಯಾತ್ | ಬೇರೆಯ ಹೋಮಗಳಲ್ಲಿರುವಂತೆ ಉಪಸ್ತರಣವನ್ನು ಮಾಡಿ, ಕಡೆಯಲ್ಲಿ ಅಭಿಘಾರಣವನ್ನು ಮಾಡಿದರೆ ಪ್ರಾಶಿತ್ರಾರ್ಥವಾದ ಪುರೋಡಾಶದ ಎರಡು ಪಾರ್ಶ್ವಗಳಲ್ಲಿಯೂ ಆಜ್ಯದ ಸಂಸರ್ಗವುಂಟಾಗಿ, ರೋಗಕ್ಕೆ ಕಾರಣವಾಗುತ್ತದೆ. |
| ಅವದಾಯ ಅಭಿಘಾರಯತಿ | ಆದುದರಿಂದ ಒಂದು ಬಾರಿ ಅವದಾನ ಮಾಡಿ ಒಂದು ಬಾರಿ ಅಭಿಘಾರ ಮಾಡಬೇಕು. |
| ದ್ವಿಃ ಸಂಪದ್ಯತೇ | ಇದರಿಂದ ದ್ವಿರವತ್ತವೇ ಆಗುತ್ತದೆ. |
| ದ್ವಿಪಾತ್ ಯಜಮಾನಃ ಪ್ರತಿಷ್ಠಿತ್ಯೈ | ಇದರಿಂದ ದ್ವಿಪಾದನಾದ ಯಜಮಾನನು ಭೂಮಿಯಲ್ಲಿ ಸ್ಥಿರನಾಗಿರುವಂತೆ ಮಾಡುವುದಕ್ಕೆ ಕಾರಣವಾಗುತ್ತದೆ. |

---

ದೇವತೆಗಳು ಒಮ್ಮೆ ಸ್ವಿಷ್ಟಕೃದಗ್ನಿರೂಪನಾದ ರುದ್ರನಿಗೆ ಯಜ್ಞಭಾಗವನ್ನು ನೀಡದೇ ಹೋದಾಗ ಅವನು ಯಜ್ಞವನ್ನು ವಿಕಲವನ್ನಾಗಿ ಮಾಡಿದನು. ಪುನಃ ದೇವತೆಗಳು ರುದ್ರನನ್ನು ಹವಿಃಪ್ರದಾನದಿಂದ ಆರಾಧಿಸಿದರೆ ಯಜ್ಞವು ಪೂರ್ಣವಾಗುವುದೆಂದು ಮಾತನಾಡಿಕೊಂಡು

ಯತ್ತಿರಶ್ಚೀನಮತಿಹರೇದನಭಿವಿದ್ಧಂ ಯಜ್ಞಸ್ಯಾಭಿ ವಿಧ್ಯೇದಗ್ರೇಣ ಪರಿಹರತಿ ತೀರ್ಥೇನೈವ ಪರಿಹರತಿ ತತ್ಪೂಷ್ಣೇ ಪರ್ಯಹರನ್

---

ಯತ್ । ತಿರಶ್ಚೀನಮ್ । ಅತಿಹರೇದಿತ್ಯತಿ-ಹರೇತ್ । ಅನಭಿವಿದ್ಧಮಿತ್ಯನಭಿ-ವಿದ್ಧಮ್ । ಯಜ್ಞಸ್ಯ । ಅಭೀತಿ । ವಿಧ್ಯೇತ್ । ಅಗ್ರೇಣ । ಪರೀತಿ । ಹರತಿ । ತೀರ್ಥೇನ । ಏವ । ಪರೀತಿ । ಹರತಿ । ತತ್ । ಪೂಷ್ಣೇ । ಪರೀತಿ । ಅಹರನ್ ।

---

**ಪ್ರಾಶಿತ್ರಹರಣಪ್ರಕಾರವಿಧಿ; ಅದರ ಪ್ರಶಂಸೆ**

| | |
|---|---|
| ಯತ್ ತಿರಶ್ಚೀನಮ್ ಅತಿಹರೇತ್ | ಅಧ್ವರ್ಯುವು ಅಡ್ಡಲಾಗಿ ಪುರೋಡಾಶಭಾಗವನ್ನು ಬ್ರಹ್ಮನಿಗಿತ್ತರೆ |
| ಯಜ್ಞಸ್ಯ ಅನಭಿವಿದ್ಧಮ್ ಅಭಿ ವಿಧ್ಯೇತ್ | ರುದ್ರನಿಂದ ಪ್ರತಿಹತವಾಗದಿರುವ ಯಜ್ಞದ ಅಂಗವಾಗಿರುವ ಪುರೋಡಾಶಭಾಗವನ್ನು ನಾಶಪಡಿಸಿದಂತಾಗುತ್ತದೆ. |
| ಅಗ್ರೇಣ ಪರಿಹರತಿ | ನೇರವಾಗಿ ಬ್ರಹ್ಮನಿಗೆ ಚೆನ್ನಾಗಿ ಕೊಡಬೇಕು. |
| ತೀರ್ಥೇನ ಏವ ಪರಿಹರತಿ | ನದಿಯನ್ನು ಸುಲಭವಾಗಿ ದಾಟುವ ಪ್ರದೇಶದಿಂದಲೇ ಕೊಟ್ಟಂತಾಗುತ್ತದೆ. |

**ಪ್ರಾಶಿತ್ರಕ್ಕೆ ಸಂಬಂಧಿಸಿದ ಮಂತ್ರಗಳ ವಿವರಣೆ; ಅರ್ಥವಾದ**

| | |
|---|---|
| ತತ್ ಪೂಷ್ಣೇ ಪರ್ಯಹರನ್ | ದೇವತೆಗಳು ಆ ಪ್ರಾಶಿತ್ರಭಾಗವನ್ನು ಪೂಷದೇವನಿಗೆ ಸಮರ್ಪಿಸಿದರು. |

---

ಹಾಗೆಯೇ ಅನುಷ್ಠಿಸಿದರು.

ಆ ಸ್ವಿಷ್ಟಕೃದಗ್ನಿಯ ಅನುಗ್ರಹದಿಂದ ಯಾಗವು ಸಂಪೂರ್ಣವಾಗಿ ಫಲಪ್ರದವಾಗುತ್ತದೆಯೆಂದು ಈ ಉಪಾಖ್ಯಾನವು ಸ್ತುತಿಸುತ್ತದೆ.

ಪ್ರಾಶಿತ್ರಭಕ್ಷಣಕ್ಕಾಗಿ ಯವಪ್ರಮಾಣದಷ್ಟು ಪುರೋಡಾಶವನ್ನು ಬೇರ್ಪಡಿಸಬೇಕು.

ತ್ಪೂಷಾ[..ತತ್(೪)ಪೂಷಾ..]ಪ್ರಾಶ್ಯ ದತೋಽರುಣತ್ತಸ್ಮಾ

ತ್ಪೂಷಾ ಪ್ರಪಿಷ್ಟಭಾಗೋಽದಂತಕೋ ಹಿ ತಂ ದೇವಾ

ಅಬ್ರುವನ್ ವಿ ವಾ ಅಯಮಾರ್ಧ್ಯಪ್ರಾಶಿತ್ರಿಯೋ ವಾ

ಅಯಮಭೂದಿತಿ ತದ್ಬೃಹಸ್ಪತಯೇ

---

ತತ್ । (೪) । ಪೂಷಾ । ಪ್ರಾಶ್ಯೇತಿ ಪ್ರ-ಅಶ್ಯ । ದತಃ । ಅರುಣತ್ । ತಸ್ಮಾತ್ ।

ಪೂಷಾ । ಪ್ರಪಿಷ್ಟಭಾಗ ಇತಿ ಪ್ರಪಿಷ್ಟ-ಭಾಗಃ । ಅದಂತಕಃ । ಹಿ । ತಮ್ । ದೇವಾಃ।

ಅಬ್ರುವನ್ನ್ । ವೀತಿ । ವೈ । ಅಯಮ್ । ಆರ್ಧಿ । ಅಪ್ರಾಶಿತ್ರಿಯ ಇತ್ಯಪ್ರ-

ಅಶಿತ್ರಿಯಃ । ವೈ । ಅಯಮ್ । ಅಭೂತ್ । ಇತಿ । ತತ್ । ಬೃಹಸ್ಪತಯೇ ।

---

| | |
|---|---|
| ತತ್ ಪೂಷಾ ಪ್ರಾಶ್ಯ ದತಃ ಅರುಣತ್ | ಪೂಷದೇವನು ಆ ಪ್ರಾಶಿತ್ರಭಾಗವನ್ನು ಅಗಿದು ತಿಂದನು. ಅದರಿಂದ ರುದ್ರಕೋಪವು [ಉಂಟಾಗಿ] ಅದರಿಂದ ತನ್ನ ಹಲ್ಲುಗಳನ್ನು ಮುರಿದುಕೊಂಡನು. |
| ತಸ್ಮಾತ್ ಪೂಷಾ ಪ್ರಪಿಷ್ಟಭಾಗಃ | [ಹೀಗೆ ಹಲ್ಲುಗಳು ಬಿದ್ದು ಮುರಿದು ಹೋದುದರಿಂದ] ಪೂಷದೇವನು ಹಿಟ್ಟಿನ ಹವಿಸ್ಸಿನ ಭಾಗವುಳ್ಳವನಾಗಿದ್ದಾನೆ. |
| ಅದಂತಕಃ ಹಿ | [ಅವನು] ಹಲ್ಲಿಲ್ಲದವನಷ್ಟೆ. |
| ತಮ್ ದೇವಾಃ ಅಯಮ್ ವಿ ಆರ್ಧಿ ವೈ | ಅವನನ್ನು ಕುರಿತು ದೇವತೆಗಳು 'ಈ ಪೂಷನು ಸಮೃದ್ಧಿಹೀನನಾದನು. |
| ಅಯಮ್ ಅಪ್ರಾಶಿತ್ರಿಯಃ ಅಭೂತ್ ವೈ ಇತಿ ಅಬ್ರುವನ್ | [ಹಲ್ಲುಗಳು ಇಲ್ಲದಿರುವುದರಿಂದ] ಈ ಪೂಷನು ಪ್ರಾಶಿತ್ರಭಾಗಕ್ಕೆ ಅನರ್ಹನಾದವನಲ್ಲವೇ?' ಎಂದು ಹೇಳಿಕೊಂಡರು |
| ತತ್ ಬೃಹಸ್ಪತಯೇ | ಆ ಪ್ರಾಶಿತ್ರಭಾಗವನ್ನು ದೇವತೆಗಳು ಬೃಹಸ್ಪತಿಗೆ |

ಪರ್ಯಹರನ್ತ್ಸೋಽಬಿಭೇದ್ಬೃಹಸ್ಪತಿರಿತ್ಥಂ ವಾವ ಸ್ಯ

ಆರ್ತಿಮಾರಿಷ್ಯತೀತಿ ಸ ಏತಂ ಮನ್ತ್ರಮಪಶ್ಯಥ್ಸೂರ್ಯಸ್ಯ

**ತ್ವಾ ಚಕ್ಷುಷಾ ಪ್ರತಿ ಪಶ್ಯಾಮೀ**ತ್ಯಬ್ರವೀನ್ನ ಹಿ ಸೂರ್ಯಸ್ಯ

ಚಕ್ಷುಃ [..ಚಕ್ಷುಃ(೫)ಕಿಂ..] ಕಿಂ ಚನ ಹಿನಸ್ತಿ

---

ಪರೀತಿ । ಅಹರನ್ನ್ । ಸಃ । ಅಬಿಭೇತ್ । ಬೃಹಸ್ಪತಿಃ । ಇತ್ಥಮ್ । ವಾವ । ಸ್ಯಃ ।
ಆರ್ತಿಮ್ । ಏತಿ । ಅರಿಷ್ಯತಿ । ಇತಿ । ಸಃ । ಏತಮ್ । ಮನ್ತ್ರಮ್ । ಅಪಶ್ಯತ್ ।
**ಸೂರ್ಯಸ್ಯ । ತ್ವಾ । ಚಕ್ಷುಷಾ । ಪ್ರತೀತಿ । ಪಶ್ಯಾಮಿ** । ಇತಿ । ಅಬ್ರವೀತ್ । ನ ।
ಹಿ । ಸೂರ್ಯಸ್ಯ । ಚಕ್ಷುಃ । (೫) । ಕಿಮ್ । ಚನ । ಹಿನಸ್ತಿ ।

---

| | |
|---|---|
| ಪರ್ಯಹರನ್ನ್ | ಸಮರ್ಪಿಸಿದರು. |
| ಸಃ ಬೃಹಸ್ಪತಿಃ | ಆ ಬೃಹಸ್ಪತಿಯು [ಈ ಪೂಷನು] ಹಿಂಸೆಗೆ ಗುರಿ |
| ಇತ್ಥಮ್ ವಾವ ಸ್ಯಃ ಆರ್ತಿಮ್ ಅರಿಷ್ಯತಿ ಇತಿ ಅಬಿಭೇತ್ | ಯಾದಂತೆಯೇ ಬೇರೆಯವನೂ[ತಾನೂ]ಹಿಂಸೆಗೆ ಗುರಿಯಾಗಬಹುದೆಂದು ಹೆದರಿದನು. |
| ಸಃ ಏತಮ್ ಮನ್ತ್ರಮ್ ಅಪಶ್ಯತ್ | ಆ ಬೃಹಸ್ಪತಿಯು ಈ ಮಂತ್ರವನ್ನು ತಿಳಿದು ಕೊಂಡನು/ಕಂಡನು. |
| ಸೂರ್ಯಸ್ಯ ತ್ವಾ ಚಕ್ಷುಷಾ ಪ್ರತಿ ಪಶ್ಯಾಮಿ ಇತಿ ಅಬ್ರವೀತ್ | ['ಎಲೈ! ಪುರೋಡಾಶಭಾಗವೇ/ಪ್ರಾಶಿತ್ರವೇ!] ನಿನ್ನನ್ನು ಸೂರ್ಯನೆಂಬ ಕಣ್ಣಿನಿಂದ ನೋಡುತ್ತೇನೆ.' ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಿದನು. |
| ಸೂರ್ಯಸ್ಯ ಚಕ್ಷುಃ ಕಿಂಚನ ನ ಹಿ ಹಿನಸ್ತಿ | ಎಲ್ಲರಿಗೂ ಆರೋಗ್ಯವನ್ನು ಕೊಡುವ ಸೂರ್ಯನ ಕಣ್ಣು/ಕಿರಣವು ಲೋಕದಲ್ಲಿ ಯಾವುದನ್ನೂ ಹಿಂಸಿಸುವುದಿಲ್ಲವಷ್ಟೆ! |

---

ಒಂದು ಬಾರಿ ಅವದಾನವನ್ನು ಮಾಡಿ ಒಂದು ಬಾರಿ ಅಭಿಘಾರವನ್ನು ಮಾಡಬೇಕು.

ಸೋಽಬಿಭೇತ್ಪ್ರತಿಗೃಹ್ಣಂತಂ ಮಾ ಹಿಗ್ಂಸಿಷ್ಯತೀತಿ ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಂ

---

ಸಃ । ಅಬಿಭೇತ್ । ಪ್ರತಿಗೃಹ್ಣಂತಮಿತಿ ಪ್ರತಿ-ಗೃಹ್ಣಂತಮ್ । ಮಾ । ಹಿಗ್ಂಸಿಷ್ಯತಿ । ಇತಿ । ದೇವಸ್ಯ । ತ್ವಾ । ಸವಿತುಃ । ಪ್ರಸವ ಇತಿ ಪ್ರ-ಸವೇ । ಅಶ್ವಿನೋಃ । ಬಾಹುಭ್ಯಾಮಿತಿ ಬಾಹು-ಭ್ಯಾಮ್ । ಪೂಷ್ಣಃ । ಹಸ್ತಾಭ್ಯಾಮ್ ।

---

**ಪ್ರತಿಗ್ರಹಮಂತ್ರದ ವಿವರಣೆ; ಅರ್ಥವಾದ**

| | |
|---|---|
| ಸಃ | [ಹೀಗೆ ನಿರ್ಭಯನಾದ] ಬೃಹಸ್ಪತಿಯು |
| ಪ್ರತಿಗೃಹ್ಣಂತಮ್ ಮಾ | ಪ್ರಾಶಿತ್ರಪ್ರತಿಗ್ರಹ ಮಾಡುತ್ತಿರುವ ನನ್ನನ್ನು ಈ |
| ಹಿಂಸಿಷ್ಯತಿ ಇತಿ ಅಬಿಭೇತ್ | ಪ್ರಾಶಿತ್ರಭಾಗವು ಹಿಂಸಿಸಬಹುದೆಂದು ಭಯಪಟ್ಟನು. |
| | [ಆಗ ಬೃಹಸ್ಪತಿಯು]ಎಲೈ! ಪ್ರಾಶಿತ್ರಭಾಗವೇ! |
| ದೇವಸ್ಯ ಸವಿತುಃ ಪ್ರಸವೇ | ಸವಿತೃದೇವನ ಅನುಮತಿಯಿಂದ, ಅಶ್ವಿನೀದೇವತೆಗಳ |
| ಅಶ್ವಿನೋಃ ಬಾಹುಭ್ಯಾಮ್ | ತೋಳುಗಳಿಂದಲೂ |
| ಪೂಷ್ಣಃ ಹಸ್ತಾಭ್ಯಾಮ್ | ಪೂಷದೇವನ ಕೈಗಳಿಂದಲೂ |

---

ಪ್ರಾಶಿತ್ರದಲ್ಲಿ ಚತುರವತ್ತವಿಲ್ಲ. ದ್ವಿರವತ್ತವೇ.ಆ ವಿಧಿಯನ್ನು ಹೇಳಿ, ದ್ವಿರವತ್ತದ ಪ್ರಶಂಸೆಯನ್ನೂ ಇಲ್ಲಿ ಶ್ರುತಿಯು ಮಾಡುತ್ತದೆ.

ವೇದಿಯ ಉತ್ತರದಲ್ಲಿರುವ ಅಧ್ವರ್ಯುವು ಪ್ರಾಙ್ಮುಖನಾಗಿ ಹೋಗಿ ಆಹವನೀಯಾಗ್ನಿಯ ಮುಂಭಾಗದಿಂದ ಬ್ರಹ್ಮನ ಸಮೀಪಕ್ಕೆ ಹೋಗಿ ಅವನಿಗೆ ಪ್ರಾಶಿತ್ರಭಾಗವನ್ನು ಕೊಡಬೇಕು. ಇದು ವಿಧಿ. ಇದಕ್ಕೆ ಶ್ರುತಿಯು ಉಪಪತ್ತಿಯನ್ನು ಹೇಳುತ್ತದೆ.

ಅಧ್ವರ್ಯುವು ವೇದಿಯ ಉತ್ತರಭಾಗದಲ್ಲಿದ್ದುಕೊಂಡು ವೇದಿಯ ಮಧ್ಯಭಾಗದಲ್ಲಿರುವ ಪುರೋಡಾಶಭಾಗವನ್ನು ತೆಗೆದುಕೊಂಡು ಆಹವನೀಯಾಗ್ನಿಯ ದಕ್ಷಿಣಭಾಗದಲ್ಲಿರುವ ಬ್ರಹ್ಮನಿಗೆ ಕೈಯನ್ನು ನೀಡಿದರೆ ಅಡ್ಡಲಾಗಿ ಪ್ರಾಶಿತ್ರಭಾಗವನ್ನು ಕೊಟ್ಟಂತಾಯಿತು.ಇದರಿಂದ

**ಪ್ರತಿ ಗೃಹ್ಣಾಮೀ**ತ್ಯಬ್ರವೀಥ್ಸವಿತೃಪ್ರಸೂತ ಏವೈನದ್ಬ್ರಹ್ಮಣಾ ದೇವತಾಭಿಃ ಪ್ರತ್ಯಗೃಹ್ಣಾಥ್ಸೋಽಬಿಭೇತ್ಪ್ರಾಶ್ಞಂತಂ ಮಾ ಹಿಗ್ಂಸಿಷ್ಯತೀತ್ಯ-

---

**ಪ್ರತೀತಿ । ಗೃಹ್ಣಾಮಿ ।** ಇತಿ । ಅಬ್ರವೀತ್ । ಸವಿತೃಪ್ರಸೂತ ಇತಿ ಸವಿತೃ-ಪ್ರಸೂತಃ। ಏವ । ಏನತ್ । ಬ್ರಹ್ಮಣಾ । ದೇವತಾಭಿಃ । ಪ್ರತೀತಿ । ಅಗೃಹ್ಣಾತ್ । ಸಃ । ಅಬಿಭೇತ್ । ಪ್ರಾಶ್ಞಂತಮಿತಿ ಪ್ರ-ಅಶ್ಞಂತಮ್ । ಮಾ । ಹಿಗ್ಂಸಿಷ್ಯತಿ । ಇತಿ ।

---

| | |
|---|---|
| ತ್ವಾ ಪ್ರತಿಗೃಹ್ಣಾಮಿ ಇತಿ ಅಬ್ರವೀತ್ | ನಿನ್ನನ್ನು ಪ್ರತಿಗ್ರಹ ಮಾಡುತ್ತೇನೆಂದು ಹೇಳಿದನು. [ಈ ಮಂತ್ರದಿಂದ ಪ್ರತಿಗ್ರಹ ಮಾಡಿದನು] |
| ಸವಿತೃಪ್ರಸೂತಃ ಏವ | ಎಲ್ಲಕ್ಕೂ ಅನುಮತಿಯನ್ನು ನೀಡುವ ಸವಿತೃ ದೇವನ ಅನುಜ್ಞೆಯನ್ನು ಹೊಂದಿಯೇ ಮಂತ್ರ ಪೂರ್ವಕವಾಗಿಯೇ |
| ಏನತ್ ಬ್ರಹ್ಮಣಾ ದೇವತಾಭಿಃ ಪ್ರತ್ಯಗೃಹ್ಣಾತ್ | ದೇವತೆಗಳಿಂದಲೇ ಪ್ರಾಶಿತ್ರವನ್ನು ಪ್ರತಿಗ್ರಹ ಮಾಡಿದವನಾದನು. |

**ಪ್ರಾಶನಮಂತ್ರ; ಅದರ ಅರ್ಥವಾದ**

| | |
|---|---|
| ಸಃ ಪ್ರಾಶ್ಞಂತಮ್ ಮಾ ಹಿಗ್ಂಸಿಷ್ಯತಿ ಇತಿ ಅಬಿಭೇತ್ | ಆ ಬೃಹಸ್ಪತಿಯು ಪುನಃ ಈ ಪ್ರಾಶಿತ್ರವು ಪ್ರಾಶನ ಮಾಡುತ್ತಿರುವಾಗ ನನ್ನನ್ನು ಹಿಂಸಿಸಬಹುದೆಂದು ಹೆದರಿದನು. |

---

ಪುರೋಡಾಶಭಾಗವನ್ನು ನಾಶಪಡಿಸಿದಂತಾಗುತ್ತದೆ. ಹೀಗಾಗಿ ಆಹವನೀಯಾಗ್ನಿಯ ಮುಂಭಾಗದಿಂದ ಹೋಗಿ ನೇರವಾಗಿ ಬ್ರಹ್ಮನಿಗೆ ಪ್ರಾಶಿತ್ರಭಾಗವನ್ನು ನೀಡಬೇಕು. ಇದರಿಂದ ತೀರ್ಥದಿಂದಲೇ ಕೊಟ್ಟಂತಾಗುತ್ತದೆ. ನದಿಯನ್ನು ದಾಟಲು ಆಳವಿಲ್ಲದ ಪ್ರದೇಶವನ್ನು ಗೊತ್ತುಪಡಿಸಿಕೊಂಡು ಸುಲಭವಾಗಿ ನದಿಯನ್ನು ದಾಟುತ್ತಾರೆ.ಇಂತಹ ಪ್ರದೇಶಗಳಿಗೆ

ಗ್ನೇಸ್ತ್ವಾಽಽಸ್ಯೇನ ಪ್ರಾಶ್ನಾಮೀತ್ಯಬ್ರವೀನ್ನ ಹ್ಯಗ್ನೇರಾಸ್ಯಂ ಕಿಂ ಚನ ಹಿನಸ್ತಿ ಸೋಽಬಿಭೇ[..ಬಿಭೇತ್(೬)ಪ್ರಾಶಿತಂ..] ತ್ಪ್ರಾಶಿತಂ ಮಾ ಹಿಗ್ಂಸಿಷ್ಯತೀತಿ ಬ್ರಾಹ್ಮಣಸ್ಯೋದರೇಣೇತ್ಯಬ್ರವೀ-

---

ಅಗ್ನೇಃ । ತ್ವಾ । ಆಸ್ಯೇನ । ಪ್ರೇತಿ । ಅಶ್ನಾಮಿ । ಇತಿ । ಅಬ್ರವೀತ್ । ನ । ಹಿ । ಅಗ್ನೇಃ। ಆಸ್ಯಮ್ । ಕಿಮ್ । ಚನ । ಹಿನಸ್ತಿ । ಸಃ । ಅಬಿಭೇತ್ । (೬) । ಪ್ರಾಶಿತಮಿತಿ ಪ್ರ-ಆಶಿತಮ್ । ಮಾ । ಹಿಗ್ಂಸಿಷ್ಯತಿ । ಇತಿ । ಬ್ರಾಹ್ಮಣಸ್ಯ । ಉದರೇಣ । ಇತಿ । ಅಬ್ರವೀತ್ ।

---

| | |
|---|---|
| ಅಗ್ನೇಃ ಆಸ್ಯೇನ ತ್ವಾ ಪ್ರಾಶ್ನಾಮಿ ಇತಿ ಅಬ್ರವೀತ್ | [ಆಗ ಬೃಹಸ್ಪತಿಯು] 'ಎಲೈ! ಪ್ರಾಶಿತ್ರಭಾಗವೇ! ನಿನ್ನನ್ನು ಅಗ್ನಿಯ ಬಾಯಿಯಿಂದ ತಿನ್ನುವೆನು' ಎಂಬ ಅರ್ಥದ ಮಂತ್ರವನ್ನು ಹೇಳಿದನು./ಹೇಳಿ ಪ್ರಾಶನ ಮಾಡಿದನು. |
| ಅಗ್ನೇಃ ಆಸ್ಯಮ್ ನ ಹಿ ಕಿಂಚನ ಹಿನಸ್ತಿ | ಎಲ್ಲವನ್ನೂ ಸುಡುವ ಅಗ್ನಿಯ ಬಾಯಿಯನ್ನು ಯಾವುದೂ ತಡೆಯಲಾರದಷ್ಟೆ! ಯಾವುದೂ ಹಿಂಸಿಸಲಾರದಷ್ಟೆ! |

## ಪ್ರಾಶನದ ಬಳಿಕ ಹೇಳುವ ಮಂತ್ರ; ಅರ್ಥವಾದ

| | |
|---|---|
| ಸಃ ಪ್ರಾಶಿತಮ್ ಮಾ ಹಿಗ್ಂಸಿಷ್ಯತಿ ಇತಿ ಅಬಿಭೇತ್ | ಆ ಬೃಹಸ್ಪತಿಯು ಪ್ರಾಶನ ಮಾಡಿದ ಮೇಲೆ ಪ್ರಾಶಿತ್ರವು ತನ್ನನ್ನು ಹಿಂಸಿಸಬಹುದೆಂದು ಹೆದರಿದನು. |
| ಬ್ರಾಹ್ಮಣಸ್ಯ ಉದರೇಣ ಇತಿ ಅಬ್ರವೀತ್ | [ಆತನು] 'ನಾನು ಬ್ರಾಹ್ಮಣನ ಉದರದಿಂದ ನಿನ್ನನ್ನು ಭಕ್ಷಿಸಿದೆನು' ಎಂಬ ಮಂತ್ರವನ್ನು ಹೇಳಿದನು. |

---

**'ತೀರ್ಥ' [ಕಡ;ಕಡವು]** ಎಂದು ಹೆಸರು. ಅಗ್ರದಿಂದ ಪ್ರಾಶಿತ್ರಭಾಗವನ್ನು ಬ್ರಹ್ಮನಿಗೆ ಕೊಡುವುದೂ ಹಾಗೆಯೇ ಸುಲಭವಾದ ಮಾರ್ಗವಾಗಿರುತ್ತದೆಯೆಂದು ಅಧ್ವರ್ಯುವಿನ

ನ್ನ ಹಿ ಬ್ರಾಹ್ಮಣಸ್ಯೋದರಂ ಕಿಂ ಚನ ಹಿನಸ್ತಿ ಬೃಹಸ್ಪತೇ

ರ್ಬ್ರಹ್ಮಣೇತಿ ಸ ಹಿ ಬ್ರಹ್ಮಿಷ್ಠೋಽಪ ವಾ ಏತಸ್ಮಾತ್ಪ್ರಾಣಾಃ

ಕ್ರಾಮಂತಿ ಯಃ ಪ್ರಾಶಿತ್ರಂ ಪ್ರಾಶ್ನಾತ್ಯ-

---

ನ । ಹಿ । ಬ್ರಾಹ್ಮಣಸ್ಯ । ಉದರಮ್ । ಕಿಮ್ । ಚನ । ಹಿನಸ್ತಿ । ಬೃಹಸ್ಪತೇಃ । ಬ್ರಹ್ಮಣಾ । ಇತಿ । ಸಃ । ಹಿ । ಬ್ರಹ್ಮಿಷ್ಠಃ । ಅಪೇತಿ । ವೈ । ಏತಸ್ಮಾತ್ । ಪ್ರಾಣಾ ಇತಿ ಪ್ರ-ಅನಾಃ । ಕ್ರಾಮಂತಿ । ಯಃ । ಪ್ರಾಶಿತ್ರಮಿತಿ ಪ್ರ-ಆಶಿತ್ರಮ್ । ಪ್ರಾಶ್ನಾತೀತಿ ಪ್ರ-ಅಶ್ನಾತಿ ।

---

| | |
|---|---|
| ಬ್ರಾಹ್ಮಣಸ್ಯ ಉದರಮ್ ನ ಹಿ ಕಿಂಚನ ಹಿನಸ್ತಿ | ಪರಾನ್ನವನ್ನು ಭಕ್ಷಿಸಿದರೂ ಆ ಬ್ರಾಹ್ಮಣನ ಉದರವನ್ನು ಯಾವ ಪ್ರತ್ಯವಾಯವೂ ಮುಟ್ಟಲಾರದಷ್ಟೆ! |
| ಬೃಹಸ್ಪತೇಃ ಬ್ರಹ್ಮಣಾ | **'ಬೃಹಸ್ಪತೇಃ ಬ್ರಹ್ಮಣಾ'** ಎಂಬ ಮಂತ್ರಭಾಗವನ್ನು ಪ್ರಾಶಿತ್ರಭಕ್ಷಣ ಮಾಡಿದ ಮೇಲೆ ಹೇಳಬೇಕು. |
| ಸಃ ಹಿ ಬ್ರಹ್ಮಿಷ್ಠಃ | ಬೃಹಸ್ಪತಿಯು ಮಂತ್ರವನ್ನು ಬಲ್ಲವರಲ್ಲಿ ಶ್ರೇಷ್ಠನಷ್ಟೆ! |

### ಮಾರ್ಜನ ಮತ್ತು ಅಂಗಸ್ಪರ್ಶ; ಪ್ರಶಂಸೆ

| | |
|---|---|
| ಯಃ ಪ್ರಾಶಿತ್ರಮ್ ಪ್ರಾಶ್ನಾತಿ | ಯಾವನು ಪ್ರಾಶಿತ್ರಭಕ್ಷಣವನ್ನು ಮಾಡುತ್ತಾನೆಯೋ |
| ಏತಸ್ಮಾತ್ ಪ್ರಾಣಾಃ ಅಪಕ್ರಾಮಂತಿ ವೈ | ಅವನಿಂದ ಪ್ರಾಣಗಳು ಹೊರಕ್ಕೆ ಹೊರಟು ಹೋಗುತ್ತವೆಯಷ್ಟೆ. |

---

ಕಾರ್ಯಕ್ಕೆ ಉಪಪತ್ತಿಯನ್ನು ಶ್ರುತಿಯು ಹೇಳುತ್ತದೆ.ಇದು ಪ್ರಾಶಿತ್ರಹರಣ ಪ್ರಕಾರದ ವಿಧಿ ಮತ್ತು ಅದರ ಪ್ರಶಂಸೆಯಾಗಿದೆ.

ದೇವತೆಗಳು ಆ ಪ್ರಾಶಿತ್ರವನ್ನು ಪೂಷದೇವನಿಗೆ ನೀಡಿದರು. ಅವನು ರುದ್ರನ ಕೋಪದಿಂದ

ದ್ಭಿರ್ಮಾರ್ಜಯಿತ್ವಾ ಪ್ರಾಣಾನ್ಥ್ಸಂಮ್ಮೃಶತೇಽಮೃತಂ ವೈ

ಪ್ರಾಣಾ ಅಮೃತಮಾಪಃ

ಅದ್ಭಿರಿತ್ಯತ್-ಭಿಃ । ಮಾರ್ಜಯಿತ್ವಾ । ಪ್ರಾಣಾನಿತಿ ಪ್ರ-ಅನಾನ್ । ಸಮಿತಿ । ಮೃಶತೇ ।

ಅಮೃತಮ್ । ವೈ । ಪ್ರಾಣಾ ಇತಿ ಪ್ರ-ಅನಾಃ । ಅಮೃತಮ್ । ಆಪಃ ।

| | |
|---|---|
| ಅದ್ಭಿಃ ಮಾರ್ಜಯಿತ್ವಾ | (ಆದುದರಿಂದ) ನೀರಿನಿಂದ ಶಿರೋಮಾರ್ಜನ ಮಾಡಿಕೊಂಡು |
| ಪ್ರಾಣಾನ್ ಸಂಮೃಶತೇ | ಮುಖಾದಿ ಪ್ರಾಣಸ್ಥಾನವಾಗಿರುವ ಅವಯವ ಗಳನ್ನು ಸ್ಪರ್ಶಿಸಬೇಕು. **[ವಿಧಿ]** |
| ಅಮೃತಮ್ ವೈ ಪ್ರಾಣಾಃ | ಪ್ರಾಣಗಳೂ ಅಮೃತಸ್ವರೂಪವಾಗಿವೆ. |
| ಆಪಃ ಅಮೃತಮ್ | ನೀರೂ ಸಹ ಅಮೃತಸ್ವರೂಪವಾಗಿದೆ. |

ತನ್ನ ಹಲ್ಲುಗಳನ್ನು ಕಳೆದುಕೊಂಡನು. ಆಗ ದೇವತೆಗಳು ಪ್ರಾಶಿತ್ರಭಾಗವನ್ನು ಬೃಹಸ್ಪತಿಗೆ ಕೊಟ್ಟರು. ಬೃಹಸ್ಪತಿಯು ಪ್ರಾಶಿತ್ರಭಾಗವನ್ನು ಸ್ವೀಕರಿಸಲು ಹೆದರಿದನು. ಅನಂತರ ತಾನು 'ಸೂರ್ಯನ ಕಣ್ಣಿನಿಂದ ನಿನ್ನನ್ನು ನೋಡುತ್ತೇನೆ.'ಎಂಬ ಮಂತ್ರವನ್ನು ದರ್ಶನ ಮಾಡಿದನು. ಆ ಮಂತ್ರದಿಂದ ಪ್ರಾಶಿತ್ರವನ್ನು ನೋಡಿದನು. ಸೂರ್ಯನ ಕಿರಣವು ಲೋಕೋಪಯೋಗಿ ಯಾದುದರಿಂದ ಯಾರನ್ನೂ ಹಿಂಸಿಸುವುದಿಲ್ಲವಷ್ಟೆ!

ಬೃಹಸ್ಪತಿಯು ಹೀಗೆ ನಿರ್ಭಯನಾದರೂ ಪ್ರಾಶಿತ್ರವನ್ನು ಪ್ರತಿಗ್ರಹ ಮಾಡುತ್ತಿರುವ ನನ್ನನ್ನು ಈ ಪ್ರಾಶಿತ್ರಭಾಗವು ಹಿಂಸಿಸಬಹುದೆಂದು ಭಯಪಟ್ಟು, ದೇವತೆಗಳಿಂದಲೇ ತಾನು ಪ್ರತಿಗ್ರಹ ಮಾಡಿರುವೆನೆಂಬ ಮಂತ್ರವನ್ನು ಹೇಳಿದನು.ಅವನು ಆದುದರಿಂದ ಪೀಡೆಗೆ ಗುರಿಯಾಗಲಿಲ್ಲವೆಂಬುದಾಗಿ ಆ ಪ್ರತಿಗ್ರಹಮಂತ್ರದ ಪ್ರಶಂಸೆ.

ಆ ಬೃಹಸ್ಪತಿಯು ಪುನಃ ಭೀತನಾಗಿ ಪ್ರಾಶಿತ್ರವು ಪ್ರಾಶನ ಮಾಡುತ್ತಿರುವಾಗ ತನ್ನನ್ನು ತೊಂದರೆಪಡಿಸಬಹುದೆಂದುಕೊಂಡನು. ಆಗ ಅವನು 'ಅಗ್ನಿಯ ಮುಖದಿಂದ ನಾನು ಪ್ರಾಶನ ಮಾಡುವೆನು'ಎಂಬ ಮಂತ್ರವನ್ನು ಹೇಳಿದನು.ಅಗ್ನಿಯ ಮುಖವನ್ನು ಯಾರೂ ಹಿಂಸಿಸಲಾರರಷ್ಟೆ! ಈ ಪ್ರಾಶನಮಂತ್ರವನ್ನು ಹೇಳಿದುದರಿಂದ, ಅದರಿಂದ ಉಂಟಾಗುವ ರಕ್ಷಣೆಯನ್ನು ತಿಳಿಸುತ್ತಾ ಆ ಮಂತ್ರದ ಪ್ರಶಂಸೆಯನ್ನು ಇಲ್ಲಿ ಮಾಡಲಾಗಿದೆ.

ಪ್ರಾಣಾನೇವ ಯಥಾಸ್ಥಾನಮುಪ ಹ್ವಯತೇ ॥೪೮-8॥

**[ಪ್ರಾಶ್ನೀಯಾದ್ಧೋತಾ ಯಜ್ಞಂ ನಿರಹರನ್ತ್ಸಚ್ಚಕ್ಷುರಾಸ್ಯಂ ಕಿಂ ಚನ ಹಿನಸ್ತಿ ಸೋಽಬಿಭೇಚ್ಚತುಶ್ಚತ್ವಾರಿಗ್ಂಶಚ್ಚ॥]**

---

ಪ್ರಾಣಾನಿತಿ ಪ್ರ-ಅನಾನ್ । ಏವ । ಯಥಾಸ್ಥಾನಮಿತಿ ಯಥಾ-ಸ್ಥಾನಮ್ । ಉಪೇತಿ । ಹ್ವಯತೇ ॥ 48 ॥

| | |
|---|---|
| ಪ್ರಾಣಾನ್ ಯಥಾಸ್ಥಾನಮ್ ಉಪಹ್ವಯತೇ ಏವ | [ಅದುದರಿಂದ] ಪ್ರಾಣಗಳನ್ನೇ ಅವುಗಳ ಸ್ಥಾನಕ್ಕೆ ಅನುಗುಣವಾಗಿ ಆಹ್ವಾನಿಸಿದಂತಾಗುತ್ತದೆ/ ಪ್ರಾಣಗಳು ಹೊರಹೋಗುವುದಿಲ್ಲ. |

---

ಪ್ರಾಶನ ಮಾಡಿದ ನಂತರ ಪ್ರಾಶಿತ್ರವು ತನ್ನನ್ನು ಹಿಂಸಿಸಬಹುದೆಂದು ಪುನಃ ಹೆದರಿದನು. ಆಗ ಆ ಬೃಹಸ್ಪತಿಯು **'ಬ್ರಾಹ್ಮಣಸ್ಯ ಉದರೇಣ'** ಎಂದೂ **'ಬೃಹಸ್ಪತೇರ್ಬ್ರಹ್ಮಣಾ'** ಎಂಬ ಮಂತ್ರವನ್ನೂ ಹೇಳಿದನು. ಈ ಮಂತ್ರದ ಪ್ರಭಾವದಿಂದ ಪ್ರಾಶಿತ್ರದಿಂದ ಹಿಂಸೆಯು ಉಂಟಾಗುವುದಿಲ್ಲ. ಇಲ್ಲಿ **'ವಾತಾಪಿ ಜೀರ್ಣೋ ಭವ'**ಎಂದು ಅಗಸ್ತ್ಯರ ಸಾಮರ್ಥ್ಯವನ್ನೂ, ಅಗ್ನಿಯು ಖಾಂಡವವನ್ನು ದಹಿಸಿದುದನ್ನೂ ಸ್ಮರಿಸಬಹುದು.

ಶ್ರೌತಸೂತ್ರದಲ್ಲಿ**'ಇಂದ್ರಸ್ಯ ತ್ವಾ ಜಠರೇ ಸಾದಯಾಮಿ'ಇತಿ ನಾಭಿದೇಶಮಭಿಮೃಶತಿ 'ವಾಙ್ಮ ಆಸನ್' ಇತಿ ಯಥಾಲಿಂಗಮಂಗಾನಿ [ಆಪ.ಶ್ರೌ.ಸೂ.3.20.1-2]** ಎಂದು ಹೇಳಿದೆ. ಈ ಸ್ಪರ್ಶನವನ್ನು ಶಿರೋಮಾರ್ಜನಪೂರ್ವಕವಾಗಿ ಮಾಡಬೇಕು. ಅದರ ಪ್ರಶಂಸೆಯಿದು. **'ವಾಙ್ಮ ಆಸನ್'**ಎಂಬ ಮಂತ್ರದಿಂದ ಮಂತ್ರಾರ್ಥಕ್ಕೆ ಅನುಗುಣವಾಗಿ ಅವಯವಗಳ ಅಭಿಮರ್ಶನವನ್ನು ಮಾಡಬೇಕು. ಈ ಅಭಿಮರ್ಶನದ ಪ್ರಶಂಸೆಯೂ ಇಲ್ಲಿದೆ. ಈ ಶಿರೋಮಾರ್ಜನದಿಂದ ಅಂಗಾಭಿಮರ್ಶನದಿಂದ ಪ್ರಾಣಗಳು ಹೊರಹೋಗದಂತಾಗುತ್ತದೆ ಎಂಬ ಸ್ತುತಿಯಿದೆ.

* * *

# ಅನುವಾಕದ ವಿಶೇಷವಿಷಯಗಳು

## ಅ)ಮೀಮಾಂಸಾ

### ೧) ಇಡಾ-ಪ್ರಾಶಿತ್ರಗಳು ನಷ್ಟವಾದರೆ ಹೇಗೆ? [ಜೈ.ಸೂ.6.4.3]

ಇಡಾಭಕ್ಷಣ ಮತ್ತು ಪ್ರಾಶಿತ್ರಭಕ್ಷಣಕ್ಕಾಗಿ ಅವದಾನವನ್ನು ಮಾಡಿದ ನಂತರ ಅದು ನಷ್ಟವಾದರೆ ಉಳಿದ ಭಾಗದಿಂದ ಪುನಃ ಇಡಾ-ಪ್ರಾಶಿತ್ರಭಕ್ಷಣವನ್ನು ಅನುಷ್ಠಿಸಬೇಕೆ? ಇದು ಇಲ್ಲಿನ **ಸಂಶಯ.**

ಇಡಾಶೇಷವು ಉಳಿದಿರುವುದರಿಂದ ಪುನಃ ಇಡಾಭಕ್ಷಣಗಳನ್ನು ಅನುಷ್ಠಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಆ ಶೇಷಕ್ಕೆ ಬೇರೆಯ ವಿನಿಯೋಗವಿರುವುದರಿಂದ ಇಡಾ-ಪ್ರಾಶಿತ್ರಭಕ್ಷಣಗಳಿಗಾಗಿ ಅವತ್ತವಾದುದು ನಷ್ಟವಾದರೆ ಇಡಾ-ಪ್ರಾಶಿತ್ರಭಕ್ಷಣಗಳಿಗೆ ಲೋಪವೇ ಸರಿ. ಪುನಃ ಇಡಾ-ಪ್ರಾಶಿತ್ರಭಕ್ಷಣವನ್ನು ಮಾಡಬಾರದು. ಇದು ಇಲ್ಲಿನ **ಸಿದ್ಧಾಂತ.**

### ೨) ಪ್ರಾಶಿತ್ರಭಕ್ಷಣವು ಯಾರಿಗಾಗಿ? [ಜೈ.ಸೂ.6.4.4]

ಇಡಾಭಕ್ಷಣವು ಯಜಮಾನ ಮತ್ತು ಋತ್ವಿಜರನ್ನು ಬಿಟ್ಟು ಉಳಿದವರಿಗಾಗಿ ವಿಹಿತವಾಗಿದೆಯೇ? ಅಥವಾ ಯಜಮಾನನ ಸಹಿತರಾದ ಋತ್ವಿಜರಿಗೆ ಮಾತ್ರವೇ?ಇದು ಇಲ್ಲಿನ **ಸಂಶಯ.**

**'ಯಜಮಾನಪಂಚಮಾಃ ಇಡಾಂ ಭಕ್ಷಯಂತಿ'** ಎಂಬ ವಾಕ್ಯವು **'ತತ್ರ ಚಾನ್ಯತ್ರ ಚ ಪ್ರಾಪ್ತೌ ಪರಿಸಂಖ್ಯೇತಿ ಗೀಯತೇ'** ಎಂಬ ವಾಕ್ಯದಂತೆ ಪರಿಸಂಖ್ಯಾವಿಧಿಯಾದುದರಿಂದ ಋತ್ವಿಜರು ಕಾರ್ಯವನ್ನು ನಿರ್ವಹಿಸುವುದರಿಂದ ಅವರಿಗೆ ಭಕ್ಷಣವು ತಾನಾಗಿಯೇ ಪ್ರಾಪ್ತವಾಗುತ್ತಿರುವಾಗ ಪುನಃ **'ಯಜಮಾನ...ಭಕ್ಷಯಂತಿ'**ಎಂಬ ವಾಕ್ಯವು ಯಜಮಾನನಿಂದ ಒಡಗೂಡಿದ ಋತ್ವಿಜರು ಪ್ರಾಶಿತ್ರಭಕ್ಷಣವನ್ನು ಮಾಡುವಂತಿಲ್ಲ ಎಂಬುದನ್ನು ತಿಳಿಸುವುದಕ್ಕಾಗಿ. ಹೀಗಾಗಿ ಋತ್ವಿಜರಲ್ಲದವರಿಗೆ ಮಾತ್ರ ಪ್ರಾಶಿತ್ರಭಕ್ಷಣ. ಇದು ಇಲ್ಲಿನ **ಪೂರ್ವಪಕ್ಷ.**

ಯಜಮಾನನು ಕಾರ್ಯವನ್ನು ಅನುಷ್ಠಿಸದೇ ಇರುವುದರಿಂದ ಈ **'ಯಜಮಾನ.. ..ಭಕ್ಷಯಂತಿ'** ಎಂಬ ವಿಧಿಯು ಹೊಸದಾದ ಭಕ್ಷಣವಿಧಿಯಾಗಿದೆ. ಹೀಗಾಗಿ ಇದು ಅಪೂರ್ವವಿಧಿಯಾಗಿ ಋತ್ವಿಜರು ಮತ್ತು ಯಜಮಾನನಿಗೆ ಮಾತ್ರ ಇಡಾಭಕ್ಷಣವನ್ನು

ವಿಧಿಸುತ್ತದೆ. ಇದು ಇಲ್ಲಿನ **ಸಿದ್ಧಾಂತ.**

**೩) ಪೌಷಯಾಗದಲ್ಲಿನ ಪೇಷಣವು ಯಾವುದರಲ್ಲಿ ? [ಜೈ.ಸೂ.3.3]**

**'ತಸ್ಮಾತ್ ಪೂಷಾ ಪ್ರಪಿಷ್ಟಭಾಗಃ'** ಎಂದಿರುವುದರಿಂದ ಪೂಷನಿಗೆ ಹಿಟ್ಟಿನ ದ್ರವ್ಯವೇ ಆಗಬೇಕಾಗಿರುವುದರಿಂದ ಧಾನ್ಯವನ್ನು ಹಿಟ್ಟನ್ನಾಗಿಸಲು ಮಾಡಬೇಕಾದ ಪೇಷಣವನ್ನು ಪ್ರಕೃತಿಯಾಗದಲ್ಲಿ ಮಾಡಬೇಕೆ? ವಿಕೃತಿಯಾಗದಲ್ಲಿಯೇ? ಎಂಬುದು ಇಲ್ಲಿನ **ಸಂಶಯ.**

ದರ್ಶ–ಪೂರ್ಣಮಾಸಪ್ರಕರಣದಲ್ಲಿ **'ಪೂಷಾ ಪ್ರಪಿಷ್ಟಭಾಗಃ'** ಎಂದು ಹೇಳಿರುವುದರಿಂದ ಪ್ರಕೃತಿಯಲ್ಲಿಯೇ ಪೇಷಣವನ್ನು ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಪ್ರಕರಣದಿಂದ ಪ್ರಕೃತಿಯಲ್ಲಿ ಪೇಷಣವು ಪ್ರಾಪ್ತವಾಗುವುದಾದರೂ ಪ್ರಕೃತಿಯಾಗದಲ್ಲಿ ಪೂಷದೇವತೆಯು ಇಲ್ಲದಿರುವುದರಿಂದ ಪೂಷದೇವತಾಕವಾದ ವಿಕೃತಿಯಾಗದಲ್ಲಿಯೇ ಪೇಷಣವನ್ನು ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

**೪) ಪೂಷದೇವತಾಕವಾದ ಯಾವ ದ್ರವ್ಯದಲ್ಲಿ ಪೇಷಣವು ವಿಹಿತವಾಗಿದೆ?**

**[ಜೈ.ಸೂ.2.6.8]**

ಪೂಷದೇವತೆಗೆ ಬೇರೆ ಬೇರೆ ಯಾಗಗಳಲ್ಲಿ ಬೇರೆ ಬೇರೆ ದ್ರವ್ಯಗಳನ್ನು ಹೇಳಿರುವುದರಿಂದ ಪುರೋಡಾಶ, ಚರು ಮತ್ತು ಪಶು ಈ ಮೂರು ದ್ರವ್ಯಗಳಿಂದಲೂ ಆಹುತಿಯು ಇರುವುದರಿಂದ ಆಯಾ ಯಾಗಗಳಲ್ಲಿ ಈ ಎಲ್ಲ ದ್ರವ್ಯಗಳಿಗೂ ಪೇಷಣವು ಇದೆಯೇ? ಇದು ಇಲ್ಲಿನ **ಸಂಶಯ.**

**'ಪೂಷಾ ಪ್ರಪಿಷ್ಟಭಾಗಃ'** ಎಂದು ಸಾಮಾನ್ಯವಾಗಿ ಹೇಳಿರುವುದರಿಂದ ಎಲ್ಲ ಪೌಷಯಾಗಗಳಲ್ಲಿಯೂ ಪೇಷಣವಿದೆಯೆಂಬುದು ಇಲ್ಲಿನ **ಪೂರ್ವಪಕ್ಷ.**

ಪೂಷದೇವತೆಗಾಗಿ ಪಶುದ್ರವ್ಯವಿದ್ದರೆ ಅಲ್ಲಿ ಪಶುವಿನ ಪೇಷಣದಿಂದ ಹೃದಯ ಮುಂತಾದ ಅವಯವಗಳ ಆಕಾರವು ನಾಶವಾಗುವುದರಿಂದ ಪಶುದ್ರವ್ಯಕ್ಕೆ ಪೇಷಣವು ಇರುವುದಿಲ್ಲ, ಪುರೋಡಾಶವು ದ್ರವ್ಯವಿದ್ದರೆ ಪುರೋಡಾಶವನ್ನು ಸಿದ್ಧಗೊಳಿಸಲು ಪೇಷಣವು ಅಗತ್ಯವಾದುದರಿಂದ ಪ್ರಕೃತಿಯಿಂದಲೇ ಪೇಷಣವು ಪ್ರಾಪ್ತವಾಗುತ್ತದೆ. ಹೀಗಾಗಿ ಚರುಯಾಗದಲ್ಲಿ ಮಾತ್ರ ಈ ವಾಕ್ಯದಿಂದ ಅಂದರೆ **'ಪೂಷಾ ಪ್ರಪಿಷ್ಟಭಾಗಃ'** ಎಂಬುದರಿಂದ

ಪೇಷಣವು ಪ್ರಾಪ್ತವಾಗುತ್ತದೆ. ಇದು ಇಲ್ಲಿನ **ಸಿದ್ಧಾಂತ.**

**೫) ಪೂಷದೇವತೆಯೊಡನೆ ಬೇರೆ ದೇವತೆಯಿದ್ದರೂ ಹವಿಸ್ಸಿಗೆ ಪೇಷಣವಿದೆಯೇ?**

**[ಜೈ.ಸೂ.2.6.8]**

ಕೇವಲ ಪೂಷದೇವತಾಕವಾದ ಯಾಗಗಳಲ್ಲಿ ಮಾತ್ರ ಪೇಷಣವೇ? ಅಥವಾ ಐಂದ್ರಾಪೌಷ್ಣ ಮುಂತಾದ ದ್ವಿದೇವತಾಕವಾದ ಯಾಗಗಳಲ್ಲಿಯೂ ದ್ರವ್ಯಕ್ಕೆ ಪೇಷಣವಿದೆಯೇ? ಇದು ಇಲ್ಲಿನ **ಸಂಶಯ.**

ಬೇರೆ ದೇವತೆಯು ಇದ್ದರೂ ಪೂಷದೇವತೆಯು ಇರುವುದರಿಂದ ಪೇಷಣವನ್ನು ಅವಶ್ಯವಾಗಿ ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಪೇಷಣಕ್ಕೆ ಪ್ರಯೋಜಕವಾದುದು ಏಕದೇವತಾಕವಾದ ಪೌಷಯಾಗ. ಹೀಗಾಗಿ ದ್ವಿದೇವತ್ಯವಾಗಿರುವ ಐಂದ್ರಾಪೌಷ್ಣಾದಿಯಾಗಗಳಲ್ಲಿ ಚರುವಿಗೆ ಪೇಷಣವಿರುವುದಿಲ್ಲ. ಇದು ಇಲ್ಲಿನ **ಸಿದ್ಧಾಂತ.**

## ॥ ನವಮೋಽನುವಾಕಃ ॥

ಅಗ್ನೀಧ ಆ ದಧಾತ್ಯಗ್ನಿಮುಖಾನೇವರ್ತೂನ್ಪ್ರೀಣಾತಿ

---

ಅಗ್ನೀಧ ಇತ್ಯಗ್ನಿ–ಇಧೇ । ಏತಿ । ದಧಾತಿ । ಅಗ್ನಿಮುಖಾನಿತ್ಯಗ್ನಿ–ಮುಖಾನ್ । ಏವ । ಋತೂನ್ । ಪ್ರೀಣಾತಿ ।

---

ಹಿಂದಿನ ಎಂಟನೆಯ ಅನುವಾಕದಲ್ಲಿ ಇಡಾ–ಪ್ರಾಶಿತ್ರಭಕ್ಷಣಗಳು ಹೇಳಲ್ಪಟ್ಟವು. ಈ ಒಂಭತ್ತನೆಯ ಅನುವಾಕದಲ್ಲಿ ಅನೂಯಾಜ–ಸೂಕ್ತವಾಕಗಳು ಹೇಳಲ್ಪಡುತ್ತವೆ.

### ಆಗ್ನೀಧ್ರನಿಗೆ ಭಾಗದಾನವಿಧಿ; ಪ್ರಶಂಸೆ

ಅಗ್ನೀಧೇ ಆದಧಾತಿ — ಆಗ್ನೀಧ್ರನಿಗೆ ಮೊದಲು ಭಾಗವನ್ನು ಕೊಡಬೇಕು.

ಅಗ್ನಿಮುಖಾನ್ ಋತೂನ್ ಏವ ಪ್ರೀಣಾತಿ — ಅಗ್ನಿಯೇ ಪ್ರಮುಖನಾಗಿರುವ ಋತುದೇವತೆಗಳನ್ನು ಅಧ್ವರ್ಯುವು ತೃಪ್ತಿಪಡಿಸುತ್ತಾನೆ.

---

**'ಅಗ್ನೀಧೇ ಪ್ರಥಮಾಯಾದಧಾತಿ'** ಎಂದು ಪೌರೋಡಾಶಿಕಕಾಂಡದ ಬ್ರಾಹ್ಮಣದಲ್ಲಿ ಆಗ್ನೀಧ್ರನಿಗೆ ಪ್ರಾಥಮ್ಯವು ಉಕ್ತವಾಗಿದೆ. ಆಗ್ನೀಧ್ರನು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವವನಾದುದರಿಂದ ಅಗ್ನಿಯೇ ಪ್ರಮುಖನು. ಋತುದೇವತೆಗಳು ಕಾಲಪ್ರವರ್ತಕಗಳು. ಹಾಗೆಯೇ **'ಸಕೃದುಪಸ್ತೀರ್ಯ ದ್ವಿರಾದಧತ್'** [1+2=3] **'ಉಪಸ್ತೀರ್ಯ ದ್ವಿರಭಿಘಾರಯತಿ'**[1+2=3] [3+3=6] ಹೀಗೆ ಉಪಸ್ತರಣ, ಆಧಾನ, ಉಪಸ್ತರಣ, ಅಭಿಘಾರಣಗಳಿಂದ ಒಟ್ಟು ಸಂಖ್ಯೆಯು ಆರು, ಋತುಗಳೂ ಆರು, ಹೀಗೆ ಸಂಖ್ಯಾ ಸಾದೃಶ್ಯದಿಂದ ಋತುಪ್ರೀತಿಯಾಗುತ್ತದೆ ಎಂಬ ಪ್ರಶಂಸೆ.

ಸಮಿಧಮಾ ದಧಾತ್ಯುತ್ತರಾಸಾಮಾಹುತೀನಾಂ ಪ್ರತಿಷ್ಠಿತ್ಯಾ

ಅಥೋ ಸಮಿದ್ವತ್ಯೇವ ಜುಹೋತಿ ಪರಿಧೀನ್ಥ್ಸಂಮಾರ್ಷ್ಟಿ

ಪುನಾತ್ಯೇವೈನಾನ್ಥ್ಸಕೃಥ್ಸಕೃಥ್ಸಂ ಮಾರ್ಷ್ಟಿ

---

ಸಮಿಧಮಿತಿ ಸಂ-ಇಧಮ್ । ಏತಿ । ದಧಾತಿ । ಉತ್ತರಾಸಾಮಿತ್ಯುತ್-ತರಾಸಾಮ್ ।

ಆಹುತೀನಾಮಿತ್ಯಾ-ಹುತೀನಾಮ್ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಅಥೋ ಇತಿ । ಸಮಿದ್ವತೀತಿ

ಸಮಿತ್-ವತಿ । ಏವ । ಜುಹೋತಿ । ಪರಿಧೀನಿತಿ ಪರಿ-ಧೀನ್ । ಸಮಿತಿ । ಮಾರ್ಷ್ಟಿ ।

ಪುನಾತಿ । ಏವ । ಏನಾನ್ । ಸಕೃಥ್ಸಕೃದಿತಿ ಸಕೃತ್-ಸಕೃತ್ । ಸಮಿತಿ । ಮಾರ್ಷ್ಟಿ ।

---

**ಸಮಿದಾಧಾನವಿಧಿ; ಪ್ರಶಂಸೆ**

| | |
|---|---|
| ಸಮಿಧಮ್ ಆದಧಾತಿ | ಆಗ್ನೀಧ್ರನು ಅಗ್ನಿಯಲ್ಲಿ ಸಮಿತ್ತನ್ನು ಆಧಾನ ಮಾಡಬೇಕು. [ವಿಧಿ] |
| ಉತ್ತರಾಸಾಮ್ ಆಹುತೀನಾಮ್ ಪ್ರತಿಷ್ಠಿತ್ಯೈ | ಇದು ಮುಂದೆ ಮಾಡುವ ಅನೂಯಾಜಹೋಮಗಳ ಸ್ಥಿರಸ್ಥಿತಿಗೆ ಸಾಧನವಾಗುತ್ತದೆ. |
| ಅಥೋ ಸಮಿದ್ವತಿ ಏವ ಜುಹೋತಿ | ಮತ್ತು ಸಮಿತ್ತನ್ನು ಹೊಂದಿರುವ ಅಗ್ನಿಯಲ್ಲಿಯೇ ಹೋಮವನ್ನು ಮಾಡಿದಂತಾಗುತ್ತದೆ. |

**ಪರಿಧಿಸಮ್ಮಾರ್ಜನವಿಧಿ; ಪ್ರಶಂಸೆ**

| | |
|---|---|
| ಪರಿಧೀನ್ ಸಂಮಾರ್ಷ್ಟಿ | ಬಳಿಕ ಆಗ್ನೀಧ್ರನು ಪರಿಧಿಗಳನ್ನು ಚೆನ್ನಾಗಿ ಸಮ್ಮಾರ್ಜನ ಮಾಡಬೇಕು. [ವಿಧಿ] |
| ಏನಾನ್ ಪುನಾತಿ ಏವ | ಇದರಿಂದ ಪರಿಧಿಗಳನ್ನು ಶುದ್ಧಿಗೊಳಿಸುತ್ತಾನೆ. |
| ಸಕೃತ್ ಸಕೃತ್ ಸಂಮಾರ್ಷ್ಟಿ | ಒಂದೊಂದು ಬಾರಿ ಸಮ್ಮಾರ್ಜನವನ್ನು ಮಾಡಬೇಕು. |

---

ಬ್ರಹ್ಮನಿಂದ ಅನುಜ್ಞಾತನಾದ ಆಗ್ನೀಧ್ರನು ಸಮಿತ್ತನ್ನು **'ಏಷಾ ತೇ ಅಗ್ನೇ'** ಎಂಬ ಮಂತ್ರದಿಂದ ಆಧಾನ ಮಾಡಬೇಕು.

ಪರಾಙಿವ ಹ್ಯೇತರ್ಹಿ ಯಜ್ಞಶ್ಚತುಸ್ಸಂಪದ್ಯತೇ ಚತುಷ್ಪಾದಃ ಪಶವಃ

ಪಶೂನೇವಾವರುಂಧೇ ಬ್ರಹ್ಮನ್ಪ್ರಸ್ಥಾಸ್ಯಾಮ ಇತ್ಯಾಹಾ–

---

ಪರಾಙ್ । ಇವ । ಹಿ । ಏತರ್ಹಿ । ಯಜ್ಞಃ । ಚತುಃ । ಸಮಿತಿ । ಪದ್ಯತೇ । ಚತುಷ್ಪಾದ ಇತಿ ಚತುಃ–ಪಾದಃ । ಪಶವಃ । ಪಶೂನ್ । ಏವ । ಅವೇತಿ । ರುಂಧೇ । ಬ್ರಹ್ಮನ್ । ಪ್ರೇತಿ । ಸ್ಥಾಸ್ಯಾಮಃ । ಇತಿ । ಆಹ ।

---

| | |
|---|---|
| ಏತರ್ಹಿ ಯಜ್ಞಃ ಪರಾಙ್ ಇವ ಹಿ | ಈಗ ಯಜ್ಞವು ಮುಗಿದಂತೆಯೇ ಆಗಿದೆ. |

**ಸಂಖ್ಯಾಪ್ರಶಂಸೆ**

| | |
|---|---|
| ಚತುಃ ಸಂಪದ್ಯತೇ | ಅಗ್ನಿಗೆ ಒಮ್ಮೆ ಸಮ್ಮಾರ್ಜನ, ಪರಿಧಿಗಳಿಗೆ ಮೂರು ಒಟ್ಟು ನಾಲ್ಕಾಗುತ್ತದೆ. |
| ಚತುಷ್ಪಾದಃ ಪಶವಃ | ಪಶುಗಳೂ ನಾಲ್ಕು ಕಾಲುಗಳನ್ನು ಹೊಂದಿವೆ. |
| ಪಶೂನ್ ಏವ ಅವ ರುಂಧೇ | ಈ ಸಂಖ್ಯಾಸಾಮ್ಯದಿಂದ ಯಜಮಾನನು ಪಶುಗಳನ್ನು ಪಡೆಯುತ್ತಾನೆ. |

**ಬ್ರಹ್ಮನ ಅನುಜ್ಞೆಗಾಗಿ ಅಧ್ವರ್ಯುವಿನ ಪ್ರೈಷ; ಪ್ರಶಂಸೆ**

| | |
|---|---|
| ಬ್ರಹ್ಮನ್! ಪ್ರಸ್ಥಾಸ್ಯಾಮಃ ಇತಿ ಆಹ | 'ಬ್ರಹ್ಮನೇ! ಅನೂಯಾಜಹೋಮವನ್ನು ಮಾಡಲು ಹೊರಡೋಣ' ಎಂದು ಅಧ್ವರ್ಯುವು ಹೇಳಬೇಕು. [ವಿಧಿ] |

---

ಇದು ಮುಂದಿನ ಹೋಮಗಳ ಸ್ಥಿರತೆಗೆ ಕಾರಣವಾಗುತ್ತದೆ. ಸಮಿತ್ತಿನಿಂದ ಕೂಡಿರುವ ಅಗ್ನಿಯಲ್ಲಿ ಹೋಮವನ್ನು ಅನುಷ್ಠಿಸಿದಂತಾಗುತ್ತದೆ.

ಬಳಿಕ ಆಗ್ನೀಧ್ರನು ಪರಿಧಿಗಳನ್ನು ಒಂದೊಂದು ಬಾರಿ ಸಮ್ಮಾರ್ಜನೆ ಮಾಡುತ್ತಾನೆ. ಮೊದಲು ಆಘಾರಹೋಮಗಳ ಮಧ್ಯದಲ್ಲಿ ಮಾಡುವ ಸಮ್ಮಾರ್ಜನಕಾಲದಲ್ಲಿ ಪ್ರಧಾನ ಯಾಗವು ಆಗದೇ ಇರುವುದರಿಂದ ಯಜ್ಞವು ಅಡಗಿದಂತಾಗಿದೆ.ಅಂದರೆ ಪ್ರತ್ಯಗ್ಭೂತವಾಗಿದೆ.

–ತ್ರ ವಾ ಏತರ್ಹಿ ಯಜ್ಞಶ್ರಿತೋ [..ಶ್ರಿತಃ(೧)ಯತ್ರ..]

ಯತ್ರ ಬ್ರಹ್ಮಾ ಯತ್ರೈವ ಯಜ್ಞಶ್ರಿತಸ್ತತ ಏವೈನಮಾರ–

ಭತೇ ಯದ್ಧಸ್ತೇನ ಪ್ರಮೀವೇದ್ವೇಪನಸ್ಸ್ಯಾದ್ಯಚ್ಛೀರ್ಷ್ಣಾ

---

ಅತ್ರ । ವೈ । ಏತರ್ಹಿ । ಯಜ್ಞಃ । ಶ್ರಿತಃ । (೧) । ಯತ್ರ । ಬ್ರಹ್ಮಾ । ಯತ್ರ । ಏವ ।

ಯಜ್ಞಃ । ಶ್ರಿತಃ । ತತಃ । ಏವ । ಏನಮ್ । ಏತಿ । ರಭತೇ । ಯತ್ । ಹಸ್ತೇನ ।

ಪ್ರಮೀವೇದಿತಿ ಪ್ರ–ಮೀವೇತ್ । ವೇಪನಃ । ಸ್ಯಾತ್ । ಯತ್ । ಶೀರ್ಷ್ಣಾ ।

---

| | |
|---|---|
| ಏತರ್ಹಿ ಅತ್ರ ಯಜ್ಞಃ ಶ್ರಿತಃ ವೈ | ಇಲ್ಲಿಯೇ ಆಹವನೀಯದ ದಕ್ಷಿಣದೇಶದಲ್ಲಿಯೇ ಯಜ್ಞವು ನೆಲಸಿದೆ. |
| ಯತ್ರ ಬ್ರಹ್ಮಾ | ಯಾವ ಆಹವನೀಯದ ದಕ್ಷಿಣದೇಶದಲ್ಲಿ ಬ್ರಹ್ಮನು ಇರುವನೋ [ಅಲ್ಲಿಯೇ ಯಜ್ಞವಿದೆ] |
| ಯತ್ರ ಏವ ಯಜ್ಞಃ ಶ್ರಿತಃ ತತಃ ಏವ ಏನಮ್ ಆರಭತೇ | ಎಲ್ಲಿ ಯಜ್ಞವಿದೆಯೋ, ಆ ಪ್ರದೇಶದಿಂದಲೇ ಈ ಯಜ್ಞವನ್ನು ಅಧ್ವರ್ಯುವು ಆರಂಭಿಸಿದವನಾಗುತ್ತಾನೆ. |

**'ಪ್ರತಿಷ್ಠ' ಎಂಬ ಬ್ರಹ್ಮಾನುಜ್ಞಾನದ ವಿಧಿ; ಪ್ರಶಂಸೆ**

| | |
|---|---|
| ಯತ್ ಹಸ್ತೇನ ಪ್ರಮೀವೇತ್ | ಬ್ರಹ್ಮನು ಹಸ್ತದ ಚಲನೆಯಿಂದ ಅನುಮತಿಯನ್ನಿತ್ತರೆ [ಯಜ್ಞವನ್ನು ಮುಂದುವರೆಸಿದರೆ] |
| ವೇಪನಃ ಸ್ಯಾತ್ | ವಾತರೋಗಿಯಾಗುತ್ತಾನೆ. |
| ಯತ್ ಶೀರ್ಷ್ಣಾ **[ಪ್ರಮೀವೇತ್]** | ತಲೆಯನ್ನು ಅಲ್ಲಾಡಿಸಿ ಅನುಮತಿಯನ್ನು ನೀಡಿದರೆ |

---

ಆದುದರಿಂದ ಆಗ ಮೂರು ಬಾರಿ ಮಾಡುವ ಸಮ್ಮಾರ್ಜನವು ಯುಕ್ತವಾಗಿದೆ.ಈಗ ಇನ್ನು ಮುಂದೆ ಪ್ರಧಾನಹೋಮವು ಇಲ್ಲದಿರುವುದರಿಂದ ಯಾಗವು ಮುಗಿದಂತೆಯೇ ಆಗಿದೆ. ಯಜ್ಞವು ಪರಾಗ್ಭೂತವಾಗಿದೆ.ಹೀಗಾಗಿ ಪರಿಧಿಗಳಿಗೆ ಒಮ್ಮೆ ಮಾಡುವ ಸಮ್ಮಾರ್ಜನವು

ಶೀರ್‌ಷಕ್ತಿಮಾನ್ತ್ಸ್ಯಾದ್ಯತ್ತೂಷ್ಣೀಮಾಸೀತಾಸಂಪ್ರತ್ತೋ ಯಜ್ಞಸ್ಸ್ಯಾತ್ಪ್ರತಿಷ್ಠೇತ್ಯೇವ ಬ್ರೂಯಾದ್ವಾಚಿ ವೈ ಯಜ್ಞಶ್ಶ್ರಿತೋ ಯತ್ರೈವ ಯಜ್ಞಶ್ಶ್ರಿತಸ್ತತ ಏವೈನಗ್ಂ ಸಂ ಪ್ರಯಚ್ಛತಿ

---

ಶೀರ್‌ಷಕ್ತಿಮಾನಿತಿ ಶೀರ್‌ಷಕ್ತಿ–ಮಾನ್ । ಸ್ಯಾತ್ । ಯತ್ । ತೂಷ್ಣೀಮ್ । ಆಸೀತ । ಅಸಂಪ್ರತ್ತ ಇತ್ಯಸಂ–ಪ್ರತ್ತಃ । ಯಜ್ಞಃ । ಸ್ಯಾತ್ । ಪ್ರೇತಿ । ತಿಷ್ಠ । ಇತಿ । ಏವ । ಬ್ರೂಯಾತ್ । ವಾಚಿ । ವೈ । ಯಜ್ಞಃ । ಶ್ರಿತಃ । ಯತ್ರ । ಏವ । ಯಜ್ಞಃ । ಶ್ರಿತಃ । ತತಃ । ಏವ । ಏನಮ್ । ಸಮ್ । ಪ್ರೇತಿ । ಯಚ್ಛತಿ ।

---

| | |
|---|---|
| ಶೀರ್‌ಷಕ್ತಿಮಾನ್ ಸ್ಯಾತ್ | ಶಿರೋರೋಗಪೀಡಿತನಾಗುತ್ತಾನೆ. |
| ಯತ್ ತೂಷ್ಣೀಮ್ ಆಸೀತ | ಸುಮ್ಮನೆ ಇದ್ದು ಬಿಟ್ಟರೆ |
| ಯಜ್ಞಃ ಅಸಂಪ್ರತ್ತಃ ಸ್ಯಾತ್ | ಯಜ್ಞವು ಚೆನ್ನಾಗಿ ಪ್ರವರ್ತಿತವಾದಂತೆ ಆಗುವುದಿಲ್ಲ. |
| ಪ್ರತಿಷ್ಠ ಇತಿ ಏವ ಬ್ರೂಯಾತ್ | ಆದುದರಿಂದ **ಪ್ರತಿಷ್ಠ=ಹೊರಡು** ಎಂದು ಹೇಳಿಯೇ ಅನುಜ್ಞೆಯನ್ನು ಕೊಡಬೇಕು. |
| ವಾಚಿ ವೈ ಯಜ್ಞಃ ಶ್ರಿತಃ | ಮಂತ್ರರೂಪವಾದ ಮಾತಿನಲ್ಲಿಯೇ ಯಜ್ಞವು ನಿಂತಿದೆ. |
| ಯತ್ರ ಏವ ಯಜ್ಞಃ ಶ್ರಿತಃ | ಯಾವ ಮಾತಿನಲ್ಲಿ ಯಜ್ಞವು ಸ್ಥಿತವಾಗಿದೆಯೋ |
| ತತಃ ಏವ ಏನಮ್ ಸಂಪ್ರಯಚ್ಛತಿ | ಆ ವಾಗ್ರೂಪದಿಂದಲೇ ಚೆನ್ನಾಗಿ ಪ್ರವರ್ತಿಸಿದಂತೆ ಮಾಡುತ್ತಾನೆ. |

---

ಯುಕ್ತವಾಗಿಯೇ ಇದೆ.

ಅಗ್ನಿಸಮ್ಮಾರ್ಜನ, ಪರಿಧಿಗಳ ಮಾರ್ಜನದಿಂದ ನಾಲ್ಕು ಎಂಬ ಸಂಖ್ಯೆಯನ್ನು ಸ್ತುತಿಸಲಾಗಿದೆ. ಈ ಸಂಖ್ಯಾಸ್ತುತಿಯು ಹಲವೆಡೆ ಬರುತ್ತದೆ.

ದೇವ ಸವಿತರೇತತ್ತೇ ಪ್ರಾ[..ಪ್ರ(೨)ಆಹೇತ್ಯಾಹ..]ಹೇತ್ಯಾಹ
ಪ್ರಸೂತ್ಯೈ ಬೃಹಸ್ಪತಿರ್ಬ್ರಹ್ಮೇತ್ಯಾಹ ಸ ಹಿ ಬ್ರಹ್ಮಿಷ್ಠಃ

---

ದೇವ । ಸವಿತಃ । ಏತತ್ । ತೇ । ಪ್ರೇತಿ । (೨) । ಆಹ । ಇತಿ । ಆಹ । ಪ್ರಸೂತ್ಯಾ
ಇತಿ ಪ್ರ-ಸೂತ್ಯೈ । ಬೃಹಸ್ಪತಿಃ । ಬ್ರಹ್ಮಾ । ಇತಿ । ಆಹ । ಸಃ । ಹಿ । ಬ್ರಹ್ಮಿಷ್ಠಃ ।

---

### ಶಾಖಾಂತರೀಯಮಂತ್ರವಿಧಿ; ಪ್ರಶಂಸೆ

| | |
|---|---|
| *ದೇವ ಸವಿತಃ ಏತತ್ ತೇ ಪ್ರಾಹ | ಎಲೈ! ಸವಿತೃದೇವನೇ! **'ಪ್ರಸ್ಥಾಸ್ಯಾಮಃ'** ಎಂಬ ಈ ಶಬ್ದವನ್ನು ಅಧ್ವರ್ಯುವು ನಿನ್ನ ಮುಂದೆ ಅನುಮತಿಯನ್ನು ಪಡೆಯುವುದಕ್ಕಾಗಿ ಹೇಳಿದ್ದಾನೆ. |
| ಇತಿ ಆಹ ಪ್ರಸೂತ್ಯೈ | ಎಂದು ಮಂತ್ರವು ಹೇಳುತ್ತದೆ. ಇದು ಅನುಮತಿಯನ್ನು ಪಡೆಯುವುದಕ್ಕಾಗಿ ಇದೆ. |

### ಮಂತ್ರಭಾಗದ ವಿವರಣೆ

| | |
|---|---|
| ಬೃಹಸ್ಪತಿಃ ಬ್ರಹ್ಮಾ ಇತಿ ಆಹ | ಬೃಹಸ್ಪತಿಯೇ ಬಹ್ಮನೆಂದು ಈ ಮಂತ್ರಭಾಗವು ಹೇಳುತ್ತದೆ. |
| ಸಃ ಬ್ರಹ್ಮಿಷ್ಠಃ ಹಿ | ಆ ಬೃಹಸ್ಪತಿಯೇ ಬ್ರಹ್ಮವೇತ್ತ [ಮಂತ್ರವೇತ್ತ] ರಲ್ಲಿ ಶ್ರೇಷ್ಠನಷ್ಟೆ. |

---

ಅಧ್ವರ್ಯುವು ಬ್ರಹ್ಮನ ಅನುಜ್ಞೆಯನ್ನು ಪಡೆಯಲು **'ಬ್ರಹ್ಮನ್ ಪ್ರಸ್ಥಾಸ್ಯಾಮಃ'**ಎಂದು ಹೇಳುತ್ತಾನೆ. ಎಲ್ಲಿ ಯಜ್ಞವು ನೆಲೆಸಿದೆಯೋ ಆ ದೇಶದಿಂದಲೇ ಯಜ್ಞವನ್ನು ಆರಂಭಿಸುತ್ತಾನೆ.

ಬ್ರಹ್ಮನು ಅನುಜ್ಞೆಯನ್ನು ನೀಡಬೇಕಾದ ರೀತಿಯನ್ನು ಶ್ರುತಿಯು ತಿಳಿಸುತ್ತಾ ಇದೆ.

---

*ಆಪಸ್ತಂಬಶ್ರೌತಸೂತ್ರದಲ್ಲಿ **'ದೇವ ಸವಿತರೇತತ್ತೇ ಪ್ರಾಹ ತತ್ಪ್ರ ಚ ಸುವ ಪ್ರ ಚ ಯಜ ಬೃಹಸ್ಪತಿರ್ಬ್ರಹ್ಮಾ ಸ ಯಜ್ಞಂ ಪಾಹಿ ಸ ಯಜ್ಞಪತಿಂ ಪಾಹಿ ಸ ಮಾಂ ಪಾಹಿ ಓಮ್ ಪ್ರತಿಷ್ಠ' ಇತಿ ಪ್ರಸೌತಿ** [ಆಪ.ಶ್ರೌ.3.20.8] ಎಂದು ವಿಧಿಯಿದೆ. ಅದು ಶಾಖಾಂತರದ ಮಂತ್ರ. ಆ ಮಂತ್ರಭಾಗಗಳ ವಿವರಣೆ ಇಲ್ಲಿದೆ.

ಸ ಯಜ್ಞಂ ಪಾಹಿ ಸ ಯಜ್ಞಪತಿಂ ಪಾಹಿ ಸ ಮಾಂ

ಪಾಹೀತ್ಯಾಹ ಯಜ್ಞಾಯ ಯಜಮಾನಾಯಾತ್ಮನೇ ತೇಭ್ಯ

ಏವಾಽಽಶಿಷಮಾಶಾಸ್ತೇಽನಾರ್ತ್ಯೈ

---

ಸಃ । ಯಜ್ಞಮ್ । ಪಾಹಿ । ಸಃ । ಯಜ್ಞಪತಿಮಿತಿ ಯಜ್ಞ-ಪತಿಮ್ । ಪಾಹಿ । ಸಃ । ಮಾಮ್ । ಪಾಹಿ । ಇತಿ । ಆಹ । ಯಜ್ಞಾಯ । ಯಜಮಾನಾಯ । ಆತ್ಮನೇ । ತೇಭ್ಯಃ । ಏವ । ಆಶಿಷಮಿತ್ಯಾ-ಶಿಷಮ್ । ಏತಿ । ಶಾಸ್ತೇ । ಅನಾರ್ತ್ಯೈ ।

---

**ಇನ್ನೊಂದು ಮಂತ್ರಭಾಗದ ವಿವರಣೆ**

| | |
|---|---|
| ಸಃ ಯಜ್ಞಮ್ ಪಾಹಿ | ಆ ಬೃಹಸ್ಪತಿಯಾದ ನೀನು ಯಜ್ಞವನ್ನು ರಕ್ಷಿಸು. |
| ಸಃ ಯಜ್ಞಪತಿಮ್ ಪಾಹಿ | ಆ ಬೃಹಸ್ಪತಿಯಾದ ನೀನು ಯಜ್ಞಪತಿಯಾದ ಯಜಮಾನನನ್ನು ಕಾಪಾಡು. |
| ಸಃ ಮಾಮ್ ಪಾಹಿ | ಆ ಬೃಹಸ್ಪತಿಯಾದ ನೀನು ನನ್ನನ್ನು ರಕ್ಷಿಸು. |
| **[ಓಮ್ ಪ್ರತಿಷ್ಠ]** | [ಅಧ್ವರ್ಯುವೇ! ಅನೂಯಾಜಕ್ಕಾಗಿ ಮುಂದು ವರೆಸು] |
| ಇತಿ ಆಹ | ಹೀಗೆಂದು ಮಂತ್ರವು ಹೇಳುತ್ತದೆ. |
| ಯಜ್ಞಾಯ ಯಜಮಾನಾಯ | ಯಜ್ಞಕ್ಕೂ ಯಜಮಾನನಿಗೂ |
| ಆತ್ಮನೇ | ತನಗೂ[ಬ್ರಹ್ಮನಿಗೂ] |
| ತೇಭ್ಯಃ ಏವ ಆಶಿಷಮ್ ಆಶಾಸ್ತೇ ಅನಾರ್ತ್ಯೈ | ಅವರೆಲ್ಲರಿಗೂ ಹಿಂಸೆಯಾಗದಿರುವುದಕ್ಕಾಗಿ ಶುಭಾಶಂಸನೆಯನ್ನು ಈ ಮಂತ್ರಭಾಗದಿಂದ ಬ್ರಹ್ಮನು ಮಾಡಿದವನಾಗುತ್ತಾನೆ. |

---

ಬ್ರಹ್ಮನು ಕೈಯಿಂದ ಅನುಮತಿಯನ್ನು ಇತ್ತರೆ ಅವನು ವಾತರೋಗಿಯಾಗುತ್ತಾನೆ. ತಲೆ ಯನ್ನು ಅಲ್ಲಾಡಿಸಿ ಒಪ್ಪಿಗೆ ಇತ್ತರೆ ಶಿರೋರೋಗಪೀಡಿತನಾಗುವನು. ಹೀಗಾಗಿ **'ಪ್ರತಿಷ್ಠ'** ಎಂದು ಯುಕ್ತವಾದ ರೀತಿಯಲ್ಲಿ ಅನುಮತಿಯನ್ನು ನೀಡುತ್ತಾನೆ.

ಆಶ್ರಾವ್ಯಾಹ ದೇವಾನ್ ಯಜೇತಿ ಬ್ರಹ್ಮವಾದಿನೋ ವದಂತೀಷ್ಟಾ ದೇವತಾ ಅಥ ಕತಮ ಏತೇ ದೇವಾ ಇತಿ ಛಂದಾಗ್ಂಸೀತಿ ಬ್ರೂಯಾ-

---

ಆಶ್ರಾವ್ಯೇತ್ಯಾ-ಶ್ರಾವ್ಯ । ಆಹ । ದೇವಾನ್ । ಯಜ । ಇತಿ । ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ । ಇಷ್ಟಾಃ । ದೇವತಾಃ । ಅಥ । ಕತಮೇ । ಏತೇ । ದೇವಾಃ । ಇತಿ । ಛಂದಾಗ್ಂಸಿ । ಇತಿ । ಬ್ರೂಯಾತ್ ।

---

**ಅನೂಯಾಜಕ್ಕೆ ಸಂಬಂಧಿಸಿದ ಕ್ರಮವಿಧಿ; ಪ್ರಶಂಸೆ**

| | |
|---|---|
| ಆಶ್ರಾವ್ಯ ದೇವಾನ್ ಯಜ ಇತಿ ಆಹ | ಆಶ್ರಾವಣಪೂರ್ವಕವಾಗಿ **'ದೇವಾನ್ ಯಜ'** ಎಂದು ಅಧ್ವರ್ಯುವು ಪ್ರೈಷವನ್ನು ಹೇಳಬೇಕು. |

**ಅನೂಯಾಜದೇವತಾವಿಷಯಕವಾದ ಚರ್ಚೆ; ನಿರ್ಣಯ**

| | |
|---|---|
| ಬ್ರಹ್ಮವಾದಿನಃ ದೇವತಾಃ ಇಷ್ಟಾಃ | ಮಂತ್ರವಿದರು 'ಅಗ್ನಿ, ಪ್ರಜಾಪತಿ, ಮುಂತಾದ ದೇವತೆಗಳನ್ನು ಕುರಿತು ಯಾಗ ಮಾಡಿದ್ದಾಯಿತು. |
| ಅಥ ಕತಮೇ ಏತೇ ದೇವಾಃ ಇತಿ ವದಂತಿ | ಈ ಅನೂಯಾಜದೇವತೆಗಳು ಯಾರು?' ಎಂದು ಚರ್ಚಿಸುತ್ತಾರೆ. |
| ಛಂದಾಗ್ಂಸಿ ಇತಿ ಬ್ರೂಯಾತ್ | ಛಂದಸ್ಸುಗಳೇ ಅನೂಯಾಜದೇವತೆಗಳೆಂದು ಹೇಳಬೇಕೆಂದು ಸಿದ್ಧಾಂತಿಗಳು ಹೇಳುತ್ತಾರೆ. |

---

ಶಾಖಾಂತರದ ಮಂತ್ರವನ್ನು ಹೇಳಿ ಬ್ರಹ್ಮನಿಂದ ಅಧ್ವರ್ಯುವು ಅನುಮತಿಯನ್ನು ಪಡೆಯುತ್ತಾನೆ.

ಮುಂದಿನ ವಿಧಿಯು ಆಪಸ್ತಂಬಶ್ರೌತಸೂತ್ರದಲ್ಲಿ ಹೀಗೆ ಹೇಳಲ್ಪಟ್ಟಿದೆ; ಔಪಭೃತಾಜ್ಯವನ್ನು ಜುಹೂವಿನಲ್ಲಿ ತೆಗೆದುಕೊಂಡು ಜುಹೂ–ಉಪಭೃತ್‌ಗಳನ್ನು ಹಿಡಿದುಕೊಂಡು ದಕ್ಷಿಣಭಾಗಕ್ಕೆ ಒಂದು ಬಾರಿ ಬಂದು ಆಘಾರಹೋಮಗಳ ಸಂಧಿಪ್ರದೇಶದ ಅಗ್ರಭಾಗದಲ್ಲಿ **'ಆಶ್ರಾವಯ'** ಎಂದು ಹೇಳಿ **'ಅಸ್ತು ಶ್ರೌಷಟ್'** ಎಂದು ಪ್ರತ್ಯಾಶ್ರಾವಣವು ಬಂದ ಮೇಲೆ **'ದೇವಾನ್ ಯಜ'** ಎಂದು ಸಂಪ್ರೇಷವನ್ನು ಹೇಳಿ, ಹೋತೃವು ಯಾಜ್ಯೆಯನ್ನು ಪಠಿಸಿದ ಮೇಲೆ

ದ್ಗಾಯತ್ರೀಂ ತ್ರಿಷ್ಟುಭಂ [..ತ್ರಿಷ್ಟುಭಮ್(ಇ)ಜಗತೀ..]

ಜಗತೀಮಿತ್ಯಥೋ ಖಲ್ವಾಹುಬ್ರಾ್ರಹ್ಮಣಾ ವೈ ಛಂದಾಗ್ಂಸೀತಿ

ತಾನೇವ ತದ್ಯಜತಿ ದೇವಾನಾಂ ವಾ ಇಷ್ಟಾ ದೇವತಾ ಆಸ-

---

ಗಾಯತ್ರೀಮ್ । ತ್ರಿಷ್ಟುಭಮ್ । (ಇ) । ಜಗತೀಮ್ । ಇತಿ । ಅಥೋ ಇತಿ । ಖಲು । ಆಹುಃ । ಬ್ರಾಹ್ಮಣಾಃ । ವೈ । ಛಂದಾಗ್ಂಸಿ । ಇತಿ । ತಾನ್ । ಏವ । ತತ್ । ಯಜತಿ। ದೇವಾನಾಮ್ । ವೈ । ಇಷ್ಟಾಃ । ದೇವತಾಃ । ಆಸನ್ನ್ ।

---

ಗಾಯತ್ರೀಮ್,ತ್ರಿಷ್ಟುಭಮ್,ಜಗತೀಮ್ ಇತಿ ಅಥೋ ಖಲು ಬ್ರಾಹ್ಮಣಾಃ ವೈ ಛಂದಾಗ್ಂಸಿ ಇತಿ ಆಹುಃ

ಗಾಯತ್ರೀ, ತ್ರಿಷ್ಟುಪ್, ಜಗತೀ ಇವೇ ಆ ಛಂದಸ್ಸುಗಳು. ಮತ್ತೆ ಕೆಲವರು ಮಂತ್ರಗಳನ್ನು ಅಧ್ಯಯನ ಮಾಡುವ ಬ್ರಾಹ್ಮಣರೇ ಛಂದಸ್ಸುಗಳು ಎನ್ನುತ್ತಾರೆ.

ತತ್ ತಾನ್ ಏವ ಯಜತಿ

ಆದುದರಿಂದ ಬ್ರಾಹ್ಮಣರನ್ನು ಉದ್ದೇಶಿಸಿಯೇ ಅಧ್ವರ್ಯುವು ಈ ಹೋಮಗಳನ್ನು ಅನುಷ್ಠಿಸುತ್ತಾನೆ.

**ಅನೂಯಾಜವಿಧಿ; ಆದರ ಉಪಾಖ್ಯಾನ**

ದೇವಾನಾಮ್ ವೈ ಇಷ್ಟಾಃ ದೇವತಾಃ ಆಸನ್

ದೇವತೆಗಳಲ್ಲಿ ಪ್ರಧಾನದೇವತೆಗಳಾದ ಅಗ್ನಿ-ಪ್ರಜಾಪತ್ಯಾದಿದೇವತೆಗಳು ಪುರೋಡಾಶಾದಿ ಯಾಗಹವಿಸ್ಸನ್ನು ಸ್ವೀಕರಿಸಿ ತೃಪ್ತರಾದರು.

---

ಪ್ರಥಮಾನೂಯಾಜ ಹೋಮವನ್ನು ಮಾಡಬೇಕು. ಅನಂತರ **'ಯಜ 'ಯಜ'** ಎಂದು ಸಂಪ್ರೇಷವನ್ನು ಹೇಳಿ ಉಳಿದ ಎರಡು ಹೋಮಗಳನ್ನು ಅನುಷ್ಠಿಸಬೇಕು' ಎಂದು ಹೇಳಿದೆ. ಅದನ್ನೇ ಇಲ್ಲಿ ಸಂಗ್ರಹಿಸಲಾಗಿದೆ.

ನ್ನಥಾಗ್ನಿರ್ನೋದಜ್ವಲತ್ತಂ ದೇವಾ ಆಹುತೀಭಿರನೂಯಾಜೇಷ್ವನ್ವ

ವಿಂದನ್ ಯದನೂಯಾಜಾನ್ ಯಜತ್ಯಗ್ನಿಮೇವ

ತಥ್ಸಮಿಂಧ

---

ಅಥ । ಅಗ್ನಿಃ । ನ । ಉದಿತಿ । ಅಜ್ವಲತ್ । ತಮ್ । ದೇವಾಃ । ಆಹುತೀಭಿರಿತ್ಯಾಹುತಿ-ಭಿಃ । ಅನೂಯಾಜೇಷ್ವಿತ್ಯನು-ಯಾಜೇಷು । ಅನ್ವಿತಿ । ಅವಿಂದನ್ನ್ । ಯತ್ । ಅನೂಯಾಜಾನಿತ್ಯನು-ಯಾಜಾನ್ । ಯಜತಿ । ಅಗ್ನಿಮ್ । ಏವ । ತತ್ । ಸಮಿತಿ । ಇಂಧೇ ।

---

| | |
|---|---|
| ಅಥ ಅಗ್ನಿಃ ನ ಉದಜ್ವಲತ್ | ಅನಂತರ ಅಗ್ನಿಯು ಪ್ರಜ್ವಲಿಸಲಿಲ್ಲ. |
| ದೇವಾಃ ಅನೂಯಾಜೇಷು ಆಹುತೀಭಿಃ ತಮ್ ಅನ್ವವಿಂದನ್ | ದೇವತೆಗಳು ಆ ಅಗ್ನಿಯನ್ನು ಹುಡುಕಿ ಅನೂಯಾಜ ಹೋಮಗಳಲ್ಲಿ ಹೊಂದಿದರು. |
| ಯತ್ ಅನೂಯಾಜಾನ್ ಯಜತಿ ತತ್ ಅಗ್ನಿಮ್ ಏವ ಸಮಿಂಧೇ | ಅನೂಯಾಜಹೋಮಗಳನ್ನು ಅನುಷ್ಠಿಸಿದರೆ ಅದು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತದೆ/ ಅನೂಯಾಜಹೋಮಗಳನ್ನು ಅನುಷ್ಠಿಸಬೇಕು. **[ವಿಧಿ]** |

---

ಅಗ್ನಿ, ಪ್ರಜಾಪತಿ ಮುಂತಾದ ದೇವತೆಗಳನ್ನು ಕುರಿತು ಯಾಗಾನುಷ್ಠಾನದ ಬಳಿಕ ಈ ಅನೂಯಾಜಯಾಗಕ್ಕೆ ಯಾರು ದೇವತೆಗಳೆಂದು ಬ್ರಹ್ಮವಿದರು ಚರ್ಚಿಸುತ್ತಾರೆ.

ಬ್ರಾಹ್ಮಣಾಭಿಮಾನಿಯಾದ ಅಗ್ನಿಯೇ ಅನೂಯಾಜಕ್ಕೆ ದೇವತೆಯೆಂದು ಇಲ್ಲಿನ ತಾತ್ಪರ್ಯ.

ದೇವತೆಗಳಲ್ಲಿ ಪ್ರಧಾನದೇವತೆಗಳು ಹವಿಸ್ಸನ್ನು ಸ್ವೀಕರಿಸಿದ ಬಳಿಕ ಪ್ರಜ್ವಲಿಸದ ಅಗ್ನಿಯನ್ನು ಅನೂಯಾಜಗಳಲ್ಲಿ ದೇವತೆಗಳು ಕಂಡರೆಂಬ ಉಪಾಖ್ಯಾನವು ಅನೂಯಾಜ ವಿಧಿಯ ಪ್ರಾಶಸ್ತ್ಯವನ್ನು ಹೇಳುತ್ತದೆ.

ಏತದುರ್ವೈ ನಾಮಾಽಸುರ ಆಸೀಥ್ಸ ಏತರ್‌ಹಿ

ಯಜ್ಞಸ್ಯಾಶಿಷಮ ವೃಂಕ್ತ ಯದ್ಬ್ರೂಯಾದೇತ [..ಯಾದೇತತ್

(೪)ಉ ದ್ಯಾವಾ..] ದು ದ್ಯಾವಾಪೃಥಿವೀ ಭದ್ರಮಭೂದಿತ್ಯೇತ-

---

ಏತದುಃ । ವೈ । ನಾಮ । ಅಸುರಃ । ಆಸೀತ್ । ಸಃ । ಏತರ್‌ಹಿ । ಯಜ್ಞಸ್ಯ ।

ಆಶಿಷಮಿತ್ಯಾ-ಶಿಷಮ್ । ಅವೃಙ್ಕ್ತ । ಯತ್ । ಬ್ರೂಯಾತ್ । ಏತತ್ । (೪) । ಉ ।

ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಭದ್ರಮ್ । ಅಭೂತ್ । ಇತಿ ।

---

**ಸೂಕ್ತವಾಕವಿಧಿ; ಶಾಖಾಂತರೀಯಮಂತ್ರದ ಅಯುಕ್ತತೆ, ಸ್ವಶಾಖಾಮಂತ್ರವಿಧಿ; ಅರ್ಥವಾದ**

ಏತದುಃ ವೈ ನಾಮ ಅಸುರಃ
ಆಸೀತ್ ಸಃ ಏತರ್‌ಹಿ
ಯಜ್ಞಸ್ಯ ಆಶಿಷಮ್
ಅವೃಙ್ಕ್ತ
ಯತ್ ಏತತ್ ಉ **[ಏತದು]**
ದ್ಯಾವಾಪೃಥಿವೀ ಭದ್ರಮ್
ಅಭೂತ್ ಇತಿ ಬ್ರೂಯಾತ್

**'ಏತದು'** ಎಂಬ ಹೆಸರಿನ ರಾಕ್ಷಸನು ಇದ್ದನು. ಅವನು ಯಜ್ಞದ ಫಲದ ಪ್ರಾರ್ಥನೆಯನ್ನು ತಾನೇ ಹೊಂದುತ್ತಿದ್ದನು/ಫಲಭಾಗಿಯಾಗುತ್ತಿದ್ದನು. [ಶಾಖಾಂತರೀಯವಾದ] **'ಏತದು ದ್ಯಾವಾ ಪೃಥಿವೀ'** ಎಂಬ ಸೂಕ್ತವಾಕಮಂತ್ರವನ್ನು ಹೇಳಿದರೆ,

---

ಸೂಕ್ತವಾಕವಿಧಿಯ ಮಂತ್ರದಲ್ಲಿ **"ಏತದು"** ಪದೋಚ್ಚಾರಣೆಯನ್ನು ಮಾಡಿದರೆ **ಏತದು** ರಾಕ್ಷಸನಿಗೆ ಯಜ್ಞದ ಫಲಪ್ರಾಪ್ತಿಯಾಗುತ್ತದೆ. ಹೀಗಾಗಿ **"ಇದಮ್"** ಎಂಬ ಪದವುಳ್ಳ ಮಂತ್ರವನ್ನು ಹೇಳುವುದರಿಂದ ಯಜಮಾನನಿಗೇ ಯಜ್ಞದ ಫಲವು ಉಂಟಾಗುತ್ತದೆ.ಇದು ಸೂಕ್ತವಾಕದ ವಿಧಿಯೂ ಆಗಿದೆ.

ದುಮೇವಾऽऽಸುರಂ ಯಜ್ಞಸ್ಯಾಶಿಷಂ ಗಮಯೇದಿದಂ ದ್ಯಾವಾಪೃಥಿವೀ

ಭದ್ರಮಭೂದಿತ್ಯೇವ ಬ್ರೂಯಾದ್ಯಜಮಾನಮೇವ ಯಜ್ಞಸ್ಯಾಶಿಷಂ

ಗಮಯತ್ಯಾರ್ಧ್ಮ ಸೂಕ್ತವಾಕಮುತ ನಮೋವಾಕಮಿತ್ಯಾಹೇ-

---

ಏತದುಮ್ । ಏವ । ಆಸುರಮ್ । ಯಜ್ಞಸ್ಯ । ಆಶಿಷಮಿತ್ಯಾ-ಶಿಷಮ್ । ಗಮಯೇತ್।

ಇದಮ್ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಭದ್ರಮ್ । ಅಭೂತ್ । ಇತಿ ।

ಏವ । ಬ್ರೂಯಾತ್ । ಯಜಮಾನಮ್ । ಏವ । ಯಜ್ಞಸ್ಯ । ಆಶಿಷಮಿತ್ಯಾ-ಶಿಷಮ್।

ಗಮಯತಿ । ಆರ್ಧ್ಮ । ಸೂಕ್ತವಾಕಮಿತಿ ಸೂಕ್ತ-ವಾಕಮ್ । ಉತ । ನಮೋವಾಕಮಿತಿ

ನಮಃ-ವಾಕಮ್ । ಇತಿ । ಆಹ ।

---

| | |
|---|---|
| ಏತದುಮ್ ಆಸುರಮ್ ಏವ ಯಜ್ಞಸ್ಯ ಆಶಿಷಮ್ ಗಮಯೇತ್ | ಏತದು ರಾಕ್ಷಸನನ್ನೇ ಯಜ್ಞದ ಶುಭಾಂಶಸನೆಯು ಹೊಂದುವಂತೆ ಮಾಡಿದಂತಾದೀತು. |
| ಇದಮ್ ದ್ಯಾವಾಪೃಥಿವೀ ಭದ್ರಮ್ ಅಭೂತ್ ಇತಿ ಏವ ಬ್ರೂಯಾತ್ | ದ್ಯಾವಾಪೃಥಿವೀಗಳೇ! ಈ ಸೂಕ್ತವಾಕವು ಯಜಮಾನನಿಗೆ ಮಂಗಲಕರವಾಯಿತು/ಮಂಗಳಕರವಾಗಲಿ ಎಂದು ಹೇಳಬೇಕು. **[ಇದು ತೈತ್ತಿರೀಯ ಶಾಖೆಯ ಮಂತ್ರ]** |
| ಯಜಮಾನಮ್ ಯಜ್ಞಸ್ಯ ಆಶಿಷಮ್ ಗಮಯತಿ ಏವ | ಇದರಿಂದ ಹೋತೃವು-ಯಜಮಾನನೇ ಯಜ್ಞದ ಶುಭಫಲವನ್ನು ಹೊಂದುವಂತೆ-ಮಾಡುತ್ತಾನೆ. |

## ಸೂಕ್ತವಾಕಭಾಗದ ವಿವರಣೆ

| | |
|---|---|
| ಆರ್ಧ್ಮ ಸೂಕ್ತವಾಕಮ್ ಉತ ನಮೋವಾಕಮ್ ಇತಿ ಆಹ | ಸೂಕ್ತವಾಕವನ್ನೂ, ನಮೋವಾಕವನ್ನೂ [ನಮೋ ದೇವೇಭ್ಯಃ]ಹೇಳಿ ಸಮೃದ್ಧಿಯನ್ನು ಹೊಂದಿದವರಾದೆವೆಂದು ಈ ಮಂತ್ರವು ಹೇಳುತ್ತದೆ. |

ದಮರಾಥ್ಸ್ಮೇತಿ ವಾವೈತದಾಹೋಪಶ್ರಿತೋ ದಿವಃ ಪೃಥಿವ್ಯೋರಿತ್ಯಾಹ ದ್ಯಾವಾಪೃಥಿವ್ಯೋರ್ ಹಿ ಯಜ್ಞ ಉಪಶ್ರಿತ ಓಮನ್ವತೀ ತೇಽಸ್ಮಿನ್ ಯಜ್ಞೇ ಯಜಮಾನ ದ್ಯಾವಾಪೃಥಿವೀ [(೫)] ಸ್ತಾಮಿತ್ಯಾಹಾಽಽ

---

ಇದಮ್ । ಅರಾಥ್ಸ್ಮ । ಇತಿ । ವಾವ । ಏತತ್ । ಆಹ । ಉಪಶ್ರಿತ ಇತ್ಯುಪ-ಶ್ರಿತಃ । ದಿವಃ । ಪೃಥಿವ್ಯೋಃ । ಇತಿ । ಆಹ । ದ್ಯಾವಾಪೃಥಿವ್ಯೋರಿತಿ ದ್ಯಾವಾ-ಪೃಥಿವ್ಯೋಃ । ಹಿ। ಯಜ್ಞಃ । ಉಪಶ್ರಿತ ಇತ್ಯುಪ-ಶ್ರಿತಃ । ಓಮನ್ವತೀ ಇತ್ಯೋಮನ್ನ್-ವತೀ । ತೇ । ಅಸ್ಮಿನ್ನ್ । ಯಜ್ಞೇ । ಯಜಮಾನ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ ।(೫)। ಸ್ತಾಮ್ । ಇತಿ । ಆಹ ।

---

| | |
|---|---|
| ಇದಮ್ ಅರಾಥ್ಸ್ಮ ಇತಿ ವಾವ ಏತತ್ ಆಹ | ಈ ವಾಕ್ಯದ್ವಯವು ಸೂಕ್ತವಾಕ,ನಮೋವಾಕಗಳು ಹೇಳುವ ಫಲಸಮೃದ್ಧಿಯನ್ನು ಹೊಂದಿದೆವು ಎಂದೇ ಹೇಳುತ್ತದೆ. |

**ಸೂಕ್ತವಾಕದ ಮತ್ತೊಂದು ಭಾಗದ ವಿವರಣೆ**

| | |
|---|---|
| ಉಪಶ್ರಿತಃ ದಿವಃ ಪೃಥಿವ್ಯೋಃ ಇತಿ ಆಹ | 'ಯಜ್ಞವು ದ್ಯಾವಾಪೃಥಿವಿಗಳನ್ನು ಆಶ್ರಯಿಸಿದೆ' ಎಂದು ಮತ್ತೊಂದು ಮಂತ್ರಭಾಗವು ಹೇಳುತ್ತದೆ. |
| ಯಜ್ಞಃ ದ್ಯಾವಾಪೃಥಿವ್ಯೋಃ ಉಪಶ್ರಿತಃ ಹಿ | ದ್ಯಾವಾಪೃಥಿವಿಗಳೇ ಯಜ್ಞಕ್ಕೆ ಆಶ್ರಯವಷ್ಟೆ. |

**ಮತ್ತೊಂದು ಭಾಗದ ವಿವರಣೆ**

| | |
|---|---|
| ಯಜಮಾನ ತೇ ಅಸ್ಮಿನ್ ಯಜ್ಞೇ ದ್ಯಾವಾಪೃಥಿವೀ ಓಮನ್ವತೀ ಸ್ತಾಮ್ ಇತಿ ಆಹ | 'ಯಜಮಾನನೇ! ಈ ಯಜ್ಞದಲ್ಲಿ ದ್ಯಾವಾಪೃಥಿವಿಗಳು ನಿನಗೆ ರಕ್ಷಕರಾಗಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |

ಶಿಷಮೇವೈತಾಮಾಶಾಸ್ತೇ ಯದ್ಬ್ರೂಯಾಥ್ಸೂಪಾವಸಾನಾ ಚ

ಸ್ವಧ್ಯವಸಾನಾ ಚೇತಿ ಪ್ರಮಾಯುಕೋ ಯಜಮಾನಸ್ಸ್ಯಾದ್ಯದಾ

ಹಿ ಪ್ರಮೀಯತೇಽಥೇಮಾಮುಪಾವಸ್ಯತಿ

---

ಆಶಿಷಮಿತ್ಯಾ-ಶಿಷಮ್ । ಏವ । ಏತಾಮ್ । ಏತಿ । ಶಾಸ್ತೇ । ಯತ್ । ಬ್ರೂಯಾತ್ ।

ಸೂಪಾವಸಾನೇತಿ ಸು-ಉಪಾವಸಾನಾ । ಚ । ಸ್ವಧ್ಯವಸಾನೇತಿ ಸು-ಅಧ್ಯವಸಾನಾ । ಚ ।

ಇತಿ । ಪ್ರಮಾಯುಕ ಇತಿ ಪ್ರ-ಮಾಯುಕಃ । ಯಜಮಾನಃ । ಸ್ಯಾತ್ । ಯದಾ । ಹಿ ।

ಪ್ರಮೀಯತ ಇತಿ ಪ್ರ-ಮೀಯತೇ । ಅಥ । ಇಮಾಮ್ । ಉಪಾವಸ್ಯತೀತ್ಯುಪ-ಅವಸ್ಯತಿ।

---

| | |
|---|---|
| ಏತಾಮ್ ಆಶಿಷಮ್ ಏವ ಆಶಾಸ್ತೇ | ಇದರಿಂದ ಹೋತೃವು ಯಜಮಾನನಿಗೆ ಈ ಶುಭಾಶಂಸನೆಯನ್ನೇ ಮಾಡುತ್ತಾನೆ. |

**ಶಾಖಾಂತರದ ಇನ್ನೊಂದು ಮಂತ್ರದ ಅಯುಕ್ತತೆ-ಸ್ವಶಾಖಾಮಂತ್ರದ ವಿವರಣೆ; ಫಲದ ಪ್ರಶಂಸೆ**

| | |
|---|---|
| ಯತ್ ಸೂಪಾವಸಾನಾ ಚ ಸ್ವಧ್ಯವಸಾನಾ ಚ ಇತಿ ಬ್ರೂಯಾತ್ | ಒಂದು ವೇಳೆ [ಅವಸಾನವೆಂಬ ಅರ್ಥವನ್ನು ಸೂಚಿಸುವ] **ಸೂಪಾವಸಾನಾ ಚ** ಮುಂತಾದ ಶಾಖಾಂತರಮಂತ್ರವನ್ನು ಹೇಳಿದರೆ |
| ಯಜಮಾನಃ ಪ್ರಮಾಯುಕಃ ಸ್ಯಾತ್ | ಯಜಮಾನನು ಮರಣವನ್ನು ಹೊಂದುವನು. |
| ಯದಾ ಹಿ ಪ್ರಮೀಯತೇ ಅಥ ಇಮಾಮ್ ಉಪಾವಸ್ಯತಿ | ಯಾವಾಗ ಮರಣವನ್ನು ಹೊಂದುವನೋ ಆಗ ಭೂಮಿಯನ್ನೇ ಆಶ್ರಯಿಸಿ, ಮರಣ ಹೊಂದುವನು.[ಆದುದರಿಂದ] |

---

ಸೂಕ್ತವಾಕದ ಎರಡು ವಾಕ್ಯಗಳನ್ನು ಈ ಬ್ರಾಹ್ಮಣಭಾಗವು ವಿವರಿಸುತ್ತದೆ.ನಾವು ಫಲಸಮೃದ್ಧಿಯನ್ನು ಹೊಂದಿದೆವು ಎಂದೇ ಈ ವಾಕ್ಯಗಳು ಹೇಳುತ್ತವೆ.

ಸೂಪಚರಣಾ ಚ ಸ್ವಧಿಚರಣಾ ಚೇತ್ಯೇವ ಬ್ರೂಯಾದ್ವರೀಯಸೀ

ಮೇವಾಸ್ಮೈ ಗವ್ಯೂತಿಮಾಶಾಸ್ತೇ ನ ಪ್ರಮಾಯುಕೋ ಭವತಿ

ತಯೋರಾವಿದ್ಯಗ್ನಿರಿದಗ್ಂ ಹವಿರಜುಷತೇತ್ಯಾಹ

---

ಸೂಪಚರಣೇತಿ ಸು-ಉಪಚರಣಾ । ಚ । ಸ್ವಧಿಚರಣೇತಿ ಸು-ಅಧಿಚರಣಾ । ಚ । ಇತಿ । ಏವ। ಬ್ರೂಯಾತ್ । ವರೀಯಸೀಮ್ । ಏವ । ಅಸ್ಮೈ । ಗವ್ಯೂತಿಮ್ । ಏತಿ । ಶಾಸ್ತೇ । ನ । ಪ್ರಮಾಯುಕ ಇತಿ ಪ್ರ-ಮಾಯುಕಃ । ಭವತಿ । ತಯೋಃ । ಆವಿದೀತ್ಯಾ-ವಿದಿ । ಅಗ್ನಿಃ । ಇದಮ್ । ಹವಿಃ । ಅಜುಷತ । ಇತಿ । ಆಹ ।

---

| | |
|---|---|
| ಸೂಪಚರಣಾ ಚ ಸ್ವಧಿಚರಣಾ ಚ ಇತಿ ಏವ ಬ್ರೂಯಾತ್ | ಸ್ವಶಾಖೆಯ **'ಸೂಪಚರಣಾ' 'ಸ್ವಧಿಚರಣಾ'** ಎಂಬ ಸಂಚಾರವನ್ನು ಸೂಚಿಸುವ ಮಂತ್ರವನ್ನೇ ಹೇಳಬೇಕು. |
| ಅಸ್ಮೈ ವರೀಯಸೀಮ್ ಗವ್ಯೂತಿಮ್ ಏವ ಆಶಾಸ್ತೇ | ಈ ಯಜಮಾನನಿಗಾಗಿ ಹೋತೃವು ಬಲು ದೊಡ್ಡದಾದ ಹುಲ್ಲುಗಾವಲು ಭೂಮಿಯ ಆಶಾಸನವನ್ನು ಮಾಡುತ್ತಾನೆ. |
| ಪ್ರಮಾಯುಕಃ ನ ಭವತಿ | ಯಜಮಾನನು ಮರಣವನ್ನು ಹೊಂದುವುದಿಲ್ಲ. |

**'ತಯೋರಾವಿದಿ...' ಮೊದಲಾದ ಮಂತ್ರಭಾಗದ ವಿವರಣೆ**

| | |
|---|---|
| ತಯೋಃ ಆವಿದಿ | ಆ ದ್ಯಾವಾಪೃಥಿವಿಗಳ ಅನುಜ್ಞೆಯು ಇರಲಾಗಿ |
| ಅಗ್ನಿಃ ಇದಮ್ ಹವಿಃ ಅಜುಷತ | ಆಜ್ಯಭಾಗದೇವತೆಯಾದ ಅಗ್ನಿಯು ಈ ಹವಿಸ್ಸನ್ನು ಸೇವಿಸಿದನು. |
| **[ಅವೀವೃಧತ; ಮಹಃ ಜ್ಯಾಯಃ ಅಕೃತ]** | [ವೃದ್ಧಿಯನ್ನು ಹೊಂದಿದನು. ಅತಿಶಯವಾದ ತೇಜಸ್ಸನ್ನೂ ಹೊಂದಿದನು.] |
| ಇತಿ ಆಹ | ಹೀಗೆ ಸೂಕ್ತವಾಕದ ಮಧ್ಯಭಾಗದ ಮಂತ್ರಗಳು ಹೇಳುತ್ತವೆ. |

ಯಾ ಅಯಾಕ್ಷ್ಮ [(೬)] ದೇವತಾಸ್ತಾ ಅರೀರಧಾಮೇತಿ ವಾವೈ

ತದಾಹ ಯನ್ನ ನಿರ್ದಿಶೇತ್ಪ್ರತಿವೇಶಂ ಯಜ್ಞಸ್ಯಾಶೀರ್ಗಚ್ಛೇದಾ

ಶಾಸ್ತೇಽಯಂ ಯಜಮಾನೋಽಸಾವಿತ್ಯಾಹ

---

ಯಾಃ । ಅಯಾಕ್ಷ್ಮ । (೬) । ದೇವತಾಃ । ತಾಃ । ಅರೀರಧಾಮ । ಇತಿ । ವಾವ । ಏತತ್ ।

ಆಹ । ಯತ್ । ನ । ನಿರ್ದಿಶೇದಿತಿ ನಿಃ-ದಿಶೇತ್ । ಪ್ರತಿವೇಶಮಿತಿ ಪ್ರತಿ-ವೇಶಮ್ ।

ಯಜ್ಞಸ್ಯ । ಆಶೀರಿತ್ಯಾ-ಶೀಃ । ಗಚ್ಛೇತ್ । ಏತಿ । ಶಾಸ್ತೇ । ಅಯಮ್ । ಯಜಮಾನಃ ।

ಅಸೌ । ಇತಿ । ಆಹ ।

---

ಯಾಃ ದೇವತಾಃ ಅಯಾಕ್ಷ್ಮ — ಯಾವ ದೇವತೆಗಳನ್ನು ಉದ್ದೇಶಿಸಿ ಯಾಗವನ್ನು ಅನುಷ್ಠಿಸಿದೆವೋ

ತಾಃ ಅರೀರಧಾಮ — ಆ ದೇವತೆಗಳನ್ನು ವೃದ್ಧಿಗೊಳಿಸಿದೆವು.

ಇತಿ ವಾವ ಏತತ್ ಆಹ — ಹೀಗೆಂದು ತಾನೇ ಈ ಮಂತ್ರವು ಹೇಳುತ್ತದೆ.

### ಯಜಮಾನನ ನಾಮನಿರ್ದೇಶದ ವಿಧಿ; ಫಲ

ಯತ್ ನ ನಿರ್ದಿಶೇತ್ — ಯಜಮಾನನ ಹೆಸರಿನ ನಿರ್ದೇಶವು ಇಲ್ಲದಿದ್ದರೆ

ಯಜ್ಞಸ್ಯ ಆಶೀಃ ಪ್ರತಿವೇಶಮ್ ಗಚ್ಛೇತ್ — **'ಆಯುಃ'** ಮೊದಲಾದ ಆಶಾಸನೆಗಳು ಯಾಗಶಾಲೆಯಲ್ಲಿರುವ ಯಾವನಿಗಾದರೂ ಸೇರಬಹುದು.

ಅಯಮ್ ಅಸೌ ಯಜಮಾನಃ ಆಶಾಸ್ತೇ ಇತಿ ಆಹ — ಈ ಹೆಸರಿನ ಯಜಮಾನನು ಆಯುರಾದಿಗಳನ್ನು ಆಶಿಸುತ್ತಾನೆ. ಎಂದು ಮಂತ್ರವು ಹೇಳುತ್ತದೆ.

---

ಯಜ್ಞವು ಪೃಥಿವಿಯಲ್ಲಿ ಅಗ್ನಿಯನ್ನು ಆಶ್ರಯಿಸಿದೆ ಮತ್ತು ಸ್ವರ್ಗದಲ್ಲಿ ಫಲರೂಪದಿಂದ ಆಶ್ರಿತವಾಗಿದೆಯಷ್ಟೆ. ದ್ಯಾವಾಪೃಥಿವಿಗಳೇ ಆಶ್ರಯ ಎಂದು ತಾತ್ಪರ್ಯ.ಅಂತಹ ದ್ಯಾವಾಪೃಥಿವಿಗಳು ಯಜಮಾನನಿಗೆ ರಕ್ಷಕರಾಗಿರಲಿ ಎಂದು ಸೂಕ್ತವಾಕದ ಇನ್ನೊಂದು ಭಾಗವು ಹೇಳುತ್ತದೆ.

ನಿರ್ದಿಶ್ಯೈವೈನಗ್ಂ ಸುವರ್ಗಂ ಲೋಕಂ ಗಮಯತ್ಯಾಯುರಾ ಶಾಸ್ತೇ ಸುಪ್ರಜಾಸ್ತ್ವಮಾಶಾಸ್ತ ಇತ್ಯಾಹಾಽಶಿಷಮೇವೈತಾಮಾ ಶಾಸ್ತೇ

---

ನಿರ್ದಿಶ್ಯೇತಿ ನಿಃ-ದಿಶ್ಯ । ಏವ । ಏನಮ್ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಗಮಯತಿ । ಆಯುಃ । ಏತಿ । ಶಾಸ್ತೇ । ಸುಪ್ರಜಾಸ್ತ್ವಮಿತಿ ಸುಪ್ರಜಾಃ-ತ್ವಮ್ । ಏತಿ । ಶಾಸ್ತೇ । ಇತಿ । ಆಹ । ಆಶಿಷಮಿತ್ಯಾ-ಶಿಷಮ್ । ಏವ । ಏತಾಮ್ । ಏತಿ । ಶಾಸ್ತೇ ।

---

| | |
|---|---|
| ಏನಮ್ ನಿರ್ದಿಶ್ಯ ಏವ ಸುವರ್ಗಮ್ ಲೋಕಮ್ ಗಮಯತಿ | [ಈ ಸೂಕ್ತವಾಕವಾಚಕನು] ಹೀಗೆ ನಾಮನಿರ್ದೇಶವನ್ನು ಮಾಡಿಯೇ ಈ ಯಜಮಾನನಿಗೆ ಆಯುರಾದಿಗಳನ್ನು ಕೊಟ್ಟು ಕೊನೆಗೆ ಸ್ವರ್ಗಲೋಕವನ್ನು ಹೊಂದುವಂತೆ ಮಾಡುತ್ತಾನೆ. |

**ಯಜಮಾನನು ಆಶಿಸುವ ಆಯುರಾದಿಗಳ ವಿವರಣೆ; ಫಲ**

| | |
|---|---|
| ಆಯುಃ ಆಶಾಸ್ತೇ | ಈ ಯಜಮಾನನು ಆಯುಸ್ಸನ್ನು ಬಯಸುತ್ತಾನೆ. |
| ಸುಪ್ರಜಾಸ್ತ್ವಮ್ ಆಶಾಸ್ತೇ | ಒಳ್ಳೆಯ ಮಕ್ಕಳಾಗುವಿಕೆಯನ್ನು ಬಯಸುತ್ತಾನೆ. |
| ಇತಿ ಆಹ | ಎಂದು ಈ ಮಂತ್ರಭಾಗವು ಹೇಳುತ್ತದೆ. |
| ಏತಾಮ್ ಆಶಿಷಮ್ ಏವ ಆಶಾಸ್ತೇ | ಇದು ಪ್ರಸಿದ್ಧವಾದ ಶುಭಾಶಂಸೆಯನ್ನೇ ಹೇಳುತ್ತದೆ. |

---

ಹೋತೃವು ಯಜಮಾನನಿಗೆ ಅದೇ ಆಶಂಸನೆಯನ್ನು ಮಾಡುತ್ತಾನೆ.ಈ ಸೂಕ್ತವಾಕ ಮಂತ್ರವನ್ನು ಶಾಖಾಂತರದಲ್ಲಿ ಇರುವಂತೆ ಪಾಠವನ್ನು ಮಾಡಬಾರದು.ಆ ಮಂತ್ರಭಾಗದಲ್ಲಿ ಅವಸಾನಶಬ್ದವಿರುವುದರಿಂದ ಯಜಮಾನನು ಮೃತಿಯನ್ನು ಹೊಂದುತ್ತಾನೆ. ಈ ಶಾಖೆಯಲ್ಲಿ ಸಂಚಾರವಾಚಕ **ಚರಣ** ಶಬ್ದವಿರುವುದರಿಂದ ಹಸುಗಳು ಮೇಯುವ ಗೋಸಂಚಾರಕ್ಷೇತ್ರವನ್ನು ಹೊಂದುತ್ತಾನೆ. ಆ ಯಜಮಾನನಿಗೆ ಮರಣವು ಸಂಭವಿಸುವುದಿಲ್ಲ.

ಸಜಾತವನಸ್ಯಾಮಾ ಶಾಸ್ತ ಇತ್ಯಾಹ ಪ್ರಾಣಾ ವೈ ಸಜಾತಾಃ

ಪ್ರಾಣಾನೇವ [(೭)] ನಾಂತರೇತಿ ತದಗ್ನಿರ್ದೇವೋ

ದೇವೇಭ್ಯೋ ವನತೇ

---

ಸಜಾತವನಸ್ಯಾಮಿತಿ ಸಜಾತ-ವನಸ್ಯಾಮ್ । ಏತಿ । ಶಾಸ್ತೇ । ಇತಿ । ಆಹ । ಪ್ರಾಣಾ ಇತಿ ಪ್ರ-ಅನಾಃ । ವೈ । ಸಜಾತಾ ಇತಿ ಸ-ಜಾತಾಃ । ಪ್ರಾಣಾನಿತಿ ಪ್ರ-ಅನಾನ್ । ಏವ। (೭) । ನ । ಅಂತಃ । ಏತಿ । ತತ್ । ಅಗ್ನಿಃ । ದೇವಃ । ದೇವೇಭ್ಯಃ । ವನತೇ ।

---

| | |
|---|---|
| ಸಜಾತವನಸ್ಯಾಮ್ ಆಶಾಸ್ತೇ ಇತಿ ಆಹ | ಆತ್ಮನೊಡನೆ ಹುಟ್ಟಿರುವ ಪ್ರಾಣಾದಿಗಳನ್ನು ಈ ಯಜಮಾನನು ಆಶಿಸುತ್ತಾನೆಂದು ಈ ಮಂತ್ರವು ಹೇಳುತ್ತದೆ. |
| ಪ್ರಾಣಾಃ ವೈ ಸಜಾತಾಃ | ಪ್ರಾಣಗಳು ಜೊತೆಯಲ್ಲಿಯೇ ಹುಟ್ಟಿದವುಗಳಷ್ಟೆ. |
| ಪ್ರಾಣಾನ್ ಏವ ಏತಿ ನ ಅಂತಃ | ಪ್ರಾಣಗಳನ್ನೇ ಹೊಂದಿರುವನಲ್ಲದೆ ಅವುಗಳ ಆಗಲಿಕೆಯನ್ನು ಅಲ್ಲ. |

**'ತದಗ್ನಿಃ' ಎಂಬ ಮಂತ್ರಭಾಗದ ವಿವರಣೆ**

| | |
|---|---|
| ಅಗ್ನಿಃ ದೇವಃ ದೇವೇಭ್ಯಃ ತತ್ ವನತೇ | ಅಗ್ನಿದೇವನು ದೇವತೆಗಳಿಗೆ ಆ ಯಜ್ಞಫಲವನ್ನು ಸಮರ್ಪಿಸಿ ಅವರ ಅನುಗ್ರಹದಿಂದ ಆಗಲೆಂದು ಪ್ರಾರ್ಥಿಸುತ್ತಾನೆ. |

---

ಸೂಕ್ತವಾಕದ ಮಧ್ಯಭಾಗದ ಮಂತ್ರಗಳ ತಾತ್ಪರ್ಯವು ಹೀಗಿದೆ; ಮೊದಲು **'ಆರ್ಧ್ಮ ಸೂಕ್ತವಾಕಮ್'** ಎಂಬ ಭಾಗದಿಂದ ತಮ್ಮ ಸಮೃದ್ಧಿಯನ್ನು ಹೇಳುತ್ತದೆ. **'ಅಗ್ನಿರಿದಂ ಹವಿರ ಜುಷತ'** ಎಂಬ ಮಧ್ಯಭಾಗವು ದೇವತೆಗಳ ಸಮೃದ್ಧಿಯನ್ನು ತಿಳಿಸುತ್ತದೆ.**'ದೇವಾನ್ ಭಾವಯ ತಾನೇನ ತೇ ದೇವಾ ಭಾವಯಂತು ವಃ'** ಎಂಬ ಗೀತೆಯ ಮಾತೂ ಇದನ್ನೇ ಹೇಳುತ್ತದೆ .

ವಯಮಗ್ನೇರ್ಮಾನುಷಾ ಇತ್ಯಾಹಾಗ್ನಿರ್ದೇವೇಭ್ಯೋ ವನುತೇ

ವಯಂ ಮನುಷ್ಯೇಭ್ಯ ಇತಿ ವಾವೈತದಾಹೇಹ ಗತಿ

ರ್ವಾಮಸ್ಯೇದಂ ಚ ನಮೋ ದೇವೇಭ್ಯ ಇತ್ಯಾಹ

---

ವಯಮ್ । ಅಗ್ನೇಃ । ಮಾನುಷಾಃ । ಇತಿ । ಆಹ । ಅಗ್ನಿಃ । ದೇವೇಭ್ಯಃ । ವನುತೇ ।

ವಯಮ್ । ಮನುಷ್ಯೇಭ್ಯಃ । ಇತಿ । ವಾವ । ಏತತ್ । ಆಹ । ಇಹ । ಗತಿಃ ।

ವಾಮಸ್ಯ । ಇದಮ್ । ಚ । ನಮಃ । ದೇವೇಭ್ಯಃ । ಇತಿ । ಆಹ ।

---

| | |
|---|---|
| ಮಾನುಷಾಃ ವಯಮ್ ಅಗ್ನೇಃ | ಮನುಷ್ಯರಾದ ನಾವು ಅಗ್ನಿಯನ್ನು [ಒಲಿಸಿಕೊಂಡು ಆತನು ನಮಗೆ ಆ ಫಲಗಳನ್ನು ಕೊಡಲಿ ಎಂದು ಪ್ರಾರ್ಥಿಸುತ್ತೇವೆ] |
| ಇತಿ ಆಹ | ಹೀಗೆ ಈ ಮಂತ್ರಭಾಗವು ಹೇಳುತ್ತದೆ. |
| ಅಗ್ನಿಃ ದೇವೇಭ್ಯಃ ವನುತೇ | ಅಗ್ನಿಯು ದೇವತೆಗಳ ದೆಸೆಯಿಂದ ದೈವಿಕವಾದ ಇಷ್ಟಾರ್ಥಗಳನ್ನು ಯಜಮಾನನಿಗಾಗಿ ಪ್ರಾರ್ಥಿಸುತ್ತಾನೆ. |
| ವಯಮ್ ಮನುಷ್ಯೇಭ್ಯಃ | ಮಾನವರಾದ ನಾವು [ಋತ್ವಿಜರು] ಯಜಮಾನರಿಗಾಗಿ ಈ ಲೋಕದ ಇಷ್ಟಾರ್ಥಗಳಿಗಾಗಿ ಅಗ್ನಿಯನ್ನು ಪ್ರಾರ್ಥಿಸಿಕೊಳ್ಳುತ್ತೇವೆ. |
| ಇತಿ ವಾವ ಏತತ್ ಆಹ | ಎಂದು ತಾನೇ ಈ ಮಂತ್ರಭಾಗವು ತಿಳಿಸುತ್ತಿದೆ! |

**ಸೂಕ್ತವಾಕದ ಕೊನೆಯ ಭಾಗದ ವಿವರಣೆ**

| | |
|---|---|
| ಇಹ ಗತಿಃ ವಾಮಸ್ಯ ಇದಮ್ ಚ ದೇವೇಭ್ಯಃ ನಮಃ ಇತಿ ಆಹ | ಈ ಯಾಗದಲ್ಲಿ ಅಪೇಕ್ಷಿತವಾದ ಧನಾದಿಗಳ ಪ್ರಾಪ್ತಿಯಾಗಲಿ.ಈ ಹವಿಸ್ಸು ದೇವತೆಗಳಿಂದ ಸ್ವೀಕೃತವಾಗಲಿ. ದೇವತೆಗಳೆಲ್ಲರಿಗೂ ನಮಸ್ಕಾರ. ಹೀಗೆಂದು ಈ ಮಂತ್ರಭಾಗವು ಹೇಳುತ್ತದೆ. |

---

'**ಸಂಪದ್ವಿನಿಮಯೇನೋಭೌ ದಧತುರ್ಭುವನದ್ವಯಮ್**'[ದಿಲೀಪ-ಇಂದ್ರರು ಸಂಪತ್ತನ್ನು

ಯಾಶ್ಚೈವ ದೇವತಾ ಯಜತಿ ಯಾಶ್ಚ ನ ತಾಭ್ಯ ಏವೋಭಯೀಭ್ಯೋ

ನಮಸ್ಕರೋತ್ಯಾತ್ಮನೋಽನಾರ್ತ್ಯೈ ॥೫೬-9॥

ಶ್ರಿತಸ್ತೇ ಪ್ರ ತ್ರಿಷ್ಟುಭಮೇತದ್ದ್ಯಾವಾಪೃಥಿವೀ ಯಾ ಆಯಾಕ್ಷ್ಮ ಪ್ರಾಣಾನೇವ

ಷಟ್ಚತ್ವಾರಿಗ್ಂಶಚ್ಚ॥]

---

ಯಾಃ । ಚ । ಏವ । ದೇವತಾಃ । ಯಜತಿ । ಯಾಃ । ಚ । ನ । ತಾಭ್ಯಃ । ಏವ ।

ಉಭಯೀಭ್ಯಃ । ನಮಃ । ಕರೋತಿ । ಆತ್ಮನಃ । ಅನಾರ್ತ್ಯೈ ॥೫೬॥

---

| | |
|---|---|
| ಯಾಃ ಚ ಏವ ದೇವತಾಃ ಯಜತಿ | ಯಾವ ದೇವತೆಗಳಿಗಾಗಿಯೇ ಯಾಗವನ್ನು ಅನುಷ್ಠಿಸುತ್ತಾನೆಯೋ |
| ಯಾಃ ಚ ನ **ಯಜತಿ** | ಯಾವ ದೇವತೆಗಳಿಗಾಗಿ ಯಾಗವನ್ನು ಅನುಷ್ಠಿಸುವುದಿಲ್ಲವೋ |
| ತಾಭ್ಯಃ ಉಭಯೀಭ್ಯಃ ಏವ | ಆ ಎರಡು ವಿಧವಾದ ದೇವತೆಗಳಿಗೂ |
| ಆತ್ಮನಃ ಅನಾರ್ತ್ಯೈ | ತನಗೆ ಹಿಂಸೆಯಾಗದಿರುವುದಕ್ಕಾಗಿ |
| ನಮಃ ಕರೋತಿ | ಈ ಯಜಮಾನನು ನಮಸ್ಕರಿಸುತ್ತಾನೆ. |

---

ಪರಸ್ಪರ ವಿನಿಮಯ ಮಾಡಿಕೊಂಡು ಎರಡು ಲೋಕಗಳನ್ನೂ ಪೋಷಿಸಿದರು] ಎಂಬ ಕಾಳಿದಾಸನ ಮಾತೂ **[ರಘುವಂಶ ಮಹಾಕಾವ್ಯ]** ಈ ಅರ್ಥವನ್ನೇ ಕೊಡುತ್ತದೆ.

ಈ ಸೂಕ್ತವಾಕವಾಚನದಲ್ಲಿ ಯಜಮಾನನ ನಾಮನಿರ್ದೇಶವನ್ನು ಮಾಡಬೇಕು. ಹೀಗೆ ಮಾಡುವುದರಿಂದ ಬಯಸಿದ ಫಲಗಳೆಲ್ಲವೂ ಯಜಮಾನನಿಗೇ ಉಂಟಾಗುತ್ತದೆ. ಬೇರೆಯವರಿಗೆ ಹೋಗುವುದಿಲ್ಲ.

ಯಜಮಾನನು ಆಶಿಸುವುದನ್ನು ಇಲ್ಲಿ ವಿವರಿಸಲಾಗಿದೆ. ಆಯುಸ್ಸು ಮೊದಲಾದವುಗಳನ್ನೂ, ಪ್ರಾಣಗಳು ಸ್ಥಿರವಾಗಿರುವುದನ್ನೂ,ಸೇವಕಾದಿಗಳು ಇರುವಂತೆ ಮಾಡುವುದನ್ನೂ ಈ ಮಂತ್ರದಿಂದ ಪ್ರಾರ್ಥಿಸುತ್ತಾನೆ.ಇದು ದೇವತಾನುಗ್ರಹದಿಂದ ಪ್ರಾಪ್ತವಾಗುತ್ತದೆ.

ಸೂಕ್ತವಾಕದ ಕೊನೆಯಲ್ಲಿರುವ ಈ ಮಂತ್ರಭಾಗದಿಂದ ಯಜಮಾನನಿಗೆ ದೇವತೆಗಳ ಅನುಗ್ರಹದಿಂದಲೂ, ಅಗ್ನಿಯ ಅನುಗ್ರಹದಿಂದಲೂ ಸರ್ವೇಷ್ಟಾರ್ಥಗಳೂ ಲಭಿಸಲಿ ಎಂದು ಶ್ರುತಿಯು ತಿಳಿಸುತ್ತದೆ.

ಕಡೆಯದಾಗಿ ಈ ಕರ್ಮದಲ್ಲಿ ಸತ್ಕರಿಸಲ್ಪಟ್ಟಿರುವ ದೇವತೆಗಳಲ್ಲದೆ ಸತ್ಕಾರವನ್ನು ಪಡೆಯದಿರುವ ದೇವತೆಗಳನ್ನು ನಮಸ್ಕಾರದಿಂದ ಸತ್ಕರಿಸಲು ಈ ಮಂತ್ರವನ್ನು ಹೇಳುವನು. ಈ ಯಾಗದಲ್ಲಿ ಅಪೇಕ್ಷಿತವಾದುದು ಲಭಿಸಲಿ,ಎಲ್ಲ ದೇವತೆಗಳಿಗೂ ನಮಸ್ಕಾರ ಎಂಬ ಈ ಮಂತ್ರದಿಂದ ಎಲ್ಲ ದೇವತೆಗಳನ್ನೂ ನಮಿಸುವನು.

ಈ ನಮನದ ಫಲವಾಗಿ ಯಜಮಾನನಿಗೆ ಯಾವ ರೀತಿಯ ಹಿಂಸೆಯೂ ಒದಗುವುದಿಲ್ಲ.

* * *

## ಅನುವಾಕದ ವಿಶೇಷವಿಷಯಗಳು

### ೧) ಮೀಮಾಂಸಾ

**೧) ತೃತೀಯ ಅನೂಯಾಜವು ಯಾವ ರೀತಿಯದು? [ಜೈ.ಸೂ.10.4]**

ದರ್ಶ–ಪೂರ್ಣಮಾಸೇಷ್ಟಿಯಲ್ಲಿ ಮೂರು ಅನೂಯಾಜಗಳು ಅನುಷ್ಠಿಸಲ್ಪಡುತ್ತವೆ. ಅದರಲ್ಲಿ ಮೊದಲಿನ ಎರಡು ಅನೂಯಾಜಗಳು ಆರಾದುಪಕಾರಕಗಳು ಅಂದರೆ ಅದೃಷ್ಟಾರ್ಥಗಳು.ಮೂರನೆಯ ಅನೂಯಾಜವು ಯಾವ ರೀತಿಯದು? ಅದು ಆರಾದುಪಕಾರಕವೇ? ಅಥವಾ ಸನ್ನಿಪತ್ಯೋಪಕಾರಕವೇ? ಅಂದರೆ ದೃಷ್ಟಾರ್ಥವೇ? ಇದು ಇಲ್ಲಿನ **ಸಂಶಯ.**

ಹಿಂದಿನ ಎರಡು ಅನೂಯಾಜಗಳಂತೆ ಮೂರನೆಯ ಅನೂಯಾಜವೂ ಸಹ ಆರಾದುಪಕಾರಕವೇ ಎಂಬದು ಇಲ್ಲಿನ **ಪೂರ್ವಪಕ್ಷ.**

ಮೂರನೆಯ ಅನೂಯಾಜದಲ್ಲಿ **'ದೇವೋ ಅಗ್ನಿಃ ಸ್ವಿಷ್ಟಕೃತ್'** ಎಂಬ ಮಂತ್ರದಿಂದ ಸ್ವಿಷ್ಟಕೃತ್ತಿನ ಪ್ರತ್ಯಭಿಜ್ಞಾನವಿರುವುದರಿಂದ ಐದನೆಯ ಪ್ರಯಾಜದಂತೆಯೇ ಮೂರನೆಯ ಅನೂಯಾಜವೂ ಕೂಡ ಸನ್ನಿಪತ್ಯೋಪಕಾರಕವೇ. ಈ ಮೂರನೆಯ ಅನೂಯಾಜದಿಂದ ದೇವತಾಸ್ಮರಣವೆಂಬ ದೃಷ್ಟಾರ್ಥವು ಲಭಿಸುತ್ತದೆ. ಹೀಗಾಗಿ ಈ ಮೂರನೆಯ ಅನೂಯಾಜವು ಸನ್ನಿಪತ್ಯೋಪಕಾರಕವೇ ಆಗಿದೆ ಎಂಬುದು ಇಲ್ಲಿನ **ಸಿದ್ಧಾಂತ.**

**೨) ಸೂಕ್ತವಾಕೇನ.... ಎಂಬ ಪದದ ತಾತ್ಪರ್ಯವೇನು? [ಜೈ.ಸೂ.3.2]**

**'ಸೂಕ್ತವಾಕೇನ ಪ್ರಹರತಿ'** ಎಂಬ ವಾಕ್ಯವು ಉಕ್ತವಾಗಿದೆ. **[ಆಪ.ಶ್ರೌ.ಸೂ.3.6.6]** ಇದರಲ್ಲಿರುವ **ಸೂಕ್ತವಾಕೇನ** ಎಂಬುದು ಏನನ್ನು ತಿಳಿಸುತ್ತದೆ? ಪ್ರಸ್ತರಪ್ರಹರಣದ ಕಾಲವನ್ನು ಬೋಧಿಸುವುದೇ? ಪ್ರಸ್ತರಪ್ರಹರಣಕ್ಕೂ ಸೂಕ್ತವಾಕಪಠನಕ್ಕೂ ಅಂಗಾಂಗಿಭಾವವಿದೆಯೆಂದು ಹೇಳುತ್ತದೆಯೇ? ಎಂದು ಇಲ್ಲಿನ **ಸಂಶಯ.**

**'ಸೂಕ್ತವಾಕೇನ'** ಎಂಬ ಪದವು ಪ್ರಸ್ತರಪ್ರಹರಣದ ಕಾಲವನ್ನು ಸೂಚಿಸುತ್ತದೆ. ಹೀಗಾಗಿ **ಸೂಕ್ತವಾಕೇನ** ಎಂಬುದು ಕಾಲಸೂಚಕವಾಗಿದೆ. ಈ ಸೂಕ್ತವಾಕದಲ್ಲಿ **'ಅಗ್ನಿರಿದಂ ಹವಿರ ಜುಷತ'** ಮೊದಲಾದ ದೇವತಾಕೀರ್ತನವು ಇದೆ. ಪುರೋಡಾಶವನ್ನು ಸೇವಿಸಿ, ಅಭಿವೃದ್ಧನಾದ ಅಗ್ನಿಯು ಯಜಮಾನನಲ್ಲಿ ತೇಜೋವೃದ್ಧಿಯನ್ನು ಮಾಡಿದನು ಎಂದು ಅದರ ಅರ್ಥ.ಈ ಅರ್ಥವನ್ನು ಪ್ರಸ್ತರಪ್ರಹರಣದಲ್ಲಿ ಅನ್ವಯ ಮಾಡಲು ಬರುವುದಿಲ್ಲ ಹೀಗಾಗಿ **ಸೂಕ್ತವಾಕೇನ** ಎಂಬುದು ಕಾಲವಿಧಿ. ಇದು ಇಲ್ಲಿನ **ಪೂರ್ವಪಕ್ಷ.**

ಸೂಕ್ತವಾಕವೂ ಕೂಡ ಅಂಗವಾಗಿ ಇಷ್ಟದೇವತಾಸಂಸ್ಕಾರಕವಾಗುತ್ತದೆ. **'ಪ್ರಹರತಿ'** ಎಂದು ಇದ್ದರೂ ಅಗ್ನಿಯಲ್ಲಿ ಪ್ರಸ್ತರಪ್ರಹರಣವು ದೇವತಾರ್ಥವಾಗಿರುವುದರಿಂದ ದೇವತಾದ್ವಾರಾ ಅನ್ವಯವಾಗುವುದರಿಂದ **'ಸೂಕ್ತವಾಕೇನ'** ಎಂಬ ತೃತೀಯಾವಿಭಕ್ತಿಯ ಶ್ರುತಿಯು ಇರುವುದರಿಂದ ಸೂಕ್ತವಾಕಪಾಠವು ಪ್ರಸ್ತರಪ್ರಹರಣಾಂಗವಾಗಿದೆ. ಇದು ಇಲ್ಲಿನ **ಸಿದ್ಧಾಂತ.**

**೩) ಸೂಕ್ತವಾಕವು ಸಂಪೂರ್ಣವಾಗಿ ಪ್ರಸ್ತರಪ್ರಹರಣಾಂಗವಾಗಿದೆಯೇ? [ಜೈ.ಸೂ.3.2]**

ಸಂಪೂರ್ಣ ಸೂಕ್ತವಾಕವು ಪ್ರಹರಣಾಂಗವಾಗಿದೆಯೇ? ಅಥವಾ ಅದನ್ನು ವಿಭಾಗಿಸಿ ವಿನಿಯೋಗವೇ? ಇದು ಇಲ್ಲಿನ **ಸಂಶಯ.**

**ಸೂಕ್ತವಾಕ** ಎಂಬುದು ಸಮಾಖ್ಯೆ. ಯಾಜ್ಞಿಕರು ಆ ಮಂತ್ರಸಮೂಹವನ್ನೇ **'ಸೂಕ್ತವಾಕ'** ಎನ್ನುವರು. ಹೀಗಾಗಿ ಸಮಾಖ್ಯೆಯನ್ನು ಅನುಸರಿಸಿ, ಇಡೀ ಸೂಕ್ತವಾಕಕ್ಕೇ ವಿನಿಯೋಗ. ಇದು ಇಲ್ಲಿನ **ಪೂರ್ವಪಕ್ಷ.**

ಸೂಕ್ತವಾಕದಲ್ಲಿ **'ಇಂದ್ರ, ಇದಂ ಹವಿರಜುಷತ, ಮಹೇಂದ್ರ, ಇದಂ ಹವಿರಜುಷತ,**

**ಇಂದ್ರಾಗ್ನೀ ಇದಂ ಹವಿರಜುಷೇತಾಮ್'** ಎಂಬುದಾಗಿ ಪೂರ್ಣಮಾಸದೇವತಾಕೀರ್ತನವೂ, ದರ್ಶಯಾಗದೇವತಾಕೀರ್ತನವೂ ಇದೆ. ಆದುದರಿಂದ ದೃಷ್ಟಾರ್ಥತ್ವದ ಲಾಭಕ್ಕಾಗಿ ಆಯಾ ಪ್ರಯೋಗಗಳಲ್ಲಿ ಆಯಾ ದೇವತಾಪ್ರಕಾಶನವಾಕ್ಯಗಳಿಗೆ ವಿಭಜ್ಯ ವಿನಿಯೋಗವಿರುತ್ತದೆ.

ಸಮಾಖ್ಯೆಯು ಪ್ರಬಲವಾದರೂ ಮಂತ್ರಪ್ರಕಾಶನಸಾಮರ್ಥ್ಯದಿಂದ ಸಮಾಖ್ಯೆಯು ಬಾಧಿತವಾಗುತ್ತದೆ. ಹೀಗಾಗಿ ಇಲ್ಲಿ ಸೂಕ್ತವಾಕದ ವಿಭಜ್ಯ ವಿನಿಯೋಗವಿರುತ್ತದೆ. ಇದು ಇಲ್ಲಿನ **ಸಿದ್ಧಾಂತ.**

**೪) 'ಸೂಕ್ತವಾಕದಲ್ಲಿ ಇದಂ...ಜ್ಯಾಯೋऽಕೃತ'ಮೊದಲಾದ ವಾಕ್ಯಗಳ ವಿನಿಯೋಗ ಹೇಗೆ? [ಜೈ.ಸೂ.3.3]**

**'ಅಗ್ನೀಷೋಮಾವಿದಂ' 'ಇಂದ್ರಾಗ್ನೀ ಇದಮ್'** ಇತ್ಯಾದಿ ವಾಕ್ಯಗಳಲ್ಲಿ ದೇವತಾವಾಚಕ ಪದವನ್ನು ವಿಭಾಗ ಮಾಡಿ ವಿನಿಯೋಗಿಸಬೇಕು.**'ಇದಂ ಹವಿರಜುಷೇತಾಂ'** ಮೊದಲಾದ ವಾಕ್ಯಗಳನ್ನು ದರ್ಶ-ಪೂರ್ಣಮಾಸಗಳೆರಡರಲ್ಲಿಯೂ ವಿನಿಯೋಗಿಸಬೇಕೆ? ಅಥವಾ ವ್ಯವಸ್ಥಿತವಾಗಿ ವಿನಿಯೋಗಿಸಬೇಕೆ? ಇದು ಇಲ್ಲಿನ **ಸಂಶಯ.**

ದರ್ಶ-ಪೂರ್ಣಮಾಸಪ್ರಕರಣದಲ್ಲಿ ಇವುಗಳ ಪಾಠವಿರುವುದರಿಂದ ಎರಡರಲ್ಲಿಯೂ ವಿನಿಯೋಗಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಎರಡರಲ್ಲಿಯೂ ವಿನಿಯೋಗವನ್ನು ಮಾಡುವುದಾದರೆ ದರ್ಶ-ಪೂರ್ಣಮಾಸಪ್ರಕರಣವಿರುವುದರಿಂದ ಪ್ರಕರಣದಿಂದ ವಾಕ್ಯಕಲ್ಪನೆ, ವಾಕ್ಯದಿಂದ ಲಿಂಗಕಲ್ಪನೆ, ಲಿಂಗದಿಂದ ಶ್ರುತಿಕಲ್ಪನೆ-ಹೀಗೆ ಮಾಡಬೇಕಾಗುತ್ತದೆ.

ವ್ಯವಸ್ಥಿತವಿನಿಯೋಗವಾದರೆ ವಾಕ್ಯದಿಂದ ಲಿಂಗಕಲ್ಪನೆ, ಲಿಂಗದಿಂದ ಶ್ರುತಿಕಲ್ಪನೆ ಎಂಬುದಾಗಿ ಲಾಘವವಿರುತ್ತದೆ. ಹೀಗಾಗಿ ಲಾಘವವು ಇರುವುದರಿಂದ **"ಇದಮ್"** ಮೊದಲಾದ ವಾಕ್ಯಗಳನ್ನು ಆಯಾ ಪ್ರಯೋಗಗಳಲ್ಲಿ ವ್ಯವಸ್ಥಿತವಾಗಿ ವಿನಿಯೋಗಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

**೫) ಸತ್ರದಲ್ಲಿ ಸೂಕ್ತವಾಕದ ಊಹ ಹೇಗೆ? [ಜೈ.ಸೂ.9.1]**

ಸತ್ರಯಾಗದಲ್ಲಿ ಋತ್ವಿಜರೆಲ್ಲರೂ ಯಜಮಾನರೇ. ಅಲ್ಲಿ ಸೂಕ್ತವಾಕವನ್ನು ಪಠಿಸುವಾಗ

**'ಆಶಾಸ್ತೇ ಅಯಂ ಯಜಮಾನಃ'** ಎಂಬ ಸೂಕ್ತವಾಕಭಾಗವನ್ನು ಬಹುವಚನಾಂತವಾಗಿ ಊಹ ಮಾಡಬೇಕೆ? ಮಾಡಬೇಡವೇ? ಇದು ಇಲ್ಲಿನ **ಸಂಶಯ.**

ಇಡೋಪಾಹ್ವಾನದಲ್ಲಿ **'ಯಜ್ಞಪತಿಂ ವರ್ಧಾನ್'** ಎನ್ನುವಾಗ ಊಹವಿಲ್ಲದಿರುವಂತೆಯೇ ಈ ಸೂಕ್ತವಾಕದಲ್ಲಿಯೂ ಊಹವಿಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

ಇಡೋಪಾಹ್ವಾನದಲ್ಲಿ ಇಡೋಪಾಹ್ವಾನವೇ ಪ್ರಧಾನವಾದುದು.ಅದರಲ್ಲಿ **'ಯಜ್ಞಪತಿ'** ಎಂಬ ಶಬ್ದವು ಒಂದೆಡೆ ಅಮುಖ್ಯವಾಗಿ ಬಂದಿದೆ. ಈ ಸೂಕ್ತವಾಕದಲ್ಲಿಯಾದರೋ ಫಲಾಶಂಸನೆಯು ಮುಖ್ಯ. ಸತ್ರಯಾಗವನ್ನು ಅನುಷ್ಠಿಸುವ ಯಜಮಾನರೆಲ್ಲರೂ ಫಲವನ್ನು ಬಯಸುವವರೇ ಆಗಿದ್ದಾರೆ. ಹೀಗಾಗಿ ಸೂಕ್ತವಾಕದಲ್ಲಿ **'ಆಶಾಸ್ತೇ ಅಯಮ್'** ಎಂಬಲ್ಲಿ ಬಹುವಚನಾಂತವಾಗಿ ಊಹವನ್ನು ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

**೬) ಸತ್ರದಲ್ಲಿ ಯಜಮಾನನು ಮರಣ ಹೊಂದಿದರೆ ಅನುಷ್ಠಾನ ಹೇಗೆ? [ಜೈ.ಸೂ.10.2]**

ಸತ್ರಯಾಗವನ್ನು ಅನುಷ್ಠಿಸುವ ಸಮಯದಲ್ಲಿ ಯಜಮಾನರಲ್ಲಿ ಯಾರಾದರೂ ಮೃತಿ ಹೊಂದಿದರೆ ಅವರ ಸಂಬಂಧಿಗಳಲ್ಲಿ ಯಾರನ್ನಾದರೂ ವರಣ ಮಾಡಿ ಯಾಗವನ್ನು ಮುಗಿಸಬೇಕು. ಅನಂತರ ಆ ಮೃತನ ಅಸ್ಥಿಗಳನ್ನು ಯಜಮಾನನ ಸ್ಥಾನದಲ್ಲಿ ಇಟ್ಟುಕೊಂಡು ಬೇರೊಂದು ಯಾಗವನ್ನು ಅನುಷ್ಠಿಸಬೇಕು.ಆ ರೀತಿ ಅನುಷ್ಠಿಸುವ ಯಾಗದಲ್ಲಿನ ಸೂಕ್ತವಾಕ ಪ್ರಹರಣದಲ್ಲಿ ಅಸ್ಥಿಗಳಿಗೆ ಆಯುರಾದಿಕಾಮನೆಗಳು ಇಲ್ಲದಿರುವುದರಿಂದ ಆ ಮಂತ್ರಗಳಿಗೆ ಪಾಠವಿರುವುದಿಲ್ಲ ಅವುಗಳಿಗೆ ಲೋಪವೇ ಬರುತ್ತದೆ. ಇದು ಇಲ್ಲಿನ **ಸಿದ್ಧಾಂತ.**

**೭) ಮರಣಕಾಮನೆಯಿಂದ ಅನುಷ್ಠಿಸುವ ಯಾಗದಲ್ಲಿ ಸೂಕ್ತವಾಕದ ಪಾಠವು ಹೇಗೆ? [ಜೈ.ಸೂ.10.2]**

ಮರಣಕಾಮನೆಯಿಂದ ಸರ್ವಸ್ವಾರಯಾಗವನ್ನು ಅನುಷ್ಠಿಸುವ ಸಮಯದಲ್ಲಿ ಸೂಕ್ತವಾಕದಲ್ಲಿ **'ಆಯುರಾಶಾಸ್ತೇ'** ಎಂಬುದನ್ನು ಹೇಳಬೇಕೇ? ಇದು ಇಲ್ಲಿನ **ಸಂಶಯ.**

ಯಜಮಾನನಿಗೆ ಆಯುಸ್ಸಿನ ಬಯಕೆಯೇ ಇಲ್ಲವಾದುದರಿಂದ ಪಾಠ ಮಾಡಬೇಕಾಗಿಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

ಸರ್ವಸ್ವಾರಯಾಗದಲ್ಲಿ ಆರ್ಭವಪವಮಾನಸ್ತೋತ್ರಕಾಲವು ಯಜಮಾನನ ಮರಣಕಾಲ. ಅಲ್ಲಿಯವರೆವಿಗೂ ಯಜಮಾನನು ಬದುಕಿರಬೇಕಷ್ಟೇ. ಅದುದರಿಂದ ಮೊದಲ ಸೂಕ್ತವಾಕ ಪಾಠಕಾಲದಲ್ಲಿ ಹೋತೃವು **'ಆಯುರಾಶಾಸ್ತೇ'** ಎಂಬುದನ್ನು ಹೇಳಬೇಕು. ಇದು ಇಲ್ಲಿನ **ಸಿದ್ಧಾಂತ.**

## ॥ ದಶಮೋಽನುವಾಕಃ ॥

ದೇವಾ ವೈ ಯಜ್ಞಸ್ಯ ಸ್ವಗಾಕರ್ತಾರಂ ನಾವಿಂದಂತೇ ಶಂಯುಂ
ಬಾರ್ಹಸ್ಪತ್ಯಮಬ್ರುವನ್ನಿಮಂ ನೋ ಯಜ್ಞಗ್ಂ ಸ್ವಗಾ ಕುರ್ವಿತಿ

---

ದೇವಾಃ । ವೈ । ಯಜ್ಞಸ್ಯ । ಸ್ವಗಾಕರ್ತಾರಮಿತಿ ಸ್ವಗಾ-ಕರ್ತಾರಮ್ । ನ । ಅವಿಂದನ್ನ್ । ತೇ । ಶಂಯುಮಿತಿ ಶಂ-ಯುಮ್ । ಬಾರ್ಹಸ್ಪತ್ಯಮ್ । ಅಬ್ರುವನ್ನ್ । ಇಮಮ್ । ನಃ । ಯಜ್ಞಮ್ । ಸ್ವಗೇತಿ ಸ್ವ-ಗಾ । ಕುರು । ಇತಿ ।

---

ಒಂಬತ್ತನೆಯ ಅನುವಾಕದಲ್ಲಿ ಅನೂಯಾಜಗಳೂ, ಸೂಕ್ತವಾಕಮಂತ್ರಗಳೂ ವಿವರಿಸಲ್ಪಟ್ಟವು. ಈ ಹತ್ತನೆಯ ಅನುವಾಕದಲ್ಲಿ ಶಂಯುವಾಕ, ಪತ್ನೀಸಂಯಾಜಗಳು ಹೇಳಲ್ಪಡುತ್ತವೆ.

### ಶಂಯುವಾಕಕ್ಕೆ ಸಂಬಂಧಿಸಿದ ಉಪಾಖ್ಯಾನ

| | |
|---|---|
| ದೇವಾಃ ವೈ ಯಜ್ಞಸ್ಯ ಸ್ವಗಾಕರ್ತಾರಮ್ ನ ಅವಿಂದನ್ | ದೇವತೆಗಳು ಮೊದಲು ಯಜ್ಞಗಳಲ್ಲಿ [ದೇವತೆಗಳಿಗೆ ಹವಿಸ್ಸನ್ನು ಸಮರ್ಪಿಸುವಾಗ] ಅವರವರಿಗೇ ವ್ಯವಸ್ಥಿತವಾಗಿ ದೊರಕುವಂತೆ ಮಾಡುವ ಸಮರ್ಥನನ್ನು ಹೊಂದಲಿಲ್ಲ. |
| ತೇ ಬಾರ್ಹಸ್ಪತ್ಯಮ್ ಶಂಯುಮ್ | ಆಗ ಅವರು ಬೃಹಸ್ಪತಿಯ ಪುತ್ರನಾದ ಶಂಯುವನ್ನು ಕಂಡು |
| ನಃ ಇಮಮ್ ಯಜ್ಞಮ್ ಸ್ವಗಾ ಕುರು ಇತಿ ಅಬ್ರುವನ್ | [ನಮ್ಮ ಈ ಯಜ್ಞವನ್ನು] 'ಯಜ್ಞದ ಹವಿಸ್ಸುಗಳನ್ನು ನಮಗೆ ವ್ಯವಸ್ಥಿತವಾಗಿ ವಿಭಾಗಿಸಿ ಕೊಡು' ಎಂದರು. |

---

ಶಂಯುವಾಕಪಾಠಕ್ಕೆ ಸಂಬಂಧಿಸಿದ ಉಪಾಖ್ಯಾನವಿದಾಗಿದೆ. ದೇವತೆಗಳು ಯಾಗದಲ್ಲಿ

ಸೋಽಬ್ರವೀದ್ವರಂ ವೃಣೈ ಯದೇವಾ

ಬ್ರಾಹ್ಮಣೋಕ್ತೋಽಶ್ರದ್ದಧಾನೋ ಯಜಾತೈ ಸಾ ಮೇ

ಯಜ್ಞಸ್ಯಾಶೀರಸದಿತಿ

---

ಸಃ । ಅಬ್ರವೀತ್ । ವರಮ್ । ವೃಣೈ । ಯತ್ । ಏವ । ಅಬ್ರಾಹ್ಮಣೋಕ್ತ ಇತ್ಯಬ್ರಾಹ್ಮಣ-ಉಕ್ತಃ । ಅಶ್ರದ್ದಧಾನ ಇತ್ಯಶ್ರತ್-ದಧಾನಃ । ಯಜಾತೈ । ಸಾ । ಮೇ । ಯಜ್ಞಸ್ಯ । ಆಶೀರಿತ್ಯಾ-ಶೀಃ । ಅಸತ್ । ಇತಿ ।

---

| | |
|---|---|
| ಸಃ ಯತ್ ಏವ | ಆ ಶಂಯುವು 'ಬ್ರಾಹ್ಮಣರಿಂದ ಯಾಗವನ್ನು ಮಾಡು' |
| ಅಬ್ರಾಹ್ಮಣೋಕ್ತಃ | ಎಂದು ಹೇಳಲ್ಪಡದವನಾಗಿ/ಬ್ರಾಹ್ಮಣಗಳಿಂದ ವಿಹಿತವಾಗದೇ ಇರುವವನಾಗಿಯೂ |
| ಅಶ್ರದ್ದಧಾನಃ | *ಶ್ರದ್ಧೆಯಿಲ್ಲದವನಾಗಿ/ತೋರಿಕೆಗಾಗಿ |
| ಯಜಾತೈ | ಯಾಗವನ್ನು ಅನುಷ್ಠಿಸುವನೋ |
| ಯಜ್ಞಸ್ಯ ಸಾ ಆಶೀಃ ಮೇ ಅಸತ್ | ಆ ಯಜ್ಞದ ಆಶಂಸಿಸಲ್ಪಡುವ ಫಲವು ನನಗೆ ಲಭಿಸಲಿ' |
| 'ವರಮ್ ವೃಣೈ' ಇತಿ ಅಬ್ರವೀತ್ | ಎಂಬ ವರವನ್ನು ನಾನು ಕೋರುವೆನು' ಎಂದನು. [ದೇವತೆಗಳು ಅಂಗೀಕರಿಸಿದರು] |

---

ಸಮರ್ಪಿಸಿದ ಹವಿಸ್ಸನ್ನು ಸಾಂಕರ್ಯವಿಲ್ಲದೆ ಆಯಾ ದೇವತೆಗಳಿಗೆ ತಲುಪಿಸಲು ಶಂಯುವನ್ನು ಕೋರಿದರು. ಅವನು ವರವನ್ನು ಬೇಡಿದನು.

---

* **ಫಲಾವಶ್ಯಂಭಾವನಿಶ್ಚಯಃ ಶ್ರದ್ಧಾ** । ಕರ್ಮದ ಫಲವು ಅವಶ್ಯ ಲಭಿಸುವುದೆಂಬ ನಿಶ್ಚಯವೇ ಶ್ರದ್ಧೆ.

ತಸ್ಮಾದ್ಯದಬ್ರಾಹ್ಮಣೋಕ್ತೋಽಶ್ರದ್ದಧಾನೋ ಯಜತೇ ಶಂಯು

ಮೇವ ತಸ್ಯ ಬಾರ್ಹಸ್ಪತ್ಯಂ ಯಜ್ಞಸ್ಯಾಶೀರ್ಗಚ್ಛತ್ಯೇತನ್ಮಮೇತ್ಯ

ಬ್ರವೀತ್ಕಿಂ ಮೇ ಪ್ರಜಾಯಾ [..ಜಾಯಾಃ(೧)ಇತಿ..] ಇತಿ

---

ತಸ್ಮಾತ್ । ಯತ್ । ಅಬ್ರಾಹ್ಮಣೋಕ್ತ ಇತ್ಯಬ್ರಾಹ್ಮಣ-ಉಕ್ತಃ । ಅಶ್ರದ್ದಧಾನ ಇತ್ಯಶ್ರತ್-ದಧಾನಃ । ಯಜತೇ । ಶಂಯುಮಿತಿ ಶಂ-ಯುಮ್ । ಏವ । ತಸ್ಯ । ಬಾರ್ಹಸ್ಪತ್ಯಮ್ । ಯಜ್ಞಸ್ಯ । ಆಶೀರಿತ್ಯಾ-ಶೀಃ । ಗಚ್ಛತಿ । ಏತತ್ । ಮಮ । ಇತಿ । ಅಬ್ರವೀತ್ । ಕಿಮ್ । ಮೇ । ಪ್ರಜಾಯಾ ಇತಿ ಪ್ರ-ಜಾಯಾಃ । (೧) । ಇತಿ ।

---

| | |
|---|---|
| ತಸ್ಮಾತ್ ಯತ್ | ಆದುದರಿಂದ ಬ್ರಾಹ್ಮಣಾನುಮತಿ ಇಲ್ಲದವನಾಗಿ/ |
| ಅಬ್ರಾಹ್ಮಣೋಕ್ತಃ ಅಶ್ರದ್ದಧಾನಃ | ಬ್ರಾಹ್ಮಣವಾಕ್ಯವಿಹಿತವಲ್ಲದವನಾಗಿ ಶ್ರದ್ಧಾರಹಿತ |
| ಯಜತೇ | ನಾಗಿಯಾರು ಯಾಗಾನುಷ್ಠಾನವನ್ನು ಮಾಡುತ್ತಾ |
| ತಸ್ಯ ಯಜ್ಞಸ್ಯ ಆಶೀಃ | ನೆಯೋ |
| ಬಾರ್ಹಸ್ಪತ್ಯಮ್ ಶಂಯುಮ್ | ಆ ಯಾಗದ ಅಪೇಕ್ಷಿತವಾದ ಫಲವು |
| ಏವ ಗಚ್ಛತಿ | ಬೃಹಸ್ಪತಿಯ ಪುತ್ರನಾದ ಶಂಯುವನ್ನೇ ಸೇರುತ್ತದೆ. |

### ಶಂಯುವು ತನ್ನ ಪುತ್ರರಿಗಾಗಿ ಕೇಳುವ ವರ

| | |
|---|---|
| ಏತತ್ ಮಮ ಇತಿ ಮೇ | [ಬಳಿಕ ಶಂಯುವು]ಈ ವರವು ನನಗಾಯಿತೆಂದೂ |
| ಪ್ರಜಾಯಾಃ ಕಿಮ್ ಇತಿ | ನನ್ನ ಮಕ್ಕಳಿಗೆ ಲಭಿಸುವುದೇನೆಂಬುದಾಗಿಯೂ |
| ಅಬ್ರವೀತ್ | ಕೇಳಿದನು. **[ಶಂಯುವಿನ ಸಂತತಿ ಎಂದರೆ ಬ್ರಾಹ್ಮಣರು]** |

---

ಹೀಗಾಗಿ ಬ್ರಾಹ್ಮಣೋಕ್ತನಲ್ಲದವನು ಶ್ರದ್ಧೆಯಿಲ್ಲದೆ ಯಾಗವನ್ನು ಅನುಷ್ಠಿಸಿದರೆ ಆ ಯಾಗದ ಫಲವು ಶಂಯುವನ್ನು ಸೇರುತ್ತದೆ.

ಯೋಽಪಗುರಾತೈ ಶತೇನ ಯಾತಯಾದ್ಯೋ ನಿಹನಥ್ಸಹಸ್ರೇಣ ಯಾತಯಾದ್ಯೋ ಲೋಹಿತಂ ಕರವದ್ಯಾವತಃ ಪ್ರಸ್ಕದ್ಯ ಪಾಗ್ಂಸೂನ್ಥ್ಸಂಗೃಹ್ಣಾ–

---

ಯಃ । ಅಪಗುರಾತಾ ಇತ್ಯಪ–ಗುರಾತೈ । ಶತೇನ । ಯಾತಯಾತ್ । ಯಃ । ನಿಹನದಿತಿ ನಿ–ಹನತ್ । ಸಹಸ್ರೇಣ । ಯಾತಯಾತ್ । ಯಃ । ಲೋಹಿತಮ್ । ಕರವತ್ । ಯಾವತಃ । ಪ್ರಸ್ಕದ್ಯೇತಿ ಪ್ರ–ಸ್ಕದ್ಯ । ಪಾಗ್ಂಸೂನ್ । ಸಂಗೃಹ್ಣಾದಿತಿ ಸಂ–ಗೃಹ್ಣಾತ್ ।

---

| | |
|---|---|
| ಯಃ ಅಪಗುರಾತೈ | [ಆಗ ದೇವತೆಗಳು] ಯಾವನು ಬ್ರಾಹ್ಮಣನನ್ನು ಹೊಡೆಯಲು ಯತ್ನಿಸುವನೋ/ಕಠಿಣವಾದ ಮಾತುಗಳಿಂದ ನಿಂದಿಸುವನೋ |
| [ತಮ್] ಶತೇನ ಯಾತಯಾತ್ | ಅವನನ್ನು ರಾಜನು ನೂರು ಚಿನ್ನದ ನಾಣ್ಯಗಳಿಂದ ದಂಡಿಸಬೇಕು. |
| ಯಃ ನಿಹನತ್ | ಯಾವನು ಬ್ರಾಹ್ಮಣನನ್ನು ಹೊಡೆಯುತ್ತಾನೆಯೋ |
| ಸಹಸ್ರೇಣ ಯಾತಯಾತ್ | ಅವನನ್ನು ಸಾವಿರ ನಾಣ್ಯಗಳಿಂದ ದಂಡಿಸಬೇಕು. |
| ಯಃ ಲೋಹಿತಮ್ ಕರವತ್ | ಯಾವನು ಬ್ರಾಹ್ಮಣನ ರಕ್ತವನ್ನು ಬೀಳುವಂತೆ ಮಾಡುತ್ತಾನೆಯೋ |
| ಪ್ರಸ್ಕದ್ಯ ಯಾವತಃ ಪಾಗ್ಂಸೂನ್ ಸಂಗೃಹ್ಣಾತ್ | ಆ ಬ್ರಾಹ್ಮಣನ ರಕ್ತವು ಕೆಳಗೆ ಬಿದ್ದು ಭೂಮಿಯ ಎಷ್ಟು ಕಣಗಳನ್ನು ನೆನೆಸುತ್ತದೆಯೋ |

---

ಹೀಗಾಗಿ ಶಾಸ್ತ್ರಾನುಗುಣವಾಗಿ, ಶ್ರದ್ಧೆಯಿಂದ ಮಾಡಿದ ಯಾಗವೇ ಫಲಪ್ರದ. ಹಾಗಿಲ್ಲದಿದ್ದರೆ ಅದು ವ್ಯರ್ಥವಾಗುತ್ತದೆ.ವಿಹಿತವಾದುದನ್ನು,ಶ್ರದ್ಧೆಯಿಂದ ಕೂಡಿ ಅನುಷ್ಠಿಸಬೇಕೆಂಬುದು ಇಲ್ಲಿನ ತಾತ್ಪರ್ಯ.

ತ್ತಾವತಸ್ಸಂವಥ್ಸರಾನ್ಪಿತೃಲೋಕಂ ನ ಪ್ರಜಾನಾದಿತಿ ತಸ್ಮಾದ್ಬ್ರಾಹ್ಮ

ಣಾಯ ನಾಪಗುರೇತ ನ ನಿ ಹನ್ಯಾನ್ನ ಲೋಹಿತಂ ಕುರ್ಯಾದೇ

ತಾವತಾ ಹೈನಸಾ ಭವತಿ ತಚ್ಛಂಯೋರಾ ವೃಣೀಮಹ ಇತ್ಯಾಹ

---

ತಾವತಃ । ಸಂವತ್ಸರಾನಿತಿ ಸಂ-ವತ್ಸರಾನ್ । ಪಿತೃಲೋಕಮಿತಿ ಪಿತೃ-ಲೋಕಮ್ । ನ। ಪ್ರೇತಿ । ಜಾನಾತ್ । ಇತಿ । ತಸ್ಮಾತ್ । ಬ್ರಾಹ್ಮಣಾಯ । ನ । ಅಪೇತಿ । ಗುರೇತ । ನ। ನೀತಿ । ಹನ್ಯಾತ್ । ನ । ಲೋಹಿತಮ್ । ಕುರ್ಯಾತ್ । ಏತಾವತಾ । ಹ । ಏನಸಾ । ಭವತಿ । ತತ್ । ಶಂಯೋರಿತಿ ಶಂ-ಯೋಃ । ಏತಿ । ವೃಣೀಮಹೇ । ಇತಿ । ಆಹ ।

---

| | |
|---|---|
| ತಾವತಃ ಸಂವತ್ಸರಾನ್ ಪಿತೃ-ಲೋಕಮ್ ನ ಪ್ರಜಾನಾತ್ ಇತಿ | ಅಷ್ಟು ಸಂವತ್ಸರಗಳ ಕಾಲ ಪಿತೃಲೋಕವನ್ನು ಹೊಂದುವುದಿಲ್ಲ/ಯಮಯಾತನೆಯನ್ನು ಅನುಭವಿಸುವನು ಎಂದು ಹೇಳಿದರು. |
| ತಸ್ಮಾತ್ ಬ್ರಾಹ್ಮಣಾಯ ನ ಅಪಗುರೇತ | ಅದುದರಿಂದ ಬ್ರಾಹ್ಮಣನಿಗೆ ಹೊಡೆಯಲು ಯತ್ನಿಸಬಾರದು/ಕೆಟ್ಟ ಮಾತುಗಳಿಂದ ನೋಯಿಸಬಾರದು. |
| ನ ನಿಹನ್ಯಾತ್ ನ ಲೋಹಿತಮ್ ಕುರ್ಯಾತ್ ಏತಾವತಾ ಏನಸಾ ಭವತಿ ಹ | ಹೊಡೆಯಬಾರದು.ಬ್ರಾಹ್ಮಣನ ರಕ್ತವು ಬೀಳುವಂತೆ ಮಾಡಬಾರದು. ಹೀಗೆ ಮಾಡಿದರೆ ಇಷ್ಟು ಪಾಪಗಳಿಂದ ಯುಕ್ತನಾಗುತ್ತಾನೆ. |

**ಶಂಯುವಾಕವಿಧಿ; ಅರ್ಥವಾದ**

| | |
|---|---|
| ತತ್ ಶಂಯೋಃ ಆ ವೃಣೀಮಹೇ ಇತಿ ಆಹ | 'ಆ ಪ್ರಶಸ್ತವಾದ ಫಲವನ್ನು ಶಂಯುವಿನ ದೆಸೆಯಿಂದ ನಾವು ಪ್ರಾರ್ಥಿಸುತ್ತೇವೆ.' ಎಂದು ಮಂತ್ರವು ಹೇಳುತ್ತದೆ. |

ಯಜ್ಞಮೇವ ತಥ್ಸ್ವಗಾ ಕರೋತಿ ತ[ತತ್(೨)ಶಂಯೋ]ಚ್ಛಂಯೋರಾ
ವೃಣೀಮಹ ಇತ್ಯಾಹ ಶಂಯುಮೇವ ಬಾರ್ಹಸ್ಪತ್ಯಂ ಭಾಗಧೇಯೇನ
ಸಮರ್ಧಯತಿ ಗಾತುಂ ಯಜ್ಞಾಯ ಗಾತುಂ ಯಜ್ಞಪತಯ ಇತ್ಯಾ

---

ಯಜ್ಞಮ್ । ಏವ । ತತ್ । ಸ್ವಗೇತಿ ಸ್ವ-ಗಾ । ಕರೋತಿ । ತತ್ । (೨) । ಶಂಯೋರಿತಿ ಶಂ-ಯೋಃ । ಆ । ವೃಣೀಮಹೇ । ಇತಿ । ಆಹ । ಶಂಯುಮಿತಿ ಶಂ-ಯುಮ್ । ಏವ । ಬಾರ್ಹಸ್ಪತ್ಯಮ್ । ಭಾಗಧೇಯೇನೇತಿ ಭಾಗ-ಧೇಯೇನ । ಸಮಿತಿ । ಅರ್ಧಯತಿ । ಗಾತುಮ್ । ಯಜ್ಞಾಯ । ಗಾತುಮ್ । ಯಜ್ಞಪತಯ ಇತಿ ಯಜ್ಞ-ಪತಯೇ । ಇತಿ ।

---

| | |
|---|---|
| ತತ್ ಯಜ್ಞಮ್ ಸ್ವಗಾ ಕರೋತಿ ಏವ | ಅದು ಯಜ್ಞವನ್ನು ವ್ಯವಸ್ಥಿತವನ್ನಾಗಿ ಮಾಡುತ್ತದೆ. |
| ಶಂಯೋಃ ತತ್ ಆ ವೃಣೀಮಹೇ ಇತಿ ಆಹ | ಶಂಯುವಿನಿಂದ ಆ ಪ್ರಶಸ್ತಫಲವನ್ನು ಪ್ರಾರ್ಥಿಸುತ್ತೇವೆಂದು ಈ ಮಂತ್ರವು ಹೇಳುತ್ತದೆ. |
| ಬಾರ್ಹಸ್ಪತ್ಯಮ್ ಶಂಯುಮ್ ಭಾಗಧೇಯೇನ ಸಮರ್ಧಯತಿ ಏವ | ಕೊಡಬೇಕಾದ ಭಾಗವನ್ನಿತ್ತು ಬೃಹಸ್ಪತಿ ಪುತ್ರನಾದ ಶಂಯುವನ್ನೇ ಸಮೃದ್ಧನಾಗುವಂತೆ ಮಾಡುತ್ತಾನೆ. |

## ಶಂಯುವಾಕದ ಇನ್ನೊಂದು ಪ್ರಶಂಸೆ

| | |
|---|---|
| ಗಾತುಮ್ ಯಜ್ಞಾಯ ಗಾತುಮ್ ಯಜ್ಞಪತಯೇ ಇತಿ ಆಹ | ಯಜ್ಞವು/ಯಜ್ಞಭಾಗವು ದೇವತೆಗಳನ್ನು ಹೊಂದುವಂತೆ ಮಾಡಲು, ಯಜಮಾನನು ದೇವಲೋಕವನ್ನು ಪಡೆಯುವಂತೆ ಮಾಡಲು [ಶಂಯುವನ್ನು ಪ್ರಾರ್ಥಿಸುತ್ತೇವೆ] |

ಹಾಶಿಷಮೇವೈತಾಮಾಶಾಸ್ತೇ ಸೋಮಂ ಯಜತಿ ರೇತ ಏವ

ತದ್ದಧಾತಿ ತ್ವಷ್ಟಾರಂ ಯಜತಿ

---

ಆಹ । ಆಶಿಷಮಿತ್ಯಾ-ಶಿಷಮ್ । ಏವ । ಏತಾಮ್ । ಏತಿ । ಶಾಸ್ತೇ । ಸೋಮಮ್ ।

ಯಜತಿ । ರೇತಃ । ಏವ । ತತ್ । ದಧಾತಿ । ತ್ವಷ್ಟಾರಮ್ । ಯಜತಿ ।

---

| | |
|---|---|
| ಏತಾವ್ ಆಶಿಷವ್ ಏವ ಆಶಾಸ್ತೇ | ದ್ವಿಪಾದ,ಚತುಷ್ಪಾದಗಳೆಲ್ಲದಕ್ಕೂ ನಮಗೂ ಸ್ವಸ್ತಿಯುಂಟಾಗಲಿ ಮೊದಲಾದ ಶುಭಾಶಂಸೆಗಳನ್ನೇ ಇದರಿಂದ ಮಾಡುತ್ತಾನೆ. |

**ಪತ್ನೀಸಂಯಾಜವಿಧಿ; ಆದರ ಅರ್ಥವಾದ**

| | |
|---|---|
| ಸೋಮವ್ ಯಜತಿ | ಯಜಮಾನನು ಸೋಮದೇವನನ್ನು ಈ ಯಾಗದಿಂದ ತೃಪ್ತಿಪಡಿಸುತ್ತಾನೆ. |
| ತತ್ ರೇತಃ ಏವ ದಧಾತಿ | ಅದರಿಂದ[ತೃಪ್ತನಾದ]ಸೋಮದೇವನು ಪ್ರಜಾಸಾಧನವಾದ ರೇತಸ್ಸನ್ನು [ಯಜಮಾನನಲ್ಲಿ] ಉಂಟುಮಾಡುತ್ತಾನೆ. |
| ತ್ವಷ್ಟಾರಮ್ ಯಜತಿ | ತ್ವಷ್ಟೃದೇವನಿಗಾಗಿ ಯಾಗವನ್ನು ಅನುಷ್ಠಿಸುತ್ತಾನೆ. |

---

ಬ್ರಾಹ್ಮಣರು ಶಂಯುವಿನ ಪ್ರಜೆಗಳೆಂದು ಭಾವಿಸಿ ಶಂಯುವು ಈ ವರಗಳನ್ನು ಪಡೆದನೆನ್ನಬಹುದು. ಇದು ಶಂಯುವಾಕದ ಉಪೋದ್ಘಾತದಂತಿದೆ.

ಪ್ರಾಸಂಗಿಕವಾಗಿ ಬ್ರಾಹ್ಮಣನಿಗೆ ಹೀಗೆ ಮಾಡಬಾರದೆಂದು ಹೇಳಲಾಗಿದೆ.

**[ವಿಶೇಷವಿಷಯ: ಶತೇನ ಯಾತಯಾತ್ ಎಂಬಲ್ಲಿ 'ಶತೇನ' ಎಂಬ ಪದಕ್ಕೆ ಸಾಯಣಾಚಾರ್ಯರ ಮತ್ತು ಭಟ್ಟಭಾಸ್ಕರಮಿಶ್ರರ ಉಭಯಭಾಷ್ಯಗಳಲ್ಲಿಯೂ 'ಶತನಿಷ್ಕದಂಡನೆ' ಎಂದು ವಿವರಿಸಲಾಗಿದೆ.**

**'ನಿಷ್ಕ' ಎಂಬ ಶಬ್ದಕ್ಕೆ 'ಚಿನ್ನದ ನಾಣ್ಯ'ವೆಂಬ ಅರ್ಥವನ್ನು ಇಲ್ಲಿ ನೀಡಿದೆ. 'ಸಾಷ್ಟೇ ಶತೇ ಸುವರ್ಣಾನಾಂ ಹೇಮ್ನ್ಯುರೋಭೂಷಣೇ ಪಲೇ । ದೀನಾರೇಽಪಿ ಚ ನಿಷ್ಕೋಽಸ್ತ್ರೀ' ಎಂಬ ಕೋಶವಚನದಂತೆ ಆ ಅರ್ಥವನ್ನು ನೀಡಿದೆ]**

ರೇತ ಏವ ಹಿತಂ ತ್ವಷ್ಟಾ ರೂಪಾಣಿ ವಿ ಕರೋತಿ ದೇವಾನಾಂ ಪತ್ನೀರ್ಯಜತಿ ಮಿಥುನತ್ವಾಯಾಗ್ನಿಂ ಗೃಹಪತಿಂ ಯಜತಿ ಪ್ರತಿಷ್ಠಿತ್ಯೈ

---

ರೇತಃ । ಏವ । ಹಿತಮ್ । ತ್ವಷ್ಟಾ । ರೂಪಾಣಿ । ವೀತಿ । ಕರೋತಿ । ದೇವಾನಾಮ್ । ಪತ್ನೀಃ । ಯಜತಿ । ಮಿಥುನತ್ವಾಯೇತಿ ಮಿಥುನ-ತ್ವಾಯ । ಅಗ್ನಿಮ್ । ಗೃಹಪತಿಮಿತಿ ಗೃಹ-ಪತಿಮ್ । ಯಜತಿ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ।

---

| | |
|---|---|
| ತ್ವಷ್ಟಾ ಏವ ಹಿತಮ್ ರೇತಃ ರೂಪಾಣಿ ವಿಕರೋತಿ | ತೃಪ್ತನಾದ ತ್ವಷ್ಟೃದೇವನು ಇಡಲ್ಪಟ್ಟ ರೇತಸ್ಸು ತಕ್ಕ ರೂಪಗಳನ್ನು ಹೊಂದುವಂತೆ ಮಾಡುತ್ತಾನೆ. |
| ಮಿಥುನತ್ವಾಯ ದೇವಾನಾಮ್ ಪತ್ನೀಃ ಯಜತಿ | ಅನುಕೂಲವಾದ ಸ್ತ್ರೀಪುರುಷರ ಯುಗ್ಮಸಂಪತ್ತಿಗಾಗಿ ದೇವಪತ್ನಿಯರಿಗಾಗಿ ಹೋಮವನ್ನು ಮಾಡುತ್ತಾನೆ. |
| ಪ್ರತಿಷ್ಠಿತ್ಯೈ ಅಗ್ನಿಮ್ ಗೃಹಪತಿಮ್ ಯಜತಿ | ಈ ಲೋಕದಲ್ಲಿ ಒಳ್ಳೆಯ ಸ್ಥಿತಿಯಲ್ಲಿ ಬಾಳುವುದಕ್ಕಾಗಿ ಗೃಹಪತಿಯಾದ ಅಗ್ನಿಯನ್ನು ಕುರಿತು ಯಾಗವನ್ನು ಅನುಷ್ಠಿಸುತ್ತಾನೆ. |

---

**'ಯದಾ ಜಾನಾತಿ ಶಂಯೋರ್ಬ್ರೂಹೀತಿ ತಚ್ಛಂಯುವಾಕಮಂತ್ರಾನಾಹ ತಚ್ಛಂಯೋರಾ ವೃಣೀಮಹ ಇತ್ಯಂತಾದನುವಾಕಸ್ಯ'** ಎಂದು ಬೌಧಾಯನರು ವಿನಿಯೋಗವನ್ನು ಹೇಳಿರುತ್ತಾರೆ.

ಇಲ್ಲಿ ಶಂಯುವಾಕದ ಪ್ರಶಂಸೆಯನ್ನು ಎರಡು ರೀತಿಯಾಗಿ ಮಾಡಿರುತ್ತಾರೆ. ಶಂಯುವನ್ನು ಪ್ರಾರ್ಥಿಸುತ್ತೇವೆ ಎಂದು ಮಂತ್ರದ ಅರ್ಥವಿದೆ. ಹೀಗೆ ಹೇಳುವುದರಿಂದ ಆಯಾ ದೇವತೆಗಳ ಹವಿರ್ಭಾಗವು ಸುವ್ಯವಸ್ಥಿತವಾಗಿ ಆಯಾ ದೇವತೆಗಳಿಗೆ ಲಭಿಸುತ್ತದೆ.

ಜಾಮಿ ವಾ ಏತದ್ಯಜ್ಞಸ್ಯ ಕ್ರಿಯತೇ [..ಯತೇ(೩)ಯದಾಜ್ಯೇ..]

ಯದಾಜ್ಯೇನ ಪ್ರಯಾಜಾ ಇಜ್ಯಂತ ಆಜ್ಯೇನ ಪತ್ನೀಸಂಯಾಜಾ

---

ಜಾಮಿ । ವೈ । ಏತತ್ । ಯಜ್ಞಸ್ಯ । ಕ್ರಿಯತೇ । (೩) । ಯತ್ । ಆಜ್ಯೇನ । ಪ್ರಯಾಜಾ ಇತಿ ಪ್ರ-ಯಾಜಾಃ । ಇಜ್ಯಂತೇ । ಆಜ್ಯೇನ । ಪತ್ನೀಸಂಯಾಜಾ ಇತಿ ಪತ್ನೀ-ಸಂಯಾಜಾಃ ।

---

**ಪತ್ನೀಸಂಯಾಜಗಳಿಗೆ ಯಾಜ್ಯಾ-ಪುರೋನುವಾಕ್ಯೆಯ ವಿಧಿ; ಪ್ರಶಂಸೆ**

| | |
|---|---|
| ಯತ್ ಆಜ್ಯೇನ ಪ್ರಯಾಜಾಃ | ಆಜ್ಯಹವಿಸ್ಸಿನಿಂದ ಪ್ರಯಾಜಹೋಮಗಳನ್ನು |
| ಇಜ್ಯಂತೇ | ಮಾಡುವುದು ಯಾವುದುಂಟೋ |
| ಆಜ್ಯೇನ ಪತ್ನೀಸಂಯಾಜಾಃ | ಆಜ್ಯದಿಂದಲೇ ಪತ್ನೀಸಂಯಾಜಗಳನ್ನೂ ಅನು |
| ಇಜ್ಯಂತೇ **[ಯತ್]** | ಷ್ಠಿಸುವುದು ಯಾವುದುಂಟೋ |
| ಏತತ್ ಯಜ್ಞಸ್ಯ ಜಾಮಿ | ಇದು [ಈ ವಿಧವಾದ ಹವಿಃಸಾಮ್ಯವು] ಯಜ್ಞ |
| ಕ್ರಿಯತೇ ವೈ | ದಲ್ಲಿ ಬೇಸರವನ್ನುಂಟುಮಾಡುತ್ತದೆಯಷ್ಟೆ. |

---

ಅಲ್ಲದೆ ಹೋತೃವು ಹೀಗೆ ಹೇಳುವುದರಿಂದ ಬೃಹಸ್ಪತಿಯ ಪುತ್ರನಾದ ಶಂಯುವು ಅವನ ಭಾಗದಿಂದ ಸಮೃದ್ಧನಾಗುತ್ತಾನೆ.

ಹೀಗಾಗಿ ಶಂಯುವಾಕಪಾಠವು ಪ್ರಶಸ್ತವಾದುದು. ಅಲ್ಲದೆ ಯಜಮಾನನು ದೇವಲೋಕವನ್ನು ಪಡೆಯುವಂತೆ ಮಾಡಲು ಎರಡು ಕಾಲಿನ ಹಾಗೂ ನಾಲ್ಕು ಕಾಲಿನ ಪ್ರಾಣಿಗಳಿಗೆ ಸ್ವಸ್ತಿಯುಂಟಾಗಲಿ ಎಂದು ಶುಭಾಶಂಸನೆಯನ್ನು ಮಾಡುತ್ತಾನೆ. **'ಚತ್ವಾರಃ ಪತ್ನೀಸಂಯಾಜಾಃ'** ಎಂಬ ವಚನದಂತೆ ಈ ಪತ್ನೀಸಂಯಾಜಗಳು ನಾಲ್ಕು. ಸೋಮ,ತ್ವಷ್ಟೃ,ದೇವಪತ್ನಿಯರು ಗೃಹಪತಿಯಾದ ಅಗ್ನಿ-ಇವರೇ ನಾಲ್ಕು ದೇವತೆಗಳು. ಅವರ ಅನುಗ್ರಹದಿಂದ ಯಜಮಾನನಿಗೆ ಪ್ರಜಾಸಂಪತ್ತ್ಯಾದಿಗಳು ಉಂಟಾಗುತ್ತವೆ.

ಋಚಮನೂಚ್ಯ ಪತ್ನೀಸಂಯಾಜಾನಾಮೃಚಾ ಯಜತ್ಯಜಾಮಿತ್ವಾ

ಯಾಥೋ ಮಿಥುನತ್ವಾಯ ಪಙ್ಕ್ತಿಪ್ರಾಯಣೋ ವೈ ಯಜ್ಞಃ

---

ಋಚಮ್ । ಅನೂಚ್ಯೇತ್ಯನು–ಉಚ್ಯ । ಪತ್ನೀಸಂಯಾಜಾನಾಮಿತಿ ಪತ್ನೀ–ಸಂಯಾಜಾನಾಮ್।

ಋಚಾ । ಯಜತಿ । ಅಜಾಮಿತ್ವಾಯೇತ್ಯಜಾಮಿ–ತ್ವಾಯ । ಅಥೋ ಇತಿ । ಮಿಥುನತ್ವಾಯೇತಿ

ಮಿಥುನ–ತ್ವಾಯ । ಪಙ್ಕ್ತಿಪ್ರಾಯಣ ಇತಿ ಪಙ್ಕ್ತಿ–ಪ್ರಾಯಣಃ । ವೈ । ಯಜ್ಞಃ ।

---

| | |
|---|---|
| ಪತ್ನೀಸಂಯಾಜಾನಾಮ್ ಋಚಮ್ ಅನೂಚ್ಯ ಋಚಾ ಯಜತಿ | [ಬೇಸರಪರಿಹಾರಕ್ಕಾಗಿ] ಪತ್ನೀಸಂಯಾಜದ ಪುರೋನುವಾಕ್ಯೆಗಳನ್ನು [ಋಕ್‌ಗಳನ್ನು] ಹೇಳಿ ಯಾಜ್ಯಾ ಮಂತ್ರಗಳಿಂದ ಹೋಮವನ್ನು ಮಾಡಬೇಕು. |
| ಅಜಾಮಿತ್ವಾಯ **[ಭವತಿ]** | [ಇದು ಮಂತ್ರಭೇದದಿಂದ] ಬೇಸರವನ್ನು ಪರಿಹರಿಸಲು ಕಾರಣವಾಗತ್ತದೆ. |

### ಮಂತ್ರಭೇದಕ್ಕೆ ಪ್ರಕಾರಾಂತರಪ್ರಶಂಸೆ

| | |
|---|---|
| ಅಥೋ ಮಿಥುನತ್ವಾಯ | ಅಲ್ಲದೆ [ಯಜುಸ್ಸುಗಳು ಮತ್ತು ಋಕ್‌ಗಳಿಂದ ಹೋಮವನ್ನು ಅನುಷ್ಠಿಸುವುದು] ಸ್ತ್ರೀಪುರುಷ ಮಿಥುನದಂತಾಗುವುದಕ್ಕೂ ನಿಮಿತ್ತವಾಗುತ್ತದೆ. |

### ಸಮಿಷ್ಟಯಜುರ್ವಿಧಿ; ಅರ್ಥವಾದ

| | |
|---|---|
| ಯಜ್ಞಃ ಪಙ್ಕ್ತಿಪ್ರಾಯಣಃ ವೈ | ಯಜ್ಞವು ಪಂಕ್ತಿಯಿಂದಲೇ* ಪ್ರಾರಂಭವಾಗುವುದಷ್ಟೆ/ಪಂಚಸಂಖ್ಯೆಯ ಪ್ರಯಾಜಗಳಿಂದ ಆರಂಭವಾಗುವುದು. |

---

*ಪಂಕ್ತಿ=ಪಂಚ=ಐದು ಸಂಖ್ಯೆ.

ಪಙ್ಕ್ತ್ಯುದಯನಃ ಪಂಚ ಪ್ರಯಾಜಾ ಇಜ್ಯಂತೇ ಚತ್ವಾರಃ

ಪತ್ನೀಸಂಯಾಜಾಸ್ಸಮಿಷ್ಟಯಜುಃ ಪಂಚಮಂ

---

ಪಙ್ಕ್ತ್ಯುದಯನ ಇತಿ ಪಙ್ಕ್ತಿ-ಉದಯನಃ । ಪಂಚ । ಪ್ರಯಾಜಾ ಇತಿ ಪ್ರ-ಯಾಜಾಃ । ಇಜ್ಯಂತೇ । ಚತ್ವಾರಃ । ಪತ್ನೀಸಂಯಾಜಾ ಇತಿ ಪತ್ನೀ-ಸಂಯಾಜಾಃ । ಸಮಿಷ್ಟಯಜುರಿತಿ ಸಮಿಷ್ಟ-ಯಜುಃ । ಪಂಚಮಮ್ ।

---

| | |
|---|---|
| ಪಙ್ಕ್ತ್ಯುದಯನಃ | ಪಂಚಸಂಖ್ಯೆಯ ಯಾಗಗಳಿಂದಲೇ ಮುಕ್ತಾಯ ವಾಗುತ್ತದೆ. |
| ಪಂಚ ಪ್ರಯಾಜಾಃ ಇಜ್ಯಂತೇ | ಆರಂಭದಲ್ಲಿ ಐದು ಪ್ರಯಾಜಯಾಗಗಳು ಮಾಡಲ್ಪಡುತ್ತದೆ. |
| ಚತ್ವಾರಃ ಪತ್ನೀಸಂಯಾಜಾಃ | ಪತ್ನೀಸಂಯಾಜಯಾಗಗಳು ನಾಲ್ಕು. |
| ಸಮಿಷ್ಟಯಜುಃ ಪಂಚಮಮ್* | ಸಮಿಷ್ಟಯಜುರ್ಯಾಗವು ಐದನೆಯದು [ಅನುಷ್ಠಿಸಲ್ಪಡುತ್ತದೆ.] |

---

ಪತ್ನೀಸಂಯಾಜಗಳಲ್ಲಿ ಯಾಜ್ಯಾ-ಪುರೋನುವಾಕ್ಯೆಧರ್ಮದಿಂದ ಯಾಗವನ್ನು ಅನುಷ್ಠಿಸಬೇಕು. ಏಕೆಂದರೆ ಹವಿಸ್ಸಾದ ಆಜ್ಯವು ಒಂದೇ ಆಗಿದ್ದರೂ ಪ್ರಯಾಜಗಳಲ್ಲಿ ಯಜುರ್ಮಂತ್ರಗಳಿಂದ ಹೋಮವೂ ಪತ್ನೀಸಂಯಾಜಗಳಲ್ಲಿ ಋಗ್ರೂಪವಾದ ಮಂತ್ರಗಳಿಂದ ಹೋಮವೂ ಆಗಿರುವುದರಿಂದ ಆಲಸ್ಯಪರಿಹಾರವಾಗುತ್ತದೆ. ಅವುಗಳೂ ಸಮಾನವಾಗಿದ್ದರೆ ಬೇಸರವಾದೀತು.

ಪತ್ನೀಸಂಯಾಜಗಳ ದೇವತೆಗಳ ಪೈಕಿ ಸೋಮದೇವನಿಗೆ **'ಆಪ್ಯಾಯಸ್ವ' 'ಸಂ ತೇ ಪಯಾಂಸಿ'** ಇವು ಮಂತ್ರಗಳು. **'ಇಹ ತ್ವಷ್ಟಾರಮ್' 'ತನ್ನಸ್ತುರೀಪಮ್'** ಇವು ತ್ವಷ್ಟೃಯಾಗದ ಯಾಜ್ಯಾ-ಪುರೋನುವಾಕ್ಯೆಗಳು. **'ದೇವಾನಾಂ ಪತ್ನೀಃ' 'ಉತಗ್ನಾ ವಿಯಂತು'** ಇವು ದೇವಪತ್ನೀಯಾಗದ ಮಂತ್ರಗಳು. **'ಅಗ್ನಿರ್ ಹೋತಾ' 'ವಯಮುತ್ವಾ ಗೃಹಪತೇ'** ಇವು

---

*ಇಲ್ಲಿ **'ಸಮಿಷ್ಟಯಜುರ್ಯಾಗಃ ಕರ್ತವ್ಯಃ'** ಎಂಬ ವಿಧಿಯನ್ನು ಕಲ್ಪಿಸಬೇಕು.**'ದೇವಾ ಗಾತುವಿದಃ'** ಎಂಬ ಮಂತ್ರದಿಂದ ಅನುಷ್ಠಿಸುವ ಯಾಗ ಸಮಿಷ್ಟಯಜುರ್ಯಾಗ.

ಪಙ್ಕ್ತಿಮೇವಾನು ಪ್ರಯಂತಿ ಪಙ್ಕ್ತಿಮನೂದ್ಯಂತಿ॥೬೦-10॥

[ಪ್ರಜಾಯಾಃ ಕರೋತಿ ತತ್ಕ್ರಿಯತೇ ತ್ರಯಸ್ತ್ರಿಗ್ಂಶಚ್ಚ॥]

---

ಪಙ್ಕ್ತಿಮ್ । ಏವ । ಅನ್ವಿತಿ । ಪ್ರಯಂತೀತಿ ಪ್ರ-ಯಂತಿ । ಪಙ್ಕ್ತಿಮ್ । ಅನು । ಉದಿತಿ । ಯಂತಿ ॥ 60 ॥

---

| | |
|---|---|
| ಪಙ್ಕ್ತಿಮ್ ಏವ ಅನುಪ್ರಯಂತಿ | [ಹೀಗೆ ಯಜಮಾನರೂ, ಋತ್ವಿಜರೂ] ಐದು ಸಂಖ್ಯೆಯ ಯಾಗದಿಂದಲೇ ಚೆನ್ನಾಗಿ ಉಪಕ್ರಮ ಮಾಡುತ್ತಾರೆ. |
| ಪಙ್ಕ್ತಿಮ್ ಅನೂದ್ಯಂತಿ | ಐದು ಸಂಖ್ಯೆಯ ಯಾಗಗಳಿಂದಲೇ ಯಾಗ ಸಮಾಪ್ತಿಯನ್ನೂ ಚೆನ್ನಾಗಿ ಮಾಡುತ್ತಾರೆ. |

---

ಅಗ್ನಿಗೃಹಪತಿಯಾಗದ ಮಂತ್ರಗಳು. ಇವು ತೈತ್ತಿರೀಯಬ್ರಾಹ್ಮಣದಲ್ಲಿ ಮೂರನೆಯ ಅಷ್ಟಕದ **'ಸತ್ಯಂ ಪ್ರಪದ್ಯೇ'** ಎಂಬ ಪ್ರಶ್ನೆಯಲ್ಲಿವೆ.

ಯಜ್ಞವು ಐದು ಸಂಖ್ಯೆಯ ಪ್ರಯಾಜಯಾಗದಿಂದ ಆರಂಭಗೊಳ್ಳುವುದು. ಹಾಗೆಯೇ ಐದು ಸಂಖ್ಯೆಯ ಯಾಗಗಳಿಂದಲೇ ಮುಕ್ತಾಯವಾಗುವುದು. ಅಂತೆಯೇ ಆರಂಭದಲ್ಲಿ ಐದು ಪ್ರಯಾಜಯಾಗಗಳು. ಅಂತ್ಯದಲ್ಲಿ ಸಮಿಷ್ಟಯಜುರ್ಯಾಗವೂ ನಾಲ್ಕು ಪತ್ನೀಸಂಯಾಜ ಯಾಗದೊಡನೆ ಸೇರುವುದರಿಂದ ಯಜಮಾನ ಹಾಗೂ ಋತ್ವಿಜರು ಐದು ಯಾಗಗಳಿಂದಲೇ ಚೆನ್ನಾಗಿ ಸಮಾಪ್ತಿಯನ್ನು ಮಾಡಿದಂತಹವರಾಗುತ್ತಾರೆ. ಈ ರೀತಿಯ ಸಂಖ್ಯಾಪ್ರಶಂಸೆಯು ಹಲವೆಡೆ ಬರುತ್ತದೆ.

* * *

# ಅನುವಾಕದ ವಿಶೇಷವಿಷಯಗಳು

## ೧) ಮೀಮಾಂಸಾ

### ೧) ಯೋ ಬ್ರಾಹ್ಮಣಾಯ...ನಾಪಗುರೇತ ಇವುಗಳ ಉದ್ದೇಶವೇನು?

**[ಜೈ.ಸೂ.3.4]**

ದರ್ಶ–ಪೂರ್ಣಮಾಸಪ್ರಕರಣದಲ್ಲಿ **'ಯೋ ಬ್ರಾಹ್ಮಣಾಯ ಅಪಗುರೇತ, ತಂ ಶತೇನ ಯಾತಯಾತ್, ತಸ್ಮಾದ್ಬ್ರಾಹ್ಮಣಾಯ ನಾಪಗುರೇತ'** ಎಂಬ ವಚನಗಳು ಬರುತ್ತವೆ. ಇವುಗಳು ಕ್ರತ್ವರ್ಥವಾಗಿ ಪಠಿತವಾಗಿವೆಯೇ? ಪುರುಷಾರ್ಥವಾಗಿ ಪಠಿತವಾಗಿವೆಯೇ? ಇದು ಇಲ್ಲಿನ **ಸಂಶಯ.**

ಈ ವಾಕ್ಯಗಳು ಕ್ರತುಪ್ರಕರಣದಲ್ಲಿ ಪಠಿತವಾಗಿರುವುದರಿಂದ ಇವುಗಳಿಗೆ ಕ್ರತ್ವರ್ಥವನ್ನು ಹೇಳುವುದು ಯುಕ್ತವೆಂದು ಇಲ್ಲಿನ **ಪೂರ್ವಪಕ್ಷ.**

ಈ ವಾಕ್ಯಗಳು ಕ್ರತ್ವರ್ಥವಾದರೆ–ಯಾಗದಿಂದ ಮಹಾಪೂರ್ವವು ಉಂಟಾಗುವುದಕ್ಕಾಗಿ ಅಂಗಗಳಿಗೆ ಅಂಗಾಪೂರ್ವವನ್ನು ಕಲ್ಪಿಸಿರುವುದರಿಂದ–ಇಲ್ಲಿಯೂ ಅವಾಂತರಾಪೂರ್ವವನ್ನು ಕಲ್ಪಿಸಬೇಕಾಗುತ್ತದೆ. ಇದು ಗೌರವವಾಗುತ್ತದೆ. ಹೀಗಾಗಿ ಪ್ರಕರಣದಿಂದ ಬೇರೆ ಮಾಡಿ ಈ ವಚನಗಳನ್ನು ಪುರುಷಾರ್ಥವೆಂದು ನಿರ್ಣಯಿಸುವುದು ಸೂಕ್ತ. ಕ್ರತ್ವರ್ಥವಾದರೆ ಅಪ ಗೋರಣವನ್ನು ಮಾಡಿದರೆ ಕ್ರತುವಿಗೆ ಪ್ರತ್ಯವಾಯವು ಉಂಟಾಗುತ್ತದೆ. ಪುರುಷಾರ್ಥವಾದರೆ ಅವುಗಳನ್ನು ಮಾಡಿದ ಪುರುಷನಿಗೆ ಪ್ರತ್ಯವಾಯವು ಬರುತ್ತದೆ. ಅವನು ಶಿಕ್ಷಾರ್ಹನಾಗುತ್ತಾನೆ. ಹೀಗಾಗಿ ಈ ವಚನಗಳು ಪುರುಷಾರ್ಥವಾಗಿರುತ್ತವೆ. ಇದು ಇಲ್ಲಿನ **ಸಿದ್ಧಾಂತ.**

### ೨) ಪತ್ನೀಸಂಯಾಜವು ಜಾಘನಿಗೆ ಸಂಸ್ಕಾರಕ್ಕಾಗಿಯೇ?

**[ಜೈ.ಸೂ.3.3.37]**

ದರ್ಶ–ಪೂರ್ಣಮಾಸಪ್ರಕರಣದಲ್ಲಿ **'ಜಾಘನ್ಯಾ ಪತ್ನೀಃ ಸಂಯಾಜಯಂತಿ'** **[ಆಪ.ಶ್ರೌ.ಸೂ.3.8.10]** ಎಂಬ ವಚನವಿದೆ. ದರ್ಶಪೂರ್ಣಮಾಸವು ಪಶುಯಾಗವಲ್ಲ. ಜಾಘನಿಯೆಂದರೆ ಪಶುಪುಚ್ಛ. ಆದುದರಿಂದ ಜಾಘನಿಗೆ ಸಂಸ್ಕಾರಕ್ಕಾಗಿ ಪಶುಯಾಗದಲ್ಲಿ ಪತ್ನೀಸಂಯಾಜಗಳನ್ನು ಅನುಷ್ಠಿಸಬೇಕೇ? ಇದು ಇಲ್ಲಿನ **ಸಂಶಯ.**

ದರ್ಶ–ಪೂರ್ಣಮಾಸವು ಪಶುಯಾಗವಲ್ಲ. ಈ ವಚನವು ದರ್ಶ–ಪೂರ್ಣಮಾಸಪ್ರಕರಣದಲ್ಲಿ ಪಠಿತವಾಗಿದ್ದರೂ, ಪ್ರಕರಣದಿಂದ ಉತ್ಕರ್ಷ ಮಾಡಿ ಪಶುಯಾಗದಲ್ಲಿ ಜಾಘನೀಸಂಸ್ಕಾರಾರ್ಥವಾಗಿ ಪತ್ನೀಸಂಯಾಜಗಳನ್ನು ಅನುಷ್ಠಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ದರ್ಶ–ಪೂರ್ಣಮಾಸವು ಪಶುಯಾಗವಲ್ಲದಿದ್ದರೂ ಪಶುಪುಚ್ಛವನ್ನು [ಜಾಘನಿಯನ್ನು] ಕ್ರಯಕ್ಕೆ ತಂದು ಪತ್ನೀಸಂಯಾಜಯಾಗವನ್ನು ಅನುಷ್ಠಿಸಬಹುದು. **'ಪತ್ನೀಃ'** ಎಂದು ದ್ವಿತೀಯಾ ವಿಭಕ್ತಿಯು ಇರುವುದರಿಂದ ಉದ್ದೇಶ್ಯವು ಉಕ್ತವಾಗುತ್ತದೆ. ಆದುದರಿಂದ ಪತ್ನೀಸಂಯಾಜವು ಜಾಘನೀಸಂಸ್ಕಾರಕರ್ಮವಾಗುವುದಿಲ್ಲ.

ಅಲ್ಲದೆ ವೈಕಲ್ಪಿಕವಾಗಿ ಆಜ್ಯವನ್ನು ಹೇಳಿರುವುದರಿಂದ ಜಾಘನಿಯು ಸಿಕ್ಕದಿದ್ದರೂ ವೈಕಲ್ಯವಿಲ್ಲ ಆದುದರಿಂದ ಈ ವಾಕ್ಯವನ್ನು ಪ್ರಕರಣದಿಂದ ಬೇರ್ಪಡಿಸಬೇಕಾಗಿಲ್ಲ. ಇದು ಇಲ್ಲಿನ **ಸಿದ್ಧಾಂತ.**

## ॥ ಏಕಾದಶೋಽನುವಾಕಃ ॥

**ಯುಕ್ಷ್ವಾ ಹಿ ದೇವಹೂತಮಾಗ್ಂ ಅಶ್ವಾಗ್ಂ ಅಗ್ನೇ ರಥೀರಿವ ।**

**ನಿ ಹೋತಾ ಪೂರ್ವ್ಯಸ್ಸದಃ ।**

---

ಯುಕ್ಷ್ವ । ಹಿ । ದೇವಹೂತಮಾನಿತಿ ದೇವ-ಹೂತಮಾನ್ । ಅಶ್ವಾನ್ । ಅಗ್ನೇ ।

ರಥೀಃ । ಇವ ॥ ನೀತಿ । ಹೋತಾ । ಪೂರ್ವ್ಯಃ । ಸದಃ ॥

---

ಹತ್ತನೆಯ ಅನುವಾಕದಲ್ಲಿ ಶಂಯುವಾಕ,ಪತ್ನೀಸಂಯಾಜ,ಸಮಿಷ್ಟಯಜುಸ್ಸುಗಳು ಹೇಳಲ್ಪಟ್ಟವು.ಇಲ್ಲಿಗೆ ದರ್ಶಪೂರ್ಣಮಾಸೇಷ್ಟಿಯು ಮುಗಿಯಿತು. ಈ ಹನ್ನೊಂದನೆಯ ಅನುವಾಕ ದಲ್ಲಿ ಸಂವರ್ಗೇಷ್ಟಿಯ ಹೋತೃಮಂತ್ರಗಳು ಹೇಳಲ್ಪಟ್ಟಿವೆ. ಈ ಅನುವಾಕವು ಯಾಜ್ಞಿಕ ಸಮಾಖ್ಯೆಯಿಂದ ಹೌತ್ರವೆಂದು ಹೇಳಲ್ಪಟ್ಟಿದೆ. ಆಪಸ್ತಂಬರು **'ಯುಕ್ಷ್ವಾ ಹಿ'**ಮೊದಲಾದ ಹದಿನೈದು ಸಾಮಿಧೇನಿಗಳನ್ನು ಹೇಳಬೇಕೆಂದೂ, **'ಆ ಜುಹೋತ'** ಎಂಬ ನಿತ್ಯಮಂತ್ರದಿಂದ ಸಮಾಪ್ತಿಯನ್ನು ಮಾಡಬೇಕೆಂದೂ ಹೇಳಿದ್ದಾರೆ. ಅಲ್ಲದೆ **'ಕುವಿತ್ಸು ನಃ'** ಎಂಬ ಎರಡು ಮಂತ್ರಗಳು ಯಾಜ್ಯಾನುವಾಕ್ಯಗಳೆಂದೂ **'ಯಸ್ತ್ವಾಜುಷತ್''ವಿದ್ಮಾ ಹಿ ತೇ'**ಎಂಬ ಎರಡು ಮಂತ್ರಗಳು ಸಂಯಾಜ್ಯೆಗಳೆಂದೂ ವಿನಿಯೋಗವನ್ನು ಹೇಳಿದ್ದಾರೆ. **[ಆಪ.ಶ್ರೌ.ಸೂ.19.25.9.13]**

| ಮಂತ್ರ | ವಿನಿಯೋಗ |
|---|---|
| **ಯುಕ್ಷ್ವಾ ಹಿ...ಸದಃ ॥** | ಸಂವರ್ಗೇಷ್ಟಿಯ ಮೊದಲನೆಯ ಸಾಮಿಧೇನೀಮಂತ್ರ. |

---

**ಪದಶಃ ಅರ್ಥ:-ಅಗ್ನೇ**=ಅಗ್ನಿದೇವನೇ! **ದೇವಹೂತಮಾನ್**=ದೇವತೆಗಳಲ್ಲಿ ಅತಿಶಯವಾಗಿ ಕರೆಯಬೇಕಾದವರನ್ನು; **ರಥೀಃ**=ರಥಸ್ವಾಮಿಯು; **ಅಶ್ವಾನ್ ಇವ**=ಕುದುರೆಗಳನ್ನು ಹೇಗೋ ಹಾಗೆ; **ಯುಕ್ಷ್ವ ಹಿ**=[ಈ ಯಾಗದಲ್ಲಿ] ಹೊಂದಿಸಿಕೊಳ್ಳುತ್ತೀಯಷ್ಟೆ/**ವ್ಯಾಪಕವಾಗಿ ನಿನ್ನ ಜ್ವಾಲೆಗಳಿಂದ ದೇವತೆಗಳನ್ನು ಆಹ್ವಾನಿಸುವೆಯಷ್ಟೆ. ಪೂರ್ವ್ಯಃ ಹೋತಾ**=ಮೊದಲನೆಯ ಯಜ್ಞಸಾಧಕನಾದ ನೀನು; **ನಿ ಸದಃ**=ಯಜ್ಞದಲ್ಲಿ ಆಸೀನನಾಗಿರು.

**ಉತ ನೋ ದೇವ ದೇವಾಗ್ಂ ಅಚ್ಛಾ ವೋಚೋ ವಿದುಷ್ಟರಃ । ಶ್ರದ್ವಿಶ್ವಾ ವಾರ್ಯಾ ಕೃಧಿ ॥ ತ್ವಗ್ಂ ಹ ಯದ್ಯವಿಷ್ಠ್ಯ ಸಹಸಸ್ಸೂನ ವಾಹುತ । ಋತಾವಾ ಯಜ್ಞಿಯೋ ಭುವಃ ॥**

---

ಉತ । ನಃ । ದೇವ । ದೇವಾನ್ । ಅಚ್ಛ । ವೋಚಃ । ವಿದುಷ್ಟರ ಇತಿ ವಿದುಃ-ತರಃ ॥ ಶ್ರತ್ । ವಿಶ್ವಾ । ವಾರ್ಯಾ । ಕೃಧಿ ॥ ತ್ವಮ್ । ಹ । ಯತ್ । ಯವಿಷ್ಠ್ಯ । ಸಹಸಃ । ಸೂನೋ । ಆಹುತೇತ್ಯಾ-ಹುತ ॥ ಋತಾವೇತ್ಯೃತ-ವಾ । ಯಜ್ಞಿಯಃ । ಭುವಃ ॥

---

| ಮಂತ್ರ | ವಿನಿಯೋಗ |
| --- | --- |
| **ಉತ ನೋ ದೇವ...ಕೃಧಿ ॥** | ಎರಡನೆಯ ಸಾಮಿಧೇನೀಮಂತ್ರ. |
| **ತ್ವಗ್ಂ ಹ...ಭುವಃ ॥** | ಮೂರನೆಯ ಸಾಮಿಧೇನೀಮಂತ್ರ. |

---

✦**ದೇವ**=ಪ್ರಕಾಶಮಾನನಾದ ಅಗ್ನಿದೇವನೇ![ನೀನು] **ವಿದುಷ್ಟರಃ**=ನಮ್ಮ ಆಶಯಗಳೆಲ್ಲವನ್ನೂ ಚೆನ್ನಾಗಿ ತಿಳಿದವನು. **ನಃ**=ನಮ್ಮನ್ನು ಕುರಿತು; **ದೇವಾನ್ ಅಚ್ಛ ವೋಚಃ**=ದೇವತೆಗಳಿಗೆ [ಈ ಯಜಮಾನನು] ಯಾಗ ಮಾಡುತ್ತಾನೆಂದು ಚೆನ್ನಾಗಿ ತಿಳಿಯಹೇಳು. **ಉತ**=ಮತ್ತು; **ವಿಶ್ವಾ ವಾರ್ಯಾ**=ನಾವು ಕೇಳಿಕೊಳ್ಳುವ ಶತ್ರುಜಯಾದಿಕಾಮನೆಗಳೆಲ್ಲವನ್ನೂ; **ಶ್ರತ್ ಕೃಧಿ**= ದೇವತೆಗಳು ನಂಬುವಂತೆ ಮಾಡು./**ದೇವತೆಗಳ ಅನುಗ್ರಹದಿಂದ ಸತ್ಯವಾಗುವಂತೆ ಮಾಡು;**
✦**ಯವಿಷ್ಠ್ಯ**=ಅತ್ಯಂತ ಯುವಕನಾದ; **ಸಹಸಃ ಸೂನೋ**=ಬಲದ ಪುತ್ರನಾದ/**ಅರಣಿ ಮಥನದಿಂದ ಉತ್ಪನ್ನನಾದ; ಆಹುತ**=ದೇವತೆಗಳನ್ನು ಆಹ್ವಾನಿಸುವ/**ನಿತ್ಯವೂ ಆಹುತಿಗಳಿಂದ ಆರಾಧಿಸಲ್ಪಡುವವನಾದ;** [ಅಗ್ನಿದೇವನೇ!] **ತ್ವಮ್ ಹ**=ನೀನೇ; **ಯತ್**=ಯಾವ ಕಾರಣದಿಂದ; **ಋತಾವಾ**= ಸತ್ಯಶೀಲನಾಗಿರುವೆಯೋ/**ಯಜ್ಞಶೀಲನಾಗಿರುವೆಯೋ;** [ಅದರಿಂದ] **ಯಜ್ಞಿಯಃ ಭುವಃ**=[ನಮ್ಮ] ಯಜ್ಞಸಾಧಕನಾಗು.

---

**ತಾತ್ಪರ್ಯ:-** ಅಗ್ನಿದೇವನೇ! ನೀನು ಸಂವರ್ಗೇಷ್ಟಿಗಾಗಿ ಮುಖ್ಯವಾಗಿ ಕರೆಯಬೇಕಾದ ದೇವತೆಗಳನ್ನು-ರಥಸ್ವಾಮಿಯು ಕುದುರೆಗಳನ್ನು ಹೊಂದಿಸಿಕೊಳ್ಳುವಂತೆ-ಯಾಗಕ್ಕಾಗಿ

**ಅಯಮಗ್ನಿಃ ಸಹಸ್ರಿಣೋ ವಾಜಸ್ಯ ಶತಿನಸ್ಪತಿಃ । ಮೂರ್ಧಾ ಕವೀ ರಯೀಣಾಮ್ ॥ ತಂ ನೇಮಿಮೃಭವೋ ಯಥಾऽऽನಮಸ್ವ ಸಹೂತಿಭಿಃ ।**

---

ಅಯಮ್ । ಅಗ್ನಿಃ । ಸಹಸ್ರಿಣಃ । ವಾಜಸ್ಯ । ಶತಿನಃ । ಪತಿಃ ॥ ಮೂರ್ಧಾ । ಕವಿಃ । ರಯೀಣಾಮ್ ॥ ತಮ್ । ನೇಮಿಮ್ । ಋಭವಃ । ಯಥಾ । ಏತಿ । ನಮಸ್ವ । ಸಹೂತಿಭಿರಿತಿ ಸಹೂತಿ-ಭಿಃ ॥

---

| ಮಂತ್ರ | ವಿನಿಯೋಗ |
|---|---|
| **ಅಯಮಗ್ನಿಃ....ರಯೀಣಾಮ್ ॥** | ಇದು ನಾಲ್ಕನೆಯ ಸಾಮಿಧೇನೀ. |
| **ತಂ ನೇಮಿಮ್....ಅಂಗಿರಃ ॥** | ಐದನೆಯ ಸಾಮಿಧೇನೀಮಂತ್ರ. |

---

+ **ಅಯಮ್ ಅಗ್ನಿಃ**=ಪ್ರಜ್ವಲಿತನಾದ ಈ ಅಗ್ನಿದೇವನು; **ಸಹಸ್ರಿಣಃ**=ಸಾವಿರಾರು ಬಗೆಯ; **ಶತಿನಃ**=ನೂರಾರು; **ವಾಜಸ್ಯ ಪತಿಃ**=ಅನ್ನರಾಶಿಗಳಿಗೆ ಸ್ವಾಮಿಯಾಗಿದ್ದಾನೆ. **ಮೂರ್ಧಾ**= ತಲೆಯಂತೆ ಮುಖ್ಯನಾಗಿದ್ದಾನೆ. **ಕವಿಃ**=ವಿದ್ವಾಂಸನಾಗಿದ್ದಾನೆ;**[ಈತನು] ರಯೀಣಾಮ್** [ಪತಿಃ]=ಧನಗಳ ಒಡೆಯನೂ ಆಗಿದ್ದಾನೆ. +**ಅಂಗಿರಃ**=ಶರೀರಸೌಷ್ಠವವುಳ್ಳ; [ಅಗ್ನಿದೇವನೇ!] **ಸಹೂತಿಭಿಃ**=ಜೊತೆಯಲ್ಲಿಯೇ ದೇವತೆಗಳನ್ನು ಆಹ್ವಾನಿಸುವ ಋತ್ವಿಜರಿಂದ ಕೂಡಿಕೊಂಡು; **ತಮ್ ಯಜ್ಞಮ್**=ಪ್ರಸಿದ್ಧವಾದ ಆ ಯಜ್ಞವನ್ನು; **ಋಭವಃ**= ದೇವಶಿಲ್ಪಿಗಳು; **ನೇಮಿಮ್ ಯಥಾ** [ದೇವತೆಗಳ]ರಥದ ಚಕ್ರದ ಅಚ್ಚನ್ನು ಹೇಗೋ

---

ಆಹ್ವಾನಿಸಿ ಬರಮಾಡಿಕೋ. ನೀನು ಮೊದಲನೆಯ ಯಜ್ಞಸಾಧಕನು. ನೀನೂ ಯಜ್ಞವೇದಿಯಲ್ಲಿ ಆಸೀನನಾಗು. ಅಲ್ಲದೆ ಅಗ್ನಿದೇವನೇ! ನೀನು ನಮ್ಮ ಆಶಯಗಳನ್ನು ಚೆನ್ನಾಗಿ ತಿಳಿದವನು. ನಮ್ಮ ವಿಷಯವನ್ನು ದೇವತೆಗಳ ಮುಂದೆ ಚೆನ್ನಾಗಿ ಹೇಳು. ಅವರಲ್ಲಿ ನಮ್ಮ ಕಾಮನೆಗಳನ್ನು ಕುರಿತಾದ ನಂಬಿಕೆಯು ಮೂಡುವಂತೆ ಮಾಡು.

ಅಗ್ನಿಯೇ! ನೀನು ಸದಾ ಅತ್ಯಂತ ಯುವಕನು. ಶಕ್ತಿಯಿಂದ ಅರಣಿಮಥನ ಮಾಡುವುದರಿಂದ

**ನೇದೀಯೋ ಯಜ್ಞ [..ಯಜ್ಞಮ್(೧)ಅಂಗಿರಃ।..] ಮಂಗಿರಃ ॥ ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ । ವೃಷ್ಣೇ ಚೋದಸ್ವ ಸುಷ್ಟುತಿಮ್ ॥**

---

ನೇದೀಯಃ । ಯಜ್ಞಮ್ । (೧) । ಅಂಗಿರಃ ॥ ತಸ್ಮೈ । ನೂನಮ್ । ಅಭಿದ್ಯವ ಇತ್ಯಭಿ-ದ್ಯವೇ । ವಾಚಾ । ವಿರೂಪೇತಿ ವಿ-ರೂಪ । ನಿತ್ಯಯಾ ॥ ವೃಷ್ಣೇ । ಚೋದಸ್ವ । ಸುಷ್ಟುತಿಮಿತಿ ಸು-ಸ್ತುತಿಮ್ ॥

---

| ಮಂತ್ರ | ವಿನಿಯೋಗ |
|---|---|
| **ತಸ್ಮೈ ನೂನಮ್...ಸುಷ್ಟುತಿಮ್ ॥** | ಆರನೆಯ ಸಾಮಿಧೇನೀಮಂತ್ರ. |

---

ಹಾಗೆ; **ನೇದೀಯಃ**=ಸಮೀಪದಲ್ಲಿಯೇ ಇರುವಂತೆ; **ಆ ನಮಸ್ವ**=ವಶವಾಗುವಂತೆ ಮಾಡು/ **ಫಲವನ್ನು ಕೊಡುವಂತೆ ಮಾಡು.**✦[ಅಗ್ನಿದೇವನೇ!] **ವಿರೂಪ**=ನಾನಾವಿಧವಾದ ರೂಪಗಳುಳ್ಳವನೇ!; **ಅಭಿದ್ಯವೇ**=ಸುತ್ತಲೂ ಪ್ರಕಾಶವುಳ್ಳ; **ವೃಷ್ಣೇ**= ಇಷ್ಟಾರ್ಥಗಳನ್ನು ಸುರಿಸುವ; **ತಸ್ಮೈ**=ನಾವು ಯಾಗದಿಂದ ಆರಾಧಿಸುವ ಆ ದೇವನಿಗೆ/**ಇಂದ್ರಾದಿಗಳಿಗೆ; ನಿತ್ಯಯಾ ವಾಚಾ**=ಋಗಾದಿ ವೈದಿಕಮಂತ್ರರೂಪವಾದ ವಾಕ್ಕಿನಿಂದ; [ನಾವು ಮಾಡುವ] **ಸುಷ್ಟುತಿಮ್** =ಒಳ್ಳೆಯ ಸ್ತುತಿಯನ್ನು; **ನೂನಮ್**=ಸರ್ವರೀತಿಯಿಂದಲೂ; **ಚೋದಸ್ವ**=ಪ್ರೇರಿಸು/ ಮನಮುಟ್ಟುವಂತೆ ತಿಳಿಸು.

---

ಜನಿಸಿದವನು. ಸತ್ಯಸಂಧನು.ಯಜ್ಞದಲ್ಲಿ ಆಹುತಿಗಳಿಂದ ಪೂಜಿಸಲ್ಪಡುವವನು. ದೇವತೆಗಳನ್ನು ಯಜ್ಞಕ್ಕೆ ಆಹ್ವಾನಿಸುವವನೂ ಆಗಿದ್ದೀಯೆ. ನೀನು ನಮ್ಮ ಯಜ್ಞಸಾಧಕನಾಗು.

ಈ ಜ್ವಲಿಸುವ ಅಗ್ನಿದೇವನು ಬಗೆಬಗೆಯ ಅನ್ನಗಳ ಒಡೆಯನು. ದೇವತೆಗಳಲ್ಲಿ ಶಿರಃಪ್ರಾಯನು. ಎಲ್ಲವನ್ನೂ ತಿಳಿದವನು. ಧನಕ್ಕೂ ಸ್ವಾಮಿಯಾಗಿದ್ದಾನೆ. ಈತನು ನಮಗೆ ಅನ್ನವನ್ನೂ, ಜ್ಞಾನವನ್ನೂ, ಧನವನ್ನೂ ನೀಡಲಿ.

ಎಲೈ! ಅಗ್ನಿಯೇ! ನೀನು ಅಂಗಸೌಷ್ಠವವುಳ್ಳವನು. ನೀನು ಯಜ್ಞಕ್ಕೆ ಆಹ್ವಾನಿಸುವ ಮತ್ತು ಆರಾಧಿಸುವ ಋತ್ವಿಜರಿಂದ ಕೂಡಿಕೊಂಡು-ದೇವಶಿಲ್ಪಿಗಳು ದೇವರಥಗಳ

**ಕಮು ಷ್ವಿದಸ್ಯ ಸೇನಯಾಽಗ್ನೇರಪಾಕಚಕ್ಷಸಃ । ಪಣಿಂ ಗೋಷು ಸ್ತರಾಮಹೇ ॥ ಮಾ ನೋ ದೇವಾನಾಂ ವಿಶಃ ಪ್ರಸ್ನಾತೀರಿವೋಸ್ರಾಃ । ಕೃಶಂ ನ ಹಾಸುರಘ್ನಿಯಾಃ ॥**

---

ಕಮ್ । ಉ । ಸ್ವಿತ್ । ಅಸ್ಯ । ಸೇನಯಾ । ಅಗ್ನೇಃ । ಅಪಾಕಚಕ್ಷಸ ಇತ್ಯಪಾಕ-ಚಕ್ಷಸಃ ॥ ಪಣಿಮ್ । ಗೋಷು । ಸ್ತರಾಮಹೇ ॥ ಮಾ । ನಃ । ದೇವಾನಾಮ್ । ವಿಶಃ । ಪ್ರಸ್ನಾತೀರಿತಿ ಪ್ರ-ಸ್ನಾತೀಃ । ಇವ । ಉಸ್ರಾಃ ॥ ಕೃಶಮ್ । ನ । ಹಾಸುಃ । ಅಘ್ನಿಯಾಃ ॥

---

| ಮಂತ್ರ | ವಿನಿಯೋಗ |
|---|---|
| **ಕಮು ಷ್ವಿದಸ್ಯ.....ಸ್ತರಾಮಹೇ ॥** | ಏಳನೆಯ ಸಾಮಿಧೇನೀ ಋಕ್ |
| **ಮಾ ನೋ...ಅಘ್ನಿಯಾಃ ॥** | ಎಂಟನೆಯ ಸಾಮಿಧೇನೀ ಋಕ್ |

---

✦ **ಅಪಾಕಚಕ್ಷಸಃ**=ಅಲ್ಪವಲ್ಲದ ಜ್ಞಾನವುಳ್ಳ/**ಸರ್ವಜ್ಞನಾದ; ಅಗ್ನೇಃ ಅಸ್ಯ ಸೇನಯಾ**=ಈ ಅಗ್ನಿದೇವನ ಪರಿಜನರಿಂದ; **ಕಮು ಸ್ವಿತ್**=ಯಾವ; **ಗೋಷು**=ಗವಾದಿವಿಷಯಗಳಲ್ಲಿ; **ಪಣಿಮ್**=ವ್ಯವಹಾರವನ್ನು; **ಸ್ತರಾಮಹೇ?**=ಮುಚ್ಚಿಡುತ್ತೇವೆ? [ಎಲ್ಲವನ್ನೂ ತಿಳಿಯುವಂತೆಯೇ ಮಾಡುತ್ತೇವೆ]✦**ದೇವಾನಾಮ್ ವಿಶಃ**=ದೇವತೆಗಳ ಪ್ರಜೆಗಳು;/**ಋತ್ವಿಜರು ಪ್ರಸ್ನಾತೀಃ**=ಹಾಲನ್ನು ಸುರಿಸುತ್ತಿರುವ; **ಉಸ್ರಾಃ**=ಕ್ಷೀರಾದಿದಾನದಿಂದ ಜಗತ್ತಿನ ಜೀವನಕ್ಕೆ ಕಾರಣವಾಗಿರುವ; **ಅಘ್ನಿಯಾಃ ಇವ**=ಧೇನುಗಳಂತೆ; **ಕೃಶಮ್ ನ**=ಚಿಕ್ಕ ಕರುವನ್ನು ಹೇಗೋ ಹಾಗೆ; **ನಃ**=ನಮ್ಮನ್ನು; **ಮಾ ಹಾಸುಃ**=ಬಿಡುವುದಿಲ್ಲ.

---

ನೇಮಿಗಳು ಚೆನ್ನಾಗಿರುವಂತೆ ಮಾಡಿ ಹತ್ತಿರಕ್ಕೆ ತರುವಂತೆ-ನಾನು ಮಾಡುತ್ತಿರುವ ಪ್ರಸಿದ್ಧವಾದ ಯಜ್ಞವು ಹತ್ತಿರದಲ್ಲಿಯೇ ಇದ್ದು ಫಲಪ್ರದವಾಗುವಂತೆ ಮಾಡು.

ಎಲ್ಲೆಲ್ಲಿಯೂ ಪ್ರಕಾಶಮಾನನಾಗಿ ನಮ್ಮ ಇಷ್ಟಾರ್ಥಗಳನ್ನು ಸಲ್ಲಿಸುವ ಯಾಗದೇವನಿಗೆ ನಾವು ಋಗಾದಿರೂಪವಾದ ಮಂತ್ರಗಳಿಂದ ಸ್ತುತಿಯನ್ನು ಮಾಡುತ್ತೇವೆ. ವಿವಿಧರೂಪಗಳುಳ್ಳ

**ಮಾ ನಸ್ಸಮಸ್ಯ ದೂಢ್ಯಃ ಪರಿದ್ವೇಷಸೋ ಅಗ್ಂಹತಿಃ । ಊರ್ಮಿರ್ನ ನಾವಮಾ ವಧೀತ್ ॥ ನಮಸ್ತೇ ಅಗ್ನ ಓಜಸೇ ಗೃಣಂತಿ ದೇವ ಕೃಷ್ಟಯಃ । ಅಮೈ[ಅಮೈಃ(೨)ಅಮಿತ್ರ]ರಮಿತ್ರಮರ್ದಯ ॥**

---

ಮಾ । ನಃ । ಸಮಸ್ಯ । ದೂಢ್ಯಃ । ಪರಿದ್ವೇಷಸ ಇತಿ ಪರಿ-ದ್ವೇಷಸಃ । ಅಗ್ಂಹತಿಃ ॥ ಊರ್ಮಿಃ । ನ । ನಾವಮ್ । ಏತಿ । ವಧೀತ್ ॥ ನಮಃ । ತೇ । ಅಗ್ನೇ । ಓಜಸೇ । ಗೃಣಂತಿ । ದೇವ । ಕೃಷ್ಟಯಃ ॥ ಅಮೈಃ । (೨) । ಅಮಿತ್ರಮ್ । ಅರ್ದಯ ॥

---

| ಮಂತ್ರ | ವಿನಿಯೋಗ |
|---|---|
| **ಮಾ ನಸ್ಸಮಸ್ಯ...ವಧೀತ್ ॥** | ಒಂಭತ್ತನೆಯ ಸಾಮಿಧೇನೀಮಂತ್ರ. |
| **ನಮಸ್ತೇ....ಅರ್ದಯ ॥** | ಇದು ಹತ್ತನೆಯ ಸಾಮಿಧೇನೀಮಂತ್ರ. |

---

✦**ಸಮಸ್ಯ**=ನಮಗೆ ಸಮಾನನಾಗಿರುವ; **ದೂಢ್ಯಃ**=ಎಲ್ಲಾ ದುಷ್ಟಬುದ್ಧಿಯುಳ್ಳ; **ಪರಿದ್ವೇಷಸಃ**=ಸರ್ವವಿಧದಲ್ಲೂ ದ್ವೇಷಿಯಾಗಿರುವ; **ಅಗ್ಂಹತಿಃ**=ದ್ರೋಹವು; **ನಾವಮ್**=[ನದಿಯಲ್ಲಿ ಸಂಚರಿಸುವ] ಹಡಗನ್ನು; **ಊರ್ಮಿಃ ನ**=ಸಣ್ಣ ಅಲೆಯು ಹೇಗೋ ಹಾಗೆ; **ನಃ**=ನಮ್ಮನ್ನು **ಮಾ ಆ ವಧೀತ್**=ನಾಶಪಡಿಸದಿರಲಿ/**ನೀನು ಹೀಗೆ ನಮ್ಮನ್ನು ರಕ್ಷಿಸು.**✦**ಅಗ್ನೇ**=ಅಗ್ನಿದೇವನೇ! **ದೇವ**=ಪ್ರಕಾಶಮಾನನೇ! **ಕೃಷ್ಟಯಃ**=ಮನುಷ್ಯರು; **ತೇ**= ನಿನ್ನ; **ಓಜಸೇ ನಮಃ [ಕುರ್ವಂತಿ]** =ಬಲಕ್ಕೆ ನಮಸ್ಕರಿಸುತ್ತಾರೆ; **ಗೃಣಂತಿ**=ಸ್ತುತಿಸುತ್ತಾರೆ. **ಅಮಿತ್ರಮ್**=ನಮಗೆ ಅಪಕಾರ ಮಾಡುವ ಹಗೆಯನ್ನು; **ಅಮೈಃ**=ರೋಗಾದಿಗಳಿಂದ; **ಅರ್ದಯ**=ನಾಶಪಡಿಸು.

---

ಅಗ್ನಿದೇವನೇ! ನಮ್ಮ ಆ ಸ್ತುತಿಯನ್ನು ದೇವತೆಗಳು ಮನಸ್ಸಿಗೆ ತಂದುಕೊಳ್ಳುವಂತೆ ನೀನು ಮಾಡು.

ಈ ಅಗ್ನಿಯು ಸರ್ವಜ್ಞನು. ಆತನ ಪರಿಜನರೂ ಅಂತಹವರೇ ಆಗಿದ್ದಾರೆ. ಅವರಾರಿಗೂ ತಿಳಿಯದಂತೆ ಗವಾದಿವಿಷಯದಲ್ಲಿ ಯಾವ ವ್ಯವಹಾರವನ್ನು ತಾನೇ ನಾವು ಮಾಡಬಲ್ಲೆವು?

**ಕುವಿತ್ಸು ನೋ ಗವಿಷ್ಟಯೇಽಗ್ನೇ ಸಂವೇಷಿಷೋ ರಯಿಮ್ । ಉರುಕೃದುರು ಣಸ್ಕೃಧಿ ॥ ಮಾ ನೋ ಅಸ್ಮಿನ್ಮಹಾಧನೇ ಪರಾ ವರ್ಗ್ಭಾರಭೃದ್ಯಥಾ । ಸಂವರ್ಗಗ್ಂ ಸಗ್ಂ ರಯಿಂ ಜಯ ॥**

---

ಕುವಿತ್ । ಸ್ವಿತಿ । ನಃ । ಗವಿಷ್ಟಯ ಇತಿ ಗೋ-ಇಷ್ಟಯೇ । ಅಗ್ನೇ । ಸಂವೇಷಿಷ ಇತಿ ಸಂ-ವೇಷಿಷಃ । ರಯಿಮ್ ॥ ಉರುಕೃದಿತ್ಯುರು-ಕೃತ್ । ಉರು । ನಃ । ಕೃಧಿ ॥ ಮಾ । ನಃ । ಅಸ್ಮಿನ್ನ್ । ಮಹಾಧನ ಇತಿ ಮಹಾ-ಧನೇ । ಪರೇತಿ । ವರ್ಕ್ । ಭಾರಭೃದಿತಿ ಭಾರ-ಭೃತ್ । ಯಥಾ ॥ ಸಂವರ್ಗಮಿತಿ ಸಂ-ವರ್ಗಮ್ । ಸಮಿತಿ । ರಯಿಮ್ । ಜಯ ॥

---

| ಮಂತ್ರ | ವಿನಿಯೋಗ |
|---|---|
| **ಕುವಿತ್ಸು ನೋ....ಕೃಧಿ ॥** | ಸಂವರ್ಗೇಷ್ಟಿಯ ಪುರೋನುವಾಕ್ಯೆ-**ಸಾಯಣರು.** ಹನ್ನೊಂದನೆಯ ಸಾಮಿಧೇನೀ-**ಭ.ಭಾ.ಮಿಶ್ರರು** |
| **ಮಾ ನೋ....ಜಯ ॥** | ಸಂವರ್ಗೇಷ್ಟಿಯ ಯಾಜ್ಯೆ-**ಸಾಯಣರು.** ಹನ್ನೆರಡನೆಯ ಸಾಮಿಧೇನೀ-**ಮಿಶ್ರರು.** |

---

✦**ಅಗ್ನೇ**=ಅಗ್ನಿದೇವನೇ! **ಗವಿಷ್ಟಯೇ**=ಗೋವುಗಳಿಂದ ಕೂಡಿದ ಯಾಗಗಳಿಗಾಗಿ; **ನಃ**=ನಮಗೆ; **ಕುವಿತ್**=ಅಧಿಕವಾಗಿ; **ರಯಿಮ್**=ಧನವನ್ನು; **ಸು ಸಂವೇಷಿಷಃ**=ಚೆನ್ನಾಗಿ ಪ್ರಾಪ್ತವಾಗುವಂತೆ ಮಾಡು. **ಉರುಕೃತ್**=ಎಲ್ಲವನ್ನೂ ಹೆಚ್ಚುಮಾಡುವ ನೀನು; **ನಃ**=ನಮ್ಮ ಯಜ್ಞದ ಫಲವನ್ನು; **ಉರು ಕೃಧಿ**=ಹೆಚ್ಚಾಗಿ ವೃದ್ಧಿಗೊಳಿಸು.✦**[ಅಗ್ನಿದೇವನೇ!]ನಃ ಅಸ್ಮಿನ್ ಮಹಾಧನೇ**=ನೀನು ನಮಗೆ ಕೊಟ್ಟಿರುವ ಮಹಾಧನದಲ್ಲಿ; **ಭಾರಭೃತ್ ಯಥಾ**=ಭಾರವನ್ನು ಹೊರುವ ಎತ್ತು ಮೊದಲಾದವುಗಳು; [ತಾವು ಹೊತ್ತಿರುವ ವಸ್ತುವನ್ನು ವಿನಾಶಗೊಳಿಸದಿರುವಂತೆ] **ಮಾ ಪರಾ ವರ್ಕ್**=ನಾಶವಾಗುವಂತೆ ಮಾಡಬೇಡ. **ಸಂವರ್ಗಮ್**=ಮತ್ತೆ ಮತ್ತೆ ಹಣವನ್ನು ಕೊಟ್ಟು; **ರಯಿಮ್**=ಆ ಹಣವನ್ನು; **ಸಮ್ ಜಯ**=ಹೆಚ್ಚಾಗುವಂತೆಮಾಡು/**ಶತ್ರುಗಳನ್ನು ನಾವು ಗೆದ್ದು ನಮ್ಮ ಹಣವು ವೃದ್ಧಿಯಾಗುವಂತೆ ಮಾಡು.**

**ಅನ್ಯಮಸ್ಮದ್ಭಿಯಾ ಇಯಮಗ್ನೇ ಸಿಷಕ್ತು ದುಚ್ಛುನಾ । ವರ್ಧಾ ನೋ ಅಮವಚ್ಛವಃ ॥ ಯಸ್ಯಾಜುಷನ್ನಮಸ್ವಿನಶ್ಶಮೀಮದುರ್ಮಖಸ್ಯ ವಾ । ತಂ ಘೇದಗ್ನಿರ್ವೃಧಾಽವತಿ ॥**

---

ಅನ್ಯಮ್ । ಅಸ್ಮತ್ । ಭಿಯೈ । ಇಯಮ್ । ಅಗ್ನೇ । ಸಿಷಕ್ತು । ದುಚ್ಛುನಾ ॥ ವರ್ಧ । ನಃ । ಅಮವದಿತ್ಯಮ-ವತ್ । ಶವಃ ॥ ಯಸ್ಯ । ಅಜುಷತ್ । ನಮಸ್ವಿನಃ । ಶಮೀಮ್ । ಅದುರ್ಮಖಸ್ಯೇತ್ಯದುಃ-ಮಖಸ್ಯ । ವಾ ॥ ತಮ್ । ಘ । ಇತ್ । ಅಗ್ನಿಃ । ವೃಧಾ । ಅವತಿ ॥

---

| ಮಂತ್ರ | ವಿನಿಯೋಗ |
|---|---|
| **ಅನ್ಯಮಸ್ಮತ್....ಶವಃ ॥** | ಸಂವರ್ಗೇಷ್ಟಿಯಲ್ಲಿನ ವೈಕಲ್ಪಿಕ ಯಾಜ್ಯೆ-**ಸಾಯಣರು.** ಹದಿಮೂರನೆಯ ಸಾಮಿಧೇನೀ -**ಮಿಶ್ರರು.** |
| **ಯಸ್ಯಾಜುಷತ್....ವೃಧಾಽವತಿ ॥** | ಸ್ವಿಷ್ಟಕೃದ್ಯಾಗದ ಪುರೋನುವಾಕ್ಯೆ-**ಸಾಯಣರು.** ಹದಿನಾಲ್ಕನೆಯ ಸಾಮಿಧೇನೀ-**ಮಿಶ್ರರು** |

---

✦**ಅಗ್ನೇ**=ಅಗ್ನಿದೇವನೇ! **ಅಸ್ಮತ್ ಅನ್ಯಮ್**=ನಮ್ಮಿಂದ ಬೇರೆಯವನಾದ ಶತ್ರುವನ್ನು; **ಇಯಮ್ ದುಚ್ಛುನಾ**=ಈ ರೋಗಾದಿರೂಪವಾದ ಪೀಡೆಯು; **ಭಿಯೈ**=ಶತ್ರುವಿಗೆ ಭಯವನ್ನುಂಟುಮಾಡುವುದಕ್ಕಾಗಿ; **ಸಿಷಕ್ತು**=ಸೇವಿಸಲಿ. **ಅಮವತ್**=ಶತ್ರುವಿನ ರೋಗಾದಿಗಳಂತೆ; **ನಃ ಶವಃ**=ನಮ್ಮ ಬಲವನ್ನು; **ವರ್ಧ**=ವೃದ್ಧಿಗೊಳಿಸು. ✦**ಅಗ್ನಿಃ**=ಅಗ್ನಿಯು; **ಯಸ್ಯ ನಮಸ್ವಿನಃ**=ಭಕ್ತಿಯಿಂದ ನಮಸ್ಕರಿಸುವ; **ಅದುರ್ಮಖಸ್ಯ ವಾ***=ಅಥವಾ/ಮತ್ತು ಲೋಪವಿಲ್ಲದೆ ಯಜ್ಞವನ್ನು ಅನುಷ್ಠಿಸುವ ಯಾವ ಯಜಮಾನನ; **ಶಮೀಮ್ ಅಜುಷತ್**=ಆಹುತಿಯನ್ನು ಸೇವಿಸಿದನೋ; **ತಮ್ ಘ ಇತ್**=ಆ ಯಜಮಾನನನ್ನೇ; **ವೃಧಾ**=ಧನಾದಿವೃದ್ಧಿಯಿಂದ; **ಅವತಿ**=ರಕ್ಷಿಸುತ್ತಾನೆ/**ರಕ್ಷಿಸಲಿ.**

*ವಾ=ಅಥವಾ/ಮತ್ತು ಹೀಗೆ ಎರಡು ಅರ್ಥಗಳು.

**ಪರಸ್ಯಾ ಅಧಿ [..ಅಧಿ(೩)ಸಂವತೋ..] ಸಂವತೋಽವರಾಗ್ಂ ಅಭ್ಯಾ ತರ । ಯತ್ರಾಹಮಸ್ಮಿ ತಾಗ್ಂ ಅವ ॥**

---

ಪರಸ್ಯಾಃ । ಅಧೀತಿ । (೩) । ಸಂವತ ಇತಿ ಸಂ-ವತಃ । ಅವರಾನ್ । ಅಭಿ । ಏತಿ । ತರ ॥ ಯತ್ರ । ಅಹಮ್ । ಅಸ್ಮಿ । ತಾನ್ । ಅವ ॥

---

| ಮಂತ್ರ | ವಿನಿಯೋಗ |
|---|---|
| ಪರಸ್ಯಾ....ಅವ ॥ | ಸ್ವಿಷ್ಟಕೃದ್ಯಾಗದ ವೈಕಲ್ಪಿಕ ಪುರೋನುವಾಕ್ಯೆ-**ಸಾಯಣರು.**<br>ಹದಿನೈದನೆಯ ಸಾಮಿಧೇನೀ-**ಭ.ಭಾ.ಭಾ** |

---

✦**ಪರಸ್ಯಾಃ**=ಶ್ರೇಷ್ಠವಾದ; **ಸಂವತಃ ಅಧಿ**=ಯಾಗಕ್ಕೆ ಅಧಿಷ್ಠಾನವಾಗಿರುವ [ನೀನು]; **ಅವರಾನ್ ಅಭಿ ಆ ತರ**=ನಿಕೃಷ್ಟರಾಗಿರುವ ನಮಗೆ ಅಭಿಮುಖನಾಗಿ ಬಂದು [ನಮ್ಮನ್ನು ದುಃಖಗಳಿಂದ] ದಾಟಿಸು. **ಯತ್ರ ಅಹಮ್ ಅಸ್ಮಿ**=ಯಾವ ಬಂಧುಗಳೊಡನೆ/**ಯಾವ ಕುಲ-ಕಾಲ-ದೇಶಗಳಲ್ಲಿ** ನಾನು ಇದ್ದೇನೆಯೋ; **ತಾನ್ ಅವ**=ಅವರೆಲ್ಲರನ್ನೂ/ಅವೆಲ್ಲವನ್ನೂ ರಕ್ಷಿಸು.

---

ಎಲ್ಲವನ್ನೂ ಅವರ ಅನುಮತಿಯಿಂದಲೇ ನಾವು ಮಾಡುತ್ತೇವೆ. ಎಲ್ಲವನ್ನೂ ತಿಳಿಸುವಂತೆಯೇ ನಾವು ಮಾಡುತ್ತೇವೆ.

ದೇವ ಪ್ರಜೆಗಳು/**ಋತ್ವಿಜರು**-ಹೊಸದಾಗಿ ಕರು ಹಾಕಿರುವ ಹಸುಗಳು ಕರುಗಳನ್ನು ನೆನೆದು ಸುರಿಯುತ್ತಿರುವ ಹಾಲುಳ್ಳವುಗಳಾಗಿ ಅವುಗಳ ಕರುಗಳನ್ನು ಬಿಡದೇ ರಕ್ಷಿಸುವಂತೆ ನಮ್ಮನ್ನು ಪ್ರೀತಿಯಿಂದ ನೋಡುತ್ತಾ ಬಿಡದೇ ರಕ್ಷಿಸುತ್ತಾರೆ/ರಕ್ಷಿಸಲಿ[ದೇವ ಎಂಬ ಶಬ್ದಕ್ಕೆ ಋತ್ವಿಜರು ಎಂಬ ಅರ್ಥವೂ ಇದೆ.]

ನಮಗೆ ಸಮಾನರಾಗಿರುವ, ಕೆಟ್ಟ ಬುದ್ಧಿಯವರಾದ ನಮ್ಮ ಎಲ್ಲಾ ಹಗೆಗಳು ಮಾಡುವ ದ್ರೋಹಗಳು-ನಾವೆಯನ್ನು ಸಣ್ಣ ಅಲೆಗಳು ನಾಶಪಡಿಸದಂತೆ ನಮ್ಮನ್ನು ನಿನ್ನ ರಕ್ಷಣೆಯಿಂದ-ನಾಶಪಡಿಸದಿರಲಿ.

ಅಗ್ನಿದೇವನೇ! ನೀನು ಮಹಾಬಲಶಾಲಿಯಾಗಿರುವೆ. ನೀನು ಪ್ರಕಾಶಮಾನನಾಗಿರುವೆ. ಮನುಷ್ಯರಾದ ನಾವು ನಿನ್ನ ಆ ಬಲಕ್ಕೆ ನಮಸ್ಕರಿಸಿ,ಸ್ತುತಿಸುತ್ತೇವೆ. ನಮಗೆ ದ್ರೋಹವನ್ನು ಮಾಡುತ್ತಿರುವ ವೈರಿಯನ್ನು ರೋಗಾದಿಗಳಿಂದ ನಾಶಪಡಿಸು.

**ವಿದ್ಮಾ ಹಿ ತೇ ಪುರಾ ವಯಮಗ್ನೇ ಪಿತುರ್ಯಥಾಽವಸಃ ।**
**ಅಧಾ ತೇ ಸುಮ್ನಮೀಮಹೇ ॥ ಯ ಉಗ್ರ ಇವ ಶರ್ಯಹಾ**
**ತಿಗ್ಮಶೃಂಗೋ ನ ವಗ್ಂಸಗಃ । ಅಗ್ನೇ ಪುರೋ ರುರೋಜಿಥ ॥**

---

ವಿದ್ಮ । ಹಿ । ತೇ । ಪುರಾ । ವಯಮ್ । ಅಗ್ನೇ । ಪಿತುಃ । ಯಥಾ । ಅವಸಃ ॥ ಅಧ ।
ತೇ । ಸುಮ್ನಮ್ । ಈಮಹೇ ॥ ಯಃ । ಉಗ್ರಃ । ಇವ । ಶರ್ಯಹೇತಿ ಶರ್ಯ-ಹಾ ।
ತಿಗ್ಮಶೃಂಗ ಇತಿ ತಿಗ್ಮ-ಶೃಂಗಃ । ನ । ವಗ್ಂಸಗಃ ॥ ಅಗ್ನೇ । ಪುರಃ । ರುರೋಜಿಥ ॥

---

| ಮಂತ್ರ | ವಿನಿಯೋಗ |
|---|---|
| **ವಿದ್ಮಾ ಹಿ..ಸುಮ್ನಮೀಮಹೇ ॥** | ಸ್ವಿಷ್ಟಕೃದ್ಯಾಗದ ಯಾಜ್ಯೆ-**ಸಾಯಣರು.**<br>ಹದಿನಾರನೆಯ ಸಾಮಿಧೇನೀ-**ಭ.ಭಾ.ಭಾ.** |
| **ಯ ಉಗ್ರ ....ರುರೋಜಿಥ ॥** | ಉಪಹೋಮದ ಮೂರು ಋಕ್‌ಗಳಲ್ಲಿ ಮೊದಲನೆಯದು-**ಸಾಯಣರು**<br>ಹದಿನೇಳನೆಯ ಸಾಮಿಧೇನೀಮಂತ್ರ-**ಭ.ಭಾ.ಭಾ** |

---

✦**ಅಗ್ನೇ**=ಅಗ್ನಿದೇವನೇ! **ಹಿ**=ಯಾವ ಕಾರಣದಿಂದ; **ವಯಮ್**=ನಾವು; **ತೇ**=ನಿನ್ನ **ಅವಸಃ**=ರಕ್ಷಣೆಯನ್ನು; **ಪುರಾ**=ಮೊದಲೇ; **ಪಿತುಃ ಯಥಾ**=ಮಗನು ತಂದೆಯ ರಕ್ಷಣೆಯನ್ನು ಹೇಗೋ ಹಾಗೆ; **ವಿದ್ಮ**=ತಿಳಿದಿರುತ್ತೇವೆಯೋ; **ಅಧ**=ಆ ಕಾರಣದಿಂದ; **ತೇ**=ನಿನ್ನ[**ಅನುಗ್ರಹದಿಂದ**] **ಸುಮ್ನಮ್**=ಸುಖವನ್ನು; **ಈಮಹೇ**=ಹೊಂದುತ್ತೇವೆ. ✦**ಅಗ್ನೇ**=ಅಗ್ನಿಯೇ! **ಯಃ**=ಯಾವ ನೀನು; **ಉಗ್ರಃ ಇವ**=ಕ್ರೂರನಾದ ರಾಜನಂತೆ; **ಶರ್ಯಹಾ**=ಶತ್ರು[**ದುಷ್ಟರನ್ನು**]ಗಳನ್ನು ನಾಶಪಡಿಸುವವನಾಗಿದ್ದೀಯೆ; **ತಿಗ್ಮಶೃಂಗಃ ನ**=ಚೂಪಾದ ಕೊಂಬನ್ನು ಹೊಂದಿರುವ ಮೃಗದಂತೆ[**ಜೋರಾದ ಜ್ವಾಲೆಗಳುಳ್ಳವನಾಗಿರುವೆ**] **ವಗ್ಂಸಗಃ**=ದಾವಾಗ್ನಿರೂಪನಾಗಿ ಕಾಡುಗಳನ್ನು ಹೊಂದುವವನೂ ಆಗಿರುವೆ. [**ನೀನು**] **ಪುರಃ**=ಶತ್ರುಗಳ ಪಟ್ಟಣಗಳನ್ನು; **ರುರೋಜಿಥ** =ಭಯಪಡುವಂತೆ ಮಾಡಿದ್ದೀಯೆ/**ರುದ್ರನಾಗಿ ಶತ್ರುನಗರಗಳನ್ನು ಸುಟ್ಟು ಹಾಕಿದ್ದೀಯೆ/ಮೇಘಗಳನ್ನು ಭೇದಿಸಿ ಮಳೆಯನ್ನು ಕೊಟ್ಟಿದ್ದೀಯೆ.**

**ಸಖಾಯ ಸ್ಸಂ ವಸ್ಸಮ್ಯಂಚಮಿಷಗ್ಗ್ಂ ಸ್ತೋಮಂ ಚಾಗ್ನಯೇ ।**

**ವರ್‌ಷಿಷ್ಠಾಯ ಕ್ಷಿತೀನಾಮೂರ್ಜೋ ನಪ್ತ್ರೇ ಸಹಸ್ವತೇ ॥**

---

ಸಖಾಯಃ । ಸಮಿತಿ । ವಃ । ಸಮ್ಯಂಚಮ್ । ಇಷಮ್ । ಸ್ತೋಮಮ್ । ಚ ।

ಅಗ್ನಯೇ ॥ ವರ್‌ಷಿಷ್ಠಾಯ । ಕ್ಷಿತೀನಾಮ್ । ಊರ್ಜಃ । ನಪ್ತ್ರೇ । ಸಹಸ್ವತೇ ॥

---

| ಮಂತ್ರ | ವಿನಿಯೋಗ |
|---|---|
| **ಸಖಾಯಃ....ಸಹಸ್ವತೇ ॥** | ಎರಡನೆಯ ಉಪಹೋಮದ ಮಂತ್ರ-**ಸಾಯಣರು**<br>ಸಂವರ್ಗೇಷ್ಟಿಯ ಪುರೋನುವಾಕ್ಯೆ-**ಮಿಶ್ರರು** |

---

✦**ಸಖಾಯಃ**=ಅನ್ಯೋನ್ಯವಾಗಿ ಗೆಳೆತನವುಳ್ಳ ಋತ್ವಿಗ್ಯಜಮಾನರೇ!; **ವಃ ಸಮ್ಯಂಚಮ್ ಇಷಮ್**=ನಿಮ್ಮ ಉತ್ತಮವಾದ ಇಷ್ಟಾರ್ಥವನ್ನು; ***ಸಮ್**[ಪಾದಯತು]=ಅಗ್ನಿಯು ಸಂಪಾದಿಸಿ ಕೊಡಲಿ. **[ನೀವು]ಅಗ್ನಯೇ**=ಅಗ್ನಿಗಾಗಿ **ಸ್ತೋಮಮ್ ಚ**=ಸ್ತೋತ್ರವನ್ನೂ; ***ಸಮ್**[ಪಾದಯತ]=ಸಂಪಾದಿಸಿ ಕೊಡಿರಿ/**ಅಗ್ನಿಯನ್ನು ಸ್ತುತಿಸಿರಿ; ಕ್ಷಿತೀನಾಮ್ ವರ್ಷಿಷ್ಠಾಯ**=ಮನುಷ್ಯವಾಸಕ್ಕೆ ಸಾಧನವಾದ ವಸ್ತುಗಳಲ್ಲಿ ಶ್ರೇಷ್ಠನಾದ; **ಊರ್ಜಃ ನಪ್ತ್ರೇ**=ಬಲವನ್ನು ನಾಶಪಡಿಸದಿರುವ/**ಬಲದಿಂದ ನಾಲ್ಕನೆಯವನಾದ;* ಸಹಸ್ವತೇ**= ಅತಿಬಲವಂತನಾದ ಅಗ್ನಿಗೆ ಸ್ತುತಿಯನ್ನು; **ಸಂ**[ಪಾದಯತ]=ಮಾಡಿರಿ.

---

ಅಗ್ನಿದೇವನೇ! ನಾವು ಯಾಗ ಮಾಡಲು ಬಯಸುತ್ತೇವೆ. ಅದಕ್ಕಾಗಿ ಗವಾದಿಗಳನ್ನೂ ಪಡೆಯಲಿಚ್ಛಿಸುತ್ತೇವೆ. ಅವುಗಳಿಗೆ ಬೇಕಾದ ಧನವನ್ನು ಚೆನ್ನಾಗಿ ಕೊಡು. ನೀನು ಎಲ್ಲವನ್ನೂ ಅಧಿಕಗೊಳಿಸುವವನು. ನಮ್ಮ ಯಜ್ಞಫಲವೂ ಅಧಿಕವಾಗುವಂತೆ ಮಾಡು.

ಭಾರವನ್ನು ಹೊರುವ ಎತ್ತು ಮೊದಲಾದವುಗಳು ತಾವು ಹೊರುವ ವಸ್ತುಗಳನ್ನು ಜೋಪಾನ ವಾಗಿ ಹೊರುತ್ತವೆ. ಹಾಗೆಯೇ ನೀನು ನಮಗೆ ಕೊಟ್ಟಿರುವ ಅಧಿಕವಾದ ಧನವು ನಾಶವಾ ಗದಂತೆ ಮಾಡು. ಶತ್ರುಗಳನ್ನು ಸೋಲಿಸಿ, ಹೆಚ್ಚು ಹೆಚ್ಚಾಗಿ ಧನವನ್ನು ತಂದುಕೊಡು.

---

*ಮಂತ್ರದಲ್ಲಿ ಕೇವಲ ಉಪಸರ್ಗದ ಪಾಠವಿದ್ದರೆ ತಕ್ಕ ಕ್ರಿಯೆಯನ್ನು/ಕ್ರಿಯಾಪದವನ್ನು ಅಧ್ಯಾಹಾರ ಮಾಡಬೇಕು.

*ಬಲದಿಂದ ಅನ್ನ(೧), ಅನ್ನದಿಂದ ಆಹುತಿ (೨), ಆಹುತಿಯಿಂದ ಆದಿತ್ಯ(೩), ಆದಿತ್ಯನಿಂದ ಅಗ್ನಿ (೪),

**ಸಗ್ಂ ಸಮಿದ್ಯುವಸೇ ವೃಷನ್ನಗ್ನೇ ವಿಶ್ವಾನ್ಯರ್ಯ ಆ । ಇಡಸ್ಪದೇ ಸಮಿಧ್ಯಸೇ ಸ ನೋ ವಸೂನ್ಯಾ ಭರ ॥**

---

ಸಗ್ಂಸಮಿತಿ ಸಂ-ಸಮ್ । ಇತ್ । ಯುವಸೇ । ವೃಷನ್ನ್ । ಅಗ್ನೇ । ವಿಶ್ವಾನಿ । ಅರ್ಯಃ । ಆ ॥ ಇಡಃ । ಪದೇ । ಸಮಿತಿ । ಇಧ್ಯಸೇ । ಸಃ । ನಃ । ವಸೂನಿ । ಏತಿ । ಭರ ॥

---

| ಮಂತ್ರ | ವಿನಿಯೋಗ |
|---|---|
| **ಸಗ್ಂ ಸಮಿತ್...ಆ ಭರ ॥** | ಮೂರನೆಯ ಉಪಹೋಮದ ಮಂತ್ರ-**ಸಾಂ...ರು.**<br>ಸಂವರ್ಗೇಷ್ಟಿಯ ಯಾಜ್ಯಾಮಂತ್ರ-**ಮಿಶ್ರರು** |

---

✦**ವೃಷನ್ ಅಗ್ನೇ**=ಕಾಮನೆಗಳ ಮಳೆಯನ್ನು ಸುರಿಸುವ ಅಗ್ನಿದೇವನೇ! **ಅರ್ಯಃ**= ಪ್ರಭುವಾದ ನೀನು; **ಆ**[ಗತ್ಯ]=ಬಂದು; **ಸಮ್**[ಪಾದ್ಯ] **ಸಮ್**[ಪಾದ್ಯ] **ಇತ್**= ಸಂಪಾದಿಸಿ ಸಂಪಾದಿಸಿಯೇ **ವಿಶ್ವಾನಿ**=ಸಮಸ್ತಫಲಗಳನ್ನೂ, **ಯುವಸೇ**= ಯಜಮಾನನೊಡನೆ ಸೇರಿಸುತ್ತೀಯೆ; **ಇಡಃ ಪದೇ**=ಪೃಥಿವೀರೂಪವಾದ ವೇದಿಯ ಸ್ಥಾನದಲ್ಲಿ[ಇರುವ ನೀನು] **ಸಮಿಧ್ಯಸೇ**=ಜ್ವಲಿಸಲ್ಪಡುತ್ತೀಯೆ. **ಸಃ**=ಅಂತಹ; [ತ್ವಮ್=ನೀನು] **ವಸೂನಿ**= ಧನಗಳನ್ನು; **ನಃ**=ನಮಗೆ **ಆ ಭರ**=ತಂದು ಕೊಡು.

---

ಓ! ಅಗ್ನಿಯೇ! ನಮ್ಮ ಶತ್ರುವು ಹೆದರಿಕೊಳ್ಳುವಂತೆ ರೋಗಾದಿಪೀಡಿತನನ್ನಾಗಿ ಮಾಡು. ಶತ್ರುವಿನ ರೋಗಾದಿಗಳೂ ವರ್ಧಿಸಲಿ. ನಮ್ಮ ಬಲವೂ ವೃದ್ಧಿಹೊಂದಲಿ. ಹೀಗೆ ನೀನು ಅನುಗ್ರಹಿಸು. ಅಗ್ನಿದೇವನು ಭಕ್ತಿಯಿಂದ ನಮಸ್ಕರಿಸುವ ಮತ್ತು/ಅಥವಾ ಲೋಪವಿಲ್ಲದಂತೆ ಯಾಗವನ್ನು ಮಾಡಿ ಅರ್ಪಿಸುವ ಸುಖಕರವಾದ ಆಹುತಿಯನ್ನು ಸೇವಿಸುತ್ತಾನೆ. ಅನಂತರ ಯಜಮಾನನ ಧನಾದಿಗಳನ್ನು ವೃದ್ಧಿಗೊಳಿಸುತ್ತಾನೆ/ವೃದ್ಧಿಗೊಳಿಸಲಿ.

ಹೇ! ಅಗ್ನಿದೇವನೇ! ನೀನು ಉತ್ಕೃಷ್ಟನು. ಶ್ರೇಷ್ಠವಾದ ಯಜ್ಞಗಳಿಗೆ ಆಧಾರವಾಗಿರುವವನು.ನೀನು ನಮ್ಮ ಎದುರಿಗೆ ಬಾ.ನಮ್ಮ ಕಷ್ಟಗಳೆಲ್ಲವನ್ನೂ ಪರಿಹರಿಸು. ನಮ್ಮ ಬಂಧುಗಳನ್ನು ರಕ್ಷಿಸು,ನಾನು ಯಾವ ದೇಶ-ಕಾಲದಲ್ಲಿ ಇರುವೆನೋ ಅದೆಲ್ಲವನ್ನೂ ರಕ್ಷಿಸು.

ಅಗ್ನಿದೇವನೇ! ನಿನ್ನನ್ನು ತಂದೆಯಂತೆ ತಿಳಿದಿರುತ್ತೇವೆ. ತಂದೆಯು ಮಗನನ್ನು ರಕ್ಷಿಸುವಂತೆ ನೀನು ನಮ್ಮನ್ನು ರಕ್ಷಿಸುವೆಯೆಂದು ಮೊದಲೇ ತಿಳಿದಿರುತ್ತೇವೆ. ಆದುದರಿಂದ ನಿನ್ನಿಂದ ಸುಖವನ್ನು ಕೇಳಿಕೊಳ್ಳುತ್ತೇವೆ. ನೀನು ನಮಗೆ ಸುಖವನ್ನು ಕೊಡು/**ನಿನ್ನ ಅನುಗ್ರಹದಿಂದ**

## ಪ್ರಜಾಪತೇ*ಸ ವೇದ*ಸೋಮಾಪೂಷಣೇ*ಮೌ ದೇವೌ* ||೬೪-11||

[ಯಜ್ಞಮಮ್ಯೈರಧಿವೃಷನ್ನೇಕಾನ್ನವಿಗ್‌ಂಶತಿಶ್ಚ ||]

ಪ್ರಜಾಪತ ಇತಿ ಪ್ರಜಾ-ಪತೇ । ಸಃ । ವೇದ । ಸೋಮಾಪೂಷಣೇತಿ ಸೋಮಾ-ಪೂಷಣಾ । ಇಮೌ । ದೇವೌ ||೬೪||

| ಮಂತ್ರ | ವಿನಿಯೋಗ |
|---|---|
| *ಪ್ರಜಾಪತೇ...ರಯೀಣಾಮ್ \|\| | ಪ್ರಾಜಾಪತ್ಯ ಗಾರ್ಮುತಚರುಯಾಗದ ಪುರೋನುವಾಕ್ಯೆ |
| *ಸ ವೇದ....ಅಭವತ್ \|\| | ಪ್ರಾಜಾಪತ್ಯ ಗಾರ್ಮುತಚರುಯಾಗದ ಯಾಜ್ಯೆ. |
| *ಸೋಮಾಪೂಷಣಾ...ನಾಭಿಮ್ \|\| | ಸೋಮಾಪೌಷ್ಣಗಾರ್ಮುತಚರುಯಾಗದ ಪುರೋನುವಾಕ್ಯೆ. |
| *ಇಮೌ ದೇವೌ...ಉಸ್ರಿಯಾಸು \|\| | ಸೋಮಾಪೌಷ್ಣಗಾರ್ಮುತಚರುಯಾಗದ ಯಾಜ್ಯೆ. |

**ಸುಖವನ್ನು ಪಡೆಯುತ್ತೇವೆ.**

ಅಗ್ನಿದೇವನೇ! ನೀನು ಕಠಿನನಾದ ರಾಜನಂತೆ ಹಿಂಸೆ ಮಾಡುವ ದುಷ್ಟರನ್ನು ಕೊಲ್ಲುವವನು. ಚೂಪಾಗಿರುವ ಕೊಂಬುಗಳುಳ್ಳ ಮೃಗದಂತೆ ತೀಕ್ಷ್ಣವಾದ ಜ್ವಾಲೆಗಳುಳ್ಳವನು. ದಾವಾಗ್ನಿರೂಪನಾಗಿ ಕಾಡುಗಳನ್ನು ಸುಡುವವನು.ನೀನು ಹಗೆಗಳ ಪುರಗಳನ್ನು ತಲ್ಲಣಗೊಳ್ಳುವಂತೆ ಮಾಡುವವನು/ **ರುದ್ರರೂಪದಿಂದ ತ್ರಿಪುರನಾಶಕನು. ಮೇಘಗಳನ್ನು ಭೇದಿಸಿ, ಮಳೆಯನ್ನು ಕೊಟ್ಟು ಉಪಕಾರವನ್ನು ಮಾಡುವವನು. ನೀನು ದುಷ್ಟರಿಗೆ ಉಗ್ರನೂ,ಶಿಷ್ಟರಿಗೆ ಉಪಕಾರಿಯೂ ಆಗಿರುವೆ.**

ಗೆಳೆಯರಾದ ಋತ್ವಿಗ್ಯಜಮಾನರೇ! ಅಗ್ನಿದೇವನು ನಿಮ್ಮ ಇಷ್ಟಾರ್ಥಗಳನ್ನು ಕರುಣಿಸಲಿ. ನೀವು ಮನುಷ್ಯರ ವಾಸಕ್ಕೆ ಶ್ರೇಷ್ಠಸಾಧನವಾಗಿರುವ ಬಲವನ್ನು ನಾಶ ಮಾಡದೇ ರಕ್ಷಿಸುವ

* ಈ ಮಂತ್ರಗಳು ಕ್ರಮವಾಗಿ ತೈ.ಸಂ 1.8.14, 2.2.12, 1.8.22,ಹಾಗೂ1.8.22, ರಲ್ಲಿ ಪಠಿತವಾಗಿವೆ. ಪದಪಾಠವೂ, ಪದಶಃ ಅರ್ಥವನ್ನೂ ಅಲ್ಲಿ ನೀಡಲಾಗಿದೆ. ಇಲ್ಲಿ ಪ್ರತೀಕಪಾಠವಿರುತ್ತದೆ. ಆ ಮಂತ್ರಗಳ ತಾತ್ಪರ್ಯವನ್ನು ಇಲ್ಲಿ ಕೊಡಲಾಗಿದೆ.

ಬಲವಂತನಾದ ಅಗ್ನಿಯನ್ನು ಸ್ತುತಿಸಿರಿ.

ಅಗ್ನಿದೇವನೇ! ನೀನು ಯಜಮಾನರಿಗಾಗಿ ಇಷ್ಟಾರ್ಥಗಳ ಮಳೆಯನ್ನೇ ಸುರಿಸತಕ್ಕವನು. ನೀನು ಪ್ರಭುವು. ಯಜಮಾನರಿಗೆ ಎಲ್ಲಾ ಕಾಮನೆಗಳೂ ಒದಗುವಂತೆ ಮಾಡತಕ್ಕವನು. ವೇದಿಯಲ್ಲಿ ಆಹುತಿಗಳನ್ನು ಸ್ವೀಕರಿಸಿ ಪ್ರಜ್ವಲಿಸುವ ನೀನು ಧನಗಳನ್ನು ತಂದು ಕೊಡು.

**ಪ್ರತೀಕಮಂತ್ರಗಳ ತಾತ್ಪರ್ಯ:-**

**ಪ್ರಜಾಪತೇ...ರಯೀಣಾಮ್ ॥**

ಪ್ರಜಾಪತಿದೇವನೇ! ನಿನ್ನ ಹೊರತು ಬೇರೆ ಯಾವನೂ ಹುಟ್ಟಿರುವ ಎಲ್ಲ ಲೋಕಗಳನ್ನೂ ವ್ಯಾಪಿಸಲಾರನು. ನೀನು ಸರ್ವವ್ಯಾಪಕನು. ಇಂತಹ ಮಹಿಮೆಯುಳ್ಳ ನಿನ್ನನ್ನು ನಾವು ಯಾವ ಕಾಮನೆಯಿಂದ ಆರಾಧಿಸುತ್ತೇವೆಯೋ ಆ ಇಷ್ಟಾರ್ಥವು ನಿನ್ನ ಅನುಗ್ರಹದಿಂದ ಲಭಿಸಲಿ. ನಾವು ಅಧಿಪತಿಗಳಾಗುವಂತೆ ಅನುಗ್ರಹಿಸು.

---

**ಸ ವೇದ....ಅಭವತ್ ॥**

ಸರ್ವಸ್ವರೂಪನಾದ ಪ್ರಜಾಪತಿಯು ಪುತ್ರನಾಗಿ ತಾಯಿತಂದೆಗಳನ್ನು ತಿಳಿದಿರುತ್ತಾನೆ. ಅವನು ಮಗನಾಗಿದ್ದಾನೆ/**ಸೋಮಯಾಗದ ಯಜಮಾನನಾಗಿದ್ದಾನೆ.** ಅವನು ಮತ್ತೆಮತ್ತೆ ಮಾಡುವ ಯಜ್ಞಸ್ವರೂಪನೂ ಆಗಿರುತ್ತಾನೆ. ಅವನೇ ಭೂಲೋಕ,ಸ್ವರ್ಗಲೋಕಗಳನ್ನೂ, ಅಂತರಿಕ್ಷವನ್ನೂ ತನ್ನ ತೇಜಸ್ಸಿನಿಂದ ವ್ಯಾಪಿಸುತ್ತಾನೆ. ಅವನೇ ಎಲ್ಲ ಜಯಸ್ವರೂಪನೂ ಆಗಿರುತ್ತಾನೆ. ಅವನೇ ಎಲ್ಲವೂ ಆಗಿರುತ್ತಾನೆ. ಅವನು ಅನುಗ್ರಹಿಸಲಿ.

---

**ಸೋಮಾಪೂಷಣಾ...ನಾಭಿಮ್ ॥**

ಸೋಮಾಪೂಷದೇವತೆಗಳೇ! ನೀವು ಧನವನ್ನು ಉಂಟುಮಾಡತಕ್ಕವರು. ಭೂಲೋಕ, ಸ್ವರ್ಗಲೋಕಗಳನ್ನು ಉಂಟುಮಾಡಿದವರು. ನೀವು ಹುಟ್ಟಿದೊಡನೆಯೇ ಎಲ್ಲಾ ಭುವನಕ್ಕೂ/**ಪ್ರಾಣಿಜಾತಕ್ಕೂ** ರಕ್ಷಕರಾಗಿರುತ್ತೀರಿ. ದೇವತೆಗಳು ನಿಮ್ಮನ್ನು ಅಮೃತದ ನಾಭಿಯನ್ನಾಗಿ/**ಬಂಧಕರನ್ನಾಗಿ** ಮಾಡಿರುತ್ತಾರೆ.

---

**ಇಮೌ ದೇವೌ...ಉಸ್ರಿಯಾಸು ॥**

ಸೋಮ-ಪೂಷದೇವತೆಗಳು ಜನಿಸಿದಾಗಲೇ ದೇವತೆಗಳು ಅವರನ್ನು ಸೇವಿಸಿದರು. ಇವರಿಬ್ಬರು ಕತ್ತಲೆಯನ್ನು/**ಅಜ್ಞಾನವನ್ನು** ಹೊಂದದೇ ತಮಸ್ಸನ್ನು ದೂರಮಾಡಿದರು. ಇವರಿಬ್ಬರು ಜತೆಯಲ್ಲಿ ಇರುವುದರಿಂದಲೇ ಇಂದ್ರನು ಪಡ್ಡೆಹಸುಗಳಲ್ಲಿ ಪರಿಪಕ್ವವಾದ ಹಾಲನ್ನು ಉಂಟುಮಾಡುತ್ತಾನೆ. ಸೋಮ-ಪೂಷದೇವತೆಗಳು ಆದಿತ್ಯರಶ್ಮಿಗಳಲ್ಲಿ ಸಂವತ್ಸರ ಧೃತವಾದ ನೀರನ್ನು ಉಂಟುಮಾಡುತ್ತಾರೆ.

# ವಿನಿಯೋಗ ಸಂಗ್ರಹ

ಸಂವರ್ಗೇಷ್ಟೌ ಸಾಮಿಧೇನ್ಯೋ ದಶ[10] ತಿಸ್ರಸ್ತು[11-13] ಯಾಜ್ಯಕಾಃ ।

[14-16]ಸಂಯಾಜ್ಯಾಸ್ತಿಸ್ರ ಉದಿತಾ ಉಪಹೋಮಾ[17-19] ಸ್ತ್ರಯೋ ಮತಾಃ ॥

[20]ಪ್ರಜಾಸವೇ [21]ದ್ವಯಂ ಯೋಜ್ಯಂ ಗಾರ್ಮುತೇ ಪ್ರಥಮೋ ಭವೇತ್ ।

[22-23] ಸೋಮೇವಮೌ ತದ್ದ್ವಿತೀಯೇ ಸ್ತುಸ್ತ್ರಯೋವಿಂಶತಿರೀರಿತಾಃ ॥

## ಅನುವಾಕದಲ್ಲಿ ಮಂತ್ರಗಳ ಸಂಖ್ಯೆ-23

| | |
|---|---|
| ಸಂವರ್ಗೇಷ್ಟಿಯ ಸಾಮಿಧೇನಿಗಳು | 10 |
| ಅದರ ಯಾಜ್ಯಾ-ಪುರೋನುವಾಕ್ಯೆಗಳು | 3 |
| ಸ್ವಿಷ್ಟಕೃದ್ಯಾಗದ ಯಾಜ್ಯಾನುವಾಕ್ಯೆಗಳು ಸಂಯಾಜ್ಯೆಗಳು | 3 |
| ಉಪಹೋಮದ ಮಂತ್ರಗಳು | 3 |
| ಪ್ರಾಜಾಪತ್ಯ ಗಾರ್ಮುತಚರುಯಾಗದ ಪುರೋನುವಾಕ್ಯೆ-ಯಾಜ್ಯಾನುವಾಕ್ಯೆ | 2 |
| ಸೋಮಾಪೌಷ್ಣ ಗಾರ್ಮುತಚರುಯಾಗದ ಪುರೋನುವಾಕ್ಯೆ-ಯಾಜ್ಯೆ | 2 |
| | 23 |

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

### ೧) ಋತ್ವಿಜರಲ್ಲಿನ ಕರ್ಮಾನುಷ್ಠಾನವು ನಿಯತವೇ? ಅನಿಯತವೇ?

**[ಜೈ.ಸೂ.3.2]**

ಋಗ್ವೇದದಲ್ಲಿ ಯಾಜ್ಯೆಗಳ ಪಾಠವಿದೆ. ಯಜುರ್ವೇದದಲ್ಲಿ ದೋಹನ ಮಂತ್ರ-ವಿಧಿಗಳು ಇವೆ ಸಾಮವೇದದಲ್ಲಿ ಆಜ್ಯಸ್ತೋತ್ರಾದಿಗಳು ಇವೆ. ಹೀಗಿರುವಲ್ಲಿ ಯಾಜ್ಯಾಪಾಠವನ್ನು ಹೋತೃ,ಅಧ್ವರ್ಯು ಮತ್ತು ಉದ್ಗಾತೃಗಳಲ್ಲಿ ಯಾರಾದರೂ ಅನುಷ್ಠಿಸಬಹುದೇ? ಅಥವಾ ಋತ್ವಿಜರಿಗೆ ನಿಯಾಮಕವಿದೆಯೇ? ಇದು ಇಲ್ಲಿನ **ಸಂಶಯ.**

ಇವುಗಳಿಗೆ ನಿಯಾಮಕವಿಲ್ಲದಿರುವುದರಿಂದ ಯಾರಾದರೂ ಇವುಗಳನ್ನು ಅನುಷ್ಠಿಸ ಬಹುದು. ಇದು ಇಲ್ಲಿನ **ಪೂರ್ವಪಕ್ಷ.**

ಹೌತ್ರ, ಆಧ್ವರ್ಯವ, ಔದ್ಗಾತ್ರ ಎಂಬ ಸಮಾಖ್ಯಾನಗಳು ಇರುವುದರಿಂದ ಅವುಗಳೇ ನಿಯಾಮಕಗಳಾಗುತ್ತವೆ. ಹೀಗಾಗಿ ಆಯಾ ವರ್ಗದವರೇ ಆಯಾ ಕರ್ಮಗಳನ್ನು ಅನುಷ್ಠಿಸಬೇಕು. ಸಮಾಖ್ಯಾನವೇ ನಿಯಾಮಕ. ಇದು ಇಲ್ಲಿನ **ಸಿದ್ಧಾಂತ.**

* * *

## ಆ) ಛಂದಸ್ಸು

| **ಮಂತ್ರ** | **ಛಂದಸ್ಸಿನ ಹೆಸರು** |
|---|---|
| ಯುಕ್ಷ್ವಾ ಹಿ...ಸದಃ ॥ | ಗಾಯತ್ರೀ |
| ಉತ ನೋ ದೇವ...ಕೃಧಿ ॥ | ಗಾಯತ್ರೀ |
| ತ್ವಗ್ಂ ಹ...ಭುವಃ ॥ | ಗಾಯತ್ರೀ |
| ಅಯಮಗ್ನಿಃ...ರಯೀಣಾಮ್ ॥ | ಗಾಯತ್ರೀ |
| ತಂ ನೇಮಿಮ್...ಅಂಗಿರಃ ॥ | ಗಾಯತ್ರೀ |
| ತಸ್ಮೈ ನೂನಮ್...ಸುಷ್ಟುತಿಮ್ ॥ | ಗಾಯತ್ರೀ |
| ಕಮು ಷ್ವಿದಸ್ಯ...ಸ್ತರಾಮಹೇ ॥ | ಗಾಯತ್ರೀ |
| ಮಾ ನೋ...ಅಘ್ನಿಯಾಃ ॥ | ಗಾಯತ್ರೀ |
| ಮಾ ನಸ್ಸಮಸ್ಯ...ವಧೀತ್ ॥ | ಗಾಯತ್ರೀ |
| ನಮಸ್ತೇ....ಅರ್ದಯ ॥ | ಗಾಯತ್ರೀ |

| | |
|---|---|
| ಕುವಿಥ್ಸು ನೋ...ಕೃಧಿ ॥ | ಗಾಯತ್ರೀ |
| ಮಾ ನೋ...ಜಯ ॥ | ಗಾಯತ್ರೀ |
| ಅನ್ಯಮಸ್ಮತ್...ಶವಃ ॥ | ಗಾಯತ್ರೀ |
| ಯಸ್ಯಾಜುಷತ್...ವೃಧಾಽವತಿ ॥ | ಗಾಯತ್ರೀ |
| ಪರಸ್ಯಾ...ಅವ ॥ | ಗಾಯತ್ರೀ |
| ವಿದ್ಮಾ ಹಿ...ಸುಮ್ನಮೀಮಹೇ ॥ | ಗಾಯತ್ರೀ |
| ಯ ಉಗ್ರ ಇವ...ರುರೋಜಿಥ ॥ | ಗಾಯತ್ರೀ |
| ಸಖಾಯಃ...ಸಹಸ್ವತೇ ॥ | ಅನುಷ್ಟುಪ್ |
| ಸಗ್ಂ ಸಮಿತ್...ಆಭರ ॥ | ಅನುಷ್ಟುಪ್ |
| ಪ್ರಜಾಪತೇ...ರಯೀಣಾಮ್ ॥ | ತ್ರಿಷ್ಟುಪ್ |
| ಸಃ ವೇದ....ಆಭವತ್ ॥ | ತ್ರಿಷ್ಟುಪ್ |
| ಸೋಮಾಪೂಷಣಾ...ನಾಭಿಮ್ ॥ | ತ್ರಿಷ್ಟುಪ್ |
| ಇಮೌ ದೇವೌ...ಉಸ್ರಿಯಾಸು ॥ | ತ್ರಿಷ್ಟುಪ್ |

## ॥ ದ್ವಾದಶೋಽನುವಾಕಃ ॥

**ಉಶಂತಸ್ತ್ವಾ ಹವಾಮಹ ಉಶಂತಸ್ಸಮಿಧೀಮಹಿ ।**

**ಉಶನ್ನುಶತ ಆ ವಹ ಪಿತ್ರ್ಯಾನ್ ಹವಿಷೇ ಅತ್ತವೇ ॥**

---

ಉಶಂತಃ । ತ್ವಾ । ಹವಾಮಹೇ । ಉಶಂತಃ । ಸಮಿತಿ । ಇಧೀಮಹಿ ॥ ಉಶನ್ । ಉಶತಃ । ಏತಿ । ವಹ । ಪಿತ್ರ್ಯಾನ್ । ಹವಿಷೇ । ಅತ್ತವೇ ॥

---

ಹನ್ನೊಂದನೆಯ ಅನುವಾಕದಲ್ಲಿ ಸಂವರ್ಗೇಷ್ಟ್ಯಾದಿಗಳ ಹೌತ್ರವು ಹೇಳಲ್ಪಟ್ಟಿದೆ. ಈ ಹನ್ನೆರಡನೆಯ ಅನುವಾಕದಲ್ಲಿ ಪಿತೃಯಜ್ಞಹವಿಸ್ಸುಗಳ ಹೌತ್ರವು ಹೇಳಲ್ಪಟ್ಟಿದೆ.

| ಮಂತ್ರ | ವಿನಿಯೋಗ |
|---|---|
| ಉಶಂತಸ್ತ್ವಾ...ಅತ್ತವೇ ॥ | ಈ ಸಾಮಿಧೇನೀ ಋಕ್ ಅನ್ನು ಮೂರು ಬಾರಿ ಹೇಳಲು |

---

+[ಅಗ್ನಿಯೇ!ನಾವು]**ಉಶಂತಃ**=ಪಿತೃದೇವತೆಗಳನ್ನು ಅಪೇಕ್ಷಿಸುವವರಾಗಿ; **ತ್ವಾ**=ನಿನ್ನನ್ನು; **ಹವಾಮಹೇ**=ಆಹ್ವಾನಿಸುತ್ತೇವೆ; **ಉಶಂತಃ**=ಪಿತೃದೇವತೆಗಳನ್ನು ಅಪೇಕ್ಷಿಸುವವರಾಗಿ; **ಸಮಿಧೀಮಹಿ**=[ನಿನ್ನನ್ನು] ಜ್ವಲನಗೊಳಿಸುತ್ತೇವೆ. **ಉಶನ್**=ಇಷ್ಟಪಡುವ ನೀನು; **ಉಶತಃ**= ಹವಿರ್ಭಾಗವನ್ನು ಅಪೇಕ್ಷಿಸುವ/**ಪಿತೃದೇವತೆಗಳ ಆಗಮನವನ್ನು ಕೋರುವ ಯಜಮಾನನ;** **ಪಿತ್ರ್ಯಾನ್**=ಪಿತೃದೇವತೆಗಳನ್ನು; **ಹವಿಷೇ ಅತ್ತವೇ**=ಹವಿಸ್ಸನ್ನು ಭುಜಿಸುವುದಕ್ಕಾಗಿ; **ಆ ವಹ**=ಆಹ್ವಾನಿಸು.

ತ್ವಗ್ಂ ಸೋಮ ಪ್ರಚಿಕಿತೋ ಮನೀಷಾ ತ್ವಗ್ಂ ರಜಿಷ್ಠಮನು ನೇಷಿ ಪಂಥಾಮ್ । ತವ ಪ್ರಣೇತೀ ಪಿತರೋ ನ ಇಂದೋ ದೇವೇಷು ರತ್ನಮಭಜಂತ ಧೀರಾಃ ॥

---

ತ್ವಮ್ । ಸೋಮ । ಪ್ರಚಿಕಿತ ಇತಿ ಪ್ರ-ಚಿಕಿತಃ । ಮನೀಷಾ । ತ್ವಮ್ । ರಜಿಷ್ಠಮ್ । ಅನ್ವಿತಿ । ನೇಷಿ । ಪಂಥಾಮ್ ॥ ತವ । ಪ್ರಣೇತೀತಿ ಪ್ರ-ನೀತೀ । ಪಿತರಃ । ನಃ । ಇಂದೋ ಇತಿ । ದೇವೇಷು । ರತ್ನಮ್ । ಅಭಜಂತ । ಧೀರಾಃ ॥

---

| ಮಂತ್ರ | ವಿನಿಯೋಗ |
|---|---|
| ತ್ವಗ್ಂ ಸೋಮ...ಧೀರಾಃ ॥ | ಸೋಮದೇವತೆಯ ಯಾಗದ ಮೊದಲನೆಯ ಪುರೋನುವಾಕ್ಯೆ. |

---

+ **ಸೋಮ**=ಸೋಮದೇವನೇ! **ತ್ವಮ್**=ನೀನು; **ಮನೀಷಾ**=ನಮ್ಮ ಬುದ್ಧಿಯಿಂದ; **ಪ್ರಚಿಕಿತಃ**=ಚೆನ್ನಾಗಿ ತಿಳಿಯಲ್ಪಟ್ಟವನು; **ತ್ವಮ್**=ನೀನು; **ರಜಿಷ್ಠಮ್**=ಅನ್ನೋದಕಪೂರ್ಣವಾಗಿ ರಮಣೀಯವಾಗಿರುವ; **ಪಂಥಾಮ್**=ಮಾರ್ಗವನ್ನು; **ಅನು ನೇಷಿ**=ಅನುಕ್ರಮವಾಗಿ ಹೊಂದಿಸುವೆ. **ಇಂದೋ**=ಎಲೈ! ಸೋಮನೇ! **ನಃ ಪಿತರಃ**=ನಮ್ಮ ಪಿತೃಗಳು; **ತವ ಪ್ರಣೇತೀ**=ನಿನ್ನ ಪರಿಚರಣೆಯಿಂದ; **ದೇವೇಷು**=ದೇವತೆಗಳ ಮಧ್ಯದಲ್ಲಿ **ಧೀರಾಃ**= ಧೈರ್ಯವುಳ್ಳವರಾಗಿ; **ರತ್ನಮ್ ಅಭಜಂತ**=ರತ್ನದಂತೆ ಉತ್ತಮವಾದ ಹವಿಸ್ಸನ್ನು ಸೇವಿಸಿದರು.

---

ಅಗ್ನಿದೇವನೇ! ಈ ಪಿತೃಯಜ್ಞದಲ್ಲಿ ಪಿತೃಗಳನ್ನು ಕರೆತರಲು ಇಚ್ಛಿಸುವವರಾಗಿ ನಾವು ನಿನ್ನನ್ನು ಆಹ್ವಾನಿಸುತ್ತೇವೆ. ಪ್ರಜ್ವಲಿಸುವಂತೆ ಮಾಡುತ್ತೇವೆ. ನೀನು ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ-ಹವಿಸ್ಸನ್ನು ಅಪೇಕ್ಷಿಸುವ-ಯಜಮಾನನ ಪಿತೃದೇವತೆಗಳನ್ನು ಆಹ್ವಾನಿಸು.

ಎಲೈ! ಸೋಮನೇ! ನಮ್ಮ ಬುದ್ಧಿಯಿಂದ ನಿನ್ನ ಮಹಿಮೆಯನ್ನು ತಿಳಿದಿರುತ್ತೇವೆ. ನೀನು ಅನ್ನೋದಕಸಮೃದ್ಧವಾದ ರಮಣೀಯವಾದ ಮಾರ್ಗವನ್ನು ಹೊಂದಿಸತಕ್ಕವನು.

**ತ್ವಯಾ ಹಿ ನಃ ಪಿತರಸ್ಸೋಮ ಪೂರ್ವೇ ಕರ್ಮಾಣಿ ಚಕ್ರುಃ ಪವಮಾನ ಧೀರಾಃ । ವನ್ವನ್ನವಾತಃ ಪರಿಧೀಗ್ಂ ರಪೋರ್ಣು ವೀರೇಭಿರಶ್ವೈರ್ಮಘವಾ ಭವಾ [..ಭವ(೧)ನಃ ।..] ನಃ ॥**

---

ತ್ವಯಾ । ಹಿ । ನಃ । ಪಿತರಃ । ಸೋಮ । ಪೂರ್ವೇ । ಕರ್ಮಾಣಿ । ಚಕ್ರುಃ । ಪವಮಾನ । ಧೀರಾಃ ॥ ವನ್ವನ್ । ಅವಾತಃ । ಪರಿಧೀನಿತಿ ಪರಿ-ಧೀನ್ । ಅಪೇತಿ । ಊರ್ಣು । ವೀರೇಭಿಃ । ಅಶ್ವೈಃ । ಮಘವೇತಿ ಮಘ-ವಾ । ಭವ । (೧) । ನಃ ॥

---

| ಮಂತ್ರ | ವಿನಿಯೋಗ |
|---|---|
| **ತ್ವಯಾ ಹಿ ನಃ...ಭವಾ ನಃ ॥** | ಸೋಮದೇವತೆಯ ಯಾಗದ ಎರಡನೆಯ ಪುರೋನುವಾಕ್ಯೆ. |

---

✝**ಸೋಮ**=ಸೋಮದೇವನೇ! **ಪವಮಾನ**=ಪರಿಶೋಧಕನೇ!; **ನಃ**=ನಮ್ಮ; **ಪೂರ್ವೇ ಪಿತರಃ**=ಹಿಂದಿನ ಪಿತೃಗಳು; **ತ್ವಯಾ**=ನಿನ್ನಿಂದ [ಅನುಗೃಹೀತರಾಗಿ] **ಧೀರಾಃ**=ಧೈರ್ಯ ಯುಕ್ತರಾಗಿ/**ಧೀಮಂತರಾಗಿ; ಕರ್ಮಾಣಿ ಚಕ್ರುಃ ಹಿ**=ಅಗ್ನಿಷ್ಟೋಮಾದಿಕರ್ಮಗಳನ್ನೂ, ಪಿತೃಯಜ್ಞಾದಿಗಳನ್ನೂ ಅನುಷ್ಠಿಸಿದರಷ್ಟೆ! [ಸೋಮದೇವನೇ!] **ಅವಾತಃ**=ವಾಯುವಿನ ಸಹಾಯ ವಿಲ್ಲದೆಯೇ; **ವನ್ವನ್**=[ನಮ್ಮ ಹವಿಸ್ಸುಗಳನ್ನು ಭಕ್ಷಿಸಿ] ತೃಪ್ತನಾಗಿ; **ವೀರೇಭಿಃ ಅಶ್ವೈಃ**=ಯುದ್ಧಕುಶಲಗಳಾದ ಕುದುರೆಗಳಿಂದ [ಕೂಡಿದವನಾಗಿ] **ಪರಿಧೀನ್ ಅಪೋರ್ಣು**=ಪ್ರತಿಬಂಧಕ ಗಳನ್ನು ಹೋಗಲಾಡಿಸು; **ನಃ ಮಘವಾ ಭವ**=ನಮಗೆ ಅನುಗ್ರಹಿಸಲು ಧನವಂತನಾಗು;

---

ನಿನ್ನ ಪರಿಚರಣೆಯಿಂದ ನಮ್ಮ ಪಿತೃಗಳು ದೇವತೆಗಳ ಮಧ್ಯದಲ್ಲಿ ಧೀರರಾಗಿ ಕುಳಿತು ಹವಿಸ್ಸನ್ನು ಸೇವಿಸುವಂತಾದರು.

ಸೋಮದೇವನೇ! ನಿನ್ನ ಅನುಗ್ರಹದಿಂದ ನಮ್ಮ ಪೂರ್ವಪಿತೃಗಳು ಯಾಗಾದಿಕರ್ಮ ಗಳನ್ನು ಮಾಡಿ ಧೀರರಾಗಿ ಸ್ವರ್ಗವನ್ನು ಹೊಂದಿದರು. ನೀನು ವಾಯುವಿನ ಬೆಂಬಲ ವಿಲ್ಲದೆಯೇ ನಮ್ಮ ಹವಿಸ್ಸನ್ನು ಸ್ವೀಕರಿಸು. ನಮಗೆ ಧನವನ್ನು ಅನುಗ್ರಹಿಸು.

**ತ್ವಗ್ಂ ಸೋಮ ಪಿತೃಭಿಸ್ಸಂವಿದಾನೋಽನು ದ್ಯಾವಾಪೃಥಿವೀ ಆ ತತನ್ಥ । ತಸ್ಮೈ ತ ಇಂದೋ ಹವಿಷಾ ವಿಧೇಮ ವಯಗ್ಗ್ಂ ಸ್ಯಾಮ ಪತಯೋ ರಯೀಣಾಮ್ ॥**

---

ತ್ವಮ್ । ಸೋಮ । ಪಿತೃಭಿರಿತಿ ಪಿತೃ-ಭಿಃ । ಸಂವಿದಾನ ಇತಿ ಸಂ-ವಿದಾನಃ । ಅನ್ವಿತಿ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಏತಿ । ತತನ್ಥ ॥ ತಸ್ಮೈ । ತೇ । ಇಂದೋ ಇತಿ । ಹವಿಷಾ । ವಿಧೇಮ । ವಯಮ್ । ಸ್ಯಾಮ । ಪತಯಃ । ರಯೀಣಾಮ್ ॥

---

| ಮಂತ್ರ | ವಿನಿಯೋಗ |
|---|---|
| **ತ್ವಗ್ಂ ಸೋಮ...ರಯೀಣಾಮ್ ॥** | ಸೋಮದೇವತೆಯಯಾಗದ ಯಾಜ್ಯಾನುವಾಕ್ಯೆ. |

---

✝**ಸೋಮ**=ಸೋಮದೇವನೇ! **ತ್ವಮ್**=ನೀನು **ಪಿತೃಭಿಃ ಸಂವಿದಾನಃ**=ಪಿತೃದೇವತೆಗಳಿಂದ ಐಕಮತ್ಯವನ್ನು ಹೊಂದಿದವನಾಗಿ; **ಅನು ದ್ಯಾವಾಪೃಥಿವೀ**=ದ್ಯಾವಾಪೃಥಿವಿಗಳನ್ನು ಅನುಕ್ರಮವಾಗಿ **ಆತತಂಥ**=[ತೇಜಸ್ಸಿನಿಂದ] ವ್ಯಾಪಿಸಿರುವೆ; **ಇಂದೋ**=ಸೋಮನೇ! **ತಸ್ಮೈ ತೇ**=ಅಂತಹ ನಿನಗೆ; **ಹವಿಷಾ ವಿಧೇಮ**=ಹವಿಃಪ್ರದಾನದಿಂದ ಪರಿಚರ್ಯೆಯನ್ನು ಮಾಡುತ್ತೇವೆ. **ವಯಮ್**=ನಾವು; **ರಯೀಣಾಮ್ ಪತಯಃ ಸ್ಯಾಮ**=[ನಿನ್ನ ಪ್ರಸಾದದಿಂದ] ಧನವಂತರಾಗುವಂತಾಗಲಿ.

---

ಸೋಮದೇವನೇ! ನೀನು ಪಿತೃದೇವತೆಗಳೊಡನೆ ಕೂಡಿ ದ್ಯಾವಾಪೃಥಿವಿಗಳನ್ನು ತೇಜಸ್ಸಿನಿಂದ ವ್ಯಾಪಿಸಿದೆ. ನಿನಗೆ ಹವಿಸ್ಸನ್ನು ಅರ್ಪಿಸುತ್ತೇವೆ. ನಿನ್ನ ಅನುಗ್ರಹದಿಂದ ನಾವು ಧನಿಗಳಾಗುವಂತಾಗಲಿ.

**ಅಗ್ನಿಷ್ವಾತ್ತಾಃ ಪಿತರ ಏಹ ಗಚ್ಛತ ಸದಸ್ಸದಸ್ಸದತ ಸುಪ್ರಣೀತಯಃ। ಅತ್ತಾ ಹವೀಗ್ಂಷಿ ಪ್ರಯತಾನಿ ಬರ್ಹಿಷ್ಯಥಾ ರಯಿಗ್ಂ ಸರ್ವವೀರಂ ದಧಾತನ ॥**

---

ಅಗ್ನಿಷ್ವಾತ್ತಾ ಇತ್ಯಗ್ನಿ-ಸ್ವಾತ್ತಾಃ । ಪಿತರಃ । ಏತಿ । ಇಹ । ಗಚ್ಛತ । ಸದಸ್ಸದ ಇತಿ ಸದಃ-ಸದಃ । ಸದತ । ಸುಪ್ರಣೀತಯ ಇತಿ ಸು-ಪ್ರಣೀತಯಃ ॥ ಅತ್ತ । ಹವೀಗ್ಂಷಿ । ಪ್ರಯತಾನೀತಿ ಪ್ರ-ಯತಾನಿ । ಬರ್ಹಿಷಿ । ಅಥ । ರಯಿಮ್ । ಸರ್ವವೀರಮಿತಿ ಸರ್ವ-ವೀರಮ್ । ದಧಾತನ ॥

---

| ಮಂತ್ರ | ವಿನಿಯೋಗ |
|---|---|
| **ಅಗ್ನಿಷ್ವಾತ್ತಾಃ...ದಧಾತನ ॥** | ಅಗ್ನಿಷ್ವಾತ್ತರಿಗೆ ಕೊಡುವ ಮಂಥಯಾಗದ ಪುರೋನುವಾಕ್ಯೆ. |

---

+**ಅಗ್ನಿಷ್ವಾತ್ತಾಃ**=*ಅಗ್ನಿಷ್ವಾತ್ತರೆಂಬ*; **ಪಿತರಃ**=ಪಿತೃದೇವತೆಗಳೇ! **ಇಹ**=ಈ ಯಾಗದಲ್ಲಿ **ಆ ಗಚ್ಛತ**=ಬನ್ನಿರಿ; **ಸುಪ್ರಣೀತಯಃ**=ನಮ್ಮ ಒಳ್ಳೆಯ ಪರಿಚರ್ಯೆಯನ್ನು ಹೊಂದುವ ಅಗ್ನಿಷ್ವಾತ್ತರೇ! **ಸದಃ ಸದಃ ಸದತ**=ತಮ್ಮ ಆಯಾ ಸ್ಥಾನಗಳನ್ನು ಹೊಂದಿರಿ; **ಬರ್ಹಿಷಿ**=ಯಜ್ಞದಲ್ಲಿ **ಪ್ರಯತಾನಿ**=ಪ್ರಯತ್ನದಿಂದ ಸಂಪಾದಿಸಿರುವ **ಹವೀಗ್ಂಷಿ**=ಹವಿಸ್ಸುಗಳನ್ನು; **ಅತ್ತ**=ಭಕ್ಷಿಸಿರಿ; **ಅಥ**= ಬಳಿಕ; **ರಯಿಮ್**=ಧನವನ್ನೂ; **ಸರ್ವವೀರಮ್ ದಧಾತನ**=ಎಲ್ಲ ಕಾರ್ಯಗಳಲ್ಲಿಯೂ ಸಮರ್ಥನಾದ ಪುತ್ರನನ್ನೂ ಅನುಗ್ರಹಿಸಿರಿ.

---

*ಅಗ್ನಿಷ್ವಾತ್ತರೇ! ನೀವು ಈ ಯಾಗಕ್ಕೆ ಆಗಮಿಸಿರಿ.

---

*ಯಾಗಗಳನ್ನು ಅನುಷ್ಠಿಸದೆ ಬೇರೆಯ ಸತ್ಕರ್ಮಗಳಿಂದ ಸ್ವರ್ಗವನ್ನು ಪಡೆದಿರುವ ಪಿತೃಗಳು.

*'**ಪಿತೃಭ್ಯೋಽಗ್ನಿಷ್ವಾತ್ತೇಭ್ಯೋಽಭಿವಾನ್ಯಾಯೈ ದುಗ್ಧೇ ಮಂಥಮ್**' [ತೈ.ಸಂ.1.8.5] ಎಂದು ವಿಹಿತವಾದ ಮಂಥ ಹವಿಸ್ಸು ಪಾಠಕ್ರಮದಲ್ಲಿ ಮೂರನೆಯದಾಗಿದೆ. ಇಲ್ಲಿ ಮಂತ್ರಸಾಮರ್ಥ್ಯದಿಂದ ಪುರೋನುವಾಕ್ಯೆಯಾಗಿ ಅದರಲ್ಲಿಯೇ ವಿನಿಯೋಗ. ಮತ್ತೊಂದು ಪುರೋನುವಾಕ್ಯೆ-ಯಾಜ್ಯೆಗಳು ಕೌಕಿಲೀ ಸೌತ್ರಾಮಣಿಯನ್ನು ವಿಧಿಸುವ '**ಸ್ವಾದ್ವೀಂ ತ್ವಾ**' ಪ್ರಪಾಠಕದಲ್ಲಿ '**ಅಗ್ನಿಷ್ವಾತ್ತಾಃ**' '**ವಾನ್ಯಾಯೈ ದುಗ್ಧೇ**' ಎಂದು ವಿನಿಯುಕ್ತವಾಗಿವೆ.

**ಬರ್ಹಿಷದಃ ಪಿತರ ಊತ್ಯರ್ವಾಗಿಮಾ ವೋ ಹವ್ಯಾ ಚಕೃಮಾ ಜುಷಧ್ವಮ್ । ತ ಆ ಗತಾವಸಾ ಶಂತಮೇನಾಥಾಸ್ಮಭ್ಯಗ್ಂ [..ಸ್ಮಭ್ಯಮ್(೨)] ಶಂ ಯೋರರಪೋ ದಧಾತ ॥**

---

ಬರ್ಹಿಷದ ಇತಿ ಬರ್ಹಿ-ಸದಃ । ಪಿತರಃ । ಊತೀ । ಅರ್ವಾಕ್ । ಇಮಾ । ವಃ । ಹವ್ಯಾ । ಚಕೃಮ । ಜುಷಧ್ವಮ್ ॥ ತೇ । ಏತಿ । ಗತ । ಅವಸಾ । ಶಂತಮೇನೇತಿ ಶಂ-ತಮೇನ । ಅಥ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಶಂ । ಯೋಃ । ಅರಪಃ । ದಧಾತ ॥

---

| ಮಂತ್ರ | ವಿನಿಯೋಗ |
|---|---|
| **ಬರ್ಹಿಷದಃ...ದಧಾತ ॥** | ಬರ್ಹಿಷದ್ಯಾಗದ ಹವಿಸ್ಸಿನ ಮೊದಲನೆಯ ಪುರೋಽನುವಾಕ್ಯೆ. |

---

+**ಬರ್ಹಿಷದಃ ಪಿತರಃ**=*ಬರ್ಹಿಷದರೆಂಬ *ಪಿತೃದೇವತೆಗಳೇ! **ಅರ್ವಾಕ್**=ಇತ್ತೀಚಿನವರಾದ ನಮ್ಮ; **ಊತೀ** [ಕರ್ತವ್ಯಾ]=ರಕ್ಷಣೆಯು ನಿಮ್ಮಿಂದ ಮಾಡಲ್ಪಡಬೇಕು; **ವಃ**=ನಿಮಗಾಗಿ **ಇಮಾ ಹವ್ಯಾ**=ಈ ಹವಿಸ್ಸುಗಳನ್ನು **ಚಕೃಮ**=ಮಾಡಿರುತ್ತೇವೆ/ಸಿದ್ಧಪಡಿಸಿರುತ್ತೇವೆ; **ಜುಷಧ್ವಮ್**=[ಇವುಗಳನ್ನು]ಸೇವಿಸಿರಿ; **ತೇ**[ಯೂಯಮ್]=ಅಂತಹ ನೀವು; **ಶಂತಮೇನ**=ಅತ್ಯಂತ ಸುಖವಾದ; **ಅವಸಾ**=ರಕ್ಷಣೆಯಿಂದ/**ಪ್ರೀತಿಯಿಂದ** [ನಮ್ಮನ್ನು ಅನುಗ್ರಹಿಸುವುದಕ್ಕಾಗಿ]; **ಆ ಗತ**=ಬನ್ನಿರಿ; **ಅಥ**=ಬಳಿಕ **ಅಸ್ಮಭ್ಯಮ್**=ನಮಗೆ **ಶಮ್**=ಸುಖವನ್ನೂ; **ಯೋಃ**=ದುಃಖವಿಯೋಗವನ್ನೂ; **ಅರಪಃ**= ಪಾಪವಿಲ್ಲದಿರುವಿಕೆಯನ್ನೂ; **ದಧಾತ**=ಉಂಟುಮಾಡಿರಿ/ ಅನುಗ್ರಹಿಸಿರಿ.

---

ಅಗ್ನಿಷ್ವಾತ್ತ ಪದಕ್ಕೆ **'ಯೇ ವಾ ಅಯಜ್ವಾನೋ ಗೃಹಮೇಧಿನಃ । ತೇ ಪಿತರೋಽಗ್ನಿಷ್ವಾತ್ತಾಃ'** ಎಂದು ನಿರ್ವಚನವಿದೆ.

ಭಟ್ಟಭಾಸ್ಕರರು ಕ್ರಮಪ್ರಾಪ್ತವಾದ **'ಪಿತೃಭ್ಯೋ ಬರ್ಹಿಷದ್ಭ್ಯೋ ಧಾನಾಃ'** ಎಂದು ವಿಧಿಸಿರುವ ಧಾನಾ ಹವಿಸ್ಸಿನಲ್ಲಿಯೇ ಈ ಮಂತ್ರಕ್ಕೂ ವಿನಿಯೋಗವನ್ನು ಹೇಳಿರುತ್ತಾರೆ. ಅವರು **'ಅಗ್ನಿಷ್ವಾತ್ತ'** ಎಂಬ ಪದಕ್ಕೆ **ಬರ್ಹಿಷದಃ** ಎಂದು ಅರ್ಥ ಮಾಡಿರುತ್ತಾರೆ. ಇದು **'ಯೇ ವಾ ಅಯಜ್ವಾನಃ'** ಎಂಬ ಶ್ರುತಿಗೆ ಹೊಂದಿಕೆಯಾಗುವುದಿಲ್ಲ.

* **'ಯೇ ವೈ ಯಜ್ವಾನಃ । ತೇ ಪಿತರೋ ಬರ್ಹಿಷದಃ ।'** ಸೋಮಾದಿಯಾಗಗಳನ್ನು ಅನುಷ್ಠಿಸಿ, ಸ್ವರ್ಗಕ್ಕೆ ಹೋಗಿರುವ ಪಿತೃಗಳು ಬರ್ಹಿಷದರು.

**ಆಽಹಂ ಪಿತೄನ್ಸ್ಸುವಿದತ್ರಾಗ್ಂ ಅವಿತ್ಸಿ ನಪಾತಂ ಚ ವಿಕ್ರಮಣಂ ಚ ವಿಷ್ಣೋಃ । ಬರ್ಹಿಷದೋ ಯೇ ಸ್ವಧಯಾ ಸುತಸ್ಯ ಭಜಂತ ಪಿತ್ವಸ್ತ ಇಹಾಽಽಗಮಿಷ್ಠಾಃ ॥**

---

ಏತಿ । ಅಹಮ್ । ಪಿತೄನ್ । ಸುವಿದತ್ರಾನಿತಿ ಸು–ವಿದತ್ರಾನ್ । ಅವಿತ್ಸಿ । ನಪಾತಮ್ । ಚ । ವಿಕ್ರಮಣಮಿತಿ ವಿ–ಕ್ರಮಣಮ್ । ಚ । ವಿಷ್ಣೋಃ ॥ ಬರ್ಹಿಷದ ಇತಿ ಬರ್ಹಿ–ಸದಃ । ಯೇ । ಸ್ವಧಯೇತಿ ಸ್ವ–ಧಯಾ । ಸುತಸ್ಯ । ಭಜಂತ । ಪಿತ್ವಃ । ತೇ । ಇಹ । ಆಗಮಿಷ್ಠಾ ಇತ್ಯಾ–ಗಮಿಷ್ಠಾಃ ॥

---

| ಮಂತ್ರ | ವಿನಿಯೋಗ |
|---|---|
| ಆಽಹಂ ಪಿತೄನ್...ಆಗಮಿಷ್ಠಾಃ ॥ | ಬರ್ಹಿಷದ್ಧಾನಾಯಾಗದ ಎರಡನೆಯ ಪುರೋನುವಾಕ್ಯೆ. |

---

✝**ಆಹಮ್**=ನಾನು; **ಸುವಿದತ್ರಾನ್**=ನನ್ನ ಭಕ್ತಿಯನ್ನು ಚೆನ್ನಾಗಿ ತಿಳಿದಿರುವ; **ಪಿತೄನ್**=ಪಿತೃಗಳನ್ನು; **ಆ ಅವಿತ್ಸಿ**=ಎದುರಾಗಿ ಹೊಂದಿರುತ್ತೇನೆ. **ವಿಷ್ಣೋಃ**=ವ್ಯಾಪಕವಾದ ಯಾಗದ; **ನಪಾತಮ್**=ನ್ಯೂನತೆ ಇಲ್ಲದಿರುವಿಕೆಯನ್ನೂ; **ಚ**=ಮತ್ತು; **ವಿಕ್ರಮಣಮ್ ಚ**=ವಿವಿಧವಾದ ಅಂಗಗಳ ಪ್ರವೃತ್ತಿಯನ್ನೂ/**ಫಲಪ್ರದವಾಗುವಿಕೆಯನ್ನೂ**; ಆ ಅವಿತ್ಸಿ=ಹೊಂದಿದವನಾಗಿ ರುತ್ತೇನೆ. **ಯೇ ಬರ್ಹಿಷದಃ**[ಸಂತಿ]=ಯಾವ ಬರ್ಹಿಷದ ಪಿತೃಗಳಿದ್ದಾರೆಯೋ; **ತೇ**=ಅವರು; **ಇಹ**= ಈ ಯಾಗದಲ್ಲಿ; **ಸ್ವಧಯಾ ಸುತಸ್ಯ**=ಸೋಮ ಸದೃಶವಾದ ಹವಿಸ್ಸಿನ ಸ್ವಾದುತ್ವದಿಂದ; **ಪಿತ್ವಃ**=ಪ್ರೀತಿಯನ್ನು; **ಭಜಂತ**=ಹೊಂದುವವರಾಗಿ/ಹೊಂದಿದರು; **ಇಹ ಆಗಮಿಷ್ಠಾಃ**=ಈ ಯಾಗಕ್ಕೆ ಬಂದಿರುತ್ತಾರೆ.[**ಭಜಂತ=ಭಜಂತಃ ಎಂದಾಗಲೀ ಅಭಜಂತ ಎಂದಾಗಲೀ ವಿವರಿಸಬಹುದು**]

---

ನಮ್ಮ ಸತ್ಕಾರವನ್ನು ಸ್ವೀಕರಿಸತಕ್ಕವರೇ! ನೀವು ನಿಮ್ಮನಿಮ್ಮ ಸ್ಥಾನಗಳಲ್ಲಿ ಕುಳಿತುಕೊಳ್ಳಿರಿ. ನಾವು ಪ್ರಯತ್ನದಿಂದ ನೀಡುವ ಹವಿಸ್ಸುಗಳನ್ನು ಸ್ವೀಕರಿಸಿರಿ.ಧನವನ್ನೂ, ಪುತ್ರಸಂಪತ್ತನ್ನೂ, ಕೊಡಿರಿ.

**ಉಪಹೂತಾಃ ಪಿತರಸ್ಸೋಮ್ಯಾಸೋ ಬರ್ಹಿಷ್ಯೇಷು ನಿಧಿಷು ಪ್ರಿಯೇಷು । ತ ಆ ಗಮಂತು ತ ಇಹ ಶ್ರುವನ್ತ್ವಧಿ ಬ್ರುವಂತು ತೇ ಅವಂತ್ವಸ್ಮಾನ್ ॥**

---

ಉಪಹೂತಾ ಇತ್ಯುಪ-ಹೂತಾಃ । ಪಿತರಃ । ಸೋಮ್ಯಾಸಃ । ಬರ್ಹಿಷ್ಯೇಷು । ನಿಧಿಷ್ವಿತಿ ನಿ-ಧಿಷು । ಪ್ರಿಯೇಷು ॥ ತೇ । ಏತಿ । ಗಮಂತು । ತೇ । ಇಹ । ಶ್ರುವನ್ತು । ಅಧೀತಿ । ಬ್ರುವಂತು । ತೇ । ಅವಂತು । ಅಸ್ಮಾನ್ ॥

---

| **ಮಂತ್ರ** | **ವಿನಿಯೋಗ** |
|---|---|
| **ಉಪಹೂತಾಃ...ಅಸ್ಮಾನ್ ॥** | ಬರ್ಹಿಷದ್ಯಾಗದ ಯಾಜ್ಯೆ. |

---

+**ಸೋಮ್ಯಾಸಃ**=ನಮ್ಮಲ್ಲಿ ಅನುಗ್ರಹಬುದ್ಧಿ ಇರುವ/ **ಸೋಮಾರ್ಹರಾದ; ಪಿತರಃ**= ಪಿತೃಗಳು; **ಬರ್ಹಿಷ್ಯೇಷು**=ಯಾಗಾರ್ಹವಾದ; **ಪ್ರಿಯೇಷು**=ಇಷ್ಟವಾದ; **ನಿಧಿಷು**=ಹವಿಸ್ಸುಗಳ ನಿಮಿತ್ತವಾಗಿ; **ಉಪಹೂತಾಃ**=ಆಹ್ವಾನಿಸಲ್ಪಟ್ಟಿದ್ದಾರೆ. **ತೇ**=ಆ ಪಿತೃಗಳು; **ಇಹ**= ಇಲ್ಲಿ **ಆಗಮಂತು**=[ಯಾಗವೇದಿಕೆಗೆ] ಬರಲಿ; **ತೇ**=ಅವರು **ಇಹ**=ಈ ಯಾಗದಲ್ಲಿ; **ಶ್ರುವನ್ತು**=[ನಮ್ಮ ಸ್ತುತಿಯನ್ನು] ಕೇಳಲಿ. **ಅಧಿಬ್ರುವಂತು**=[ದೇವತೆಗಳ ಮುಂದೆ ನಮ್ಮನ್ನು] ಪ್ರಶಂಸಿಸಲಿ; **ತೇ ಅಸ್ಮಾನ್ ಅವಂತು**=ಅವರು ನಮ್ಮನ್ನು ಕಾಪಾಡಲಿ.

---

ಬರ್ಹಿಷದ ಪಿತೃಗಳೇ! ನೀವು ಅರ್ವಾಚೀನರಾದ ನಮ್ಮ ರಕ್ಷಣೆಯನ್ನು ಮಾಡಬೇಕು. ನಿಮಗೋಸ್ಕರ ಸಿದ್ಧಪಡಿಸಿರುವ ಈ ಹವಿಸ್ಸುಗಳನ್ನು ಸ್ವೀಕರಿಸಿರಿ. ಸುಖಮಯವಾದ/ ಪ್ರೀತಿಯುಕ್ತವಾದ ರಕ್ಷಣೆಯಿಂದ ನಮ್ಮನ್ನು ಅನುಗ್ರಹಿಸಲು ಬನ್ನಿರಿ. ಅನಂತರ ನಮಗೆ ಸುಖವನ್ನೂ, ದುಃಖವಿಯೋಗವನ್ನೂ, ಪಾಪರಾಹಿತ್ಯವನ್ನೂ ಅನುಗ್ರಹಿಸಿರಿ.

ನಾನು ನಮ್ಮ ಭಕ್ತಿಯನ್ನು ಚೆನ್ನಾಗಿ ತಿಳಿದಿರುವ ಬರ್ಹಿಷದಪಿತೃಗಳನ್ನು ಪಡೆದಿರುತ್ತೇನೆ. ಯಜ್ಞವು ನ್ಯೂನತೆಗಳು ಇಲ್ಲದೆ ಸಮಗ್ರಾಂಗಗಳಿಂದ ಕೂಡಿ ಫಲದಾಯಕವಾಗು

**ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರ ಸ್ಸೋಮ್ಯಾಸಃ । ಅಸುಂ [ಅಸುಮ್(ಇ)] ಯ ಈಯು ರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು ॥**

---

ಉದಿತಿ । ಈರತಾಮ್ । ಅವರೇ । ಉದಿತಿ । ಪರಾಸಃ । ಉದಿತಿ । ಮಧ್ಯಮಾಃ । ಪಿತರಃ । ಸೋಮ್ಯಾಸಃ ॥ ಅಸುಮ್ । (ಇ) । ಯೇ । ಈಯುಃ । ಅವೃಕಾಃ । ಋತಜ್ಞಾ ಇತ್ಯೃತ-ಜ್ಞಾಃ । ತೇ । ನಃ । ಅವಂತು । ಪಿತರಃ । ಹವೇಷು ॥

---

| ಮಂತ್ರ | ವಿನಿಯೋಗ |
|---|---|
| **ಉದೀರತಾಮ್...ಹವೇಷು** ॥ | ಮೂರು ಉಪಹೋಮಮಂತ್ರಗಳಲ್ಲಿ ಮೊದಲನೆಯ ಮಂತ್ರ. |

---

+**ಅವರೇ=** ಕನಿಷ್ಠರಾದ/ಅಧಮರಾದ; **ಪಿತರಃ=**ಪಿತೃಗಳು; **ಉತ್ ಈರತಾಮ್=** ಉತ್ತಮವಾದ ಹವಿಸ್ಸನ್ನು ಸ್ವೀಕರಿಸಲಿ; **ಪರಾಸಃ=**ಉತ್ತಮರಾದ [ಪಿತೃಗಳೂ] **ಉತ್** [ಈರತಾಮ್]=ಹವಿಸ್ಸನ್ನು ಸ್ವೀಕರಿಸಲಿ. **ಮಧ್ಯಮಾಃ=**ಮಧ್ಯಮರಾದ ಪಿತೃಗಳೂ; **ಉತ್** [ಈರತಾಮ್]=ಉತ್ಕೃಷ್ಟವಾದ ಹವಿಸ್ಸನ್ನು ಸ್ವೀಕರಿಸಲಿ; **ಸೋಮ್ಯಾಸಃ=**ನಮ್ಮಲ್ಲಿ ಅನುಗ್ರಹ ಬುದ್ಧಿಯುಳ್ಳ **ಪಿತರಃ=**ಪಿತೃಗಳೆಲ್ಲರೂ [ಸಹ] **ಅವೃಕಾಃ=**ತೋಳಗಳಂತೆ ನಮ್ಮನ್ನು ಹಿಂಸಿಸದಿರಲಿ; **ಋತಜ್ಞಾಃ=**[ನಮ್ಮ] ಯಜ್ಞಾನುಷ್ಠಾನವನ್ನು ತಿಳಿದವರಾಗಲಿ; **ಯೇ=**ಯಾವ ಪಿತೃಗಳು; **ಅಸುಮ್=**ನಮ್ಮ ಪ್ರಾಣವನ್ನು [ರಕ್ಷಿಸಲು] **ಈಯುಃ=**ಬಂದಿರುತ್ತಾರೆಯೋ; **ತೇ=**ಆ ಪಿತೃಗಳು; **ಹವೇಷು=**ನಮ್ಮ ಆಹ್ವಾನದ ನಿಮಿತ್ತವಾಗಿ ಬಂದವರಾಗಿ; **ನಃ ಅವಂತು=**ನಮ್ಮನ್ನು ಕಾಪಾಡಲಿ;

---

ವುದನ್ನೂ ತಿಳಿದಿರುತ್ತೇನೆ. ಯಾವ ಬರ್ಹಿಷದರು ಸೋಮಸದೃಶವಾದ ಹವಿಸ್ಸಿನ ಸ್ವಾದುತ್ವದಿಂದ ಸಂತುಷ್ಟರಾಗುವರೋ ಆ ಬರ್ಹಿಷದರು ಈ ಯಾಗದಲ್ಲಿ ಹವಿಸ್ಸನ್ನು ಸ್ವೀಕರಿಸುವವರಾಗಿ ಆದರದಿಂದ ಬಂದಿರುತ್ತಾರೆ.

**ಇದಂ ಪಿತೃಭ್ಯೋ ನಮೋ ಅಸ್ತ್ವದ್ಯ ಯೇ ಪೂರ್ವಾಸೋ ಯ ಉಪರಾಸ ಈಯುಃ । ಯೇ ಪಾರ್ಥಿವೇ ರಜಸ್ಯಾನಿಷತ್ತಾ ಯೇ ವಾ ನೂನಗ್ಂ ಸುವೃಜನಾಸು ವಿಕ್ಷು ॥**

---

ಇದಮ್ । ಪಿತೃಭ್ಯ ಇತಿ ಪಿತೃ-ಭ್ಯಃ । ನಮಃ । ಅಸ್ತು । ಅದ್ಯ । ಯೇ । ಪೂರ್ವಾಸಃ । ಯೇ । ಉಪರಾಸಃ । ಈಯುಃ ॥ ಯೇ । ಪಾರ್ಥಿವೇ । ರಜಸಿ । ಏತಿ । ನಿಷತ್ತಾ ಇತಿ ನಿ-ಸತ್ತಾಃ । ಯೇ । ವಾ । ನೂನಮ್ । ಸುವೃಜನಾಸ್ವಿತಿ ಸು-ವೃಜನಾಸು । ವಿಕ್ಷು ॥

---

| **ಮಂತ್ರ** | **ವಿನಿಯೋಗ** |
|---|---|
| **ಇದಂ ಪಿತೃಭ್ಯೋ...ವಿಕ್ಷು ॥** | ಎರಡನೆಯ ಉಪಹೋಮಮಂತ್ರ. |

---

+**ಯೇ**=ಯಾವ ಪಿತೃಗಳು; **ಪೂರ್ವಾಸಃ**=ಯಜಮಾನನಿಗಿಂತ ಹಿರಿಯರಾದ ತಂದೆ, ಅಣ್ಣ ಮೊದಲಾದವರು; **ಯೇ ಉಪರಾಸಃ**=ಯಜಮಾನನಿಗಿಂತ ಕಿರಿಯರಾದ ಮಗ, ತಮ್ಮ ಮೊದಲಾದವರು[ಮರಣ ಹೊಂದಿ ಪಿತೃಗಳಾಗಿ;]**ಈಯುಃ**=[ಹವಿಸ್ಸನ್ನು ಸ್ವೀಕರಿಸಲು] ಬಂದಿರುವರೋ; **ಯೇ ಪಾರ್ಥಿವೇ ರಜಸಿ**=ಯಾರು ರಜೋಗುಣಭೂಯಿಷ್ಠವಾದ ಕರ್ಮಗಳಲ್ಲಿ ನಿರತರಾಗಿ ಮೃತಿ ಹೊಂದಿ; **ಆ ನಿಷತ್ತಾಃ**=ಹವಿಃಸ್ವೀಕಾರಕ್ಕಾಗಿ ಬಂದಿರುವರೋ; **ಯೇ ವಾ**= ಯಾರು; **ನೂನಮ್**=ನಿಶ್ಚಯವಾಗಿ; **ಸುವೃಜನಾಸು ವಿಕ್ಷು**=ಧನಸಂಪನ್ನರಾಗಿ ಶ್ರಾದ್ಧಾದಿಕರ್ಮಗಳಲ್ಲಿ ಆಸಕ್ತರಾಗಿ ಮರಣ ಹೊಂದಿ ಪಿತೃಗಳಾಗಿ ಇಲ್ಲಿಗೆ ಬಂದಿರುತ್ತಾರೆಯೋ/**[ಅಂತರಿಕ್ಷ ಸ್ವರ್ಗಾದಿಗಳಲ್ಲಿರುವ ಯಾವ ಪಿತೃಗಳು ಇಲ್ಲಿಗೆ ಬಂದಿರುತ್ತಾರೆಯೋ]** [ಆ ಎಲ್ಲಾ] **ಪಿತೃಭ್ಯಃ**= ಪಿತೃಗಳಿಗೂ; **ಅದ್ಯ ಇದಮ್ ನಮಃ ಅಸ್ತು**=ಈಗ ಈ ಹವಿಃಪ್ರದಾನರೂಪವಾದ ನಮಸ್ಕಾರವುಂಟಾಗಲಿ.

---

ನಮ್ಮ ವಿಷಯದಲ್ಲಿ ಅನುಗ್ರಹಬುದ್ಧಿಯುಳ್ಳ ಸೋಮಾರ್ಹರಾದ ಪಿತೃಗಳನ್ನು ಆಹ್ವಾನಿಸುತ್ತೇವೆ. ಅವರು ಹವಿಸ್ಸಿನ ನಿಮಿತ್ತವಾಗಿ ಇಲ್ಲಿಗೆ ಬರಲಿ. ಪ್ರಿಯವಾದ, ಯಾಗಾರ್ಹವಾದ ಉತ್ತಮವಾದ ಹವಿಸ್ಸನ್ನು ಸ್ವೀಕರಿಸಲಿ. ಅವರು ಯಜ್ಞವೇದಿಗೆ ಬಂದು ನಮ್ಮ ಸ್ತುತಿಯನ್ನು ಕೇಳಲಿ. ದೇವತೆಗಳ ಮುಂದೆ ನಮ್ಮನ್ನು ಶ್ಲಾಘಿಸಲಿ. ಅವರು ನಮ್ಮನ್ನು ಕಾಪಾಡಲಿ.

**ಅಧಾ ಯಥಾ ನಃ ಪಿತರಃ ಪರಾಸಃ ಪ್ರತ್ನಾಸೋ ಅಗ್ನ**

**ಋತಮಾಶುಷಾಣಾಃ । ಶುಚೀದಯನ್ದೀಧಿತಿಮುಕ್ಥಶಾಸಃ**

**ಕ್ಷಾಮಾ ಭಿಂದಂತೋ ಅರುಣೀರಪವ್ರನ್ ॥**

---

ಅಧ । ಯಥಾ । ನಃ । ಪಿತರಃ । ಪರಾಸಃ । ಪ್ರತ್ನಾಸಃ । ಅಗ್ನೇ । ಋತಮ್ । ಅಶುಷಾಣಾಃ ॥ ಶುಚಿ । ಇತ್ । ಅಯನ್ । ದೀಧಿತಿಮ್ । ಉಕ್ಥಶಾಸ ಇತ್ಯುಕ್ಥ-ಶಾಸಃ । ಕ್ಷಾಮ । ಭಿಂದಂತಃ । ಅರುಣೀಃ । ಅಪೇತಿ । ವ್ರನ್ ॥

---

| ಮಂತ್ರ | ವಿನಿಯೋಗ |
|---|---|
| ಅಧಾ...ರಪವ್ರನ್ ॥ | ಮೂರನೆಯ ಉಪಹೋಮದ ಮಂತ್ರ. |

---

+**ಅಧ**=ಪೂರ್ವಕಾಲದಲ್ಲಿ; **ಯಥಾ**=ಹೇಗೆ; **ನಃ**=ನಮ್ಮ; **ಪರಾಸಃ ಪಿತರಃ**=ಶ್ರೇಷ್ಠರಾದ ಪಿತೃಪಿತಾಮಹಾದಿಗಳು; **ಪ್ರತ್ನಾಸಃ**[ಪಿತರಃ]=ಪಿತ್ರಾದಿಗಳಿಗಿಂತಲೂ ಹಿಂದಿನವರಾದ ಪಿತೃಗಳು; **ಅಗ್ನೇ ಋತಮ್**=ಎಲೈ!ಅಗ್ನಿದೇವನೇ!ಯಜ್ಞವನ್ನು/**ಯಜ್ಞಫಲವನ್ನು; ಅಶುಷಾಣಾಃ**=ಅನುಭವಿಸುವವರಾಗಿ; **ಶುಚಿ ಇತ್**=ಶುಚಿಯೇ ಆಗಿರುವ [ಸ್ಥಾನವನ್ನು]; **ಅಯನ್**=ಹೊಂದಿದರೋ; [ಹಾಗೆಯೇ] **ದೀಧಿತಿಮ್**=ಪ್ರಕಾಶಮಾನರಾದ ದೇವತಾರೂಪರಾದ ಪಿತೃಗಳನ್ನು; **ಉಕ್ಥಶಾಸಃ**=ಸ್ತೋತ್ರಗಳಿಂದ ಪ್ರಶಂಸಿಸುವ ನಾವೂ, [ಶುಚಿ ಇತ್ ಅಯನ್=ಶುದ್ಧವಾದ ಸ್ಥಾನವನ್ನೇ ಹೊಂದಿರುತ್ತೇವೆ.] [ಆ ಪಿತೃಗಳು] **ಕ್ಷಾಮ**=ಕೃಶವಾಗಲು ಕಾರಣವಾದ ಹಸಿವನ್ನು; **ಭಿಂದಂತಃ**=[ಹವಿಸ್ಸಿನ ಸ್ವೀಕಾರದಿಂದ] [ಹೋಗಲಾಡಿಸಿದವರಾಗಿ]; **ಅರುಣೀಃ**=ತೇಜೋರೂಪವಾದ ಪ್ರಕಾಶವನ್ನು ಹೊಂದಿ; **ಅಪವ್ರನ್**= [ಫಲಪ್ರತಿಬಂಧಕಗಳೆಂಬ ಕತ್ತಲೆಯನ್ನು] ಹೋಗಲಾಡಿಸಿಕೊಂಡರು.

---

ಪಿತೃಗಳು ಮೂರು ಬಗೆಯಾಗಿರುತ್ತಾರೆ. ಶ್ರೌತಕರ್ಮಗಳನ್ನು ಅನುಷ್ಠಿಸಿ ಸ್ವರ್ಗಕ್ಕೆ ಹೋದವರು ಉತ್ತಮರು.ಸ್ಮಾರ್ತಕರ್ಮಗಳನ್ನು ಅನುಷ್ಠಿಸಿ ಸ್ವರ್ಗಕ್ಕೆ ಹೋದವರು ಮಧ್ಯಮರು. ಅಂತ್ಯಸಂಸ್ಕಾರಹೀನರು ಅಧಮರು. ಈ ಮೂರು ಬಗೆಯ ಪಿತೃಗಳೂ ಹವಿಸ್ಸನ್ನು ಸ್ವೀಕರಿಸಲಿ.

# ಯದಗ್ನೇ [ಯದಗ್ನೇ(ಳ)ಕವ್ಯವಾಹನ]ಕವ್ಯವಾಹನ ಪಿತ್ರ್ಯಾನ್ ಯಕ್ಷ್ಯೃತಾವೃಧಃ । ಪ್ರ ಚ ಹವ್ಯಾನಿ ವಕ್ಷ್ಯಸಿ ದೇವೇಭ್ಯಶ್ಚ ಪಿತೃಭ್ಯ ಆ ॥

---

ಯತ್ । ಅಗ್ನೇ । ಕವ್ಯವಾಹನೇತಿ ಕವ್ಯ-ವಾಹನ । ಪಿತ್ರ್ಯಾನ್ । ಯಕ್ಷಿ । ಋತಾವೃಧ ಇತ್ಯೃತ-ವೃಧಃ ॥ ಪ್ರೇತಿ । ಚ । ಹವ್ಯಾನಿ । ವಕ್ಷ್ಯಸಿ । ದೇವೇಭ್ಯಃ । ಚ । ಪಿತೃಭ್ಯ ಇತಿ ಪಿತೃ-ಭ್ಯಃ । ಆ ॥

---

| ಮಂತ್ರ | ವಿನಿಯೋಗ |
|---|---|
| ಯದಗ್ನೇ...ಪಿತೃಭ್ಯ ಆ ॥ | *ಕವ್ಯವಾಹನಾಗ್ನಿಯ ಯಾಗದ ಪುರೋನುವಾಕ್ಯೆ. |

---

+**ಅಗ್ನೇ ಕವ್ಯವಾಹನ**=ಪಿತೃಗಳಿಗೆ ಹವಿಸ್ಸನ್ನು ಒಯ್ಯುವ ಕವ್ಯವಾಹನಾಗ್ನಿಯೇ!; **ಯತ್**= ಯಾವ ಕಾರಣದಿಂದ **ಋತಾವೃಧಃ**=ಯಜ್ಞವನ್ನು ವರ್ಧಿಸುವ **ಪಿತ್ರ್ಯಾನ್**=ಪಿತೃಗಳನ್ನು; **ಯಕ್ಷಿ**=ಯಾಗದಲ್ಲಿ ಭಾಗಿಗಳನ್ನಾಗಿ ಮಾಡುತ್ತೀಯೋ [ಆ ಕಾರಣದಿಂದ] **ದೇವೇಭ್ಯಃ ಚ**=ದೇವತೆಗಳಿಗೂ; **ಪಿತೃಭ್ಯಃ ಆ**=ಪಿತೃಗಳಿಗೂ; **ಹವ್ಯಾನಿ**=ಹವಿಸ್ಸುಗಳನ್ನು; **ಪ್ರ ವಕ್ಷ್ಯಸಿ ಚ**=ಒಯ್ಯುತ್ತೀಯೆ;

---

ನಮ್ಮಲ್ಲಿ ಅನುಗ್ರಹಬುದ್ಧಿಯುಳ್ಳವರಾಗಿ ನಮ್ಮ ಪ್ರಾಣಗಳನ್ನು ರಕ್ಷಿಸಲು ಬಂದಿರುವ, ತೋಳಗಳಂತೆ ಹಿಂಸೆ ಮಾಡದ, ನಮ್ಮ ಯಜ್ಞಗಳನ್ನು ತಿಳಿದಿರುವ ಆ ಪಿತೃಗಳು ನಮ್ಮನ್ನು ಕಾಪಾಡಲಿ.

ಯಜಮಾನನ ಹಿರಿಯ-ಕಿರಿಯ ಪಿತೃಗಳೂ, ರಜೋಗುಣಪ್ರಧಾನವಾದ ಕರ್ಮದಲ್ಲಿ ನಿರತರಾಗಿ ಮೃತಿ ಹೊಂದಿದವರೂ, ಧನವಂತರಾಗಿ, ಶ್ರದ್ಧೆಯಿಂದ ಶ್ರಾದ್ಧಾದಿಕರ್ಮಗಳನ್ನು ಮಾಡಿ ಮೃತರಾದ ಪಿತೃಗಳು-ಹೀಗೆ ಎಲ್ಲರೂ ಇಲ್ಲಿಗೆ ಬರಲಿ. ಅವರೆಲ್ಲರಿಗೂ ಹವಿಃ ಪ್ರದಾನಪೂರ್ವಕವಾಗಿ ನಮಸ್ಕಾರವನ್ನು ಸಲ್ಲಿಸುತ್ತೇವೆ.

---

* ಈ ಮಹಾಪಿತೃಯಜ್ಞದಲ್ಲಿ ಶಾಖಾಂತರದಲ್ಲಿ ಕವ್ಯವಾಹನಾಗ್ನಿಗೂ, ಅಂಗಿರಸ್ವದ್ಯಮನಿಗೂ ಹವಿಸ್ಸುಗಳನ್ನು ಹೇಳಿದ್ದಾರೆ. [ಆಪ.ಶ್ರೌ.,ಸೂ.8.13.16]

**ತ್ವಮಗ್ನ ಈಡಿತೋ ಜಾತವೇದೋಽವಾಡ್ಢವ್ಯಾನಿ ಸುರಭೀಣಿ ಕೃತ್ವಾ । ಪ್ರಾದಾಃ ಪಿತೃಭ್ಯಸ್ಸ್ವಧಯಾ ತೇ ಅಕ್ಷನ್ನದ್ಧಿ ತ್ವಂ ದೇವ ಪ್ರಯತಾ ಹವೀಗ್ಂಷಿ ॥**

---

ತ್ವಮ್ । ಅಗ್ನೇ । ಈಡಿತಃ । ಜಾತವೇದ ಇತಿ ಜಾತ–ವೇದಃ । ಅವಾಟ್ । ಹವ್ಯಾನಿ । ಸುರಭೀಣಿ । ಕೃತ್ವಾ ॥ ಪ್ರೇತಿ । ಅದಾಃ । ಪಿತೃಭ್ಯ ಇತಿ ಪಿತೃ–ಭ್ಯಃ । ಸ್ವಧಯೇತಿ ಸ್ವ–ಧಯಾ। ತೇ । ಅಕ್ಷನ್ನ್ । ಅದ್ಧಿ । ತ್ವಮ್ । ದೇವ । ಪ್ರಯತೇತಿ ಪ್ರ–ಯತಾ । ಹವೀಗ್ಂಷಿ ॥

---

| ಮಂತ್ರ | ವಿನಿಯೋಗ |
|---|---|
| **ತ್ವಮಗ್ನ ...ಹವೀಗ್ಂಷಿ ॥** | ಅದೇ ಯಾಗದ ಎರಡನೆಯ ಪುರೋನುವಾಕ್ಯೆ. |

---

+ **ಜಾತವೇದಃ**=ಹುಟ್ಟಿದುದೆಲ್ಲವನ್ನೂ ತಿಳಿದಿರುವ ಜಾತವೇದನೇ! **ಅಗ್ನೇ**=ಅಗ್ನಿದೇವನೇ! **ತ್ವಮ್**=ನೀನು; **ಈಡಿತಃ**=ಯಜಮಾನನಿಂದ ಸ್ತುತಿಸಲ್ಪಟ್ಟವನಾಗಿ; **ಹವ್ಯಾನಿ**=ನಾವು ಸಮರ್ಪಿಸುವ ಹವ್ಯಗಳನ್ನು; **ಸುರಭೀಣಿ ಕೃತ್ವಾ**=ಸುಗಂಧಯುಕ್ತವನ್ನಾಗಿ ಮಾಡಿ; **ಅವಾಟ್**=ಒಯ್ದೆ. **ಪಿತೃಭ್ಯಃ**=ಪಿತೃಗಳಿಗೆ; **ಪ್ರಾದಾಃ**=ಸಮರ್ಪಿಸಿದೆ; **ತೇ**=ಆ ಪಿತೃದೇವತೆಗಳು; **ಸ್ವಧಯಾ**=ಸ್ವಧಾಕಾರದಿಂದ ಕೊಟ್ಟ ಹವಿಸ್ಸನ್ನು; **ಅಕ್ಷನ್**=ಸ್ವೀಕರಿಸಲಿ. **ದೇವ**=ಅಗ್ನಿದೇವನೇ! **ತ್ವಮ್**=ನೀನು; **ಪ್ರಯತಾ ಹವೀಗ್ಂಷಿ**=[ನಮ್ಮಿಂದ] ಪ್ರಯತ್ನಪೂರ್ವಕವಾಗಿ ಸಂಪಾದಿಸಲ್ಪಟ್ಟ ಹವಿಸ್ಸುಗಳನ್ನು; **ಅದ್ಧಿ**=ಭುಜಿಸು.

---

ಹಿಂದಿನಕಾಲದಲ್ಲಿ ಪಿತ್ರಾದಿಗಳೂ, ಅವರಿಗಿಂತ ಪ್ರಾಚೀನರೂ ಆದ ಪಿತೃಗಳು ಯಜ್ಞಾದಿ ಕರ್ಮಫಲದಿಂದ ಶುದ್ಧವಾದ ಸ್ಥಾನವನ್ನೇ ಹೊಂದಿದರು. ಹಾಗೆಯೇ ನಾವೂ ಪ್ರಕಾಶಮಾನರಾದ ಪಿತೃದೇವತೆಗಳನ್ನು ಸ್ತೋತ್ರಗಳಿಂದ ಹೊಗಳುತ್ತಾ ಅವರ ಅನುಗ್ರಹದಿಂದ ಶುದ್ಧವಾದ ಸ್ಥಾನವನ್ನೇ ಹೊಂದುತ್ತೇವೆ.

ನಮ್ಮ ಪಿತೃದೇವತೆಗಳು ಹವಿಸ್ಸನ್ನು ಸ್ವೀಕರಿಸಿ, ಹಸಿವನ್ನು ಕಳೆದುಕೊಂಡು, ತೇಜೋರೂಪರಾಗಿ ಫಲಪ್ರತಿಬಂಧಕವಾದ ಅಜ್ಞಾನವನ್ನೂ,ಪಾಪವನ್ನೂ ಕಳೆದುಕೊಂಡರು.

**ಮಾತಲೀ ಕವ್ಯೈರ್ಯಮೋ ಅಂಗಿರೋಭಿರ್ಬೃಹಸ್ಪತಿರ್ ಋಕ್ವಭಿ ರ್ವಾವೃಧಾನಃ । ಯಾಗ್ಂಶ್ಚ ದೇವಾ ವಾವೃಧುರ್ಯೇ ಚ ದೇವಾನ್ಥ್ಸ್ವಾಹಾಽನ್ಯೇ ಸ್ವಧಯಾಽನ್ಯೇ ಮದಂತಿ ॥**

---

ಮಾತಲೀ । ಕವ್ಯೈಃ । ಯಮಃ । ಅಂಗಿರೋಭಿರಿತ್ಯಂಗಿರಃ-ಭಿಃ । ಬೃಹಸ್ಪತಿಃ । ಋಕ್ವಭಿರಿತ್ಯೃಕ್ವ-ಭಿಃ । ವಾವೃಧಾನಃ ॥ ಯಾನ್ । ಚ । ದೇವಾಃ । ವಾವೃಧುಃ । ಯೇ । ಚ । ದೇವಾನ್ । ಸ್ವಾಹಾ । ಅನ್ಯೇ । ಸ್ವಧಯೇತಿ ಸ್ವ-ಧಯಾ । ಅನ್ಯೇ । ಮದಂತಿ ॥

---

| ಮಂತ್ರ | ವಿನಿಯೋಗ |
| --- | --- |
| **ಮಾತಲೀ ...ಮದಂತಿ ॥** | ಕವ್ಯವಾಹನಾಗ್ನಿಯಾಗದ ಯಾಜ್ಯಾನುವಾಕ್ಯೆ. |

---

✝**ಮಾತಲೀ**=ಮಾತಲಿಯೇ ಸಾರಥಿಯಾಗಿರುವ ಇಂದ್ರನು; **ಕವ್ಯೈಃ**=ಕವ್ಯಭಾಜನರಾದ ಪಿತೃಗಳೊಡನೆ; **ವಾವೃಧಾನಃ**=ವೃದ್ಧಿ ಹೊಂದಿದವನಾಗುತ್ತಾನೆ; **ಯಮಃ**=ಯಮನು; **ಅಂಗಿರೋಭಿಃ**=ಅಂಗಿರೋನಾಮಕರಾದ ಪಿತೃಗಳೊಡನೆ; ವಾವೃಧಾನಃ=ವೃದ್ಧಿ ಹೊದಿದವನಾಗುತ್ತಾನೆ; **ಬೃಹಸ್ಪತಿಃ**=ಬೃಹಸ್ಪತಿಯು, **ಋಕ್ವಭಿಃ**=ಋಕ್ವ್ರತಿಪಾದ್ಯರಾದ ಪಿತೃವಿಶೇಷಗಳೊಡನೆ; ವಾವೃಧಾನಃ=ವೃದ್ಧಿ ಹೊಂದಿದವನಾಗುತ್ತಾನೆ. **ಯಾನ್ ಚ**=ಯಾವ ಕವ್ಯಭಾಗಾದಿಪಿತೃಗಳನ್ನು; **ದೇವಾಃ ವಾವೃಧುಃ**=ಇಂದ್ರಾದಿದೇವತೆಗಳು ವೃದ್ಧಿಗೊಳಿಸುತ್ತಾರೆಯೋ; **ಯೇ ಚ**=ಯಾವ ಕವ್ಯಭಾಗಾದಿಪಿತೃಗಳು; **ದೇವಾನ್ ವಾವೃಧುಃ**=ಇಂದ್ರಾದಿ ದೇವತೆಗಳನ್ನು ವೃದ್ಧಿಗೊಳಿಸುತ್ತಾರೆಯೋ [ಅಂತಹ ದೇವ-ಪಿತೃಗಳಲ್ಲಿ] **ಅನ್ಯೇ**=ಕೆಲವರು ಇಂದ್ರಾದಿಗಳು; **ಸ್ವಾಹಾ**=ಸ್ವಾಹಾಕಾರದಿಂದಲೂ; **ಅನ್ಯೇ**=ಬೇರೆಯ ಕವಿಭಾಗಾದಿಪಿತೃಗಳು; **ಸ್ವಧಯಾ**=ಸ್ವಧಾಕಾರದಿಂದಲೂ; **ಮದಂತಿ**=ಸಂತೋಷಿಸುತ್ತಾರೆ.

---

**'ತ್ರಯೋ ವಾ ಅಗ್ನಯೋ ಹವ್ಯವಾಹನೋ ದೇವಾನಾಂ ಕವ್ಯವಾಹನಃ ಪಿತೃಣಾಮ್, ಸಹರಕ್ಷಾ ಅಸುರಾಣಾಮ್'** ಎಂಬಂತೆ ಪಿತೃಗಳಿಗೆ ಹವ್ಯವನ್ನು ಒಯ್ಯುವ ಅಗ್ನಿಯು

**ಇಮಂ ಯಮ ಪ್ರಸ್ತರಮಾ ಹಿ ಸೀದಾಂಗಿರೋಭಿಃ ಪಿತೃಭಿ ಸ್ಸಂವಿದಾನಃ । ಆ ತ್ವಾ ಮಂತ್ರಾಃ ಕವಿಶಸ್ತಾ ವಹನ್ತ್ವೇನಾ ರಾಜನ್ ಹವಿಷಾ ಮಾದಯಸ್ವ ॥**

---

ಇಮಮ್ । ಯಮ । ಪ್ರಸ್ತರಮಿತಿ ಪ್ರ-ಸ್ತರಮ್ । ಏತಿ । ಹಿ । ಸೀದ । ಅಂಗಿರೋಭಿರಿತ್ಯಂಗಿರಃ-ಭಿಃ । ಪಿತೃಭಿರಿತಿ ಪಿತೃ-ಭಿಃ । ಸಂವಿದಾನ ಇತಿ ಸಂ-ವಿದಾನಃ ॥ ಏತಿ । ತ್ವಾ । ಮಂತ್ರಾಃ । ಕವಿಶಸ್ತಾ ಇತಿ ಕವಿ-ಶಸ್ತಾಃ । ವಹಂತು । ಏನಾ । ರಾಜನ್ನ್ । ಹವಿಷಾ । ಮಾದಯಸ್ವ ॥

---

| **ಮಂತ್ರ** | **ವಿನಿಯೋಗ** |
|---|---|
| **ಇಮಂ ಯಮ...ಮಾದಯಸ್ವ ॥** | ಅಂಗಿರಸ್ವದ್ಯಮಹವಿಸ್ಸಿನ ಮೊದಲನೆಯ ಪುರೋನುವಾಕ್ಯೆ. |

---

+**ಯಮ ರಾಜನ್**=ಯಮರಾಜನೇ! **ಅಂಗಿರೋಭಿಃ ಪಿತೃಭಿಃ**=ಅಂಗಿರೋನಾಮಕಪಿತೃಗಳೊಡನೆ; **ಸಂವಿದಾನಃ**=ಐಕಮತ್ಯವನ್ನು ಹೊಂದಿದವನಾಗಿ; **ಇಮಮ್ ಪ್ರಸ್ತರಮ್**=ಮೊದಲು ಮಾಡಿರುವ ಯಜ್ಞವಿಶೇಷವನ್ನು ಕುರಿತು; **ಆ ಸೀದ**=ಬಂದು ಇಲ್ಲಿ ಕುಳಿತುಕೋ; **ಹಿ**=ಯಾವ ಕಾರಣದಿಂದ; **ಕವಿಶಸ್ತಾಃ**=ವಿದ್ವಾಂಸರಾದ ಋತ್ವಿಜರಿಂದ ಸ್ತುತಿರೂಪವಾಗಿ ಹೇಳಲ್ಪಟ್ಟಿರುವ; **ಮಂತ್ರಾಃ**=ಮಂತ್ರಗಳು; **ತ್ವಾ ಆ ವಹಂತು**=ನಿನ್ನನ್ನು ಹೊಂದಲಿರುವವೋ; [ಆದುದರಿಂದ] **ಏನಾ ಹವಿಷಾ**=ಈ ಹವಿಸ್ಸಿನಿಂದ [ತೃಪ್ತನಾಗಿ]; **ಮಾದಯಸ್ವ**=[ಯಜಮಾನನನ್ನು] ತೃಪ್ತಿಪಡಿಸು.

---

ಕವ್ಯವಾಹನನು. ಕವ್ಯವಾಹನಾಗ್ನಿಯೇ! ನೀನು ದೇವತೆಗಳಿಗೂ ಪಿತೃಗಳಿಗೂ ಹವ್ಯವನ್ನು ಒಯ್ಯುತ್ತೀಯೆ. ಆದುದರಿಂದ ನಿನಗೆ ಹವ್ಯವನ್ನು ಸಮರ್ಪಿಸುತ್ತೇನೆ.

**ಅಂಗಿರೋಭಿರಾ ಗಹಿ ಯಜ್ಞಿಯೇಭಿರ್ಯಮ ವೈರೂಪೈರಿಹ ಮಾದಯಸ್ವ । ವಿವಸ್ವಂತಗ್ಂ ಹುವೇ ಯಃ ಪಿತಾ ತೇಽಸ್ಮಿನ್ ಯಜ್ಞೇ ಬರ್ಹಿಷ್ಯಾ ನಿಷದ್ಯ ॥**

---

ಅಂಗಿರೋಭಿರಿತ್ಯಂಗಿರಃ-ಭಿಃ । ಎತಿ । ಗಹಿ । ಯಜ್ಞಿಯೇಭಿಃ । ಯಮ । ವೈರೂಪೈಃ । ಇಹ । ಮಾದಯಸ್ವ ॥ ವಿವಸ್ವಂತಮ್ । ಹುವೇ । ಯಃ । ಪಿತಾ । ತೇ । ಅಸ್ಮಿನ್ । ಯಜ್ಞೇ । ಬರ್ಹಿಷಿ । ಎತಿ । ನಿಷದ್ಯೇತಿ ನಿ-ಸದ್ಯ ॥

---

| **ಮಂತ್ರ** | **ವಿನಿಯೋಗ** |
|---|---|
| **ಅಂಗಿರೋಭಿಃ...ನಿಷದ್ಯ ॥** | ಅಂಗಿರಸ್ವದ್ಯಮಹವಿಸ್ಸಿನ ಎರಡನೆಯ ಪುರೋನುವಾಕ್ಯೆ. |

---

+**ಯಮ**=ಯಮದೇವನೇ! **ವೈರೂಪೈಃ**=ವಿವಿಧರೂಪಗಳುಳ್ಳ;/**ವೈರೂಪಸಾಮಪ್ರಿಯ** **ರಾದ; ಯಜ್ಞಿಯೇಭಿಃ**=ಯಜ್ಞಾರ್ಹರಾದ; **ಅಂಗಿರೋಭಿಃ**= ಅಂಗಿರರೆಂಬ ಪಿತೃಗಳೊಡನೆ; **ಆ ಗಹಿ**=[ನಮ್ಮ ಯಜ್ಞಕ್ಕೆ] ಬಾ. **ಇಹ**=ಇಲ್ಲಿ; **ಮಾದಯಸ್ವ**=ಯಜಮಾನನನ್ನು ತೃಪ್ತಿ ಪಡಿಸು; **ಯಃ ತೇ ಪಿತಾ**=ಯಾವನು ನಿನ್ನ ತಂದೆಯೋ; **ಅಸ್ಮಿನ್ ಯಜ್ಞೇ**=ಈ ಯಾಗದಲ್ಲಿ; **ವಿವಸ್ವಂತಮ್ ಹುವೇ**=ಆ ವಿವಸ್ವಂತನನ್ನು ಆಹ್ವಾನಿಸುತ್ತೇನೆ. [ಆ ವಿವಸ್ವಂತನು ಬಂದು] **ಬರ್ಹಿಷಿ**=ಈ ಯಾಗದಲ್ಲಿ; **ಆ ನಿಷದ್ಯ**=ಬಂದು ಕುಳಿತು;[ಯಜಮಾನನನ್ನು ಸಂತೋಷ ಪಡಿಸಲಿ]

---

ಎಲೈ! ಅಗ್ನಿದೇವನೇ! ನೀನು ಎಲ್ಲವನ್ನೂ ತಿಳಿದಿರುವ ಜಾತವೇದನು. ಯಜಮಾನನಿಂದ ಸ್ತುತಿಸಲ್ಪಟ್ಟವನಾಗಿ ನೀನು ಹವಿಸ್ಸುಗಳನ್ನು ಸುಗಂಧಯುಕ್ತವನ್ನಾಗಿ ಮಾಡಿ ಪಿತೃಗಳಿಗೆ ಒಯ್ದು ಕೊಟ್ಟೆ. ಸ್ವಧಾಕಾರದಿಂದ ಕೊಟ್ಟ ಆ ಹವಿಸ್ಸುಗಳನ್ನು ಪಿತೃಗಳು ಭುಜಿಸಲಿ. ನಾವು ಪ್ರಯತ್ನಪೂರ್ವಕವಾಗಿ ಸಂಪಾದಿಸಿ ಕೊಟ್ಟಿರುವ ಹವಿಸ್ಸುಗಳನ್ನು ನೀನೂ ಸ್ವೀಕರಿಸು.

**ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ । ತೇಷಾಂ ವಯಗ್ಂ ಸುಮತೌ ಯಜ್ಞಿಯಾನಾಮಪಿ ಭದ್ರೇ ಸೌಮನಸೇ ಸ್ಯಾಮ ॥೭೦-12॥**

**[ ಭವಾಸ್ಮಭ್ಯಮಸುಂ ಯದಗ್ನೇ ಮದಂತಿ ಸೌಮನಸ ಏಕಂ ಚ ॥ ]**

---

ಅಂಗಿರಸಃ । ನಃ । ಪಿತರಃ । ನವಗ್ವಾಃ । ಅಥರ್ವಾಣಃ । ಭೃಗವಃ । ಸೋಮ್ಯಾಸಃ ॥ ತೇಷಾಮ್ । ವಯಮ್ । ಸುಮತಾವಿತಿ ಸು-ಮತೌ । ಯಜ್ಞಿಯಾನಾಮ್ । ಅಪೀತಿ । ಭದ್ರೇ । ಸೌಮನಸೇ । ಸ್ಯಾಮ ॥೭೦॥

---

| **ಮಂತ್ರ** | **ವಿನಿಯೋಗ** |
|---|---|
| **ಅಂಗಿರಸೋ ನಃ...ಸ್ಯಾಮ ॥** | ಅಂಗಿರಸ್ವದ್ಯಮಹವಿಸ್ಸಿನ ಯಾಜ್ಯಾನುವಾಕ್ಯೆ. |

---

+**ಅಂಗಿರಸಃ**==ಅಂಗಿರೋನಾಮಕರಾದ ಪಿತೃಗಳೂ; **ಅಥರ್ವಾಣಃ**=ಅಥರ್ವರೆಂಬ ಪಿತೃಗಳೂ; **ಭೃಗವಃ**=ಭೃಗುಸಂಜ್ಞಕರಾದ ಪಿತೃಗಳೂ; **ನಃ ಪಿತರಃ**=ನಮ್ಮ ಪಿತೃಗಳೂ; **ಸೋಮ್ಯಾಸಃ**=ಸೋಮಾರ್ಹರಾಗಿ; **ನವಗ್ವಾಃ**=ಹೊಸದಾದ ಆಗಮನವುಳ್ಳವರಂತೆ [ನಮಗೆ ಸಂತೋಷವನ್ನು ಉಂಟು ಮಾಡಲಿ]; **ವಯಮ್**=ನಾವು; **ಯಜ್ಞಿಯಾನಾಮ್**=ಯಜ್ಞಾರ್ಹರಾದ; **ತೇಷಾಮ್**=ಅವರ; **ಸುಮತೌ**=ಒಳ್ಳೆಯ/**ಶುಭಕರವಾದ** ಬುದ್ಧಿಯಲ್ಲಿ; **ಸ್ಯಾಮ** =ಇರುವವರಾಗೋಣ; **ಅಪಿ**=ಮತ್ತು; **ಭದ್ರೇ**=ಮಂಗಳಕರವಾದ; **ಸೌಮನಸೇ**= ಒಳ್ಳೆಯ ಮನಸ್ಸನ್ನು ಉಂಟುಮಾಡುವ ಒಳ್ಳೆಯ ಫಲದಲ್ಲಿ; ಸ್ಯಾಮ=ಇರೋಣ.

---

ಇಂದ್ರನು ಕವಿಭ್ಯಾಗಾದಿಪಿತೃಗಳೊಡನೆಯೂ ಯಮನು ಅಂಗಿರೋನಾಮಕರಾದ ಪಿತೃಗಳೊಡನೆಯೂ,ಬೃಹಸ್ಪತಿಯು ಋಕ್ವ[ಋಕ್ಪ್ರತಿಪಾದ್ಯ]ಪಿತೃಗಳೊಡನೆಯೂ ವೃದ್ಧಿ ಹೊಂದುತ್ತಾರೆ. ಇಂದ್ರಾದಿಗಳು ಸ್ವಾಹಾಕಾರಪೂರ್ವಕವಾಗಿ ಕೊಡುವ ಹವಿಸ್ಸಿನಿಂದ ತೃಪ್ತರಾಗಿ ಸಂತೋಷಿಸು

ಸಮಿಧಶ್ಚಕ್ಷುಷೀ ಪ್ರಜಾಪತಿರಾಜ್ಯಂ ದೇವಸ್ಯ ಸ್ಫ್ಯಂ ಬ್ರಹ್ಮವಾದಿನೋಽದ್ಭಿ ರಗ್ನೇಸ್ತ್ರಯೋ ಮನುಃ ಪೃಥಿವ್ಯಾಃ ಪಶವೋಽಗ್ನೀಧೇ ದೇವಾ ವೈ ಯಜ್ಞಸ್ಯ ಯುಕ್ಷ್ವೋಶಂತಸ್ತ್ವಾ ದ್ವಾದಶ ॥ ೧೨ ॥

ಸಮಿಧೋ ಯಾಜ್ಯಾ ತಸ್ಮಾನ್ನಾಭಾಗಗ್ಂ ಹಿತಮನ್ವಿತ್ಯಾಹ ಪ್ರಜಾ ವಾ ಆಹೇತ್ಯಾಹ ಯುಕ್ಷ್ವಾ ಹಿ ಸಪ್ತತಿಃ ॥ ೭೦ ॥

॥ ಸಮಿಧಸ್ಸೌಮನಸೇ ಸ್ಯಾಮ॥

ಹರಿಃ ಓಮ್ । ಶ್ರೀ ಕೃಷ್ಣಾರ್ಪಣಮಸ್ತು

---

ತ್ತಾರೆ. ಕವ್ಯಭಾಗಾದಿ ಪಿತೃಗಳು ಸ್ವಧಾಕಾರವನ್ನು ಹೇಳಿ ಸಮರ್ಪಿಸುವ ಹವಿರ್ಭಾಗದಿಂದ ತೃಪ್ತರಾಗುತ್ತಾರೆ. ನೀವೆಲ್ಲರೂ ನಾವು ಕೊಡುವ ಹವಿರ್ಭಾಗಗಳಿಂದ ತೃಪ್ತರಾಗಿರಿ.

ಯಮರಾಜನೇ! ಅಂಗಿರೋನಾಮಕರಾದ ಪಿತೃಗಳೊಡನೆ ನೀನು ನಮ್ಮ ಯಜ್ಞವೇದಿಗೆ ಬಾ. ವಿದ್ವಾಂಸರಾದ ಋತ್ವಿಜರು ಮಂತ್ರಗಳಿಂದ ನಿನ್ನನ್ನು ಸ್ತುತಿಸಲಿ. ಮಂತ್ರಪೂರ್ವಕವಾಗಿ ಸಮರ್ಪಿಸುವ ಈ ಹವಿಸ್ಸುಗಳಿಂದ ತೃಪ್ತನಾಗು. ಯಜಮಾನನಿಗೆ ಅಭೀಷ್ಟವಾದ ಫಲವನ್ನು ಕೊಟ್ಟು ಅವನನ್ನು ಸಂತೋಷಪಡಿಸು.

ಯಮನೇ! ಅಂಗಿರಸರೆಂಬ ಪಿತೃಗಳು ಬಗೆಬಗೆಯ ರೂಪವುಳ್ಳವರು. ವೈರೂಪಸಾಮ ಪ್ರಿಯರು. ಯಾಗಾರ್ಹರು. ನೀನು ಅವರೊಡನೆ ನಮ್ಮ ಯಾಗಕ್ಕೆ ಬಾ. ಹವಿಸ್ಸನ್ನು ಸ್ವೀಕರಿಸು. ಯಜಮಾನನನ್ನೂ ಸಂತೋಷಪಡಿಸು. ನಿನ್ನ ತಂದೆಯಾದ ವಿವಸ್ವಂತನೂ ಯಾಗಕ್ಕೆ ಬರಲಿ. ಆತನೂ ಯಜಮಾನನನ್ನು ಸಂತೋಷಪಡಿಸಲಿ.

ಅಂಗಿರಸರೂ, ಅಥರ್ವರೂ, ಭೃಗುಗಳೂ ಪಿತೃದೇವತೆಗಳು. ಇವರು ಯಾಗಕ್ಕೆ ಅರ್ಹರಾದ ವರು. ಅನುಗ್ರಹಬುದ್ಧಿಯುಳ್ಳವರು. ಇವರೆಲ್ಲರೂ ನಮ್ಮ ಪಿತೃಗಳೊಡನೆ ಹೊಸದಾಗಿ ಬಂದವರಂತೆ ಸಂತೋಷವನ್ನುಂಟುಮಾಡಲಿ. ಯಜ್ಞಾರ್ಹರಾದ ಅವರ ಒಳ್ಳೆಯ ಬುದ್ಧಿಯಲ್ಲಿ ನಾವು ಇರೋಣ. ಅವರು ನಮ್ಮನ್ನು ಒಳ್ಳೆಯ ಬುದ್ಧಿಯಿಂದ ನೋಡಲಿ. ಒಳ್ಳೆಯ ಮನಸ್ಸನ್ನು ಉಂಟುಮಾಡುವ ಮಂಗಳಕರವಾದ ಫಲವನ್ನು ಅವರು ನಮಗೆ ಕೊಡಲಿ.

# ಅನುವಾಕದ ವಿಶೇಷವಿಷಯಗಳು

## ವಿನಿಯೋಗಸಂಗ್ರಹ

[1]ಉಶಂತಸ್ತ್ವಾಮಿಧೇನ್ಯೇಕಾ ಪಿತೃಯಜ್ಞೇ ಮಹತ್ಯಸೌ ।
[2-3]ತ್ವಂ ಸೋಮೇತ್ಯನುವಾಕ್ಯೇ ದ್ವೇ ಪಿತೃಮನ್ನಾಮಕೇ ತಥಾ ।
[4]ತ್ವಂ ಯಾಜ್ಯಾಗ್ನಿಷ್ವೇತಿ[5] ಷುಂಥೇಽನುವಾಕ್ಯಾ ಪ್ರಥಮಾ ಭವೇತ್ ॥
[6-7]ಬರ್ಹಿರ್ದ್ವೇ ಅನುವಾಕ್ಯೇ ತು ಯಾಜ್ಯೈಕಾ[8] ಬರ್ಹಿಷದ್ಯಜೌ ।
ಉಪಹೋಮಾ ಉದೀರೇತಿ[9-11] ತ್ರಯಸ್ತತ್ರೈವ ಯಾಗಕೇ ।
ಕವ್ಯವಾಹನಯಾಗೇ ತು ಯದಗ್ನೇ[12-14] ತಿಸ್ರ ಈರಿತಾಃ ॥
ಪುರೋನುವಾಕ್ಯೇ ದ್ವೇ ತತ್ರ ಯಾಜ್ಯೈಕಾ ಯಾಮ್ಯಯಾಗಕೇ ।
[15-17]ಇಮಂ ಪುರೋನುವಾಕ್ಯೇ ದ್ವೇ ಯಾಜ್ಯೈಕಾ ಪೂರ್ವವನ್ಮತಾ ।*
ಅಂತಿಮೋ ಹ್ಯನುವಾಕೇಽಸ್ಮಿನ್ಮಂತ್ರಾಃ ಸಪ್ತದಶೇರಿತಾಃ ॥

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–17

* * *

| ಮಂತ್ರ | ಛಂದಸ್ಸಿನ ಹೆಸರು |
|---|---|
| ೧) ಉಶಂತಸ್ತ್ವಾ...ಅತ್ತವೇ ॥ | ಅನುಷ್ಟುಪ್ |
| ೨) ತ್ವಗ್ಂ ಸೋಮ...ಧೀರಾಃ ॥ | ತ್ರಿಷ್ಟುಪ್ |
| ೩) ತ್ವಯಾ ಹಿ ನಃ...ಭವಾ ನಃ ॥ | ತ್ರಿಷ್ಟುಪ್ |
| ೪) ತ್ವಗ್ಂ ಸೋಮ...ರಯೀಣಾಮ್ ॥ | ತ್ರಿಷ್ಟುಪ್ |

* ವಿನಿಯೋಗವಿಷಯದಲ್ಲಿ ಭ.ಭಾ.ಭಾಷ್ಯದಲ್ಲಿ ಮತಭೇದವಿದೆ.

೫) ಅಗ್ನಿಷ್ವಾತ್ತಾಃ...ದಧಾತನ ॥ **ಜಗತೀ**

೬) ಬರ್‌ಹಿಷದಃ...ದಧಾತ ॥ **ತ್ರಿಷ್ಟುಪ್**

೭) ಆऽऽಹಂ ಪಿತೄನ್...ಆಗಮಿಷ್ಠಾಃ ॥ **ತ್ರಿಷ್ಟುಪ್**

೮) ಉಪಹೂತಾಃ...ಅಸ್ಮಾನ್ ॥ **ತ್ರಿಷ್ಟುಪ್**

೯) ಉದೀರತಾಮ್...ಹವೇಷು ॥ **ತ್ರಿಷ್ಟುಪ್**

೧೦) ಇದಂ ಪಿತೃಭ್ಯೋ...ವಿಕ್ಷು ॥ **ತ್ರಿಷ್ಟುಪ್**

೧೧) ಅಧಾ...ರಪವ್ರನ್ ॥ **ತ್ರಿಷ್ಟುಪ್**

೧೨) ಯದಗ್ನೇ...ಪಿತೃಭ್ಯ ಆ ॥ **ಅನುಷ್ಟುಪ್**

೧೩) ತ್ವಮಗ್ನ ...ಹವೀಗ್‌ಂಷಿ ॥ **ತ್ರಿಷ್ಟುಪ್**

೧೪) ಮಾತಲೀ ...ಮದಂತಿ ॥ **ತ್ರಿಷ್ಟುಪ್**

೧೫) ಇಮಂ ಯಮ...ಮಾದಯಸ್ವ ॥ **ತ್ರಿಷ್ಟುಪ್**

೧೬) ಅಂಗಿರೋಭಿಃ...ನಿಷದ್ಯ ॥ **ತ್ರಿಷ್ಟುಪ್**

೧೭) ಅಂಗಿರಸೋ ನಃ...ಸ್ಯಾಮ ॥ **ತ್ರಿಷ್ಟುಪ್**

**ಇತಿ ದ್ವಿತೀಯಕಾಂಡೇ ಷಷ್ಠಃ ಪ್ರಶ್ನಃ**

**ದ್ವಿತೀಯಕಾಂಡಃ ಸಮಾಪ್ತಃ**

* * *



## ಕೃಷ್ಣ ಯಜುರ್ವೇದ ಕನ್ನಡ ಪ್ರಕಾಶನ

**ಸಂಪುಟ - 1**

(ವೇದಗಳ ಪರಿಚಯ, ಕೃಷ್ಣಯಜುರ್ವೇದ ಪರಿಚಯ, ಯಜ್ಞಗಳ ಪರಿಚಯ)

**ಸಂಪುಟ - 2**

ತೈತ್ತಿರೀಯ ಸಂಹಿತೆ

(ಪ್ರಥಮ ಕಾಂಡ 1-2 ಪ್ರಪಾಠಕಗಳು)

**ಸಂಪುಟ - 3**

ತೈತ್ತಿರೀಯ ಸಂಹಿತೆ

(ಪ್ರಥಮ ಕಾಂಡ 3-4-5 ಪ್ರಪಾಠಕಗಳು)

**ಸಂಪುಟ - 4**

ತೈತ್ತಿರೀಯ ಸಂಹಿತೆ

(ಪ್ರಥಮ ಕಾಂಡ 6-7-8 ಪ್ರಪಾಠಕಗಳು)

**ಸಂಪುಟ - 5**

ತೈತ್ತಿರೀಯ ಸಂಹಿತೆ

(ದ್ವಿತೀಯ ಕಾಂಡ 1-2 ಪ್ರಪಾಠಕಗಳು)

**ಸಂಪುಟ - 6**

ತೈತ್ತಿರೀಯ ಸಂಹಿತೆ

(ದ್ವಿತೀಯ ಕಾಂಡ 3-4 ಪ್ರಪಾಠಕಗಳು)

**ಸಂಪುಟ - 7**

ತೈತ್ತಿರೀಯ ಸಂಹಿತೆ

(ದ್ವಿತೀಯ ಕಾಂಡ 5-6 ಪ್ರಪಾಠಕಗಳು)

**ಪ್ರತಿಗಳಿಗೆ :**

**ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ**

31, ಪಂಪಮಹಾಕವಿ ರಸ್ತೆ, ಬೆಂಗಳೂರು-560 004.

ದೂರವಾಣಿ : 26677852

ಪರಿಮಳ ಮುದ್ರಣಾಲಯ, ಬ್ಯಾಟರಾಯನ್‌ಪುರ, ಬೆಂಗಳೂರು-26 ಫೋನ್: 26758058

ತೈತ್ತಿರೀಯ ಸಂಹಿತಾ

